# ಶ್ರೀಃ

## ಪೀ ಠಿ ಕೆ.

ಈ ಭೂಮಿ ಖಂಡವು ಪದ್ಮ ಮಹಾಪುರಾಣದ ಎರಡನೆಯ ಖಂಡವು. ನಮ್ಮ ಈ ಭೂಮಿಯಲ್ಲಿ ನಡೆದ ವಿಷಯಗಳನ್ನೇ ಹೆಚ್ಚಾಗಿ ತಿಳಿಸಿರುವುದರಿಂದಲೂ, ಉಳಿದ ಲೋಕಗಳವರೂ ಧರ್ಮವನ್ನಾಚರಿಸಲು ಈ ಭೂಮಿಗೇ ಬರಬೇಕೆಂಬುದನ್ನು ಪ್ರತಿಪಾದಿಸಿರುವುದರಿಂದಲೂ, ಈ ಭಾಗಕ್ಕೆ ಭೂಮಿಖಂಡವೆಂದು ಹೆಸರು ಬಂದಿದೆ.

ಇದರಲ್ಲಿ ತೀರ್ಥಗಳ ಪ್ರಾಶಸ್ತ್ಯವನ್ನು ಹೇಳಿದ್ದಾನೆ. ಈ ಖಂಡದಲ್ಲಿ ಹೇಳಿರುವ ತೀರ್ಥಗಳೆಂದರೆ, ಗಂಗೆಯೇ ಮೊದಲಾದ ನೀರಿನ ಸಂಬಂಧಥ ಅರ್ಥದವುಗಳಲ್ಲ. ಆಯಾಯ ಧರ್ಮವನ್ನು ಕಷ್ಟಬಂದರೂ ಬಿಡದೆ ಪಾಲಿಸುವಿಕೆ. ಅಂಥವುಗಳಿಗೆ ಆಯಾ ತೀರ್ಥವೆಂದು ಹೆಸರು. ಉದಾಹರಣೆಗಾಗಿ ಗುರು ಭಕ್ತಿಯನ್ನು ಇಟ್ಟು ಶುಶ್ರೂಷಿಸಿದರೆ ಗುರು ತೀರ್ಥವೆಂದೂ, ಪಾತಿವ್ರತ್ಯದಲ್ಲಿಯೇ ನಿರತಳಾಗಿದ್ದು ಕಾಪಾಡಿಕೊಂಡರೆ ಪಾತಿವ್ರತ್ಯತೀರ್ಥವೆಂದೂ ಹೆಸರು ಬರುತ್ತವೆ. ಇವುಗಳಿಂದ ಬರುವ ಫಲವೇನೆಂಬುದನ್ನು ಕಥೆಗಳಿಂದ ವಿವರಿಸಿದ್ದಾನೆ. ಅವು ಎಲ್ಲರಿಗೂ ಸಾಧ್ಯವಲ್ಲವೆಂಬುದನ್ನೂ, ಅವನ್ನು ಆಚರಿಸುವವರಿಗೆ ದೇವತೆಗಳೂ ಕೂಡ ವಂಚನೆಯಿಂದ ಪ್ರತಿಭಟಿಸುವರೆಂಬುದನ್ನೂ ವಿವರಿಸಿದ್ದಾನೆ. ಅಲ್ಲದೆ ಜನಗಳು ಈ ದೊಡ್ಡ ವಿಷಯಕ್ಕೆ ಕೈ ಹಾಕಲು ಹೆದರುವರೆಂಬುದನ್ನೂ ಮರೆಯದೆ ಸಾಧ್ಯವಾದಷ್ಟು ಆಚರಿಸಿದರೂ ಅಥವ ಆಚರಿಸುವವರ ಸಹವಾಸದಲ್ಲಿದ್ದರೂ ಅತುಲವಾದ ಧರ್ಮವನ್ನು ಹೊಂದಬಹುದೆಂಬುದನ್ನೂ ವರ್ಣಿಸಿದ್ದಾನೆ. ಒಟ್ಟಿನಲ್ಲಿ ಇಂದ್ರಿಯನಿಗ್ರಹವೂ ಮನಸ್ಸಂಯಮನವೂ ಇದ್ದರೆ ಅವನಿಗೆ ಎಲ್ಲವೂ ವಶವಾಗುವುವು, ಎಂಬುದನ್ನು ನಿರ್ಣಯಿಸಿದಂತೆ ಆಗುತ್ತದೆ.

ವಿದ್ವತ್ಪಕ್ಷಪಾತಿಗಳೂ, ಸ್ವತಃ ವಿದ್ಯಾವಂತರೂ ಆದ ನಮ್ಮನ್ನಾಳುವ ಮಹಾಸ್ವಾಮಿಯವರು ಇವೆಲ್ಲವನ್ನೂ ಕನ್ನಡಕ್ಕೆ ಪರಿವರ್ತಿಸಿ ಕನ್ನಡಿಗರಿಗೆ ಉಪಕಾರಮಾಡುತ್ತಿರುವುದು ನಮ್ಮ ಕನ್ನಡಿಗರ ಪುಣ್ಯ. ಇದಕ್ಕೋಸ್ಕರ ನಾವು ಅವರಿಗೆ ಎಷ್ಟು ಕೃತಜ್ಞರಾಗಿದ್ದರೂ ಸಾಲದು. ಈ ಆರ್ಥಿಕ ಮುಗ್ಗಟ್ಟಿರುವ ಕಾಲದಲ್ಲಿಯೇ ಇವರು ಈ ರೀತಿಯಾದ ಉತ್ಸಾಹಿಗಳಾಗಿರುವುದನ್ನು ನೋಡಿದರೆ ಶಾಂತಿ ಕಾಲವನ್ನು ಅವರು ಹೇಗೆ

ಇದಿರು ನೋಡುತ್ತಿರುವರೆಂಬುವುದೂ ಅನಂತರ ಅವರ ಉತ್ಸಾಹವು ಯಾವ ರೀತಿಯಲ್ಲಿ ಹೊರಬೀಳುವುದೆಂಬುದೂ ನಮಗೆ ತೋರದೇ ಇರದು. ರಾಜತಂತ್ರನಿಸ್ಸೀಮತೆ, ವಿದ್ವತ್ತಿನ ಪ್ರಾವೀಣ್ಯ, ಪ್ರಜೆಗಳಿಗೆ ಉಪಕಾರ ಬುದ್ಧಿ, ಉದಾರ ಸ್ವಭಾವ, ದೊಡ್ಡಾರಿಯ ನಡಿಗೆ, ಇವುಗಳನ್ನು ಹೊಂದಿರುವ ಇಂತಹ ಪ್ರಭುಗಳನ್ನು ಹೊಂದಿರುವ ನಾವು ಧನ್ಯರಲ್ಲವೆ ! ನಮ್ಮ ಹೆಮ್ಮೆಗೆ ಎಲ್ಲೆಯುಂಟೆ ! ಇವರಿಗೆ ದೇವರು ಸಕಲೈಶ್ವರ್ಯಗಳನ್ನೂ ದೀರ್ಘಾಯುರಾರೋಗ್ಯಗಳನ್ನೂ ಕೊಟ್ಟು ಕಾಪಾಡಲೆಂದು ಅನವರತವೂ ಪ್ರಾರ್ಥಿಸೋಣ.

" ನಡೆಯುವವನು ಎಡವದಿರಲಾರನು " ಎಂಬಂತೆ ಅನೇಕ ಬುದ್ಧಿಪ್ರಯುಕ್ತ ಪ್ರಮಾದಗಳೂ, ಲೇಖನ ಪ್ರಯುಕ್ತ ದೋಷಗಳೂ ಇರಕೂಡದೆಂದು ಬಹುವಾಗಿ ಪ್ರಯತ್ನಿಸಿದ್ದೇನೆ. ಅಂತಹವುಗಳೇನಾದರೂ ಕಂಡು ಬಂದರೆ ವಾಚಕರಲ್ಲಿ ಕ್ಷಮಾಪಣೆಯನ್ನು ಬೇಡುತ್ತೇನೆ.

ಮಂಗಳಂ ಜಯಚಾಮರಾಜೇಂದ್ರ
ಮಂಗಳಂ ಯದುಭೂಮಿಪ ॥
ಮಂಗಳಂ ಮಹಿಶೂರ ನಾಥ
ಚಾಮುಂಡೀ ದಿಶತಾತ್ತ್ವ ॥

**ನಾರಾಯಣ ಸುಧೀಸ್ಸೋಽಯಂ ಸೂರ್ಯೇತಿಪದಪೂರ್ವಕಃ ।**
**ಪರಿವರ್ತಾಸ್ಯ ಪಾದ್ಮಸ್ಯ ನರಸಿಂಹಪದಾನುಗಃ ॥**

ವಿದ್ವಜ್ಜನವಿಧೇಯ,
ಬೇಲದಕೆರೆ **ಸೂರ್ಯನಾರಾಯಣ ಶಾಸ್ತ್ರೀ**
ಸಾಹಿತ್ಯ ವಿದ್ವಾನ್
ಕನ್ನಡ ಪಂಡಿತ ( ಮೈಸೂರು )
ಕನ್ನಡ ವಿದ್ವಾನ್ ( ಮದ್ರಾಸ್ )

॥ ಶ್ರೀಃ ॥

# ಶ್ರೀಪದ್ಮಪುರಾಣದ ಭೂಮಿಖಂಡದಲ್ಲಿ

## ಮೊದಲನೆಯ ಭಾಗದ ವಿಷಯಸೂಚಿಕೆ



ಪುಟಸಂಖ್ಯೆ

ಪುಟಸಂಖ್ಯೆ

॥ ಶ್ರೀಃ ॥

ಮಹಾಮುನಿ ಶ್ರೀವ್ಯಾಸಪ್ರಣೀತಂ

# ॥ ಪದ್ಮ ಮಹಾಪುರಾಣಂ ॥

---

## ದ್ವಿತೀಯಂ ಭೂಮಿಖಂಡಂ

---

## ॥ ಪ್ರಥಮೋಽಧ್ಯಾಯಃ ॥

॥ ಋಷಯ ಊಚುಃ ॥

**ಶೃಣು ಸೂತ ಮಹಾಭಾಗ ಸರ್ವತತ್ತ್ವಾರ್ಥಕೋವಿದ ।**
**ಸಂದೇಹಮಾಗತಾ ವಿಪ್ರಾ ದಾರುಣಂ ಬುದ್ಧಿನಾಶನಂ ॥ ೧ ॥**

**ಕೇಚಿತ್ಪಠಂತಿ ಪ್ರಹ್ಲಾದಂ ಪುರಾಣೇಷು ದ್ವಿಜೋತ್ತಮಾಃ ।**
**ಪಂಚ ವರ್ಷಾನ್ವಿತೇನಾಪಿ ಕೇಶವಃ ಪರಿತೋಷಿತಃ ॥ ೨ ॥**

---

### ಮೊದಲನೆಯ ಅಧ್ಯಾಯವು.

೧. ಋಷಿಗಳು ಕೇಳುತ್ತಾರೆ :— ಮಹಾನುಭಾವನಾದ ಸೂತನೇ, ನೀನು ಸಮಸ್ತ ತತ್ತ್ವಾರ್ಥಗಳನ್ನೂ ತಿಳಿದಿರುವೆ. ನಮಗೆ ಬುದ್ಧಿಯನ್ನು ನಾಶಗೊಳಿಸುವ ಒಂದು ಸಂದೇಹವು ಬಂದಿರುವುದು, ಅದನ್ನು ಹೇಳುವೆವು, ಕೇಳು.

೨. ಪ್ರಹ್ಲಾದನು ಐದುವರ್ಷದವನಾಗಿದ್ದರೂಕೂಡ ವಿಷ್ಣುವನ್ನು ಸಂತೋಷಪಡಿಸಿದನೆಂದು ಪುರಾಣಗಳಲ್ಲಿ ಕೆಲವು ಬ್ರಾಹ್ಮಣೋತ್ತಮರು ಹೇಳುವರು.

ದೇವಾಸುರೇ ಕಥಂ ಪ್ರಾಪ್ತೇ ಹರಿಣಾ ಸಹ ಯುಧ್ಯತಿ ।
ನಿಹತೋ ವಾಸುದೇವೇನ ಪ್ರವಿಷ್ಟೋ ವೈಷ್ಣವೀಂ ತನುಂ ॥ ೩ ॥

॥ ಸೂತ ಉವಾಚ ॥

ಕಶ್ಯಪೇನ ಪುರಾ ಜ್ಞಾತಂ ಕೃತಂ ವ್ಯಾಸೇನ ಧೀಮತಾ ।
ಬ್ರಹ್ಮಣಾ ಕಥಿತಂ ಪೂರ್ವಂ ವ್ಯಾಸಸ್ಯಾಗ್ರೇ ಸ್ವಯಂ ಪ್ರಭೋಃ ॥ ೪ ॥

ತನೋೇವಂ ಹಿ ಪ್ರವಕ್ಷ್ಯಾಮಿ ಭವತಾಮಗ್ರತೋ ದ್ವಿಜಾಃ ।
ಸಂದೇಹಕಾರಣಂ ಜಾತಂ ಛಿನ್ನಂ ದೇವೇನ ವೇಧಸಾ ॥ ೫ ॥

॥ ವ್ಯಾಸ ಉವಾಚ ॥

ಶೃಣು ಸೂತ ಮಹಾಭಾಗ ಬ್ರಹ್ಮಣಾ ಪರಿಭಾಷಿತಂ ।
ಪ್ರಹ್ಲಾದಸ್ಯ ಯಥಾ ಜನ್ಮ ಪುರಾಣೇಷ್ವನ್ಯಥಾ ಶ್ರುತಂ ॥ ೬ ॥

ಜಾತಮಾತ್ರಸ್ಸರ್ವಸುಖಂ ವೈಷ್ಣವಂ ಮಾರ್ಗಮಾಶ್ರಿತಃ ।
ಮಹಾಭಾಗವತಶ್ರೇಷ್ಠಃ ಪ್ರಹ್ಲಾದೋ ದೇವಪೂಜಿತಃ ॥ ೭ ॥

---

೩. ದೇವಾಸುರರಿಗೆ ಪರಸ್ಪರ ಯುದ್ಧವಾಗುವಾಗ, ಪ್ರಹ್ಲಾದನು ವಿಷ್ಣುವಿನೊಡನೆ ಯುದ್ಧಕ್ಕೆ ನಿಂತಿದ್ದು ಹೇಗೆ? ವಾಸುದೇವನಿಂದ ಕೊಲ್ಲಲ್ಪಟ್ಟು, ವೈಷ್ಣವ ಶರೀರವನ್ನು ಹೇಗೆ ಹೊಂದಿದನು?

೪. ಸೂತಪುರಾಣಿಕನು ಹೇಳಿದನು:—ಕಶ್ಯಪಮಹರ್ಷಿಯಿಂದ ಪೂರ್ವದಲ್ಲಿ ತಿಳಿಯಲ್ಪಟ್ಟ ವೃತ್ತಾಂತವು, ಬ್ರಹ್ಮನಿಂದ ಮೊದಲು ವ್ಯಾಸಮಹರ್ಷಿಯ ಎದುರಿಗೆ ಹೇಳಲ್ಪಟ್ಟಿತು. ಅದನ್ನೇ ವ್ಯಾಸವಾಸಮಹರ್ಷಿಯು ಬರೆದನು.

೫. ಎಲೈ ಬ್ರಾಹ್ಮಣರೇ, ನಿಮ್ಮೆದುರಿಗೆ ಆ ವಿಷಯವನ್ನು ಹೇಳುತ್ತೇನೆ, ಆ ಸಂದೇಹಕಾರಣವು ಬ್ರಹ್ಮನಿಂದಲೇ ನಿವಾರಿಸಲ್ಪಟ್ಟಿತು.

೬. ವ್ಯಾಸನು ಹೇಳುತ್ತಾನೆ:—ಎಲೈ ಸೂತನೇ, ಪ್ರಹ್ಲಾದನ ಪೂರ್ವಜನ್ಮದ ವಿಷಯವನ್ನು ಪುರಾಣದಲ್ಲಿ ಬೇರೆರೀತಿಯಾಗಿ ಹೇಳಿರುವುದನ್ನು, ಬ್ರಹ್ಮನು ಹೇಳಿರುವಂತೆ ನಾನು ಹೇಳುತ್ತೇನೆ, ಕೇಳು.

೭. ಪ್ರಹ್ಲಾದನು ಹುಟ್ಟಿದೊಡನೆ ವೈಷ್ಣವಧರ್ಮವನ್ನು ಸ್ವೀಕರಿಸಿದನು. ಮಹಾಭಗವದ್ಭಕ್ತನಾಗಿ ದೇವತೆಗಳಿಂದ ಪೂಜಿಸಲ್ಪಟ್ಟನು.

ವಿಷ್ಣುನಾ ಸಹ ಯುದ್ಧಾಯ ಸಪುತ್ರಸ್ಸಂಗರಂ ಗತಃ ।
ನಿಹತೋ ವಾಸುದೇವೇನ ಪ್ರವಿಷ್ಟೋ ವೈಷ್ಣವೀಂ ತನುಂ ॥ ೮ ॥

ಸೃಷ್ಟಿಭಾವಂ ಶೃಣುಷ್ವ ತ್ವಮಸ್ಯೈವ ಚ ಮಹಾತ್ಮನಃ ।
ಸಂಗರಂ ಪ್ರಾಪ್ಯ ಪುತ್ರಾದ್ಯೈರ್ವಿಷ್ಣುನಾ ಸಹ ವೀರ್ಯವಾನ್ ॥ ೯ ॥

ಪ್ರವಿಷ್ಟೋ ವೈಷ್ಣವಂ ತೇಜಃ ಸಂಪ್ರಾಪ್ಯ ಸ್ವೇನ ತೇಜಸಾ ।
ಮಹಾಭಾಗವತಶ್ರೇಷ್ಠಃ ಪ್ರಹ್ಲಾದೋ ದೇವಪೂಜಿತಃ ॥ ೧೦ ॥

ಪುರಾಕಲ್ಪೇ ಮಹಾಭಾಗ ಯಥಾ ಜಾತಸ್ಸ ವೀರ್ಯವಾನ್ ।
ವೃತ್ತಾಂತಂ ತಸ್ಯ ವೀರಸ್ಯ ಪ್ರವಕ್ಷ್ಯಾಮಿ ಸಮಾಸತಃ ॥ ೧೧ ॥

ಪಶ್ಚಿಮೇ ಸಾಗರಸ್ಯಾಂತೇ ದ್ವಾರಕಾ ನಾಮ ವೈ ಪುರೀ ।
ಸರ್ವಋದ್ಧಿಸಮಾಯುಕ್ತಾ ಸರ್ವಸಿದ್ಧಿಸಮನ್ವಿತಾ ॥ ೧೨ ॥

ತಸ್ಯಾಮಾಸ್ತೇ ಸದಾ ದೇವೋ ಯೋಗಜ್ಞೋ ಯೋಗಸತ್ತಮಃ ।
ಶಿವಶರ್ಮೇತಿ ವಿಖ್ಯಾತೋ ವೇದಶಾಸ್ತ್ರಾರ್ಥಕೋವಿದಃ ॥ ೧೩ ॥

---

೮. ವಿಷ್ಣುವಿನೊಡನೆ ಯುದ್ಧಕ್ಕೆ ಪುತ್ರನೊಡನೆ ಹೊರಟನು. ಅಲ್ಲಿ ಹರಿಯಿಂದ ಕೊಲ್ಲಲ್ಪಟ್ಟನು. ಆಮೇಲೆ ವಿಷ್ಣುಸಂಬಂಧವಾದ ದೇಹವನ್ನು ಹೊಂದಿದನು.

೯. ಅವನ ಉತ್ಪತ್ತಿಕ್ರಮವನ್ನು ಹೇಳುವೆನು ಕೇಳು, ಮಕ್ಕಳೇ ಮೊದಲಾದವರೊಡಗೂಡಿ ತನ್ನ ಪರಾಕ್ರಮದಿಂದ ವಿಷ್ಣುವಿನ ಸಂಗಡ ಯುದ್ಧಮಾಡಿ ಮೃತನಾಗಿ, ವಿಷ್ಣುಸಂಬಂಧವುಳ್ಳ ತೇಜಸ್ಸನ್ನು ಪ್ರವೇಶಿಸಿದನು.

೧೦-೧೧. ಹೇ ಮಹಾಭಾಗನೇ, ಪರಮ ಭಾಗವತಶ್ರೇಷ್ಠನೂ, ದೇವಪೂಜಿತನೂ, ವೀರ್ಯವಂತನೂ, ಆದ ಪ್ರಹ್ಲಾದನು, ಪೂರ್ವಕಲ್ಪದಲ್ಲಿ ಹೇಗೆ ಹುಟ್ಟಿದನು ಎಂಬುದನ್ನು ಸಂಕ್ಷೇಪವಾಗಿ ಹೇಳುವೆನು, ಕೇಳು.

೧೨. ಪಶ್ಚಿಮಸಮುದ್ರದ ಕೊನೆಯಲ್ಲಿ ದ್ವಾರಕೆ ಎಂಬ ಒಂದು ಪಟ್ಟಣವುಂಟು. ಅದು ಸಮಸ್ತ ಐಶ್ವರ್ಯದಿಂದಲೂ, ಸಕಲಸಿದ್ಧಿಗಳಿಂದಲೂ ಪೂರ್ಣವಾಗಿದೆ.

೧೩. ಆ ಪಟ್ಟಣದಲ್ಲಿ ವೇದಶಾಸ್ತ್ರಪಾರಂಗತನೂ, ಯೋಗಶಾಸ್ತ್ರನಿಪುಣನೂ ಆದ ಶಿವಶರ್ಮನೆಂದು ಪ್ರಸಿದ್ಧನಾದ ಒಬ್ಬ ಬ್ರಾಹ್ಮಣನಿದ್ದನು.

ತಸ್ಯಾಽಪಿ ಪಂಚಪುತ್ರಾಸ್ತು ಬಭೂವುಶ್ಶಾಸ್ತ್ರಕೋವಿದಾಃ ।
ಯಜ್ಞಶರ್ಮಾ ವೇದಶರ್ಮಾ ಧರ್ಮಶರ್ಮಾ ತಥೈವ ಚ ॥ ೧೪ ॥

ವಿಷ್ಣುಶರ್ಮಾ ಮಹಾಭಾಗ ಸೂನಂ ತತ್ಕರ್ಮಕೋವಿದಃ ।
ಪಂಚಮಸ್ಸೋಮಶರ್ಮೇತಿ ಪಿತೃಭಕ್ತಿಪರಾಯಣಃ ॥ ೧೫ ॥

ಪಿತೃಭಕ್ತಿಂ ವಿನಾ ಚೈವ ಧರ್ಮಮನ್ಯಂ ದ್ವಿಜೋತ್ತಮಾಃ ।
ನ ವಿದಂತಿ ಮಹಾತ್ಮಾನಸ್ತದ್ಭಾವೇನ ತು ಭಾವಿತಾಃ ॥ ೧೬ ॥

ತೇಷಾಂ ತು ಭಕ್ತಿಂ ಸಂಪಶ್ಯಞ್ಶಿವಶರ್ಮಾ ದ್ವಿಜೋತ್ತಮಃ ।
ಚಿಂತಯಾಮಾಸ ಮೇಧಾವೀ ವಿಸ್ಮಯಿಷ್ಯೇ ಸುರೋತ್ತಮಾ ॥ ೧೭ ॥

ಪಿತೃಭಕ್ತೇಷು ಯೋ ಭಾವೋ ನೈತೇಷಾಂ ಮನಸಿ ಸ್ಥಿತಃ ।
ಯಥಾ ಜಾನಾಮ್ಯಹಂ ಚಾಥ ಕರಿಷ್ಯೇ ಬುದ್ಧಿಪೂರ್ವಕಂ । ೧೮ ॥

ವಿಷ್ಣೋಶ್ಚೈವ ಪ್ರಸಾದಾತ್ಸಃ ಸರ್ವಸಿದ್ಧಿರ್ಬಭೂವ ಹ ।
ಸದ್ಭಾವಂ ಚಿಂತಯಾಮಾಸ ಆತ್ಮನಾರ್ಥಂ ದ್ವಿಜೋತ್ತಮಃ ॥ ೧೯ ॥

---

೧೪-೧೫. ಆ ಶಿವಶರ್ಮನಿಗೆ ಶಾಸ್ತ್ರಪಾರಂಗತರಾದ ಐವರು ಪುತ್ರರಿದ್ದರು. ಪಿತೃಭಕ್ತಿಪರಾಯಣರಾದ ಅವರಿಗೆ ಕ್ರಮವಾಗಿ ಯಜ್ಞಶರ್ಮ, ವೇದಶರ್ಮ, ಧರ್ಮಶರ್ಮ, ವಿಷ್ಣುಶರ್ಮ, ಸೋಮಶರ್ಮರೆಂದು ಹೆಸರು.

೧೬. ಈ ಬ್ರಾಹ್ಮಣಪುತ್ರರು ಪಿತೃಭಕ್ತಿಯೊಂದನ್ನು ಬಿಟ್ಟು, ಬೇರೆ ಯಾವ ಧರ್ಮವನ್ನೂ ತಿಳಿಯರು. ಅದೊಂದರಿಂದಲೇ ಕೂಡಿದ್ದರು.

೧೭. ಬುದ್ಧಿಶಾಲಿಯಾದ ಶಿವಶರ್ಮನೆಂಬ ವಿಪ್ರಶ್ರೇಷ್ಠನು, ತನ್ನ ಪುತ್ರರಿಗೆ ತನ್ನಲ್ಲಿರತಕ್ಕ ಭಕ್ತಿಯನ್ನು ತಿಳಿದವನಾಗಿ, ಅವರ ಪಿತೃಭಕ್ತಿಯಿಂದ ದೇವತೆಗಳನ್ನೂ ಆಶ್ಚರ್ಯಗೊಳಿಸಬಲ್ಲೆನೆಂದು ಭಾವಿಸಿದನು.

೧೮. ಪಿತೃಭಕ್ತರಲ್ಲಿ ಯಾವ ಭಾವವಿರುವುದೋ ಆ ಭಾವವು ಇವರ ಮನಸ್ಸಿನಲ್ಲಿ ಇದೆಯೋ, ಇಲ್ಲವೋ ಎಂಬುದನ್ನು ಪರೀಕ್ಷಿಸುವುದಕ್ಕೋಸ್ಕರ ಬುದ್ಧಿಪೂರ್ವಕವಾಗಿ ನಾನು ಒಂದು ಕೆಲಸವನ್ನು ಮಾಡಿ ನೋಡುತ್ತೇನೆ.

೧೯. ಆ ವಿಪ್ರನು ವಿಷ್ಣುವಿನ ಅನುಗ್ರಹದಿಂದ ಸಕಲ ಸಿದ್ಧಿಯನ್ನೂ ಹೊಂದಿದ್ದನು. ಇವರ ಪರೀಕ್ಷೆಗೋಸ್ಕರ ಒಂದು ಒಳ್ಳೆಯ ಉಪಾಯವನ್ನು ಯೋಚಿಸಿದನು.

**ಉಪಾಯಂ ಬ್ರಾಹ್ಮಣಶ್ರೇಷ್ಠಸ್ತಪಸಸ್ತೇಜಸಃ ಕಿಲ ।**
**ಚಕಾರ ಸೋಽಪ್ಯುಪಾಯಜ್ಞೋ ಮಾಯಯಾ ಬ್ರಹ್ಮವಿತ್ತಮಃ　॥ ೨೦ ॥**

**ತೇಷಾಮಗ್ರೇ ತತೋ ವ್ಯಾಜಂ ಶಿವಶರ್ಮಾ ವ್ಯದರ್ಶಯತ್ ।**
**ಮಹತಾ ಜ್ವರರೋಗೇಣ ಮೃತಾ ಮಾತಾ ವಿದರ್ಶಿತಾ　॥ ೨೧ ॥**

**ತೈಸ್ತು ದೃಷ್ಟ್ವಾ ಮೃತಾ ಮಾತಾ ಪಿತರಂ ವಾಕ್ಯಮಬ್ರುವನ್ ।**
**ಯಥಾ ವಯಂ ಮಹಾಭಾಗ ಗರ್ಭಾಗಾರೇ ಪ್ರವರ್ಧಿತಾಃ　॥ ೨೨ ॥**

**ಕಳೇಬರಂ ಪರಿತ್ಯಜ್ಯ ಸ್ವಯಮೇವ ಗತಾ ಕ್ಷಯಂ ।**
**ಅಪಹಾಯ ಗತಾ ಸೇಯಂ ಸ್ವರ್ಗೇ ತಾತ ಕಿಮುಚ್ಯತೇ　॥ ೨೩ ॥**

**ಶಿವಶರ್ಮಾಽಪರಿಭವಂ ಪುತ್ರಂ ಭಕ್ತಿಪರಾಯಣಂ ।**
**ಯಜ್ಞಶರ್ಮಾಣಮಾಹೂಯ ಇತ್ಯುವಾಚ ದ್ವಿಜೋತ್ತಮಃ　॥ ೨೪ ॥**

**ಅನೇನಾಪಿ ಸುತೀಕ್ಷ್ಣೇನ ಶಸ್ತ್ರೇಣ ನಿಶಿತೇನ ವೈ ।**
**ವಿಚ್ಛಿದ್ಯಾಂಗಾನಿ ಸರ್ವಾಣಿ ಯತ್ರ ತತ್ರ ಕ್ಷಿಪಸ್ವ ಹಿ　॥ ೨೫ ॥**

---

೨೦. ಬ್ರಹ್ಮವಿದನಾದ, ಉಪಾಯಗಳಲ್ಲಿ ಚತುರನಾದ, ಶಿವಶರ್ಮನು ತಪಸ್ಸಾಮರ್ಥ್ಯದಿಂದ ಮಾಯೆಯನ್ನುಂಟುಮಾಡಿ ಒಂದು ಉಪಾಯವನ್ನು ಮಾಡಿದನು.

೨೧. ಆ ಪುತ್ರರ ಎದುರಿಗೆ ಅವರ ತಾಯಿಯು ಹೆಚ್ಚಾದ ಜ್ವರಬಾಧೆಯಿಂದ ಮೃತಳಾದಂತೆ ವ್ಯಾಜವನ್ನು ತೋರಿಸಿದನು.

೨೨-೨೩. ಅವರು ಸತ್ತುಹೋಗಿರುವ ತಮ್ಮ ತಾಯಿಯನ್ನು ನೋಡಿ ದುಃಖಪಡುತ್ತಾ, ಎಲೈ ತಂದೆಯೇ ನಾವು ಯಾರ ಗರ್ಭವಾಸದಲ್ಲಿ ಜನ್ಮವನ್ನು ತಾಳಿ ಬೆಳೆದೆವೋ ಅಂತಹ ನಮ್ಮ ಜನನಿಯು ಈಗ ಮೃತಳಾಗಿರುವಳು. ಈ ದೇಹವನ್ನು ಬಿಟ್ಟ ಬಳಿಕ ಅವಳಿಗೆ ಯಾವಗತಿಯುಂಟಾಗಿರುವುದು? ಸ್ವರ್ಗದಲ್ಲಿರುವಳೇ ಅಥವಾ ಬೇರೆ ದುರ್ಗತಿಯನ್ನು ಹೊಂದಿದಳೇ ಹೇಳೆಂದು ತಮ್ಮ ತಂದೆಯನ್ನು ಕೇಳಿದರು.

೨೪-೨೫. ಬ್ರಾಹ್ಮಣೋತ್ತಮನಾದ ಶಿವಶರ್ಮನು, ಪಿತೃಭಕ್ತನೂ, ಜ್ಯೇಷ್ಠಪುತ್ರನೂ ಆದ ಯಜ್ಞಶರ್ಮನನ್ನು ಕರೆದು ಹರಿತವಾದ ಅಲಗುಳ್ಳ ಈ ಕತ್ತಿಯಿಂದ ನಿಮ್ಮ ತಾಯಿಯ ಅವಯವಗಳನ್ನು ಕತ್ತರಿಸಿ ಸಿಕ್ಕಿದಕಡೆ ಎಸೆದುಬಿಡು ಎಂದು ಹೇಳಿದನು.

ತತ್ಕೃತಂ ತೇನ ಪುತ್ರೇಣ ಯಥಾದೇಶಂ ಶ್ರುತಂ ಪಿತುಃ ।
ಸಮಾಯಾತಃ ಪುನಃ ಪಶ್ಚಾತ್ಪಿತರಂ ವಾಕ್ಯಮಬ್ರವೀತ್ ॥ ೨೬ ॥

ಯಥಾದಿಷ್ಟಂ ತ್ವಯಾ ತಾತ ತತ್ಸರ್ವಂ ಕೃತವಾನಹಂ ।
ಸಮಾದಿಶ ಮಮಾನ್ಯಚ್ಚ ಕಾರ್ಯಕಾರಣಮದ್ಯ ಚ ॥ ೨೭ ॥

ತಚ್ಚ ಸರ್ವಂ ಕರಿಷ್ಯಾಮಿ ದುರ್ಲಭಂ ದುರ್ಜಯಂ ಪಿತಃ ।
ತಮಾಜ್ಞಾಯ ಮಹಾಭಾಗಂ ಪಿತೃಭಕ್ತಂ ಸ ಚ ದ್ವಿಜಃ ।
ನಿಶ್ಚಯಂ ಪರಮಂ ಜ್ಞಾತ್ವಾ ದ್ವಿತೀಯಸ್ಯ ವಿಚಿಂತಯನ್ ॥ ೨೮ ॥

ವೇದಶರ್ಮಾಣಮಾಸಾದ್ಯ ಗಚ್ಛ ತ್ವಂ ಮಮ ಶಾಸನಾತ್ ।
ಸ್ತ್ರಿಯಾ ವಿನಾ ನ ಯುಕ್ತೋಽಸ್ಮಿ ಸ್ಥಾತುಂ ಕಂದರ್ಪಮೋಹಿತಃ ॥ ೨೯ ॥

ಯಾ ಮಯಾ ದರ್ಶಿತಾ ನಾರೀ ಸರ್ವಸೌಭಾಗ್ಯಸಂಪದಾ ।
ಏನಾಮಾನಯ ವತ್ಸ ತ್ವಂ ಮಮಾರ್ಥೇ ಕೃತನಿಶ್ಚಯಃ ॥ ೩೦ ॥

---

೨೬-೨೭. ತಂದೆಯು ಹೇಳಿದಂತೆ ಆಜ್ಞೆಯನ್ನು ನೆರವೇರಿಸಿ ಬಂದು, ತಿರುಗಿ ತಂದೆಯ ಬಳಿಗೆ ಬಂದು ಎಲೈ ತಂದೆಯೇ, ನೀನು ಹೇಳಿದಂತೆ ಕೆಲಸವನ್ನು ಮಾಡಿರುವೆನು, ಇನ್ನೇನು ಮಾಡಬೇಕೆಂಬುದನ್ನು ತಿಳಿಸು. ಎಷ್ಟು ಕಷ್ಟವಾಗಲೀ ಆ ಕೆಲಸವನ್ನು ನಾನು ಮಾಡುತ್ತೇನೆ ಎಂದನು.

೨೮. ಜ್ಯೇಷ್ಠಪುತ್ರನ ದೃಢತೆಯನ್ನು ತಿಳಿದು, ಇವನು ಪಿತೃಭಕ್ತನೆಂದು ನಿಶ್ಚಯಿಸಿ, ಎರಡನೆಯ ಪುತ್ರನ ಪರೀಕ್ಷೆಗಾಗಿ ಆಲೋಚಿಸಿದನು.

೨೯-೩೦. ವೇದಶರ್ಮನನ್ನು ಕರೆದು, ಅಯ್ಯಾ, ನೀನು ನನ್ನ ಅಪ್ಪಣೆಯ ಪ್ರಕಾರ ಹೊರಡು. ನಾನು ಮದನ ಬಾಣಪೀಡಿತನಾಗಿರುವೆನು. ಸಮಸ್ತ ಸೌಭಾಗ್ಯ ಸಂಪತ್ತಿನಿಂದ ಕೂಡಿದ ಪೂರ್ವದಲ್ಲಿ ನಾನು ನೋಡಿದ ಆ ಹೆಂಗಸನ್ನು ಬಿಟ್ಟು ನಾನಿರಲಾರೆನು, ಅವಳನ್ನು ನನಗೋಸ್ಕರ ನಿಶ್ಚಯಪಡಿಸಿ ಕರೆದುಕೊಂಡು ಬಾ ಎಂದು ಹೇಳಿದನು.

**ಏವಮುಕ್ತಸ್ತಥಾ ಪ್ರಾಹ ಕರಿಷ್ಯೇ ತವ ಸುಪ್ರಿಯಂ ।**
**ಪಿತರಂ ತಂ ನಮಸ್ಕೃತ್ಯ ತಾಮುವಾಚ ಗತಸ್ತತಃ ॥ ೩೧ ॥**

**ತ್ವಾಂ ದೇವಿ ಯಾಚತೇ ತಾತಃ ಕಾಮಬಾಣಪ್ರಪೀಡಿತಃ ।**
**ಅತಸ್ತ್ವಂ ಜರಯಾ ಯುಕ್ತಂ ಪ್ರಸಾದಸುಮುಖೀ ಭವ ॥ ೩೨ ॥**

**ಭಜ ತ್ವಂ ಚಾರುಸರ್ವಾಂಗಿ ಪಿತರಂ ಮಮ ಸುಂದರಿ ।**
**ಏವಮಾಕರ್ಣಿತಂ ತಸ್ಯ ಮಾಯಯಾ ವೇದಶರ್ಮಣಃ ॥ ೩೩ ॥**

**॥ ಸ್ತ್ರ್ಯುವಾಚ ॥**

**ಜರಯಾ ಪೀಡಿತಸ್ಯಾಪಿ ನೈವೇಚ್ಛಾಮಿ ಕದಾಚನ ।**
**ಸಶ್ಲೇಷ್ಮಮುಖರೋಗಸ್ಯ ವ್ಯಾಧಿಗ್ರಸ್ತಸ್ಯ ಸಾಂಪ್ರತಂ ॥ ೩೪ ॥**

**ಶಿಥಿಲಸ್ಯಾಪಿ ಚಾರ್ತಸ್ಯ ತಸ್ಯ ವೃದ್ಧಸ್ಯ ಸಂಗಮಂ ।**
**ಭವಂತಂ ರಂತುಮಿಚ್ಛಾಮಿ ಕರಿಷ್ಯೇ ತವ ಸುಪ್ರಿಯಂ ॥ ೩೫ ॥**

---

೩೧. ಎರಡನೇ ಮಗನು ಹಾಗೆಯೇ ಆಗಲೆಂದು ತಂದೆಗೆ ನಮಸ್ಕರಿಸಿ, ಆಕೆಯ ಬಳಿಗೆ ಹೋಗಿ ಹೇಳಿದನು.

೩೨. ಎಲೈ ದೇವಿಯೇ, ಕಾಮಬಾಣಪೀಡಿತನಾದ ನನ್ನ ತಂದೆಯು ನಿನ್ನನ್ನು ಅಪೇಕ್ಷಿಸುತ್ತಾನೆ. ಆದುದರಿಂದ ಮುದುಕನಾದ ನನ್ನ ತಂದೆಯ ವಿಷಯದಲ್ಲಿ ನೀನು ಪ್ರಸನ್ನಳಾಗಬೇಕು.

೩೩. ಶೋಭನವಾದ ಅಂಗಗಳುಳ್ಳ ಎಲೈ ಸುಂದರಿಯೇ, ನನ್ನ ತಂದೆಯನ್ನು ಸಂತೋಷಪಡಿಸು ಎಂದು ಮಾಯೆಯಿಂದ ಮೋಹಿತನಾಗಿ ಹೇಳಿದನು.

೩೪-೩೫. ಹೆಂಗಸು ಹೇಳಿದಳು:—ವೃದ್ಧಾಪ್ಯದಿಂದ ಕೂಡಿದ, ಶ್ಲೇಷ್ಮವ್ಯಾಧಿಯಿಂದ ನರಳುತ್ತಿರುವ, ದುರ್ಬಲವಾದ ಅಂಗಗಳಿಂದ ಪೀಡಿತನಾದ, ನಿನ್ನ ತಂದೆಯೊಡನೆ ನನಗೆ ರಮಿಸಲು ಇಷ್ಟವಿಲ್ಲ. ನಿನ್ನೊಡನೆ ಸುಖಿಸಲು ಇಚ್ಛಿಸುತ್ತೇನೆ. ನಿನಗೆ ಪ್ರಿಯವನ್ನು ಮಾಡುತ್ತೇನೆ.

ಭವಂತಂ ನೃಪಸೌಭಾಗ್ಯೈರ್ಗುಣರತ್ನೈರಲಂಕೃತಂ ।
ದಿವ್ಯಲಕ್ಷಣಸಂಪನ್ನಂ ದಿವ್ಯರೂಪಂ ಮಹೌಜಸಂ ॥ ೩೬ ॥

ಕಿಂ ಕರಿಷ್ಯಸಿ ಚಾನೇನ ವೃದ್ಧೇನ ಶೃಣು ಮಾನದ ।
ಮಮಾಂಗಭೋಗಭಾವೇನ ಸರ್ವಂ ಪ್ರಾಪ್ಸ್ಯಸಿ ದುರ್ಲಭಂ ॥ ೩೭ ॥

ಯದ್ಯತ್ತ್ವಮಿಚ್ಛಸೇ ವಿಪ್ರ ತತ್ತದ್ದದ್ಮಿ ನ ಸಂಶಯಃ ।
ಏತದ್ವಾಕ್ಯಂ ಮಹಚ್ಛ್ರುತ್ವಾ ಅಪ್ರಿಯಂ ಪಾಪಸಂಕುಲಂ ॥ ೩೮ ॥

॥ ವೇದಶರ್ಮೋವಾಚ ॥

ಅಧರ್ಮಯುಕ್ತಂ ತೇ ವಾಕ್ಯಮಯುಕ್ತಂ ಪಾಪಮಿಶ್ರಿತಂ ।
ನೇದೃಶಂ ಮಾಂ ವದೇರ್ದೇವಿ ಪಿತೃಭಕ್ತಂ ಹ್ಯನಾಗಸಂ ॥ ೩೯ ॥

ಪಿತುರರ್ಥಂ ಸಮಾಯಾತಸ್ತ್ವಾಮಹಂ ಪ್ರಾರ್ಥಯೇ ಶುಭೇ ।
ಅನ್ಯದೇವ ನ ವಕ್ತವ್ಯಂ ಭಜ ತ್ವಂ ಪಿತರಂ ಮಮ ॥ ೪೦ ॥

---

೩೬. ರಾಜಲಕ್ಷಣವುಳ್ಳ, ಗುಣಗಳಿಂದ ಕೂಡಿದ ದಿವ್ಯವಾದ, ಐಶ್ವರ್ಯದಿಂದ ಕೂಡಿದ, ಮಹಾಶಕ್ತಿಯುಳ್ಳ ನಿನ್ನನ್ನು ರಮಿಸಲು ಅಪೇಕ್ಷಿಸುತ್ತೇನೆ.

೩೭. ಎಲೈ ಮಾನ್ಯನೇ, ವೃದ್ಧನಾದ ನಿನ್ನ ತಂದೆಯಿಂದ ನಿನಗೆ ಆಗಬೇಕಾದುದೇನಿದೆ ? ನನ್ನೀ ಅವಯವದ ಸಂಗದಿಂದ ದುರ್ಲಭವಾದುದೆಲ್ಲವನ್ನೂ ಹೊಂದುತ್ತೀ

೩೮. ಎಲೈ ದ್ವಿಜನೇ, ಮತ್ತು ನೀನು ಇನ್ನೇನನ್ನು ಕೇಳುವೆಯೋ ಅವೆಲ್ಲವನ್ನೂ ಕೊಡುತ್ತೇನೆ, ಸಂಶಯಪಡಬೇಡ. ಪಾಪದಿಂದಕೂಡಿದ, ತನಗೆ ಇಷ್ಟವಿಲ್ಲದ ಈ ಮಾತನ್ನು ಬ್ರಾಹ್ಮಣಕುಮಾರನು ಕೇಳಿದವನಾಗಿ,

೩೯. ಹೇ ದೇವಿಯೇ, ನಿನ್ನ ಮಾತು ಧರ್ಮಬಾಹಿರವಾಗಿಯೂ, ಪಾಪದಿಂದ ಕೂಡಿದ್ದಾಗಿಯೂ ಇರುವುದು. ಪಿತೃಭಕ್ತನೂ, ಪಾಪರಹಿತನೂ ಆದ ನನಗೆ ನೀನು ಇಂಥಾ ಮಾತಾಗಳನ್ನಾಡಬಾರದು.

೪೦. ನಾನು ನಮ್ಮ ತಂದೆಗೋಸ್ಕರ ನಿನ್ನನ್ನು ಕೇಳುವುದಕ್ಕೆ ಬಂದಿದ್ದೇನೆ. ಆದ್ದರಿಂದ ನಿನ್ನನ್ನು ಪ್ರಾರ್ಥಿಸುತ್ತೇನೆ. ಬೇರೆ ಮಾತನ್ನು ಹೇಳಬೇಡ. ನನ್ನ ತಂದೆಯನ್ನು ಸೇರಿ ಸುಖಿಸು.

ಯದ್ಯತ್ತ್ವಮಿಚ್ಛಸೇ ದೇವಿ ತ್ರೈಲೋಕ್ಯೇ ಸಚರಾಚರೇ ।
ತತ್ತದ್ದದ್ಮಿ ನ ಸಂದೇಹೋ ದೇವರಾಜ್ಯಾದಿಕಂ ಶುಭೇ ॥ ೪೧ ॥

॥ ಸ್ತ್ರ್ಯುವಾಚ ॥

ಏವಂ ಸಮರ್ಥೋ ದಾತುಂ ಮೇ ಪಿತುರರ್ಥೇ ಯಥಾ ಭವಾನ್ ।
ತದಾ ಮೇ ದರ್ಶಯಾದ್ಯೈವ ಸೇಂದ್ರಾಂಸ್ತ್ವಂ ಸಮಹೇಶ್ವರಾನ್ ॥ ೪೨ ॥

ದಾತುಮೇವಂ ಸಮರ್ಥೋಽಸಿ ದುರ್ಲಭಂ ಮಮ ಸಾಂಪ್ರತಂ ।
ಕಿಂ ತೇ ಬಲಂ ಮಹಾಭಾಗ ದರ್ಶಯಸ್ವ ಸ್ವಮಾತ್ಮನಃ ॥ ೪೩ ॥

॥ ವೇದಶರ್ಮೋವಾಚ ॥

ಪಶ್ಯ ಪಶ್ಯ ಬಲಂ ದೇವಿ ಪ್ರಭಾವಂ ತಪಸೋ ಮಮ ।
ಮಯಾಽಽಹೂತಾಸ್ಸಮಾಯಾತಾ ಇಂದ್ರಾದ್ಯಾಸ್ಸುರಸತ್ತಮಾಃ ॥ ೪೪ ॥

ವೇದಶರ್ಮಾಣಮೂಚುಸ್ತೇ ಕಿಂ ಕುರ್ಮೋ ಹಿ ದ್ವಿಜೋತ್ತಮ ।
ಯಮೇವಮಿಚ್ಛಸೇ ವಿಪ್ರ ತಂ ವೈ ದದ್ಮೋ ನ ಸಂಶಯಃ ॥ ೪೫ ॥

---

೪೧. ಚರಾಚರಾತ್ಮಕವಾದ ಈ ಪ್ರಪಂಚದಲ್ಲಿ ನೀನು ಏನನ್ನು ಕೇಳುತ್ತೀಯೋ ಅದನ್ನೂ, ಕಡೆಗೆ ದೇವರಾಜ್ಯವನ್ನಾದರೂ ಸಂದೇಹವಿಲ್ಲದೆ ತಂದುಕೊಡುತ್ತೇನೆ.

೪೨. ಹೆಂಗಸು ಹೇಳಿದಳು:—ನಿಮ್ಮ ತಂದೆಗೋಸ್ಕರ ನೀನು ಎಲ್ಲವನ್ನೂ ಕೊಡಲು ಶಕ್ತನಾದರೆ, ಇಂದ್ರನೊಡಗೂಡಿದ ಮಹೇಶ್ವರಾದಿಗಳನ್ನು ನನಗೆ ಈಗಲೇ ತೋರಿಸು.

೪೩-೪೪. ಹೇ ಮಹಾಭಾಗನೇ, ದುರ್ಲಭವಾದ ವಸ್ತುವನ್ನು ಕೊಡಲು ಶಕ್ತನಾದರೆ, ನಿನ್ನ ಬಲವು ಎಷ್ಟೆಂಬುದನ್ನು ತೋರಿಸು ಎಂದು ಕೇಳಲು, ಆ ದ್ವಿಜನು "ಎಲೈ ದೇವಿಯೇ, ನನ್ನ ತಪಸ್ಸಿನ ಬಲವನ್ನು ನೋಡು. ಇಗೋ ನಾನು ಕರೆದುದರಿಂದ ಇಂದ್ರಸಹಿತರಾದ ದೇವತೆಗಳೆಲ್ಲರೂ ಬಂದಿದ್ದಾರೆ, ನೋಡು" ಎಂದನು.

೪೫. ಆಗ ದೇವತೆಗಳು ಬ್ರಾಹ್ಮಣಪುತ್ರನನ್ನು ನೋಡಿ, ಎಲೈ ದ್ವಿಜವರನೇ, ನಮ್ಮಿಂದ ನಿನಗೇನಾಗಬೇಕು ? ಯಾವದನ್ನು ಕೇಳಿದರೆ ಅದನ್ನು ಕೊಡಲು ನಾವು ಸಿದ್ಧರಾಗಿರುವೆವು. ಸಂಶಯವಿಲ್ಲ, ಎಂದು ಹೇಳಿದರು.

**ವೇದಶರ್ಮೋವಾಚ**

**ಯದಿ ದೇವಾಃ ಪ್ರಸನ್ನಾ ಮೇ ಪ್ರಸಾದಸುಮುಖಾ ಯದಿ ।**
**ಇಮಾಂ ತು ವಿಪುಲಾಂ ಭಕ್ತಿಂ ಪಾದಯೋಃ ಪಿತುರೇವ ಮೇ ॥ ೪೬ ॥**

**ಏವಮಸ್ತು ಸುರಾಸ್ಸರ್ವೇ ಯಥಾ ಯಾತಾ ತಥಾ ಗತಾಃ ।**
**ತಮುವಾಚ ತತೋ ಹೃಷ್ಟಾ ದೃಷ್ಟಂ ತೇ ತಪಸೋ ಬಲಂ ।**
**ದೇವೈಸ್ತು ನಾಸ್ತಿ ಮೇ ಕಾರ್ಯಂ ಯದಿ ದಾತುಮಿಹೇಚ್ಛಸಿ ॥ ೪೭ ॥**

**ಯನ್ಮಾಂ ನಯಸಿ ಗುರ್ವರ್ಥಂ ತತ್ಕುರಷ್ವ ಮಮ ಪ್ರಿಯಂ ।**
**ದೇಹಿ ತ್ವಂ ಸ್ವಂ ಶಿರೋ ವಿಪ್ರ ಸ್ವಹಸ್ತೇನ ನಿಕೃತ್ಯ ವೈ ॥ ೪೮ ॥**

**ವೇದಶರ್ಮೋವಾಚ**

**ಧನ್ಯೋಽಹಮದ್ಯ ಸಂಜಾತೋ ಮುಕ್ತಶ್ಚೈವ ಋಣತ್ರಯಾತ್ ।**
**ಸ್ವಶಿರೋಽಪಿ ಪ್ರದಾಸ್ಯಾಮಿ ಗೃಹ್ಯತಾಂ ಗೃಹ್ಯತಾಂ ಶುಭೇ ॥ ೪೯ ॥**

---

೪೬. ವೇದಶರ್ಮನು ಹೇಳಿದನು:—"ಹೇ ದೇವತೆಗಳಿರಾ, ನೀವೆಲ್ಲರೂ ನನಗೆ ಪ್ರಸನ್ನರಾಗಿ ಅನುಗ್ರಹಿಸಬೇಕೆಂಬ ಅಪೇಕ್ಷೆಯಿದ್ದರೆ, ತಂದೆಯ ಪಾದಗಳಲ್ಲಿರುವ ಈ ಭಕ್ತಿಯು ಇನ್ನೂ ಹೆಚ್ಚುವಂತೆ ಅನುಗ್ರಹಿಸಿ.

೪೭. ಹಾಗೆಯೇ ಆಗಲೆಂದು ಹೇಳಿ ದೇವತೆಗಳೆಲ್ಲರೂ ಹೊರಟುಹೋದರು. ಆ ಹೆಂಗಸು ವೇದಶರ್ಮನನ್ನು ಕುರಿತು ನಿನ್ನ ತಪಸ್ಸಾಮರ್ಥ್ಯವು ಚೆನ್ನಾಗಿ ತಿಳಿಯಿತು. ನಿನ್ನ ಮೂಲಕ ದೇವತೆಗಳಿಂದ ನನಗೆ ಆಗಬೇಕಾದ ಕೆಲಸವೇನೂ ಇಲ್ಲ.

೪೮. ನೀನು ನನ್ನನ್ನು ನಿಮ್ಮ ತಂದೆಗೋಸ್ಕರ ಕರೆದುಕೊಂಡುಹೋಗಬೇಕಾದ ಪಕ್ಷದಲ್ಲಿ, ನಿನ್ನ ಕೈಯಿಂದಲೇ ನಿನ್ನ ತಲೆಯನ್ನು ಕಡಿದು ನನಗೆ ಪ್ರಿಯವನ್ನುಂಟುಮಾಡು, ಎಂದು ಹೇಳಿದಳು.

೪೯. ಎಲೈ ಮಂಗಳಕರಳೇ ಈಗ ನಾನು ಧನ್ಯನಾದೆನು. ದೇವ, ಋಷಿ, ಪಿತೃಋಣಗಳಿಂದ ಮುಕ್ತನಾದೆ. ನನ್ನ ತಲೆಯನ್ನು ಕೊಡುತ್ತೇನೆ, ತೆಗೆದುಕೊ.

ಶಿತೇನ ತೀಕ್ಷ್ಣಧಾರೇಣ ಶಸ್ತ್ರೇಣ ದ್ವಿಜಸತ್ತಮಃ ।
ನಿಕೃತ್ಯ ಸ್ವಂ ಶಿರಶ್ಚಾಥ ದದೌ ತಸ್ಯೈ ಪ್ರಹಸ್ಯ ಚ ॥ ೫೦ ॥

ರುಧಿರೇಣ ಪ್ಲುತಂ ಸಾ ಚ ಪರಿಗೃಹ್ಯ ಗತಾ ಮುನಿಂ ।
ಸ್ತ್ರ್ಯುವಾಚ
ತವಾರ್ಥೇ ಪ್ರೇಷಿತಾ ವಿಪ್ರ ಪುತ್ರೇಣ ವೇದಶರ್ಮಣಾ ॥ ೫೧ ॥

ಏತಚ್ಛಿರಸ್ಸಂಗೃಹಾಣ ನಿಕೃತ್ತಂ ಚಾತ್ಮನಾತ್ಮನಃ ।
ವೇಪಿತಾಂಗಾಸ್ತದಾಲಕ್ಷ್ಯ ತೇ ಬಭೂವುಃ ಪರಸ್ಪರಂ ॥ ೫೨ ॥

ಮೃತಾ ನೋ ಧರ್ಮಸರ್ವಸ್ವಾ ಮಾತಾ ಸತ್ಯಸಮಾಧಿನಾ ।
ಅಯಮೇವ ಮಹಾಭಾಗಃ ಪಿತುರರ್ಥೇ ಮೃತಶ್ಶುಭಃ ॥ ೫೩ ॥

ಧನ್ಯೋಽಯಂ ಧನ್ಯತಾಂ ಪ್ರಾಪ್ತಃ ಪಿತುರರ್ಥೇ ಕೃತಂ ಶುಭಂ ।
ಏವಂ ಸಂಭಾಷಿತಂ ತೈಸ್ತು ಭ್ರಾತೃಭಿಃ ಪುಣ್ಯಚಾರಿಭಿಃ ॥ ೫೪ ॥

---

೫೦. ಈರೀತಿಯಾಗಿ ಆ ಬ್ರಾಹ್ಮಣೋತ್ತಮನು ಹೇಳಿ, ನಕ್ಕು, ಹರಿತವಾದ ಕತ್ತಿಯಿಂದ ತನ್ನ ತಲೆಯನ್ನು ಕತ್ತರಿಸಿ ಅವಳಿಗೆ ಕೊಟ್ಟನು.

೫೧. ಆ ಹೆಂಗಸು ರಕ್ತದಿಂದ ನೆನೆಯಲ್ಪಟ್ಟ ತಲೆಯನ್ನು ತೆಗೆದುಕೊಂಡು ಶಿವಶರ್ಮನಬಳಿಗೆ ಬಂದು, ಎಲೈ ವಿಪ್ರನೇ, ನಿನ್ನ ಮಗನಾದ ವೇದಶರ್ಮನಿಂದ ನಿನ ಗೋಸ್ಕರವಾಗಿ ನಾನು ಕಳುಹಿಸಲ್ಪಟ್ಟವಳಾಗಿದ್ದೇನೆ.

೫೨. ನಿನ್ನ ಮಗನು ತನ್ನ ತಲೆಯನ್ನು ತನ್ನ ಕೈಯಿಂದಲೇ ಕಡಿದುಕೊಟ್ಟಿರುವ ಈ ಶಿರಸ್ಸನ್ನು ತೆಗೆದುಕೋ ಎಂದಳು. ಆ ಶಿರಸ್ಸನ್ನು ನೋಡಿ ಸಹೋದರರು ನಡುಗಿಹೋದರು.

೫೩. ಧರ್ಮಸ್ವರೂಪಳಾದ, ಸತ್ಯವಾಕ್ಯಳಾದ ನಮ್ಮ ತಾಯಿಯು ಸತ್ತಳು. ಈ ಮಹಾನುಭಾವನೂ ಸಹ ತಂದೆಗೋಸ್ಕರ ಮಡಿದನು.

೫೪. ತಂದೆಗೋಸ್ಕರ ಇವನು ಸತ್ತುದರಿಂದ ಧನ್ಯನಾದನು. ಶ್ಲಾಘ್ಯತೆಯನ್ನೂ ಪಡೆದನು ಎಂಬುದಾಗಿ ಧರ್ಮಾತ್ಮರಾದ ಆ ಸಹೋದರರು ಪರಸ್ಪರ ಮಾತನಾಡುತ್ತಿದ್ದರು.

**ಏತಚ್ಛಿರಃ ಪ್ರಗೃಹ್ಯ ತ್ವಂ ಪ್ರಹಿತಂ ತವ ಸೂನುನಾ ।**
**ಸಮಾಕರ್ಣ್ಯ ದ್ವಿಜೋ ವಾಕ್ಯಂ ಜ್ಞಾತ್ವಾ ಭಕ್ತಿಪರಾಯಣಂ ॥ ೫೫ ॥**

**ನಿಕೃಂತಿತಂ ಶಿರಸ್ತೇನ ಪುತ್ರೇಣ ವೇದಶರ್ಮಣಾ ।**
**ಧರ್ಮಶರ್ಮಾಣಮಾಹೂಯ ಶಿರ ಏತತ್ಪ್ರಗೃಹ್ಯತಾಂ ॥ ೫೬ ॥**

**ಇತಿ ಶ್ರೀ ಮಹಾಪುರಾಣೆ ಪಾದ್ಮೇ ಭೂಮಿಖಂಡೇ**
**ಪ್ರಥಮೋಽಧ್ಯಾಯಃ**



---

೫೫. ನಿನ್ನ ಮಗನಿಂದ ಕಳುಹಿಸಲ್ಪಟ್ಟ ಈ ತಲೆಯನ್ನು ತೆಗೆದುಕೊ ಎಂಬ ಮಾತನ್ನು ಕೇಳಿ ಶಿವಶರ್ಮನು ಅವನ (ವೇದಶರ್ಮನ) ಭಕ್ತಿಪರಾಯಣತೆಯನ್ನು ತಿಳಿದು,

೫೬. ಧರ್ಮಶರ್ಮನೆಂಬ ಮೂರನೇ ಮಗನನ್ನು ಕರೆದು, ವೇದಶರ್ಮನು ತನ್ನ ತಲೆಯನ್ನು ಕತ್ತರಿಸಿ ಕೊಟ್ಟಿರುವನು, ಇದನ್ನು ತೆಗೆದುಕೊ ಎಂದು ಹೇಳಿದನು.

ಇಲ್ಲಿಗೆ ಪಾದ್ಮಮಹಾಪುರಾಣದ ಭೂಮಿಖಂಡದಲ್ಲಿ ಮೊದಲನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ॥ ದ್ವಿತೀಯೋಽಧ್ಯಾಯಃ ॥

**ಸೂತ ಉವಾಚ**

ತದಾದಾಯ ಮಹಾತ್ಮಾಸೌ ನಿರ್ಜಗಾಮ ತ್ವರಾನ್ವಿತಃ ।
ಪಿತೃಭಕ್ತ್ಯಾ ತಪೋಭಿಶ್ಚ ಸತ್ಯಾರ್ಜವಬಲೇನ ಸಃ ॥ ೧ ॥

ಧರ್ಮಪೂಕೃಷ್ಟವಾಂಶ್ಚೈವ ಧರ್ಮಶರ್ಮಾ ತತಸ್ತದಾ ।
ಸಮಾಕೃಷ್ಟಸ್ತು ವೈ ಧರ್ಮಸ್ತಪಸಾ ತಸ್ಯ ಧೀಮತಃ ॥ ೨ ॥

ಧರ್ಮಶರ್ಮಾಣಮಾಗತ್ಯ ಇದಂ ವಚನಮಬ್ರವೀತ್ ।
ಯಸ್ಮಾತ್ತ್ವಯಾ ಸಮಾಹೂತೋ ಧರ್ಮಶರ್ಮನ್ ಸಮಾಗತಃ ॥ ೩ ॥

---

## ಎರಡನೆಯ ಅಧ್ಯಾಯವು.

೧. ಸೂತನು ಹೇಳುತ್ತಾನೆ:—ಮಹಾತ್ಮನಾದ ಧರ್ಮಶರ್ಮನು, ತನ್ನ ಸಹೋದರನ ತಲೆಯನ್ನು ತೆಗೆದುಕೊಂಡು ಜಾಗ್ರತೆಯಾಗಿ ತಂದೆಯಲ್ಲಿರತಕ್ಕ ಭಕ್ತಿಯಿಂದಲೂ, ತನ್ನ ತಪಸ್ಸಾಮರ್ಥ್ಯದಿಂದಲೂ, ಸದಾಚಾರ ಬಲದಿಂದಲೂ ಧರ್ಮಪುರುಷನನ್ನು ಕರೆದನು.

೨-೩. ಆ ಮಹಾತ್ಮನ ತಪೋಬಲದಿಂದ ಸೆಳೆಯಲ್ಪಟ್ಟ ಧರ್ಮಪುರುಷನು ಧರ್ಮಶರ್ಮನಬಳಿಗೆ ಬಂದು, “ ಎಲೈ ಧರ್ಮಶರ್ಮನೇ, ಯಾತಕ್ಕೆ ನೀನು ನನ್ನನ್ನು ಕರೆದೆಯೋ ಅದನ್ನು ಹೇಳು, ನಾನು ಬಂದಿರುವೆನು. ಆ ಕೆಲಸವನ್ನು ಸಂದೇಹವಿಲ್ಲದೆ ಮಾಡಿಕೊಡುವೆನು ” ಎಂದು ಹೇಳಿದನು.

ತನ್ಮೇ ಕಥಯ ಕಾರ್ಯಂ ತ್ವಂ ತತ್ಕರೋಮಿ ನ ಸಂಶಯಃ ।

ಧರ್ಮಶರ್ಮೋವಾಚ

ಯದ್ಯಸ್ತಿ ಗುರುಶುಶ್ರೂಷಾ ಯದಿ ನಿಷ್ಠಾಽಚಲಂ ತಪಃ ।
ತೇನ ಸತ್ಯೇನ ಮೇ ಧರ್ಮ ವೇದಶರ್ಮಾ ಸ ಜೀವತು ॥ ೪ ॥

ಧರ್ಮ ಉವಾಚ

ದಯಾಶೌಚೇನ ಸತ್ಯೇನ ತಪಸಾ ತವ ಸುವ್ರತ ।
ಪಿತೃಭಕ್ತ್ಯಾ ತವ ಭ್ರಾತಾ ವೇದಶರ್ಮಾ ಮಹಾಭುಜಃ ।
ಪುನರೇವ ಮಹಾತ್ಮಾಸೌ ಜೀವನಂ ಚ ಲಭಿಷ್ಯತಿ ॥ ೫ ॥

ತಪಸಾ ತೇನ ತುಷ್ಟೋಽಸ್ಮಿ ಪಿತೃಭಕ್ತ್ಯಾ ಮಹಾಮತೇ ।
ವರಂ ವರಯ ಭದ್ರಂ ತೇ ದುರ್ಲಭಂ ಧರ್ಮವಿತ್ತಮೈಃ ॥ ೬ ॥

ಏವಮಾಕರ್ಣಿತಂ ತೇನ ಸುವಾಕ್ಯಂ ಧರ್ಮಶರ್ಮಣಾ ।
ವೈವಸ್ವತಂ ಮಹಾತ್ಮಾನಂ ತಮುವಾಚ ಮಹಾಯಶಾಃ ॥ ೭ ॥

---

೪. ಧರ್ಮಶರ್ಮನು ಹೇಳುತ್ತಾನೆ:—ಎಲೈ ಧರ್ಮದೇವನೇ, ನಾನು ಗುರುಸೇವೆಯನ್ನು ಮಾಡಿದ್ದರೆ, ದೃಢವಾದ ತಪಸ್ಸನ್ನು ಮಾಡಿದ್ದರೆ, ಪಿತೃಭಕ್ತಿಯುಳ್ಳವನಾಗಿದ್ದರೆ, ನನ್ನ ಸಹೋದರನಾದ ವೇದಶರ್ಮನು ಬದುಕಲಿ.

೫. ಧರ್ಮಪುರುಷನು ಹೇಳಿದನು:—ನಿನ್ನ ಧರ್ಮ, ಆಚಾರ, ಸತ್ಯ, ತಪಸ್ಸು, ಪಿತೃಭಕ್ತಿ ಇವುಗಳಿಂದ ಮಹಾತ್ಮನಾದ ನಿನ್ನ ತಮ್ಮ ವೇದಶರ್ಮನು ಜೀವವನ್ನು ಹೊಂದಲಿ.

೬. ನಿನ್ನ ತಪಸ್ಸಿನಿಂದಲೂ, ಪಿತೃಭಕ್ತಿಯಿಂದಲೂ ನಾನು ಸಂತುಷ್ಟನಾಗಿದ್ದೇನೆ. ನಿನಗೆ ಮಂಗಳವಾಗಲಿ. ನಿನಗೆ ಬೇಕಾದುದನ್ನು ಕೇಳು, ದುರ್ಲಭವಾದರೂ ಅದನ್ನು ನಾನು ಕೊಡುತ್ತೇನೆ.

೭. ಧರ್ಮರಾಜನು ಹೀಗೆ ಹೇಳಿದುದನ್ನು ಧರ್ಮಶರ್ಮನು ಕೇಳಿ, ಯಮಧರ್ಮರಾಜನನ್ನು ಕುರಿತು ಇಂತೆಂದನು.

ದೇಹಿ ಮೇ ತ್ವಚಲಾಂ ಭಕ್ತಿಂ ಪಿತುಃ ಪಾದಾರ್ಹಣೇ ಪುನಃ ।
ಧರ್ಮೇ ರತಿಂ ತಥಾ ಮೋಕ್ಷಂ ಸುಪ್ರಸನ್ನೋ ಯದಾ ಮಮ ॥ ೮ ॥

ತಮುವಾಚ ತತೋ ಧರ್ಮೋ ಮತ್ಪ್ರಸಾದಾದ್ಭವಿಷ್ಯತಿ ।
ಏವಮುಕ್ತೋ ಮಹಾವಾಕ್ಯೋ ವೇದಶರ್ಮಾ ತದೋತ್ಥಿತಃ ।
ಪ್ರಸುಪ್ತವನ್ಮಹಾಪ್ರಾಜ್ಞಃ ಧರ್ಮಶರ್ಮಾಣಮಬ್ರವೀತ್ ॥ ೯ ॥

ಕ್ವ ಸಾ ದೇವೀ ಗತಾ ಭ್ರಾತಃ ಕ್ವ ಮೇ ತಾತೋ ಭವೇದಿತಿ ।
ಸಮಾಸೇನ ಸಮಾಖ್ಯಾತಂ ಯಥಾ ಪಿತ್ರಾ ನಿಯೋಜಿತಃ ॥ ೧೦ ॥

ಸಮಾಜ್ಞಾಯ ತತೋ ಹೃಷ್ಟೋ ಧರ್ಮಶರ್ಮಾಣಮಬ್ರವೀತ್ ।
ಮಮಾಽದ್ಯೈವ ಮಹಾಭಾಗ ಶಿರಸಾ ಜೀವಿತೇನ ಚ ॥ ೧೧ ॥

ಸುಮುಖೋ ಭವ ವೈ ಭ್ರಾತಃ ಕೋಽನ್ಯೋ ಮೇ ತಾದೃಶೋ ಭುವಿ ।
ಭ್ರಾತರಂ ಚೈವಮಾಭಾಷ್ಯ ಉತ್ಸುಕಃ ಪಿತರಂ ಪ್ರತಿ ॥ ೧೨ ॥

ಗಮನಾಯ ಮತಿಂ ಚಕ್ರೇ ಭ್ರಾತಾ ಚ ಧರ್ಮಶರ್ಮಣಾ ।
ಬ್ರಾವೇತೌ ತು ಗತೌ ತತ್ರ ಪಿತರಂ ಹೃಷ್ಟಮಾನಸೌ ॥ ೧೩ ॥

---

೮. ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗಿದ್ದರೆ ತಂದೆಯ ಪಾದಗಳಲ್ಲಿ ದೃಢವಾದ ಭಕ್ತಿಯನ್ನೂ, ಧರ್ಮದಲ್ಲಿ ಆಸಕ್ತಿಯನ್ನೂ, ಮೋಕ್ಷವನ್ನೂ ಕೊಡು.

೯-೧೦. ಆಗ ಧರ್ಮರಾಜನು ಅವನನ್ನು ಕುರಿತು ನನ್ನ ಅನುಗ್ರಹದಿಂದ ಹಾಗೆಯೇ ಆಗಲಿ ಎಂದನು. ಆ ಯಮನು ಹೀಗೆ ಹೇಳಲು, ನಿದ್ದೆಯಿಂದೆದ್ದವನಂತೆ ವೇದಶರ್ಮನೆದ್ದು, ಧರ್ಮಶರ್ಮನನ್ನುದ್ದೇಶಿಸಿ “ಆ ದೇವಿಯು ಎಲ್ಲಿ ಹೋದಳು ? ನನ್ನ ತಂದೆಯು ಎಲ್ಲಿರುವನು'' ಎಂದು ಕೇಳಲು, ಧರ್ಮಶರ್ಮನು ವೇದಶರ್ಮನಿಗೆ ತಂದೆಯ ಅಪ್ಪಣೆಯನ್ನು ಸೂಕ್ಷ್ಮವಾಗಿ ತಿಳಿಸಿದನು.

೧೧. ಸಮಸ್ತ ವೃತ್ತಾಂತವನ್ನೂ ತಿಳಿದುಕೊಂಡು, ಸಂತುಷ್ಟನಾದ ವೇದ ಶರ್ಮನು ಧರ್ಮಶರ್ಮನನ್ನು ಕುರಿತು, ಎಲೈ ಮಹಾನುಭಾವನಾದ ಸಹೋದರನೇ, ಈಗತಾನೇ ನೀನು ನನಗೆ ತಲೆಯನ್ನು ಕೊಟ್ಟು ಜೀವದಿಂದ ಉಳಿಸಿದೆ, ನಿನ್ನ ಸಮಾನ ರಾದವರು ಭೂಮಿಯಲ್ಲಿ ಬೇರೆ ಯಾರಿರುವರು ಎಂದು ಹೇಳಿದನು.

೧೨-೧೩. ಸಹೋದರನೊಡನೆ ಹೀಗೆ ಹೇಳಿ, ಅಣ್ಣತಮ್ಮಂದಿರಿಬ್ಬರೂ ತಂದೆ ಯನ್ನು ನೋಡಬೇಕೆಂದು ಹೊರಟರು.

ದ್ವಾಭ್ಯಾಂ ತತ್ರ ಸಮಾಸ್ಥಾಯ ಶಿವಶರ್ಮಾಣಮುತ್ತಮಂ ।
ಧರ್ಮಶರ್ಮಾ ತದೋವಾಚ ಪಿತರಂ ದೀಪ್ತಿಸಂಯುತಂ ॥ ೧೪ ॥

ಮಮಾದ್ಯೈವ ಮಹಾಭಾಗ ತಪಸಾ ಜೀವಿತೇನ ಚ ।
ವೇದಶರ್ಮಾ ಸಮಾತೀತಸ್ತ್ವಂ ಪುತ್ರಂ ಪ್ರಗೃಹಾಣ ಭೋಃ ॥ ೧೫ ॥

ಶಿವಶರ್ಮಾ ತತೋ ಹೃಷ್ಟೋ ಭಕ್ತಿಂ ವಿಜ್ಞಾಯ ತಸ್ಯ ಚ ।
ನ ಕಿಂಚಿದಬ್ರವೀತ್ತಂ ತು ಪುನಶ್ಚಿಂತಾಮುಪೇಯಿವಾನ್ ॥ ೧೬ ॥

ಪುರತೋ ವಿನಯೇನಾಪಿ ವರ್ತಮಾನಂ ಮಹಾಮತಿಂ ।
ವಿಷ್ಣುಶರ್ಮಾಣಮಾಭಾಷೀದ್ವತ್ಸ ಮೇ ವಚನಂ ಕುರು ॥ ೧೭ ॥

ಇಂದ್ರಲೋಕಂ ಪ್ರಜಸ್ವಾಽದ್ಯ ತಸ್ಮಾದಾನಯ ಚಾಽಮೃತಂ ।
ಅನಯಾ ಕಾಂತಯಾ ಸಾರ್ಧಂ ಪಾತುಮಿಚ್ಛಾಮಿ ಸಾಂಪ್ರತಂ ॥ ೧೮ ॥

---

೧೪. ಇಬ್ಬರೂ ಅಲ್ಲಿಗೆ ಹೋದಮೇಲೆ ಧರ್ಮಶರ್ಮನು ತಂದೆಯಾದ ಶಿವ ಶರ್ಮನನ್ನು ಕುರಿತು ಹೀಗೆಂದನು.

೧೫. ಎಲೈ ಮಹಾನುಭಾವನೇ, ನನ್ನ ತಪಸ್ಸಿನಿಂದಲೂ, ಜೀವದಿಂದಲೂ ಮೃತನಾಗಿದ್ದ ವೇದಶರ್ಮನನ್ನು ಬದುಕಿಸಿದ್ದೇನೆ, ನಿನ್ನ ಮಗನನ್ನು ಪರಿಗ್ರಹಿಸು.

೧೬. ಶಿವಶರ್ಮನು ಅವನ ಪಿತೃಭಕ್ತಿಯನ್ನು ತಿಳಿದವನಾಗಿ, ಸಂತೋಷಿಸಿ ಏನನ್ನೂ ಹೇಳದೆ, ಮತ್ತೊಬ್ಬ ಪುತ್ರನ ಯೋಗ್ಯತೆಯನ್ನು ಕಂಡುಹಿಡಿಯಲು ಆಲೋಚನೆ ಮಾಡಿದನು.

೧೭. ತನ್ನ ಎದುರಿಗೆ ವಿನಯದಿಂದ ನಿಂತಿರುವ, ಬುದ್ಧಿವಂತನಾದ ವಿಷ್ಣು ಶರ್ಮನನ್ನು ನೋಡಿ, ನನ್ನ ಮಾತನ್ನು ನಡೆಸು ಎಂದು ಹೇಳಿ, ಮುಂದೆ ಹೇಳುವ ಮಾತನ್ನು ಆಜ್ಞಾಪಿಸಿದನು.

೧೮. ಈಗ ಇಂದ್ರಲೋಕಕ್ಕೆ ಹೋಗಿ ಅಮೃತವನ್ನು ತೆಗೆದುಕೊಂಡುಬಾ. ಈ ಕಾಂತೆಯೊಡನೆ ಅಮೃತವನ್ನು ಕುಡಿಯಲಪೇಕ್ಷಿಸುತ್ತೇನೆ.

ಸಾಗರಾದ್ಯತ್ಸಮುತ್ಪನ್ನಮಮೃತಂ ವ್ಯಾಧಿನಾಶನಂ ।
ಪಾತುಮಿಚ್ಛತಿ ಮಾನ್ಯೈಷಾ ಯಥೈನಾಂ ತು ಲಭಾಮ್ಯಹಂ ॥ ೧೯ ॥

ತಥಾ ಕುರುಷ್ವ ಶೀಘ್ರಂ ತ್ವಮನ್ಯಥಾಽನ್ಯಂ ಪ್ರಯಾಸ್ಯತಿ ।
ವೃದ್ಧಂ ಜ್ಞಾತ್ವಾಽವಮನ್ಯೇತ ಇಯಂ ಬಾಲಾ ಸುರೂಪಿಣೀ ।
ಅದ್ಯ ದೇವ್ಯಾಽನಯಾ ಸಾರ್ಧಂ ಪ್ರಿಯಯಾ ಭುವನತ್ರಯೇ ॥ ೨೦ ॥

ನಿರ್ದೋಷೋ ವ್ಯಾಧಿನಿರ್ಮುಕ್ತೋ ಯಥಾ ತಾತ ಭವಾಮ್ಯಹಂ ।
ತಥಾ ಕುರುಷ್ವ ಹೇ ವತ್ಸ ಮದ್ಭಕ್ತೋಽಸಿ ಯದಾ ಭುವಿ ॥ ೨೧ ॥

ಏವಮಾಕರ್ಣ್ಯ ತದ್ವಾಕ್ಯಂ ಪಿತುಸ್ತಸ್ಯ ಮಹಾತ್ಮನಃ ।
ವಿಷ್ಣುಶರ್ಮಾ ತದೋವಾಚ ಪಿತರಂ ದೀಪ್ತತೇಜಸಂ ॥ ೨೨ ॥

ಸರ್ವಮೇತತ್ಕರಿಷ್ಯಾಮಿ ಭವತಸ್ಸುಖಮುತ್ತಮಂ ।
ಏವಮಾಭಾಷ್ಯ ಧರ್ಮಾತ್ಮಾ ವಿಷ್ಣುಶರ್ಮಾ ಮಹಾಮತಿಃ ॥ ೨೩ ॥

---

೧೯. ನಾನು ವೃದ್ಧನೆಂದು ಭಾವಿಸಿ ಈಕೆಯು ನನ್ನನ್ನು ಅಪೇಕ್ಷಿಸುತ್ತಿಲ್ಲ. ಆದ್ದರಿಂದ ಸರ್ವರೋಗನಾಶಕವಾದ, ಸಮುದ್ರದಲ್ಲಿ ಹುಟ್ಟಿದ ಅಮೃತವನ್ನು ನಾನು ಕುಡಿದು ಯೌವನವಂತನಾಗಿ ಈಕೆಯೊಡನೆ ರಮಿಸುವೆನು. ನೀನು ನನ್ನಾಜ್ಞೆಯನ್ನು ನಡೆಸು. ಇಲ್ಲದಿದ್ದರೆ ಅವಳು ಮತ್ತೊಬ್ಬನ ಬಳಿಗೆ ಹೋಗುವಳು.

೨೦-೨೧. ಈ ರೂಪವತಿಯಾದ ಬಾಲೆಯು ನನ್ನನ್ನು ವೃದ್ಧನೆಂದು ಭಾವಿಸಿ ಅವಮಾನಪಡಿಸಬಹುದು. ಆದ್ದರಿಂದ ಅಮೃತವನ್ನು ತಂದರೆ ಅದರ ಸೇವನೆಯಿಂದ ದೋಷರಹಿತನಾಗಿಯೂ, ರೋಗ ನಿರ್ಮುಕ್ತನಾಗಿಯೂ ಮೂರುಲೋಕಗಳಲ್ಲೂ ಇವ ಳೊಡನೆ ಸುಖವಾಗಿ ರಮಿಸುವೆನು. ಎಲೈ ಮಗನೆ, ನೀನು ನನ್ನಲ್ಲಿ ಭಕ್ತಿಯುಳ್ಳವನಾ ಗಿದ್ದರೆ ನನ್ನ ಮಾತನ್ನು ನಡೆಸು.

೨೨. ಆ ಮಹಾತ್ಮನಾದ ತಂದೆಯ ಮಾತನ್ನು ಕೇಳಿ ವಿಷ್ಣುಶರ್ಮನು ಮಹಾ ತೇಜಸ್ವಿಯಾದ ತಂದೆಯನ್ನು ಕುರಿತು ಹೀಗೆಂದನು.

೨೩-೨೫. ನಿನಗೆ ಸುಖವಾಗತಕ್ಕ ಎಲ್ಲಾ ಕಾರ್ಯವನ್ನೂ ಮಾಡುತ್ತೇನೆ ಎಂದು ಹೇಳಿ ಪ್ರದಕ್ಷಿಣೆನಮಸ್ಕಾರವನ್ನು ಮಾಡಿದನು. ಹೆಚ್ಚು ಬಲದಿಂದಲೂ

ಪಿತರಂ ತಂ ನಮಸ್ಕೃತ್ಯ ಪುನಃ ಕೃತ್ವಾ ಪ್ರದಕ್ಷಿಣಂ ।
ಬಲೇನ ಮಹತಾ ತಸ್ಯ ತಪಸಾ ನಿಯಮೇನ ಚ ॥ ೨೪ ॥

ಅಂತರಿಕ್ಷಗತಶ್ಚಾಸೀದ್ಗಚ್ಛಮಾನಸ್ಯ ಧೀಮತಃ ।
ಮಹತಾ ವಾಯುವೇಗೇನ ಐಂದ್ರಂ ಸ ಪ್ರತಿ ಗಚ್ಛತಿ ॥ ೨೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ಶಿವಶರ್ಮಚರಿತೇ ದ್ವಿತೀಯೋಽಧ್ಯಾಯಃ

---

ಮಹತ್ತರವಾದ ತಪಸ್ಸಿನಿಂದಲೂ, ನಿಯಮದಿಂದಲೂ ಅಂತರಿಕ್ಷದಲ್ಲಿಯೇ ಗಮನವು ಸಿದ್ಧಿಸಿದ್ದರಿಂದ ಹಾಗೆಯೇ ವಾಯುವೇಗದಿಂದ ಇಂದ್ರನ ಸಮೀಪವನ್ನು ಕುರಿತು ಶೀಘ್ರವಾಗಿ ಪ್ರಯಾಣ ಮಾಡಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಶಿವಶರ್ಮನ ಚರಿತ್ರೆಯಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

## ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
## ॥ ತೃತೀಯೋಽಧ್ಯಾಯಃ ॥

### ಸೂತ ಉವಾಚ

ಪ್ರಸ್ಥಿತಸ್ತೇನ ಮಾರ್ಗೇಣ ಪ್ರವಿಷ್ಟೋ ಗಗನಾಂತರೇ ।
ಸ ದೃಷ್ಟೋ ದೇವದೇವೇನ ಸಹಸ್ರಾಕ್ಷೇಣ ಧೀಮತಾ ॥ ೧ ॥

ಉದ್ಯಮಂ ತಸ್ಯ ವೈ ಜ್ಞಾತ್ವಾ ಚಕ್ರೇ ವಿಘ್ನಂ ಸುರಾಧಿರಾಟ್ ।
ಮೇನಕಾಂ ತಾಮುವಾಚೇದಂ ಗಚ್ಛ ತ್ವಂ ಮಮ ಶಾಸನಾತ್ ॥ ೨ ॥

ಸಮಾಚರಸ್ವಾಸ್ಯ ಶೀಘ್ರಂ ಗತ್ವಾ ವಿಘ್ನಂ ಸುಮಧ್ಯಮೇ ।
ಅಸ್ಯೈವ ವಿಪ್ರವರ್ಯಸ್ಯ ಪುತ್ರಸ್ಯ ಶಿವಶರ್ಮಣಃ ॥ ೩ ॥

ತಥಾ ಕುರುಷ್ವ ಭದ್ರಂ ತೇ ಯಥಾ ನಾಽಯಾತಿ ಮೇ ಗೃಹಂ ।
ಏವಮಾಕರ್ಣ್ಯ ತದ್ವಾಕ್ಯಂ ಮೇನಕಾ ಪ್ರಸ್ಥಿತಾ ತ್ವರಾತ್ ॥ ೪ ॥

---

### ಮೂರನೆಯ ಅಧ್ಯಾಯವು.

೧. ಸೂತನು ಹೇಳುತ್ತಾನೆ:— ವಿಷ್ಣುಶರ್ಮನು ಆಕಾಶಮಾರ್ಗದಿಂದ ಹೊರಟು ಗಗನಮಧ್ಯವನ್ನು ಸೇರಿದನು. ಇದನ್ನು ದೇವಾಧಿಪತಿಯೂ, ಸಹಸ್ರನೇತ್ರನೂ ಆದ ಇಂದ್ರನು ನೋಡಿದನು.

೨-೪. ಅವನ ಅಭಿಪ್ರಾಯವನ್ನು ದೇವರಾಜನು ತಿಳಿದವನಾಗಿ ಮೇನಕೆಯನ್ನು ಕರೆದು ಎಲೈ ಸುಶ್ರೋಣಿಯೇ, ನೀನು ನನ್ನ ಅಪ್ಪಣೆಯಿಂದ ಜಾಗ್ರತೆಯಾಗಿ ಹೊರಟು, ಬ್ರಾಹ್ಮಣಶ್ರೇಷ್ಠನಾದ ಶಿವಶರ್ಮನ ಮಗನಿಗೆ ತೊಂದರೆಯನ್ನು ಮಾಡು, ನನ್ನ ಮನೆಗೆ ಬಂದು ಅಮೃತವನ್ನು ಅಪಹರಿಸದಂತೆ ನೋಡಿಕೋ, ಎಂದನು. ಇದನ್ನು ಕೇಳಿ ಮೇನಕೆಯು ಜಾಗ್ರತೆಯಾಗಿ ಹೊರಟಳು.

**ಸೂತ ಉವಾಚ**

**ರೂಪೌದಾರ್ಯಗುಣೋಪೇತಾ ಸರ್ವಾಲಂಕಾರಭೂಷಿತಾ ।**
**ನಂದನಸ್ಯ ವನಸ್ಯಾಂತೇ ಡೋಲಾಯಾಂ ಸಮುಪಸ್ಥಿತಾ ॥ ೫ ॥**

**ಸುಸ್ವರೇಣ ಪ್ರಗಾಯಂತೀ ಗೀತಂ ವೀಣಾಸ್ವರೋಪಮಂ ।**
**ತೇನ ದೃಷ್ಟಾ ವಿಶಾಲಾಕ್ಷೀ ಚತುರಾ ಚಾರುಲೋಚನಾ ॥ ೬ ॥**

**ವ್ಯವಸಾಯಂ ತತೋ ಜ್ಞಾತ್ವಾ ತಸ್ಯಾ ವಿಘ್ನಮನುತ್ತಮಂ ।**
**ಇಂದ್ರೇಣ ಪ್ರೇಷಿತಾ ಚೈಷಾ ನ ಚ ಭದ್ರಕರಾ ಭವೇತ್ ॥ ೭ ॥**

**ಏವಂ ಜ್ಞಾತ್ವಾ ಜಗಾಮಾಥ ಸತ್ವರಸ್ಸ ದ್ವಿಜೋತ್ತಮಃ ।**
**ತಯಾ ದೃಷ್ಟ ಸ್ತಥಾ ಪೃಷ್ಟಃ ಕ್ವಯಾತಾsಸಿ ಮಹಾಮತೇ ॥ ೮ ॥**

**ವಿಷ್ಣುಶರ್ಮಾ ತದೋವಾಚ ಮೇನಕಾಂ ಕಾಮಚಾರಿಣೀಂ ।**
**ಇಂದ್ರಲೋಕಂ ಪ್ರಯಾಸ್ಯಾಮಿ ಪಿತುರರ್ಥೇ ತ್ವರಾನ್ವಿತಃ ॥ ೯ ॥**

---

೫-೬. ಸೂತನು ಹೇಳುತ್ತಾನೆ—ಆಮೇಲೆ ಮೇನಕೆಯು ರೂಪ, ಔದಾರ್ಯ, ಸದ್ಗುಣ, ಸಮಸ್ತವಾದ ಅಲಂಕಾರ ಇವುಗಳಿಂದ ಅಲಂಕೃತಳಾಗಿ ನಂದನವನದ ಮಧ್ಯದಲ್ಲಿ ಉಯ್ಯಾಲೆಯಲ್ಲಿ ಕುಳಿತು ವೀಣಾನಾದದಂತಿರುವ ಧ್ವನಿಯಿಂದ ಹಾಡುತ್ತಿದ್ದಳು. ಆ ಸಮಯದಲ್ಲಿ ವಿಷ್ಣುಶರ್ಮನು ಚತುರೆಯೂ, ಮನೋಹರವಾದ ನೇತ್ರಗಳೂ ಉಳ್ಳ ಮೇನಕೆಯನ್ನು ಕಂಡನು.

೭. ಅವಳನ್ನು, ನೋಡಿ, ಇಂದ್ರಪ್ರೇರಿತಳಾದ ಈಕೆಯು ನನಗೆ ಹೆಚ್ಚಾಗಿ ವಿಘ್ನವನುಂಟುಮಾಡುವವಳಾಗಿದ್ದಾಳೆ, ನನಗೆ ಮಂಗಳಕರಳಲ್ಲ.

೮. ಹೀಗೆಂದು ಯೋಚಿಸಿ ಆ ಬ್ರಾಹ್ಮಣನು ಜಾಗ್ರತೆಯಾಗಿ ಹೊರಟನು. ಇವನನ್ನು ಆಕೆಯು ನೋಡಿ ಎಲೈ ಮಹಾಬುದ್ಧಿಶಾಲಿಯೇ ನೀನು ಎಲ್ಲಿಗೆ ಹೊಗುತ್ತೀ ಎಂದು ಕೇಳಿದಳು.

೯. ಆಗ ವಿಷ್ಣುಶರ್ಮನು ಸ್ವೇಚ್ಛಾವಿಹಾರಿಣಿಯಾದ ಮೇನಕೆಯನ್ನು ಕುರಿತು ತಂದೆಯ ಕೆಲಸಕ್ಕೋಸ್ಕರ ಜಾಗ್ರತೆಯಾಗಿ ದೇವಲೋಕಕ್ಕೆ ಹೋಗುತ್ತಿರುವೆನು, ಎಂದು ಹೇಳಿದನು.

ಮೇನಕಾ ವಿಷ್ಣುಶರ್ಮಾಣಂ ಪ್ರತ್ಯುವಾಚ ಪ್ರಿಯಂ ಪುನಃ ।
ಕಾಮಬಾಣೈಃ ಪ್ರಭಿನ್ನಾಹಂ ತ್ವಾಮದ್ಯ ಶರಣಂ ಗತಾ ॥ ೧೦॥

ರಕ್ಷಸ್ವ ದ್ವಿಜಶಾರ್ದೂಲ ಯದಿ ಧರ್ಮಮಿಹೇಚ್ಛಸಿ ।
ಯಾವದ್ಧಿ ತ್ವಂ ಮಯಾ ದೃಷ್ಟಃ ಕಾಮಾಕುಲಿತಚೇತಸಾ ॥ ೧೧ ॥

ಸಂಜಾತಾ ಕಾಮಸಂತಪ್ತಾ ಪ್ರಸಾದಸುಮುಖೋ ಭವ ।
ಕಾಮಾನಲೇನ ಸಂದಗ್ಧಾ ತಾವದೇವ ನ ಸಂಶಯಃ ॥ ೧೨ ॥

ವಿಷ್ಣುಶರ್ಮೋವಾಚ

ಚರಿತಂ ದೇವದೇವಸ್ಯ ವಿದಿತಂ ಮೇ ವರಾನನೇ ।
ಭವತ್ಯಾಶ್ಚ ಪ್ರಜಾನಾಮಿ ನಾಹಂ ಚೈತಾದೃಶಶ್ಶುಭೇ ॥ ೧೩ ॥

ಭವತ್ಯಾಸ್ತೇಜಸಾ ರೂಪೈರನ್ಯೇ ಮುಹ್ಯಂತಿ ಶೋಭನೇ ।
ವಿಶ್ವಾಮಿತ್ರಾದಯೋ ದೇವೀ ಪುತ್ರೋಽಹಂ ಶಿವಶರ್ಮಣಃ ॥ ೧೪ ॥

ಯೋಗಸಿದ್ಧಿಂ ಗತೇನಾಪಿ ತಪಸ್ಸಿದ್ಧೇನ ಚಾಬಲೇ ।
ಕಾಮಾದಯೋ ಮಹಾದೋಷಾಃ ಆದಾವೇವ ವಿವರ್ಜಿತಾಃ ॥ ೧೫ ॥

---

೧೦-೧೨. ಅದನ್ನು ಕೇಳಿ, ಎಲೈ ವಿಪ್ರಶ್ರೇಷ್ಠನೇ, ಕಾಮಬಾಣಪೀಡಿತಳಾಗಿ ನಾನು ನಿನ್ನನ್ನು ಮರೆಹೊಕ್ಕಿರುವೆನು, ನೀನು ಧರ್ಮವನ್ನು ತಿಳಿದವನಾಗಿದ್ದರೆ, ದಯವಿಟ್ಟು ನನ್ನನ್ನು ಕಾಪಾಡು, ನಾನು ಮೊದಲೇ ಕಾಮಾತುರಳಾಗಿದ್ದೆ, ನಿನ್ನನ್ನು ನೋಡಿದಮೇಲೆ ಅಧಿಕವಾಗಿ ಸಂತಪ್ತಳಾದೆನು. ಸಂಶಯವಿಲ್ಲದೇ ಕಾಮಾಗ್ನಿಯು ನನ್ನನ್ನು ಸುಡುತ್ತಲಿರುವುದು, ನನ್ನಲ್ಲಿ ಅನುಗ್ರಹವನ್ನು ಮಾಡು ಎಂದಳು.

೧೩-೧೪. ಎಲೈ, ಸುಮುಖಿಯೇ, ನನ್ನ ವಿಷಯವು ಇಂದ್ರನಿಗೆ ಗೊತ್ತಾಗಿದೆ ನಿನಗೂ ಗೊತ್ತಿರುವುದು, ನಿನ್ನ ದೇಹಕಾಂತಿ, ರೂಪ ಇವುಗಳನ್ನು ನೋಡಿ ವಿಶ್ವಾಮಿತ್ರನೇ ಮೊದಲಾದವರೂ ಮತ್ತು ಬೇರೇ ಜನರೂ ಮೋಹಗೊಳ್ಳಬಹುದು, ನಾನು ಶಿವಶರ್ಮನ ಮಗನು, ಆರೀತಿಯಾಗಿ ನಾನು ಮೋಹಗೊಳ್ಳಲಾರೆ.

೧೫. ಎಲೈ ಸ್ತ್ರೀಯೇ, ಯೋಗಸಿದ್ಧಿಯನ್ನೂ, ತಪಸ್ಸಿದ್ಧಿಯನ್ನೂ, ಹೊಂದಿರುವ ನಾನು ಕಾಮಾದಿ ವಿಷಯಸುಖಗಳನ್ನು ಈ ಮೊದಲೇ ಬಿಟ್ಟಿರುವೆನು.

ಅನ್ಯಂ ಭಜ ವಿಶಾಲಾಕ್ಷೀ ಇಂದ್ರಲೋಕಂ ವ್ರಜಾಮ್ಯಹಂ ।
ಏವಮುಕ್ತ್ವಾ ಜಗಾಮಾಥ ತ್ವರಿತೋ ದ್ವಿಜಸತ್ತಮಃ ॥ ೧೬ ॥

ನಿಷ್ಫಲಾ ಮೇನಕಾ ಜಾತಾ ಪ್ರೇಷ್ಯಾ ದೇವೇನ ವಜ್ರಿಣಾ ।
ಬಿಭೀಷಾಂ ದರ್ಶಯಾಮಾಸ ನಾನಾರೂಪಂ ಪುನಃ ಪುನಃ ॥ ೧೭ ॥

ಯಥಾನಲೇನ ಸಂದಗ್ಧಾಸ್ತೃಣಾನಾಂ ಸಂಚಯಾ ದ್ವಿಜಾ ।
ಭಸ್ಮೀಭೂತಾ ಭವಂತ್ಯೇವ ತಥಾ ತಾಸ್ತಾ ಬಭೀಷಿಕಾಃ ॥ ೧೮ ॥

ವಿಪ್ರಸ್ಯ ತೇಜಸಾ ತಸ್ಯ ಪಿತೃಭಕ್ತಸ್ಯ ಸಂತತಂ ।
ಪ್ರಲಯಂ ಗತಾಸ್ತು ಘೋರಾಸ್ತಾ ದಾರುಣಾ ಭೀಷಿಕಾ ದ್ವಿಜ ॥ ೧೯ ॥

ಸ ವಿಘ್ನಾನ್ ದರ್ಶಯಾಮಾಸ ಸಹಸ್ರಾಕ್ಷಃ ಪುನಃ ಪುನಃ ।
ತೇಜಸಾನಾಶಯದ್ವಿಪ್ರಃ ಸ್ವಕೀಯೇನ ಮಹಾಯಶಾಃ ॥ ೨೦ ॥

---

೧೬. ಆದುದರಿಂದ ಎಲೈ ವಿಶಾಲನೇತ್ರಳೇ, ನೀನು ಬೇರೇ ಯಾವನನ್ನಾದರೂ ವರಿಸು, ನಾನು ಇಂದ್ರಲೋಕಕ್ಕೆ ಹೋಗುತ್ತೇನೆ ಎಂದುಹೇಳಿ ಆ ವಿಪ್ರನು ಜಾಗ್ರತೆಯಾಗಿ ಹೊರಟನು.

೧೭. ಮೇನಕೆಯ ಪ್ರಯತ್ನವು ವಿಫಲವಾಯಿತು, ಇಂದ್ರನಿಂದ ಪುನಃ ಪ್ರೇರಿತಳಾಗಿ ಭಯಂಕರವಾದ ನಾನಾರೂಪಗಳನ್ನು ಪದೇ ಪದೇ ತೋರಿಸಿದಳು.

೧೮-೧೯. ಹುಲ್ಲುಮೆದೆಗಳು ಬೆಂಕಿಯಿಂದ ಹೇಗೆ ದಗ್ಧವಾಗುವುವೋ, ಹಾಗೆಯೇ ಪಿತೃಭಕ್ತನಾದ ಆತನ ತೇಜಸ್ಸಿನಿಂದಲೂ, ತಪೋಮಹಿಮೆಯಿಂದಲೂ ಘೋರವಾದ ರೂಪಗಳು ನಾಶವಾದವು.

೨೦. ಸಹಸ್ರಾಕ್ಷನೂ ಸಹ ಇವನಿಗೆ ನಾನಾರೀತಿಯ ವಿಘ್ನಗಳನ್ನು ಪ್ರದರ್ಶಿಸಿದನು. ತನ್ನ ತೇಜಃಪ್ರಭಾವದಿಂದ ಅವೆಲ್ಲವನ್ನೂ ನಿವಾರಿಸಿದನು.

ಏವಂ ವಿಘ್ನಾನ್ಬಹೂಂಸ್ತಸ್ಯ ಇಂದ್ರಸ್ಯಾಪಿ ಮಹಾತ್ಮನಃ ।
ನಾಶಯಾಮಾಸ ಮೇಧಾವೀ ತಪಸಾ ತೇಜಸಾಪಿ ವಾ ॥ ೨೦ ॥

ನಷ್ಟೇಷು ತೇಷು ವಿಘ್ನೇಷು ದಾರುಣೇಷು ಮಹತ್ಸು ಚ ।
ಜ್ಞಾತ್ವಾ ತಸ್ಯ ಕೃತಾನ್ವಿಘ್ನಾನ್ ದಾರುಣಾನ್ ದಾರುಣಾಕೃತೀನ್ ॥ ೨೨ ॥

ಅಥ ಕೃದ್ಧೋ ಮಹಾತೇಜಾ ನಂದನಂ ವನಮಾಶ್ರಿತಃ ।
ಇಂದ್ರಂ ಪ್ರತಿ ಮಹಾಭಾಗೋ ರೋಷರಕ್ತಾಂತಲೋಚನಃ ॥ ೨೩ ॥

॥ ಸೂತ ಉವಾಚ ॥

ನಿಜಧರ್ಮರತಸ್ಯಾದ್ಯ ಯೋ ವಿಘ್ನಂ ತು ಸಮಾಚರೇತ್ ।
ತಸ್ಯ ದಂಡಂ ಪ್ರದಾಸ್ಯಾಮಿ ಯೋ ವೈ ಹನ್ಯಾತ್ಸ ಹನ್ಯತೇ ॥ ೨೪ ॥

ಏವಂ ಸಂಚಿಂತಯಾಮಾಸ ವಿಷ್ಣುಶರ್ಮಾ ದ್ವಿಜೋತ್ತಮಃ ।
ಇಂದ್ರಲೋಕಾದಹಂ ಚೇಂದ್ರಂ ಪಾತಯಿಷ್ಯಾಮಿ ನಾನ್ಯಥಾ ॥ ೨೫ ॥

---

೨೧. ಮಹಾತ್ಮನಾದ ಇಂದ್ರನ ಬಹು ವಿಘ್ನಗಳನ್ನು ಆ ಮೇಧಾವಿಯು ತನ್ನ ತಪಸ್ಸಿನಿಂದಲೂ, ತೇಜಸ್ಸಿನಿಂದಲೂ, ಅಡಗಿಸಿದನು.

೨೨-೨೩. ಅಂತಹ ಕ್ರೂರವಾದ ವಿಘ್ನಗಳು ನಾಶವಾಗಲು ಇವು ಇಂದ್ರನಿಂದ ಪ್ರೇರಿತವಾದವುಗಳೆಂದು ತಿಳಿದು ಅವನ ಮೇಲೆ ಅತ್ಯಂತ ಕೋಪಗೊಂಡು ನಂದನ ವನಕ್ಕೆ ಬಂದನು.

೨೪-೨೫. ಸೂತನು ಹೇಳಿದನು—ಸ್ವಧರ್ಮನಿರತನಾದವನಿಗೆ ಯಾರು ವಿಘ್ನವನ್ನುಂಟುಮಾಡುವರೋ, ಅವರಿಗೆ ಶಿಕ್ಷೆಯಾಗಲೇ ಬೇಕು, ಕೊಲ್ಲತಕ್ಕವನನ್ನು ಕೊಲ್ಲತಕ್ಕದ್ದು ನ್ಯಾಯವಲ್ಲವೇ ? ಆದುದರಿಂದ ಇಂದ್ರಲೋಕದಿಂದ ಇಂದ್ರನನ್ನು ಕೆಡಹುತ್ತೇನೆ. ದೇವತೆಗಳನ್ನು ರಕ್ಷಿಸಲು ಮತ್ತೊಬ್ಬ ಇಂದ್ರನನ್ನು ಸೃಷ್ಟಿಸುತ್ತೇನೆ, ಎಂದು ಯೋಚಿಸಿ,

ಅನ್ಯಮಿಂದ್ರಂ ಕರಿಷ್ಯಾಮಿ ದೇವಾನಾಂ ಪಾಲಕಂ ಪುನಃ ।
ಏವಂ ಸಮುದ್ಯತೇ ವಿಪ್ರೇ ಇಂದ್ರನಾಶಾಯ ಸತ್ತಮಃ ।
ತಾವದೇವ ಸಮಾಯಾತೋ ದೇವೇಂದ್ರಃ ಪಾಕಶಾಸನಃ ॥ ೨೬ ॥

ಭೋ ಭೋ ವಿಪ್ರ ಮಹಾಪ್ರಾಜ್ಞ ತಪಸಾ ನಿಯಮೇನ ಚ ।
ದಮೇನ ಸತ್ಯಶೌಚಾಭ್ಯಾಂ ತ್ವತ್ಸಮೋ ನಾಸ್ತಿ ಚಾಽಪರಃ ॥ ೨೭ ॥

ಅನಯಾ ಪಿತೃಭಕ್ತ್ಯಾ ತೇ ಜಿತೋಽಹಂ ದೈವತೈಸ್ಸಹ ।
ಮಮಾಪರಾಧಾನ್ ಸರ್ವಾಂಸ್ತ್ವಂ ಕ್ಷಂತುಮರ್ಹಸಿ ಸತ್ತಮ ॥ ೨೮ ॥

ವರಂ ವರಯ ಭದ್ರಂ ತೇ ದುರ್ಲಭಂ ಚ ದದಾಮ್ಯಹಂ ।
ವಿಷ್ಣುಶರ್ಮಾ ತದೋವಾಚ ದೇವರಾಜಂ ತಥಾಗತಂ ।
ವಿಪ್ರತೇಜೋ ಮಹೇಂದ್ರೇಂದ್ರ ಅಸಹ್ಯಂ ದೇವತೈಸ್ಸಹ ॥ ೨೯ ॥

ಪಿತೃಭಕ್ತಸ್ಯ ದೇವೇಶ ದುಸ್ಸಹಂ ಸರ್ವಥಾ ವಿಭೋ ।
ತೇಜೋಭಂಗೋ ನ ಕರ್ತವ್ಯೋ ಬ್ರಾಹ್ಮಣಾನಾಂ ಮಹಾತ್ಮನಾಂ ॥ ೩೦ ॥

---

೨೬. ಇಂದ್ರನನ್ನು ನಾಶಪಡಿಸಲು ಸಿದ್ಧನಾಗುವುದರೊಳಗಾಗಿ ಪಾಕಾಸುರನನ್ನು ಸಂಹಾರಮಾಡಿದ ಇಂದ್ರನು ವಿಷ್ಣುಶರ್ಮನ ಬಳಿಗೆ ಬಂದು,

೨೭. ಎಲೈ ಮಹಾ ಪ್ರಾಜ್ಞನಾದವನೇ, ನಿನ್ನ ತಪಸ್ಸು, ಸದಾಚಾರ ಇಂದ್ರಿಯ ನಿಗ್ರಹ, ಸತ್ಯವಾಕ್ಯ, ಪಾರಿಶುದ್ಧತೆ, ಇವುಗಳನ್ನು ನೋಡಿ ತೃಪ್ತನಾದೆ, ನಿನ್ನ ಸಮಾನನು ಮತ್ತೊಬ್ಬನಿಲ್ಲ.

೨೮. ನಿನ್ನ ಈ ಪಿತೃಭಕ್ತಿಯಿಂದ ದೇವತೆಗಳಿಂದೊಡಗೂಡಿದ ನಾನು ಜಯಿಸಲ್ಪಟ್ಟೆನು. ನನ್ನ ಸಮಸ್ತಾಪರಾಧಗಳನ್ನೂ ಕ್ಷಮಿಸಬೇಕು, ನಿನಗೆ ಬೇಕಾದ ವರವನ್ನು ಕೇಳು, ಎಷ್ಟು ದುರ್ಲಭವಾದ ವರವಾಗಲೀ ಕೊಡುತ್ತೇನೆ. ನಿನಗೆ ಮಂಗಳವಾಗಲೀ ಎಂದು ಇಂದ್ರನು ವಿಷ್ಣುಶರ್ಮನಿಗೆ ಹೇಳಿದನು.

೨೯. ಆಗ ವಿಷ್ಣುಶರ್ಮನು ದೇವರಾಜನನ್ನು ಕುರಿತು, ಎಲೈದೇವೇಂದ್ರನೇ, ಬ್ರಾಹ್ಮಣತೇಜಸ್ಸು ದೇವತೆಗಳಿಂದಲೂ ಸಹಿಸಲು ಸಾಧ್ಯವಿಲ್ಲ,

೩೦. ಅದರಲ್ಲೂ ಪಿತೃಭಕ್ತನಾದ ನನ್ನ ತೇಜಸ್ಸನ್ನು ನೀನು ಖಂಡಿತವಾಗಿಯೂ ಸಹಿಸಲಾರೆ, ಮಹಾಮಹಿಮರಾದ ಬ್ರಾಹ್ಮಣರಿಗೆ ತೇಜೋಭಂಗವನ್ನು ಮಾಡಬಾರದು.

ಪುತ್ರಪೌತ್ರೈಸ್ಸಮಸ್ತೈಸ್ತು ಬಹ್ಮವಿಷ್ಣುಹರಂ ಪುನಃ ।
ನಾಶಯಂತೇ ನ ಸಂದೇಹೋ ಯದಿ ರುಷ್ಟಾ ದ್ವಿಜೋತ್ತಮಾಃ ॥ ೩೧ ॥

ನಾಗಚ್ಛೇದ್ಯದ್ಭವಾನದ್ಯ ತದಾ ತೇ ರಾಜ್ಯಮುತ್ತಮಂ ।
ಆತ್ಮತಪಃಪ್ರಭಾವೇಣ ಅನ್ಯಸ್ಮೈ ತು ಮಹಾತ್ಮನೇ ।
ದಾತುಕಾಮಸ್ತು ಸಂಜಾತಃ ರೋಷಪೂರ್ಣೇನ ಚಕ್ಷುಷಾ ॥ ೩೨ ॥

ಭವಾನದ್ಯ ಸಮಾಯಾತಃ ವರಂ ದಾತುಮಿಹೇಚ್ಛಸಿ ।
ಅಮೃತಂ ದೇಹಿ ದೇವೇಂದ್ರ ಪಿತೃಭಕ್ತಿಂ ತಥಾಽಚಲಾಂ ॥ ೩೩ ॥

ಏವಂ ವಿಧಂ ವರಂ ದೇಹಿ ಯದಿ ತುಷ್ಟೋಽಸಿ ಶತ್ರುಹನ್ ।
ಏವಂ ದದಾಮಿ ಪುಣ್ಯಂ ತೇ ವರಂ ಚಾಽಮೃತಸಂಯುತಂ । ॥ ೩೪ ॥

ಏವಮಾಭಾಷ್ಯ ತಂ ವಿಪ್ರಮಮೃತೇನ ಚ ಸಂಭೃತಂ ।
ಸ ಕುಂಭಂ ದತ್ತವಾಂಸ್ತಸ್ಮೈ ಪ್ರೀಯಮಾಣೇನ ಚಾತ್ಮನಾ ॥ ೩೫ ॥

---

೩೧. ಬ್ರಾಹ್ಮಣರು ಕೋಪಗೊಂಡರೆ ಬ್ರಹ್ಮ, ವಿಷ್ಣು, ಮಹೇಶ್ವರರನ್ನೂ ಕೂಡ ಮಕ್ಕಳು, ಮೊಮ್ಮಕ್ಕಳು, ಮತ್ತು ಇತರರೊಡನೆ ನಾಶಮಾಡಬಲ್ಲರು, ಸಂದೇಹವಿಲ್ಲ.

೩೨. ನೀನು ಈಗ ಬಾರದಿದ್ದಲ್ಲಿ ನಿನ್ನ ಈ ದೇವರಾಜ್ಯವನ್ನು ಕೋಪಗೊಂಡು ನನ್ನ ತಪಃಪ್ರಭಾವದಿಂದ ಮತ್ತೊಬ್ಬ ಮಹಾತ್ಮನಿಗೆಕೊಡಲಿಷ್ಟವುಳ್ಳವನಾಗಿದ್ದೆನು.

೩೩. ಎಲೈ ದೇವೇಂದ್ರನೇ, ನೀನೇ ಈಗ ಬಂದಿದ್ದೀಯೆ ನನಗೆ ನೀನು ವರವನ್ನು ಕೊಡಲು ಅಪೇಕ್ಷೆಯುಳ್ಳವನಾಗಿದ್ದರೆ ನನಗೆ ಅಮೃತವನ್ನು ಕೊಡು, ಅಲ್ಲದೆ ದೃಢವಾದ ಪಿತೃಭಕ್ತಿಯನ್ನೂ ಕೊಡು. ಎಲೈ ಶತ್ರುಸಂಹಾರಕನೇ, ನೀನು ಸುಪ್ರೀತನಾಗಿದ್ದರೆ ಈ ವಿಧವಾದ ವರವನ್ನು ಕೊಡು ಎಂದನು.

೩೪-೩೫. ಹಾಗೆಯೇ ಆಗಲಿ, ವರವನ್ನು ಕೊಡುತ್ತೇನೆ, ಅಮೃತವನ್ನೂ, ಕೊಡುತ್ತೇನೆ. ನಿನಗೆ ಒಳ್ಳೆಯದಾಗಲಿ, ಎಂದು ಇಂದ್ರನು ಆ ಬ್ರಾಹ್ಮಣನಿಗೆ ಹೇಳಿ ಅಮೃತದಿಂದ ಪೂರ್ಣವಾಗಿರುವ ಒಂದು ಬಿಂದಿಗೆಯನ್ನು ಸಂತೋಷಪೂರ್ವಕವಾಗಿ ಆ ಬ್ರಾಹ್ಮಣನಿಗೆ ಕೊಟ್ಟನು.

ಅಚಲಾ ತೇ ಭವೇದ್ವಿಪ್ರ ಭಕ್ತಿಃ ಪಿತರಿ ಸರ್ವದಾ ।
ಏವಮಾಭಾಷ್ಯ ತಂ ವಿಪ್ರಂ ವಿಸಸರ್ಜ ಸಹಸ್ರದೃಕ್ ॥ ೩೬ ॥

ಪ್ರಸನ್ನೋಽಭೂಚ್ಚ ತದ್ದೃಷ್ಟ್ವಾ ವಿಪ್ರತೇಜಸ್ಸುದುಸ್ಸಹಂ ।
ವಿಷ್ಣುಶರ್ಮಾ ತತೋ ಗತ್ವಾ ಪಿತರಂ ವಾಕ್ಯಮಬ್ರವೀತ್ ॥ ೩೭ ॥

ತಾತ ಇಂದ್ರಾತ್ಸಮಾನೀತಮಮೃತಂ ವ್ಯಾಧಿನಾಶನಂ ।
ಅನೇನಾಪಿ ಮಹಾಭಾಗ ನೀರುಜೋ ಭವ ಸರ್ವದಾ ।
ಅಮೃತೇನ ತ್ವಮದ್ಯೈವ ಪರಾಂ ತೃಪ್ತಿಮವಾಪ್ನುಹಿ ॥ ೩೮ ॥

ಏತದ್ವಾಕ್ಯಂ ಸುಹಚ್ಛ್ರುತ್ವಾ ವಿಷ್ಣುಶರ್ಮಾ ಸುತಸ್ಯ ಹಿ ।
ಸುತಾನ್ ಸರ್ವಾನ್ಸಮಾಹೂಯ ಪ್ರೀಯಮಾಣೇನ ಚೇತಸಾ ॥ ೩೯ ॥

ಪಿತೃಭಕ್ತಿಯುತಾ ಯೂಯಂ ಮದ್ವಾಕ್ಯಪರಿಪಾಲಕಾಃ ।
ವರಂ ವೃಣುಧ್ವಂ ಸುಪ್ರೀತಾಃ ಪುತ್ರಕಾ ದುರ್ಲಭಂ ಭುವಿ ॥ ೪೦ ॥

ಏವಮಾಭಾಷಿತಂ ತಸ್ಯ ಶುಶ್ರುವುಸ್ಸರ್ವಸಮ್ಮತಾಃ ।
ತೇ ಸರ್ವೇ ತು ಸಮಾಲೋಚ್ಯ ಪಿತರಂ ಪ್ರತ್ಯಥಾಽಬ್ರುವನ್ ॥ ೪೧ ॥

---

೩೬. ನಿನ್ನ ತಂದೆಯಲ್ಲಿ ಅಚಲವಾದ ಭಕ್ತಿಯಿರಲಿ ಎಂದು ಇಂದ್ರನು ಹೇಳಿ ಬ್ರಾಹ್ಮಣನನ್ನು ಕಳುಹಿಸಿದನು. ತನ್ನ ಇಷ್ಟಾರ್ಥವು ನೆರವೇರಿದ್ದರಿಂದ ಬ್ರಾಹ್ಮಣನು ಶಾಂತನಾದನು. ಬ್ರಾಹ್ಮಣನ ತೇಜಸ್ಸು ತಡೆಯಲು ಅಶಕ್ಯವಲ್ಲವೇ ?

೩೭-೩೮. ವಿಷ್ಣುಶರ್ಮನು ತಂದೆಯನ್ನು ನೋಡಿ ಎಲೈ ತಂದೆಯೇ! ವ್ಯಾಧಿನಾಶಕವಾದ ಅಮೃತವನ್ನು ಇಂದ್ರನಿಂದ ತೆಗೆದುಕೊಂಡು ಬಂದಿದ್ದೇನೆ, ಈ ಅಮೃತಪಾನದಿಂದ ನೀನು ಯಾವಾಗಲೂ ರೋಗವಿಲ್ಲದವನಾಗು. ಇದರಿಂದ ಈಗಲೇ ಹೆಚ್ಚುತೃಪ್ತಿಯನ್ನು ಹೊಂದುಎಂದು ಹೇಳಲು,

೩೯-೪೦. ಶಿವಶರ್ಮನು ತನ್ನ ಮಗನ ಮಾತನ್ನು ಕೇಳಿ, ಎಲ್ಲಾಮಕ್ಕಳನ್ನೂ ಕರೆದು ಸಂತೋಷದಿಂದ ನೀವೆಲ್ಲರೂ ಪಿತೃಭಕ್ತಿಯುಳ್ಳವರಾಗಿರುವಿರಿ, ಪಿತೃವಾಕ್ಯನಿರತರಾಗಿರುವಿರಿ, ಎಲೈ ಮಕ್ಕಳೇ, ಲೋಕದಲ್ಲಿ ದುರ್ಲಭವಾದ ವರವನ್ನು ಬೇಕಾದರೂ ಕೇಳಿರಿ ನಾನುಕೊಡುತ್ತೇನೆ' ಎಂದನು.

೪೧. ಹೀಗೆ ತಂದೆಯು ಹೇಳಿದ ಮಾತನ್ನು ಅವರೆಲ್ಲರೂ ಕೇಳಿ, ಒಂದಾಗಿ ಆಲೋಚಿಸಿ, ತಂದೆಯನ್ನು ಕುರಿತು

ಅಸ್ಮಾಕಂ ಜೀವತಾನ್ಮಾತಾ ಗತಾ ಯಾ ಯಮಮಂದಿರಂ ।
ನೀರುಜಾ ಭವತಾದ್ದೇವೀ ಪ್ರಸಾದಾತ್ತವ ಸುವ್ರತ ॥ ೪೨ ॥

ಭವಾನ್ಪಿತಾ ಇಯಂ ಮಾತಾ ಜನ್ಮಜನ್ಮಾಂತರೇ ಪಿತಃ ।
ವಯಂ ಸುತಾ ಭವೇಮೇತಿ ಸರ್ವೇ ಪುಣ್ಯಕೃತಸ್ತಥಾ ॥ ೪೩ ॥

॥ ಶಿವಶರ್ಮೋವಾಚ ॥

ಅದ್ಯೈವಾಪಿ ಮೃತಾ ಮಾತಾ ಭವತಾಂ ಪುತ್ರವತ್ಸಲಾ ।
ಜೀವಮಾನಾ ಸುಹೃಷ್ಟಾ ಸಾ ಏಷ್ಯತೇ ನಾತ್ರ ಸಂಶಯಃ ॥ ೪೪ ॥

ಏವಮುಕ್ತೇ ಶುಭೇ ವಾಕ್ಯೇ ಋಷಿಣಾ ಶಿವಶರ್ಮಣಾ ।
ತೇಷಾಂ ಮಾತಾ ಸಮಾಯಾತಾ ಪ್ರಹೃಷ್ಟಾ ವಾಕ್ಯಮಬ್ರವೀತ್ ॥ ೪೫ ॥

ಏತದರ್ಥಂ ಸಮುತ್ಪನ್ನಂ ಸುವೀರ್ಯಂ ತನಯಂ ವರಂ ।
ನರಾಸ್ಸತ್ಪುತ್ರಮಿಚ್ಛಂತಿ ಕುಲವಂಶಪ್ರಭಾವಕಂ ॥ ೪೬ ॥

---

೪೨-೪೩. ಯಮಲೋಕದಲ್ಲಿರುವ ನಮ್ಮ ತಾಯಿಯು ಪುನಃ ಬದುಕಲಿ, ನಿಮ್ಮ ಅನುಗ್ರಹದಿಂದ ರೋಗರಹಿತಳೂ, ಆಗಲಿ. ಎಲೈ ತಂದೆಯೇ, ಪ್ರತಿಜನ್ಮದಲ್ಲೂ ನೀನು ತಂದೆ, ಈಕೆ ತಾಯಿ, ನಾವು ಮಕ್ಕಳಾಗಿ ಆಗಬೇಕು, ಮತ್ತು ಎಲ್ಲರೂ ಪುಣ್ಯಶಾಲಿಗಳಾಗಬೇಕು ಈರೀತಿ ವರವನ್ನು ಕೊಡು ಎಂದು ಕೇಳಿಕೊಂಡರು.

೪೪. ಶಿವಶರ್ಮನು ಹೇಳುತ್ತಾನೆ:—ನಿಮ್ಮಲ್ಲಿ ಪ್ರೀತಿಯುಳ್ಳ ನಿಮ್ಮ ತಾಯಿಯು ಈಗತಾನೆ ಸತ್ತಿದ್ದರೂ ಮತ್ತೆ ಜೀವದಿಂದಕೂಡಿ ಸಂತೋಷಗೊಂಡು ಬರುತ್ತಾಳೆ, ಸಂಶಯವಿಲ್ಲ.

೪೫. ಎಂದು ಶಿವಶರ್ಮನು ಹೇಳಿದಕೂಡಲೇ ಅವರ ತಾಯಿಯು ಸಂತೋಷದಿಂದ ಎದ್ದುಬಂದು, ಈ ಮಾತನ್ನು ಹೇಳಿದಳು.

೪೬. ಮನುಷ್ಯರು ವಂಶವರ್ಧಕನಾದ ಸುಪುತ್ರನನ್ನು ಅಪೇಕ್ಷಿಸುತ್ತಾರೆ, ಅದಕ್ಕೋಸ್ಕರವೇ ವೀರ್ಯವಂತನಾದ, ಶ್ರೇಷ್ಠನಾದ ಮಗನನ್ನು ಉತ್ಪನ್ನಮಾಡಬೇಕು.

ಸ್ತ್ರಿಯೋ ಲೋಕೇ ಮಹಾಭಾಗಾಃ ಸುಪುಣ್ಯಾಃ ಪುಣ್ಯವತ್ಸಲಾಃ ।
ಸುತಮಿಚ್ಛಂತಿ ಸರ್ವತ್ರ ಪುಣ್ಯಗಂ ಪುಣ್ಯಸಾಧಕಂ ॥ ೪೭ ॥

ಕುಕ್ಷಿಂ ಯಸ್ಯಾ ಗತೋ ಗರ್ಭಸ್ಸುಪುಣ್ಯಃ ಪರಿವರ್ತತೇ ।
ಪುಣ್ಯಾನ್ಪುತ್ರಾನ್ಪ್ರಸೂತೇ ಯಾ ಸಾ ನಾರೀ ಪುಣ್ಯಭಾಗಿನೀ ॥ ೪೮ ॥

ಕುಲಾಚಾರಂ ಕುಲಾಧಾರಂ ಪಿತೃಮಾತೃಪ್ರತಾರಕಂ ।
ವಿನಾ ಪುಣ್ಯೈಃ ಕಥಂ ನಾರೀ ಸಂಪ್ರಾಪ್ನೋತಿ ಸುತೋತ್ತಮಂ ॥ ೪೯ ॥

ನ ಜಾನೇ ಕೀದೃಶೈಃ ಪುಣ್ಯೈರೇಷ ಭರ್ತಾ ಸುಪುಣ್ಯಭಾಕ್ ।
ಸಂಜಾತೋ ಧರ್ಮವೀರ್ಯೋಽಪಿ ಧರ್ಮಾತ್ಮಾ ಧರ್ಮವತ್ಸಲಃ ॥ ೫೦ ॥

ಯಸ್ಯ ವೀರ್ಯಾನ್ಮಯಾ ಪ್ರಾಪ್ತಾ ಯೂಯಂ ಪ್ರಾಪ್ತಾಸ್ತತೋಽಧಿಕಾಃ ।
ಏವಂ ಪುಣ್ಯಪ್ರಭಾವೋಽಯಂ ಭವಂತಃ ಪುಣ್ಯವತ್ಸಲಾಃ ॥ ೫೧ ॥

ಮಮ ಪುತ್ರಾಸ್ತು ಸಂಜಾತಾಃ ಪಿತೃಭಕ್ತಿಪರಾಯಣಾಃ ।
ಅಹೋ ಲೋಕೇಷು ಪುಣ್ಯೈಶ್ಚ ಸುಪುತ್ರಃ ಪರಿಲಭ್ಯತೇ ॥ ೫೨ ॥

---

೪೭. ಪುಣ್ಯವತಿಯರಾದ ಹೆಂಗಸರೂ ಸಹ ಪುಣ್ಯಾತ್ಮನಾದ ಮಗನಾಗಬೇಕು ಎಂದು ಅಪೇಕ್ಷಿಸುತ್ತಾರೆ.

೪೮. ಯಾವಳ ಗರ್ಭದಲ್ಲಿ ಪುಣ್ಯವಂತನಾದ ಪುತ್ರನು ಜನಿಸುವನೋ ಅವಳು ಮಹಾ ಪುಣ್ಯಭಾಗಿನಿಯೇ ಸರಿ.

೪೯. ಕುಲಾಚಾರವನ್ನು ಅನುಸರಿಸುವವನೂ, ವಂಶಾಧಾರಕನೂ ಆದ ಮಗನನ್ನು ಹೆರಬೇಕಾದರೆ ಪುಣ್ಯವಂತಳಲ್ಲದ ಹೆಂಗಸಿಗೆ ಹೇಗೆ ಸಾಧ್ಯ?

೫೦. ಧರ್ಮಾತ್ಮನೂ, ಧರ್ಮವತ್ಸಲನೂ, ಆದ ಈತನು ಯಾವ ವಿಧವಾದ ಪುಣ್ಯದಿಂದ ನನಗೆ ಗಂಡನಾದನೋ, ಕಾಣೆ.

೫೧. ಅಂಥ ಗಂಡನ ದೆಸೆಯಿಂದ ಅವನಿಗಿಂತಲೂ ಪುಣ್ಯವಂತರಾದ ಮಕ್ಕಳು ಜನಿಸಿರುವರು. ಇದು ನಮ್ಮಗಳ ಪುಣ್ಯಪ್ರಭಾವವೇ ಸರಿ.

೫೨. ಈ ನನ್ನ ಮಕ್ಕಳೆಲ್ಲರೂ ಪಿತೃಭಕ್ತಿಪರಾಯಣರಾಗಿರುವರು, ಪ್ರಪಂಚದಲ್ಲಿ ಪುಣ್ಯದಿಂದ ಸತ್ಪುತ್ರನು ಲಭಿಸುತ್ತಾನೆ. ಇದು ಆಶ್ಚರ್ಯವಲ್ಲವೇ ?

ಏಕೈಕಶೋಽಧಿಕಾಃ ಪಂಚ ಮಯಾ ಪ್ರಾಪ್ತಾ ಮಹಾಶಯಾಃ ।
ಯಜ್ವಾನಃ ಪುಣ್ಯಶೀಲಾಶ್ಚ ತಪಸ್ತೇಜಃಪರಾಕ್ರಮಾಃ ॥ ೫೩ ॥

ಏವಂ ಸಂವರ್ಧಿತಾಸ್ತೇ ತು ತಯಾ ಮಾತಾ ಪುನಃ ಪುನಃ ।
ಹರ್ಷೇಣ ಮಹತಾ ಯುಕ್ತಾಃ ಪ್ರಣೇಮುರ್ಮಾತರಂ ಮುದಾ ॥ ೫೪ ॥

॥ ಪುತ್ರಾ ಊಚುಃ ॥

ಸುಪುಣ್ಯೈಃ ಪ್ರಾಪ್ಯತೇ ಮಾತಃ ಸುಮಾತಾ ಸುಪಿತಾ ಕಿಲಾ ।
ಭವತೀ ಪುಣ್ಯಕರ್ತ್ರೀ ತು ನೋ ಭಾಗ್ಯೈಸ್ತು ಪ್ರವರ್ತಿತಾ ॥ ೫೫ ॥

ಯಸ್ಯಾ ಗರ್ಭಾಂತರಂ ಪ್ರಾಪ್ಯ ಸುಪುಣ್ಯೈಶ್ಚ ಪ್ರವರ್ಧಿತಾಃ ।
ಜನ್ಮಜನ್ಮನಿ ತ್ವಂ ಮಾತಾ ಪಿತಾ ಚೈಷ ಭವತ್ವಿತಿ ॥ ೫೬ ॥

॥ ಪಿತೋವಾಚ ॥

ಶೃಣುಧ್ವಂ ಮಾಮಕಾಃ ಪುತ್ರಾಃ ಸುವರಂ ಪುಣ್ಯದಾಯಕಂ।
ಮಯಿ ತುಷ್ಟೇ ಸುತಾ ಭೋಗಾನನುಭುಂಜಂತು ಚಾಕ್ಷಯಾನ್ ॥ ೫೭ ॥

---

೫೩. ಒಬ್ಬರಿಗಿಂತ ಮತ್ತೊಬ್ಬರನ್ನು ಮೀರಿಸಿರುವ ಐದುಜನ ಪುತ್ರರು ನನ್ನಲ್ಲಿ ಜನಿಸಿರುವಿರಿ. ನೀವಾದರೋ ಯಾಗಶೀಲರು, ಪುಣ್ಯಕಾರ್ಯನಿರತರು, ತಪಸಿಗಳು, ತೇಜಸ್ವಿಗಳು ಮತ್ತು ಪರಾಕ್ರಮಿಗಳು.

೫೪. ಈರೀತಿಯಾಗಿ ಪ್ರಶಂಸೆಮಾಡಲು, ಆ ಮಕ್ಕಳು ಅತ್ಯಂತ ಸಂತೋಷದಿಂದ ಬಾರಿಬಾರಿಗೂ ತಮ್ಮ ತಾಯಿಯನ್ನು ನಮಸ್ಕರಿಸಿದರು.

೫೫. ಮಕ್ಕಳು ಹೇಳುತ್ತಾರೆ :—ಪುಣ್ಯಾತ್ಮರಾದವರಿಗೆ ಮಾತ್ರ ಒಳ್ಳೇ ತಾಯಿ ಒಳ್ಳೇ ತಂದೆ ದೊರೆಯುತ್ತಾರೆ. ಪುಣ್ಯವತಿಯಾದ ನೀನು ನಮ್ಮ ಭಾಗ್ಯವಶದಿಂದ ಪ್ರಾಪ್ತವಾಗಿದ್ದೀಯೆ.

೫೬. ನಮ್ಮಗಳ ಪುಣ್ಯವಶದಿಂದ ನಿಮ್ಮ ಹೊಟ್ಟೆಯಲ್ಲಿ ಹುಟ್ಟಿ ಬೆಳೆದೆವು. ನೀನೂ ಮತ್ತು ತಂದೆಯೂ ಪ್ರತಿಜನ್ಮದಲ್ಲಿಯೂ ನಮಗೆ ಜನನೀಜನಕರಾಗಿರಿ.

೫೭. ತಂದೆಯು ಹೇಳುತ್ತಾನೆ:—ಎಲೈ ಮಕ್ಕಳೇ, ಶ್ರೇಷ್ಠವಾದ ಪುಣ್ಯಪ್ರದವಾದ ನಿಮ್ಮ ಮಾತನ್ನು ಕೇಳಿ ನಾನು ಸಂತುಷ್ಟನಾಗಿರುವೆನು. ನೀವು ಅನಂತವಾದ ಸುಖಗಳನ್ನು ಅನುಭವಿಸಿರಿ.

॥ ಪುತ್ರಾ ಊಚುಃ ॥

ಯದಿ ತಾತ ಪ್ರಸನ್ನೋಽಸಿ ವರಂ ದಾತುಮಿಹೇಚ್ಛಸಿ ।
ಅಸ್ಮಾನ್ ಪ್ರೇಷಯ ಗೋಲೋಕಂ ವೈಷ್ಣವಂ ದಾಹವರ್ಜಿತಂ ॥ ೫೮ ॥

॥ ಪಿತೋವಾಚ ॥

ಗಚ್ಛಧ್ವಂ ವೈಷ್ಣವಂ ಲೋಕಂ ಯೂಯಂ ವಿಗತಕಲ್ಮಷಾಃ ।
ಮತ್ಪ್ರಸಾದಾತ್ತಪೋಭಿಶ್ಚ ಪಿತೃಭಕ್ತ್ಯಾನಯಾ ತಥಾ ॥ ೫೯ ॥

ಏವಮುಕ್ತೇ ತು ತೇನಾಪಿ ಸುವಾಕ್ಯೇ ಋಷಿಣಾ ತತಃ ।
ಶಂಖಚಕ್ರಗದಾಪಾಣಿರ್ಗರುಡಾರೂಢ ಆಗತಃ ॥ ೬೦ ॥

ಸಪುತ್ರಂ ಶಿವಶರ್ಮಾಣಮಿತ್ಯುವಾಚ ಪುನಃ ಪುನಃ ।
ಸಪುತ್ರೇಣ ತ್ವಯಾ ಚೈವ ಜಿತೋ ಭಕ್ತ್ಯಾಸ್ಮಿ ವೈ ದ್ವಿಜ ॥ ೬೧ ॥

ಪುತ್ರೈಸ್ಸಾರ್ಧಂ ಸಮಾಗಚ್ಛ ಚತುರ್ಭಿಃ ಪುಣ್ಯಕಾರಿಭಿಃ ।
ಅನಯಾ ಭಾರ್ಯಯಾ ಸಾರ್ಧಂ ಪುಣ್ಯಯಾ ಪತಿಕಾಮಯಾ ॥ ೬೨ ॥

---

೫೮. ಮಕ್ಕಳು ಹೇಳುತ್ತಾರೆ:—ಎಲೈ ತಂದೆಯೇ, ನೀನು ಪ್ರಸನ್ನನಾಗಿ ವರವನ್ನು ಕೊಡಬೇಕೆಂದಿರುವಪಕ್ಷದಲ್ಲಿ ಸಪೂರ್ಣವರ್ಜಿತವಾದ ವಿಷ್ಣುವಿನ ಗೋಲೋಕಕ್ಕೆ ನಮ್ಮನ್ನು ಕಳುಹಿಸು.

೫೯. ತಂದೆಯು ಹೇಳುತ್ತಾನೆ:—ಪಾಪರಹಿತರಾದ ನೀವು ನನ್ನನುಗ್ರಹದಿಂದಲೂ, ನಿಮ್ಮ ಪಿತೃಭಕ್ತಿ ತಪಶ್ಶಕ್ತಿಯಿಂದಲೂ ವೈಷ್ಣವಲೋಕವನ್ನು ಹೊಂದಿರಿ.

೬೦. ಆ ಋಷಿಯು ಈ ಒಳ್ಳೆಯ ಮಾತನ್ನು ಹೇಳುತ್ತಿರುವಷ್ಟರಲ್ಲಿ ಶಂಖ ಚಕ್ರಗದಾಹಸ್ತನಾಗಿ ಮಹಾವಿಷ್ಣುವು ಗರುಡನನ್ನೇರಿ ಅಲ್ಲಿಗೆ ಬಂದು,

೬೧-೬೨. ಪುತ್ರನೊಡಗೂಡಿರುವ ಶಿವಶರ್ಮನನ್ನು ಕುರಿತು ನಿನ್ನ ದೃಢವಾದ ಭಕ್ತಿಯಿಂದ ನಾನು ಸಂತುಷ್ಟನಾಗಿರುವೆನು. ಪುಣ್ಯಾತ್ಮರಾದ ಈ ನಾಲ್ಕುಮಕ್ಕಳುಗಳೊಡನೆಯೂ, ಸತಿವ್ರತೆಯೂ, ಪುಣ್ಯವತಿಯೂ ಆದ ಹೆಂಡತಿಯೊಡನೆಯೂ ನನ್ನ ಲೋಕಕ್ಕೆ ಬಾ ಎಂದನು.

॥ ಶಿವಶರ್ಮೋವಾಚ ॥

ಅಮೀ ಗಚ್ಛಂತು ಪುತ್ರಾ ಮೇ ವೈಷ್ಣವಂ ಲೋಕಮುತ್ತಮಂ ।
ಕಂಚಿತ್ಕಾಲಂ ತು ನೇಷ್ಯಾಮಿ ಭೂಮೌ ವೈ ಭಾರ್ಯಯಾ ಸಹ ॥ ೬೩ ॥

ಏವಮುಕ್ತೇ ಶುಭೇ ವಾಕ್ಯೇ ಋಷಿಣಾ ಸತ್ಯಭಾಷಿಣಾ ।
ತಾನುವಾಚಾಥ ದೇವೇಶಃ ಸುಪುತ್ರಾಞ್ಶಿವಶರ್ಮಣಃ ॥ ೬೪ ॥

ಗಚ್ಛಂತು ಮೋಕ್ಷದಂ ಲೋಕಂ ದಾಹಪ್ರಲಯವರ್ಜಿತಂ ।
ಏವಮುಕ್ತೇ ತತೋ ವಿಪ್ರಾಶ್ಚತ್ವಾರಸ್ಸತ್ಯಚೇತಸಃ ॥ ೬೫ ॥

ವಿಷ್ಣುರೂಪಧರಾಸ್ಸರ್ವೇ ಬಭೂವುಸ್ತತ್ಕ್ಷಣಾದಪಿ ।
ಇಂದ್ರನೀಲಸಮಾ ವರ್ಣೈಃ ಶಂಖಚಕ್ರಗದಾಧರಾಃ ॥ ೬೬ ॥

ಸರ್ವಾಭರಣಸೌಭಾಗ್ಯಾ ವಿಷ್ಣುರೂಪಾ ಮಹೌಜಸಃ ।
ರತ್ನಕಂಕಣಶೋಭಾಢ್ಯಾ ರತ್ನಮಾಲಾಭಿಶೋಭಿತಾಃ ॥ ೬೭ ॥

ಪ್ರವಿಷ್ಟಾ ವೈಷ್ಣವಂ ಲೋಕಂ ಪಶ್ಯತಶ್ಶಿವಶರ್ಮಣಃ ।
ದೀಪಂ ದೀಪಾ ಯಥಾ ಯಾಂತಿ ತದ್ವಲ್ಲೀನಾ ಮಹಾಮತೇ ॥ ೬೮ ॥

---

೬೩-೬೪. ಶಿವಶರ್ಮನು ಹೇಳಿದನು :—ಈ ನನ್ನ ನಾಲ್ವರು ಪುತ್ರರು ಉತ್ತಮವಾದ ವಿಷ್ಣುಲೋಕಕ್ಕೆ ಹೋಗಲಿ. ಈ ಭೂಮಿಯಲ್ಲಿ ಸ್ವಲ್ಪಕಾಲದವರೆವಿಗೂ ನನ್ನ ಹೆಂಡತಿಯೊಡನೆ ಕಾಲವನ್ನು ಕಳೆಯಬೇಕಾಗಿದೆ ಮತ್ತು ನನ್ನ ಕನಿಷ್ಠಪುತ್ರನಾದ ಸೋಮಶರ್ಮನ ಜೊತೆಯಲ್ಲಿ ಕೆಲವುಕಾಲ ಇರಬೇಕಾಗಿರುವುದು ಎಂದು ಆ ಋಷಿಯು ಹೇಳಲು ಶಿವಶರ್ಮನ ಮಕ್ಕಳನ್ನು ಕುರಿತು "ನೀವುಗಳು ದುಃಖರಹಿತವಾದ ಮೋಕ್ಷದಾಯಕವಾದ ಲೋಕಕ್ಕೆ ಸೇರಿರಿ" ಎಂದು ವಿಷ್ಣುವು ಹೇಳಿದನು.

೬೫-೬೭. ವಿಷ್ಣುವು ಹೀಗೆ ಹೇಳಿದಮೇಲೆ ಆ ನಾಲ್ಕುಜನ ವಿಪ್ರಕುಮಾರರೂ ಮೇಘವರ್ಣದಂತೆ ದೇಹವರ್ಣವುಳ್ಳವರಾಗಿ ಶಂಖ ಚಕ್ರ ಗದಾ ಪದ್ಮ ಇವುಗಳನ್ನು ಹಸ್ತಗಳಲ್ಲಿ ಧರಿಸಿ ಸರ್ವಾಭರಣಭೂಷಿತರಾಗಿ ರತ್ನವಲಯಗಳಿಂದಲೂ ರತ್ನಾಹಾರಗಳಿಂದಲೂ ಅಲಂಕೃತರಾಗಿ ಮಹಾತೇಜೋಯುಕ್ತವಾದ ವಿಷ್ಣುವಿನ ರೂಪವನ್ನು ಆಕ್ಷಣವೇ ಧರಿಸಿದರು.

೬೮. ಈ ಬ್ರಾಹ್ಮಣಕುಮಾರರು ಶಿವಶರ್ಮನು ನೋಡುತ್ತಿದ್ದಂತೆಯೇ ವಿಷ್ಣುಲೋಕವನ್ನು ಸೇರಿದರು. ದೀಪವು ದೀಪವನ್ನು ಸೇರುವಂತೆ ವಿಷ್ಣುವಿನಲ್ಲಿ ಐಕ್ಯಹೊಂದಿದರು.

ಗತಾಸ್ತೇ ವೈಷ್ಣವಂ ಧಾಮ ಪಿತೃಭಕ್ತ್ಯಾ ದ್ವಿಜೋತ್ತಮಾಃ ।
ಪ್ರಭಾವಂ ತು ಪ್ರವಕ್ಷ್ಯಾಮಿ ಸುಸತ್ಯಂ ಸೋಮಶರ್ಮಣಃ ॥ ೬೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ಶಿವಶರ್ಮೋಪಾಖ್ಯಾನೇ ತೃತೀಯೋಧ್ಯಾಯಃ



---

೬೯. ಈ ಬ್ರಾಹ್ಮಣಶ್ರೇಷ್ಠರು ಪಿತೃಭಕ್ತಿಯಿಂದ ಹೀಗೆ ವಿಷ್ಣುಸಂಬಂಧವುಳ್ಳ ಲೋಕವನ್ನು ಪ್ರವೇಶಿಸಿದರು. ಇನ್ನು ಸೋಮಶರ್ಮನ ಪ್ರಭಾವವನ್ನು ಹೇಳುತ್ತೇನೆ,

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಶಿವಶರ್ಮನ ಕಥೆಯಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಮಹಾಪುರಾಣೇ ಪಾದ್ಮೇಭೂಮಿಖಂಡೇ
## ॥ ಚತುರ್ಥೋಽಧ್ಯಾಯಃ ॥

॥ ಸೂತ ಉವಾಚ ॥

ಗತೇಷು ತೇಷು ಗೋಲೋಕಂ ವೈಷ್ಣವಂ ತಪಸಃ ಪರಂ ।
ಶಿವಶರ್ಮಾ ಮಹಾಪ್ರಾಜ್ಞಃ ಕನಿಷ್ಠಂ ವಾಕ್ಯಮಬ್ರವೀತ್ ॥ ೧ ॥

॥ ಬ್ರಾಹ್ಮಣ ಉವಾಚ ॥

ಸೋಮಶರ್ಮನ್ ಮಹಾಪ್ರಾಜ್ಞ ತ್ವಂ ಪಿತುರ್ಭಕ್ತಿತತ್ಪರಃ ।
ಅಮೃತಸ್ಯ ಮಹಾಕುಂಭಂ ರಕ್ಷ ದತ್ತಂ ಮಯಾಽಧುನಾ ॥ ೨ ॥

ತೀರ್ಥಯಾತ್ರಾಂ ಪ್ರಯಾಸ್ಯಾಮಿ ಅನಯಾ ಭಾರ್ಯಯಾ ಸಹ ।
ಏವಮಸ್ತು ಮಹಾಭಾಗ ಕರಿಷ್ಯೇ ರಕ್ಷಣಂ ಶುಭಂ ।
ಕುಂಭಂ ದತ್ವಾ ಸ ಮೇಧಾವೀ ತಸ್ಯ ಹಸ್ತೇ ಮಹಾತ್ಮನಃ ॥ ೩ ॥

---

### ನಾಲ್ಕನೆಯ ಅಧ್ಯಾಯವು.

೧. ಸೂತನು ಹೇಳುತ್ತಾನೆ:— ಅವರೆಲ್ಲರೂ ತಪಸ್ಸಿನಿಂದ ಉತ್ತಮವಾದ ಗೋಲೋಕವನ್ನು ಹೊಂದಿದಮೇಲೆ ಪ್ರಾಜ್ಞನಾದ ಶಿವಶರ್ಮನು ಕಡೆಯ ಮಗನಾದ ಸೋಮಶರ್ಮನನ್ನು ಕುರಿತು ಇಂತೆಂದನು.

೨. ಬ್ರಾಹ್ಮಣನು ಹೇಳುತ್ತಾನೆ:—ಎಲೈ ಸೋಮಶರ್ಮನೇ ನೀನು ತಂದೆಯಲ್ಲಿ ಭಕ್ತಿಯುಳ್ಳವನು, ಈ ಅಮೃತ ಕುಂಭವನ್ನು ನಿನ್ನ ಕೈಲಿ ಕೊಟ್ಟು, ನಾನು ನನ್ನ ಹೆಂಡತಿಯೊಡನೆ ತೀರ್ಥಯಾತ್ರೆಗೆ ಹೋಗುತ್ತೇನೆ, ನಾನು ಬರುವವರೆವಿಗೂ ಇದನ್ನು ಕಾಪಾಡಿಕೊಂಡಿರು.

೩-೪. ಸೋಮಶರ್ಮನು ಹಾಗೆಯೇ ಆಗಲೆಂದು ಹೇಳಿದನು. ಶಿವಶರ್ಮನು ಅಮೃತಕುಂಭವನ್ನು ಮಗನ ಕೈಲಿ ಕೊಟ್ಟು, ಹತ್ತುವರ್ಷಗಳಕಾಲ ತಪಸ್ಸನ್ನು

ದಶವರ್ಷಪ್ರಮಾಣಂ ತು ತಪಸ್ತೇಪೇ ನಿರಂತರಂ ।
ಕುಂಭಂ ರಕ್ಷತಿ ಧರ್ಮಾತ್ಮಾ ದಿವಾರಾತ್ರಮತಂದ್ರಿತಃ ॥ ೪ ॥

ಪುನಸ್ಸ ಹಿ ಸಮಾಯಾತಃ ಶಿವಶರ್ಮಾ ಮಹಾಯಶಾಃ ।
ಮಾಯಾಂ ಕೃತ್ವಾ ಮಹಾಪ್ರಾಜ್ಞೋ ಭಾರ್ಯಯಾ ಸಹ ಸಂಯುತಃ ॥೫॥

ಕುಷ್ಠರೋಗಾऽಽತುರೋ ಭೂತ್ವಾ ತಸ್ಯ ಭಾರ್ಯಾ ಚ ತಾದೃಶೀ ।
ಮಾಂಸಪಿಂಡಸಮೌ ತ್ಯಾಜ್ಯೌ ದ್ವಾವೇತೌ ಹಿ ಮಹಾತ್ಮನಃ ॥ ೬ ॥

ಸಕಾಶಂ ತಸ್ಯ ಧೀರಸ್ಯ ವಿಪ್ರಸ್ಯ ಸೋಮಶರ್ಮಣಃ ।
ಸಮಾಗತೌ ಹಿ ತೌ ದೃಷ್ಟ್ವಾ ಸರ್ವತೋ ಹಿ ಸುದುಃಖಿತೌ ॥ ೭ ॥

ಕೃಪಯಾ ಪರಯಾವಿಷ್ಟಃ ಸೋಮಶರ್ಮಾ ಮಹಾಯಶಾಃ ।
ತಯೋಃ ಪಾದೌ ನಮಸ್ಕೃತ್ವಾ ಭಕ್ತ್ಯಾ ನಮಿತಕಂಧರಃ ॥ ೮ ॥

ಭವಾದೃಶಂ ನ ಪಶ್ಯಾಮಿ ತಪಸಾऽಭಿಸಮನ್ವಿತಂ ।
ಗುಣವ್ರಾತೈಸ್ಸುಪುಣ್ಯೈಶ್ಚ ಕಿಮಿದಂ ವರ್ತಿತಂ ತ್ವಯಿ ॥ ೯ ॥

---

ಮಾಡಿದನು. ಇವನೂ ಸಹ ಆ ಕುಂಭವನ್ನು ಹಗಲಿರಳೂ ಆಲಸ್ಯಪಡದೇ ಕಾಪಾಡುತ್ತಿದ್ದನು.

೫-೬. ತಪಸ್ಸು ಮುಗಿದಮೇಲೆ ಶಿವಶರ್ಮನು ತನ್ನ ಹೆಂಡತಿಯೊಡನೆ ಮಗನ ಹತ್ತಿರಕ್ಕೆ ಬಂದನು. ಮಗನನ್ನು ಪರೀಕ್ಷಿಸುವುದಕ್ಕೋಸ್ಕರ ಮಾಂಸಪಿಂಡಗಳೂ ಹೊರಗೆ ಕಾಣುವಂತೆ ತಾವಿಬ್ಬರೂ ಕುಷ್ಠರೋಗ ಪೀಡಿತರಾಗಿ ಸರ್ವರೂ ಅಸಹ್ಯಪಟ್ಟುಕೊಳ್ಳುವಂತೆ ಮಾಯೆಯಿಂದ ನಟಿಸಿ ಮಗನಿಗೆ ಕಾಣಿಸಿಕೊಂಡರು.

೭-೯. ಯಾವಾಗಲೂ ದುಃಖಿಗಳಂತೆ ನಟಿಸುತ್ತ ಇವರು ಸೋಮಶರ್ಮನ ಸಮೀಪಕ್ಕೆ ಹೋಗಲು, ಆ ಮಗನು ಬಹು ಕರುಣೆಯಿಂದಕೂಡಿ ಭಕ್ತಿಯಿಂದ ತಲೆಯನ್ನು ಬಗ್ಗಿಸಿ, ಪಾದಗಳಿಗೆ ನಮಸ್ಕರಿಸಿ, ಎಲೈ ತಂದೆಯೇ ತಪಸ್ಸಿನಲ್ಲಿಯೂ, ಗುಣ ಪುಣ್ಯ, ಇವುಗಳಲ್ಲಿಯೂ, ನಿನ್ನ ಸಮಾನರನ್ನು ನಾನು ನೋಡಲಿಲ್ಲ. ಹೀಗಿದ್ದರೂ ನಿನ್ನ ದೇಹದಲ್ಲಿ ಆಗಿರತಕ್ಕ ಈ ವಿಕಾರಕ್ಕೆ ಕಾರಣವೇನು.?

**ದಾಸವದ್ದೇವತಾಸ್ಸರ್ವಾ ವರ್ತಂತೇ ಸರ್ವದಾ ತವ ।**
**ಆದೇಶಂ ಪ್ರಾಪ್ಯ ವಿಪ್ರೇಂದ್ರ ಚಾಽಕೃಷ್ಟಾಸ್ತೇಜಸಾ ತವ ॥ ೧೦ ॥**

**ತವಾಂಗೇ ಕೇನ ಪಾಪೇನ ಗದೋಽಯಂ ವೇದನಾನ್ವಿತಃ ।**
**ಸಂಜಾತೋ ಬ್ರಾಹ್ಮಣಶ್ರೇಷ್ಠ ತನ್ಮೇ ಕಥಯ ಕಾರಣಂ ॥ ೧೧ ॥**

**ಇಯಂ ಪುಣ್ಯವತೀ ಮಾತಾ ಮಹಾಪುಣ್ಯಾ ಪತಿವ್ರತಾ ।**
**ಯಾ ಹಿ ಭರ್ತೃಪ್ರಸಾದೇನ ತ್ರೈಲೋಕ್ಯಂ ಧರ್ತುಮಿಚ್ಛತಿ ।**
**ಸಾ ಕಥಂ ದುಃಖಮಾಪ್ನೋತಿ ಕಿಂ ನಾಸ್ತಿ ತಪಸಃ ಫಲಂ ॥ ೧೨ ॥**

**ರಾಗದ್ವೇಷೌ ಪರಿತ್ಯಜ್ಯ ವಿವಿಧೇನಾಽಪಿ ಕರ್ಮಣಾ ।**
**ಯಾ ಚ ಶುಶ್ರೂಷತೇ ಕಾಂತಂ ಸಾ ಕಥಂ ದುಃಖಮಾಪ್ನುಯಾತ್ ॥೧೩॥**

**ಯಾ ತು ಪೂಜಯತೇ ಕಾಂತಂ ದೇವವದ್ಗುರುವತ್ಸಲಾ ।**
**ಸಾ ಕಥಂ ದುಃಖಮಾಪ್ನೋತಿ ಕುಷ್ಠರೋಗಂ ಸುದುಃಖದಂ ॥ ೧೪ ॥**

---

೧೦. ದೇವತೆಗಳೂಸಹ ನಿಮಗೆ ದಾಸರಾಗಿ ನಿನ್ನ ತೇಜಸ್ಸಿನ ಪ್ರಭಾವದಿಂದ ನಿನ್ನ ಅಪ್ಪಣೆಯನ್ನು ಸ್ವಲ್ಪವೂ ಬಿಡದೆ ನಡೆಸುತ್ತಿರುತ್ತಾರೆ.

೧೧. ಯಾವ ಪಾಪದ ದೆಸೆಯಿಂದ ನಿನಗೆ ನೋವನ್ನುಂಟುಮಾಡುವ ಈ ಕುಷ್ಠರೋಗವು ಬಂದಿತು? ಬ್ರಾಹ್ಮಣಶ್ರೇಷ್ಠನೇ ಆ ಪಾಪಕಾರಣವನ್ನು ನನಗೆ ತಿಳಿಸು.

೧೨. ಈ ನಮ್ಮ ತಾಯಿಯಾದರೋ ಮಹಾ ಪುಣ್ಯವತಿಯೂ, ಪತಿವ್ರತೆಯೂ ಆಗಿದ್ದಾಳೆ. ಈಕೆಯು ತನ್ನ ಗಂಡನ ಅನುಗ್ರಹದಿಂದ ಮೂರುಲೋಕಗಳನ್ನು ಬೇಕಾದರೂ ಧರಿಸಲು ಸಮರ್ಥಳಾಗಿರುವಳು.

೧೩. ಇವಳಿಗೂ ಈ ವಿಧವಾದ ದುಃಖಬಂದಿದೆಯಲ್ಲಾ ತಪಸ್ಸಿಗೆ ಫಲವೇ ಇಲ್ಲವೋ? ಏನೋ? ರಾಗದ್ವೇಷಗಳನ್ನು ನೀಗಿ ಯಾವಳು ನಾನಾಬಗೆಯ ಕಾರ್ಯಗಳಿಂದ ಗಂಡನನ್ನು ಶುಶ್ರೂಷೆಮಾಡುತ್ತಾಳೋ, ಆಕೆಯು ಈ ದುಃಖವನ್ನು ಹೇಗೆ ಹೊಂದುವಳು.?

೧೪. ಯಾವಳು ಗಂಡನನ್ನು ದೈವದಂತೆಯೂ, ಗುರುವಿನಂತೆಯೂ, ತಿಳಿದು ಪೂಜಿಸುವಳೋ, ಅವಳು ಬಹು ದುಃಖಪ್ರದವಾದ ಕುಷ್ಠರೋಗಯಾತನೆಯನ್ನು ಹೇಗೆತಾನೇ ಅನುಭವಿಸುತ್ತಾಳೆ? ಇದೆಲ್ಲವನ್ನೂ ನನಗೆ ತಿಳಿಸು ಎಂದನು.

॥ ಶಿವಶರ್ಮೋವಾಚ ॥

**ಮಾ ಶುಚಸ್ತ್ವಂ ಮಹಾಭಾಗ ಭುಜ್ಯತೇ ಕರ್ಮಜಂ ಫಲಂ ।**
**ನರೇಣ ಕರ್ಮಯುಕ್ತೇನ ಪಾಪಪುಣ್ಯಮಯೇನ ಹಿ ॥ ೧೫ ॥**

**ಶೋಧನಂ ಚ ಕುರುಷ್ವ ತ್ವಮುಭಯೋ ರೋಗಯುಕ್ತಯೋಃ ।**
**ಶುಶ್ರೂಷಣಂ ಮಹಾಭಾಗ ಯದಿ ಪುಣ್ಯಮಿಹೇಚ್ಛಸಿ ॥ ೧೬ ॥**

**ಏವಮುಕ್ತೇ ಶುಭೇ ವಾಕ್ಯೇ ಸೋಮಶರ್ಮಾ ಮಹಾಯಶಾಃ ।**
**ಶುಶ್ರೂಷಾಂ ವಾ ಕರಿಷ್ಯಾಮಿ ಯುವಯೋಃ ಪುಣ್ಯಯುಕ್ತಯೋಃ ॥೧೭ ॥**

**ಮಯಾ ಪಾಪೇನ ದುಷ್ಟೇನ ಕೃಪಣೇನ ದ್ವಿಜೋತ್ತಮ ।**
**ಕಿಂ ಕರ್ತವ್ಯಮಿಹಾದ್ಯೈವ ಯೋ ಗುರೂ ನ ಹಿ ಪೂಜಯೇತ್ ॥ ೧೮ ॥**

**ಏವಮಾಭಾಷ್ಯ ದುಃಖಾದ್ವಾ ತಯೋರ್ದುಃಖೇನ ದುಃಖಿತಃ ।**
**ಶ್ಲೇಷ್ಮಮೂತ್ರಪುರೀಷಂ ಸ ಉಭಯೋಃ ಪರ್ಯಶೋಧಯತ್ ॥ ೧೯ ॥**

---

೧೫. ಶಿವಶರ್ಮನು ಹೇಳುತ್ತಾನೆ:—ಎಲೈ ಮಹಾಭಾಗನೇ, ದುಃಖಿಸಬೇಡ. ಪುಣ್ಯಪಾಪಕಾರ್ಯಗಳನ್ನು ಮಾಡುವ ಮನುಷ್ಯನು ಅವುಗಳ ಫಲವನ್ನು ಅನುಭವಿಸಲೇಬೇಕು. ಇದಕ್ಕಾಗಿ ದುಃಖಪಟ್ಟು ಪ್ರಯೋಜನವೇನು ?

೧೬. ಆದುದರಿಂದ ರೋಗದಿಂದ ಕೂಡಿರುವ ನಮ್ಮ ಗಾಯಗಳನ್ನು ಪರೀಕ್ಷಿಸಿ ವಾಸಿಮಾಡು. ನೀನು ಪುಣ್ಯವನ್ನು ಅಪೇಕ್ಷಿಸುವವನಾದರೆ ನಮಗೆ ಶುಶ್ರೂಷೆಯನ್ನು ಮಾಡು.

೧೭-೧೮. ಶಿವಶರ್ಮನು ಈ ಮಾತನ್ನು ಹೇಳಲು, ಸೋಮಶರ್ಮನು ಪುನಃ ಅವನನ್ನು ಕುರಿತು ನೀವು ಪುಣ್ಯಭಾಗಿಗಳು, ನಿಮ್ಮ ಸೇವೆಯನ್ನು ಅವಶ್ಯವಾಗಿಯೂ ಮಾಡುತ್ತೇನೆ. ಪಾಪಿಯೂ, ದುಷ್ಟನೂ, ಲೋಭಿಯೂ ಆದ ನಾನು ಏನು ಶುಶ್ರೂಷೆ ಮಾಡಬೇಕೆಂಬುದನ್ನು ತಿಳಿಸಿ ಎಂದನು.

೧೯. ಈರೀತಿ ಸೋಮಶರ್ಮನು ಹೇಳಿ ಮಾತಾಪಿತೃಗಳ ದುಃಖದಲ್ಲಿ ತಾನೂ ದುಃಖಿತನಾಗಿ ಅವರ ಶ್ಲೇಷ್ಮ, ಮಲ, ಮೂತ್ರ ಇವುಗಳನ್ನು ಅಸಹ್ಯಪಟ್ಟುಕೊಳ್ಳದೆ ತೆಗೆದು ಶುದ್ಧಿಮಾಡುತ್ತಿದ್ದನು.

**ಪಾದಪ್ರಕ್ಷಾಳನಂ ಚಕ್ರೇ ಪಾದಸಂವಾಹನಂ ತಥಾ ।**
**ಸ್ನಾನಸ್ಥಾನಾದಿಕಂ ಚಾಪಿ ತಯೋರ್ಭಕ್ತ್ಯಾನ್ವಿತಸ್ಸ್ವಯಂ　　　　॥ ೨೦ ॥**

**ದ್ವಾವೇತೌ ಹಿ ಗುರೂ ವಿಪ್ರಃ ಸೋಮಶರ್ಮಾ ಮಹಾಯಶಾಃ ।**
**ತೀರ್ಥಂ ನಯತಿ ಧರ್ಮಾತ್ಮಾ ಸ್ಕಂಧಮಾರೋಪ್ಯ ಸತ್ತಮಃ　　　　॥ ೨೧ ॥**

**ದ್ವಾವೇತೌ ಹಿ ಸ್ವಹಸ್ತೇನ ಸ್ನಾಪಯಿತ್ವಾ ಸುಮಂಗಲೈಃ ।**
**ಸುಮಂತ್ರೈರ್ವೇದವಿಚ್ಚೈವ ಸ್ನಾನಸ್ಯ ವಿಧಿಪೂರ್ವಕಂ　　　　॥ ೨೨ ॥**

**ತರ್ಪಣಂ ಹಿ ಪಿತೄಣಾಂ ತು ದೇವತಾನಾಂ ತು ಪೂಜನಂ ।**
**ದ್ವಾಭ್ಯಾಮಪಿ ಸ ಧರ್ಮಾತ್ಮಾ ಸ ಕಾರಯತಿ ನಿತ್ಯಶಃ　　　　॥ ೨೩ ॥**

**ಸ್ವಯಂ ಹೋಮಂ ಕರೋತ್ಯಗ್ನೌ ಪಚತ್ಯನ್ನಮನುತ್ತಮಂ ।**
**ಸಂಜ್ಞಾಪಯತಿ ಸುಪ್ರೀತೌ ದ್ವಾವೇತೌ ಚ ಮಹಾಗುರೂ　　　　॥ ೨೪ ॥**

---

೨೦. ಮತ್ತು ಇವನು ಭಕ್ತಿಯಿಂದ ಕೂಡಿ ಅವರ ಕಾಲು ತೊಳೆಯುವುದು, ಕಾಲು ಒತ್ತುವುದು, ಸ್ನಾನಮಾಡಿಸುವುದು, ಬೇರೆಕಡೆ ಎತ್ತಿ ಮಲಗಿಸುವುದು ಮುಂತಾದ ಕೆಲಸಗಳನ್ನು ಸಮಯವರಿತು ಮಾಡುತ್ತಿದ್ದನು.

೨೧. ಅಲ್ಲದೆ ಮಹಾ ಯಶಸ್ವಿಯೂ, ಧರ್ಮಾತ್ಮನೂ ಆದ ಈ ಸೋಮ ಶರ್ಮನು ಜನನೀಜನಕರನ್ನು ಹೆಗಲಮೇಲೆ ಕೂರಿಸಿಕೊಂಡು ತೀರ್ಥಯಾತ್ರೆ ಮಾಡಿ ಸುತ್ತಿದ್ದನು.

೨೨-೨೩. ಧರ್ಮಾತ್ಮನಾದ ಈತನು ಮಾತಾಪಿತೃಗಳಿಬ್ಬರಿಗೂ ವೇದಮಂತ್ರ ಗಳಿಂದ ಪರಿಪೂರಿತವಾದ ನೀರಿನಿಂದ ತನ್ನ ಕೈಯಿಂದಲೇ ಸ್ನಾನವನ್ನು ಮಾಡಿಸಿ, ಅವರ ಕೈಗಳಿಂದ ಅವರ ಪಿತೃಗಳಿಗೆ ತರ್ಪಣಕೊಡಿಸಿ, ದೇವತೆಗಳಿಗೆ ನಿತ್ಯವೂ ಅವರ ಮೂಲಕವಾಗಿ ಪೂಜೆಯನ್ನು ಮಾಡಿಸುತ್ತಲಿದ್ದನು.

೨೪. ತಾನೇ ನಿತ್ಯವೂ ಅಗ್ನಿಯಲ್ಲಿ ಹೋಮಮಾಡುತ್ತಿದ್ದನು. ಅವರಿಗೆ ಅಡಿಗೆಯನ್ನು ಮಾಡುತ್ತಿದ್ದನು. ಪೂಜ್ಯರಾದ ಅವರನ್ನು ಎಬ್ಬಿಸಿ ಊಟಮಾಡಿಸು ತ್ತಿದ್ದನು.

ಶಯ್ಯಾಸನೇ ಚ ತೌ ವಿಪ್ರಃ ಪ್ರಸ್ವಾಪಯತಿ ನಿತ್ಯಶಃ ।
ವಸ್ತ್ರಪುಷ್ಪಾದಿಕಂ ಸರ್ವಂ ತಾಭ್ಯಾಂ ನಿತ್ಯಂ ಪ್ರಯಚ್ಛತಿ ॥ ೨೫ ॥

ತಾಂಬೂಲಂ ಬಹುಗಂಧಾಢ್ಯಮುಭಯೋರರ್ಪಯೇತ್ಸ ತು ।
ಸೋಮಶರ್ಮಾ ಮಹಾಭಾಗಸ್ತಾಭ್ಯಾಮಪಿ ಚ ಪೂರಯೇತ್ ॥ ೨೬ ॥

ಮೂಲಂ ಪಯಸ್ಸುಭಕ್ಷ್ಯಾದ್ಯಂ ನಿತ್ಯಮೇವ ದದಾತ್ಯಸೌ ।
ತಯೋಸ್ತು ವಾಂಛಿತಂ ನಿತ್ಯಂ ಸೋಮಶರ್ಮಾ ಮಹಾಯಶಾಃ ॥ ೨೭ ॥

ಅನೇನ ಕ್ರಮಯೋಗೇನ ನಿತ್ಯಮೇವ ಪ್ರಸಾದಯೇತ್ ।
ಸೋಮಶರ್ಮಾ ಸುಧರ್ಮಾತ್ಮಾ ಪಿತರೌ ಪರಿಪೂಜಯೇತ್ ॥ ೨೮ ॥

ಸೋಮಶರ್ಮಾಣಮಾಹೂಯ ಪಿತಾ ಕುತ್ಸತಿ ನಿಷ್ಠುರಃ ।
ನಿಂದಿತೈರ್ನಿಷ್ಠುರೈರ್ವಾಕ್ಯೈಸ್ತಾಡಯೇನ್ಮುಷ್ಟಿಭಿಸ್ಸದಾ ॥ ೨೯ ॥

ಕೃತೇ ಕಾರ್ಯೇ ಕೃತೇ ಪುಣ್ಯೇ ನಿತ್ಯಮೇವ ಸುತೇ ಪುನಃ ।
ನ ಕೃತಂ ಶೋಭನಂ ಮಹ್ಯಂ ತ್ವಯೈವ ಕುಲಪಾಂಸುನಾ ॥ ೩೦ ॥

---

೨೫. ಅವರನ್ನು ನಿತ್ಯವೂ ಹಾಸಿಗೆಯಲ್ಲಿ ಮಲಗಿಸುವುದು, ಸುಖಾಸನದಲ್ಲಿ ಕುಳ್ಳಿರಿಸುವುದು ಇವುಗಳನ್ನೆಲ್ಲಾ ಮಾಡುತ್ತಿದ್ದನು ಮತ್ತು ಅವರಿಗೆ ಉಡಿಗೆ, ಹೂವು ಇವುಗಳನ್ನೂ ಸಹ ತಂದುಕೊಡುತ್ತಿದ್ದನು.

೨೬. ಅವರಿಬ್ಬರಿಗೂ ಸುವಾಸಿತವಾದ ತಾಂಬೂಲವನ್ನು ಅರ್ಪಿಸುತ್ತಿದ್ದನು. ಈರೀತಿಯಾಗಿ ಸೋಮಶರ್ಮನು ಅವರ ಇಷ್ಟವನ್ನು ತಪ್ಪದೆ ನಡೆಸುತ್ತಿದ್ದನು.

೨೭. ಅವರಿಗೆ ಬೇಕಾಗುವ ಗೆಡ್ಡೆ, ಗೆಣಸು, ಹಾಲು ಒಳ್ಳೆಯ ತಿಂಡಿ ಇವುಗಳನ್ನು ನಿತ್ಯವೂ ತಂದುಕೊಡುತ್ತಿದ್ದನು.

೨೮-೨೯. ಸೋಮಶರ್ಮನು ಈರೀತಿಯಾಗಿ ಅವರನ್ನು ಸಂತೋಷಪಡಿಸಿ ಅವರ ಉಪಚಾರವನ್ನು ನಿತ್ಯವೂ ಮಾಡುತ್ತಿದ್ದನು. ಹೀಗಿದ್ದರೂ ಅವನ ತಂದೆಯು ಸೋಮಶರ್ಮನನ್ನು ಕರೆದು ನಿತ್ಯವೂ ಕೆಟ್ಟದಾದ ಮತ್ತು ಕಟುವಾದ ವಾಕ್ಯಗಳಿಂದ ಬಯ್ಯುತ್ತಿದ್ದನು. ಮುಷ್ಟಿಯಿಂದ ಹೊಡೆಯುತ್ತಲೂ ಇದ್ದನು.

೩೦. ಈ ಪುತ್ರನು ನಿತ್ಯವೂ ತಂದೆಗೋಸ್ಕರ ಎಷ್ಟೋ ಒಳ್ಳೇಕೆಲಸಗಳನ್ನು ಮಾಡುತ್ತಿದ್ದರೂ ತಂದೆಯು ಮಗನನ್ನು ಕುರಿತು ಕುಲಕಂಟಕನಾದ ನೀನು ನನಗೆ ಏನು ಒಳ್ಳೆಯಕೆಲಸವನ್ನು ಮಾಡಿದೆ ಎಂದು ಜರಿಯುತ್ತಿದ್ದನು.

**ಏವಂ ನಾನಾವಿಧೈರ್ವಾಕ್ಯೈರ್ನಿಷ್ಠುರೈರ್ದುಃಖದಾಯಕೈಃ ।**
**ಅತಾಡಯದ್ದಂಡಘಾತೈಃ ಶಿವಶರ್ಮಾ ಸದಾತುರಃ ॥ ೩೧ ॥**

**ಏವಂ ಕೃತೇಽಪಿ ಧರ್ಮಾತ್ಮಾ ನೈವ ಕುಪ್ಯತಿ ಕರ್ಹಿಚಿತ್ ।**
**ಮನಸಾ ವಚಸಾ ಚೈವ ಕರ್ಮಣಾ ತ್ರಿವಿಧೇನ ಚ ॥ ೩೨ ॥**

**ಸಂತುಷ್ಟಸ್ಸರ್ವದಾ ಸೋಽಪಿ ಪಿತರಂ ಪರಿಪೂಜಯೇತ್ ।**
**ಯಜ್ಞಶರ್ಮಾ ಶಿವಶರ್ಮಾ ಚ ಚರಿತಂ ಸ್ವೀಯಮೀಕ್ಷತೇ ॥ ೩೩ ॥**

**ಅಮೃತಂ ಮತ್ಕೃತೇ ಚಾಽಪಿ ಹ್ಯಾನೀತಂ ವಿಷ್ಣುಶರ್ಮಣಾ ।**
**ಪುಣ್ಯಯುಕ್ತ ಸ್ಸ ಧರ್ಮಾತ್ಮಾ ಪಿತೃಭಕ್ತಿಪರಸ್ಸದಾ ॥ ೩೪ ॥**

**ಏವಂ ಬಹುತಿಥೇ ಕಾಲೇ ಶತಸಂಖ್ಯೇ ಗತೇ ಸತಿ ।**
**ಶಿವಶರ್ಮಾಽಪಿ ಪಶ್ಯೈವಂ ಭಕ್ತಿಂ ದೃಷ್ಟ್ವಾ ವಿಚಿಂತ್ಯ ವೈ ॥ ೩೫ ॥**

**ಮಯಾ ವೈ ಪೂರ್ವಮಿತ್ಯುಕ್ತಂ ಸುಪುತ್ರಂ ಯಜ್ಞಸಂಜ್ಞಕಂ ।**
**ಮಾತೃಖಂಡಾನಿ ಮಾಪುತ್ರ ಯತ್ರ ತತ್ರ ಕ್ಷಿಪಸ್ವ ಹಿ ॥ ೩೬ ॥**

---

೩೧. ಈರೀತಿಯಾಗಿ ಶಿವಶರ್ಮನು ಮಗನನ್ನು ದುಃಖಪ್ರದವಾದ ಕೆಟ್ಟ ವಾಕ್ಯಗಳಿಂದ ತಿರಸ್ಕರಿಸುತ್ತಲೂ, ದೊಣ್ಣೆಯಿಂದ ಹೊಡೆಯುತ್ತಲೂ ಇದ್ದನು.

೩೨-೩೩. ತಂದೆಯು ಇಷ್ಟು ಹಿಂಸಿಸಿದರೂ ಧರ್ಮಾತ್ಮನಾದ ಮಗನು ಒಂದು ಸಲವಾದರೂ ಕೋಪಿಸಿಕೊಳ್ಳಲಿಲ್ಲ. ಮನಸ್ಸು, ಮಾತು, ಕೆಲಸ ಇದನ್ನೆಲ್ಲಾ ನೋಡಿ ಶಿವಶರ್ಮನು ತನ್ನ ವಿಚಾರದಲ್ಲಿ ಮಗನಿಗೆ ಎಷ್ಟು ಶ್ರದ್ಧೆ ಇರುವುದೆಂಬುದನ್ನು ತಿಳಿದುಕೊಂಡನು.

೩೪. ಪಿತೃಭಕ್ತನಾದ ವಿಷ್ಣುಶರ್ಮನು ನನಗೋಸ್ಕರ ಅಮೃತವನ್ನು ತಂದನು ಅವನೇ ಪುಣ್ಯವಂತನು. ಧರ್ಮಾತ್ಮನು.

೩೫-೩೬. ಈರೀತಿ ಅನೇಕದಿನಗಳು ಕಳೆದಮೇಲೆ ಶಿವಶರ್ಮನು ಮಗನ ಪಿತೃಭಕ್ತಿಯನ್ನು ತಿಳಿದವನಾಗಿ ಹೀಗೆ ಆಲೋಚಿಸಿದನು. ನಾನು ಪೂರ್ವದಲ್ಲಿ ಯಜ್ಞಶರ್ಮನನ್ನು ಕುರಿತು ನಿಮ್ಮ ತಾಯಿಯ ಅವಯವಗಳನ್ನು ಕತ್ತರಿಸಿ ಎಸೆದು

ಮದ್ವಾಕ್ಯಂ ಪಾಲಿತಂ ತೇನ ಕೃತಾ ನ ಮಾತರಿ ಕೃಪಾ ।
ಏತತ್ಸ್ವಲ್ಪತರಂ ದುಃಖಂ ನಿರ್ಜೀವೇ ಘಾತಮಿಚ್ಛತಾ ॥ ೩೭ ॥

ಸಾಹಸಂ ತು ಕೃತಂ ತೇನ ಪುತ್ರೇಣ ವೇದಶರ್ಮಣಾ ।
ಅಸ್ಮಾಧಿಕಮಹಂ ಮನ್ಯೇ ಯಶೋಽಯಂ ಚಲತೇ ನ ಚ ॥ ೩೮ ॥

ನಿಮೇಷಮಾತ್ರಮೇವಾಽಪಿ ಸಾಹಸಂ ಕಾರಯೇತ್ಪುನಃ ।
ಅಸ್ಮಾಧಿಕಸ್ತು ಸಂಪನ್ನಃ ಪ್ರಭಾವಸ್ತಪಸಃ ಪರಃ ॥ ೩೯ ॥

ನಿತ್ಯಂ ಸಮಾರಾಧನೇಽಪಿ ಹ್ಯಧಿಕಂ ಚಾಽಸ್ಯ ದೃಶ್ಯತೇ ।
ತಸ್ಮಾದಸ್ಯ ಪರೀಕ್ಷಾ ಚ ಸಮಯೇ ತಪಸಃ ಕೃತಾ ॥ ೪೦ ॥

ಭಕ್ತಿಭಾವಾತ್ತಥಾ ಸತ್ಯಾನ್ನೈವ ಪುತ್ರಃ ಪ್ರಣಶ್ಯತಿ ।
ಮಾಯಯಾ ಚ ನಿಜಾಂಗೇಽಪಿ ಕುಷ್ಠರೋಗೋ ನಿದರ್ಶಿತಃ ॥ ೪೧ ॥

---

ಬಿಡು ಎಂದು ಹೇಳಿದೆನು. ಅವನು ತಾಯಿಯಲ್ಲಿ ಕೃಪೆಯಿಡದೆ ದೇಹವನ್ನು ಕತ್ತರಿಸಿ ನನ್ನ ಮಾತನ್ನು ನಡೆಸಿದನು. ಪ್ರಾಣವಿಲ್ಲದ ದೇಹವನ್ನು ಅವನು ಕತ್ತರಿಸಿದ ಪ್ರಯುಕ್ತ ಅಷ್ಟು ದುಃಖವಾಗಲಿಲ್ಲ.

೩೮. ಎರಡನೆಯವನಾದ ವೇದಶರ್ಮನಾದರೋ ನಾನಪೇಕ್ಷಿಸಿದ ಸ್ತ್ರೀಯನ್ನು ತಂದು ಒಪ್ಪಿಸುವ ಸಾಹಸಕಾರ್ಯವನ್ನು ಮಾಡಿದನು. ಅಂತಹ ವೇದಶರ್ಮನಿಗಿಂತಲೂ ಸೋಮಶರ್ಮನೇ ಹೆಚ್ಚೆಂದು ತಿಳಿಯುತ್ತೇನೆ. ಏಕೆಂದರೆ ಇವನು ಎಷ್ಟು ಕಷ್ಟಬಂದರೂ ಹೆದರದೆ ಇರುವನು, ಇರಲಿ.

೩೯. ಸೋಮಶರ್ಮನನ್ನು ಇನ್ನೂ ಪರೀಕ್ಷಿಸುವೆನು. ಒಂದುನಿಮಿಷಕಾಲದೊಳಗೆ ನಾನು ಹೇಳಿದ ಕಾರ್ಯವನ್ನು ಮಾಡುವನೋ ಇಲ್ಲವೋ? ಹಾಗೆ ಕಾರ್ಯವನ್ನು ಸಾಧಿಸಿದರೆ ಅವನಿಗಿಂತಲೂ ಚಿಕ್ಕವನ ತಪಃಪ್ರಭಾವವೇ ಹೆಚ್ಚೆಂದು ಹೇಳಬಹುದು.

೪೦. ಅವನಿಗಿಂತಲೂ ಈತನಿಗೆ ನಮ್ಮನ್ನು ನಿತ್ಯವೂ ಸೇವಿಸುವುದರಲ್ಲಿ ಹೆಚ್ಚಾದ ಆಸಕ್ತಿ ಇರುವುದು. ಆದುದರಿಂದ ಇವನ ಪರೀಕ್ಷೆಯಾಯಿತು.

೪೧. ಮತ್ತು ಇವನ ಭಕ್ತಿಯೂ ಸತ್ಯಪರಿಪಾಲನೆಯೂ ಅಸದೃಶವಾಗಿರುವುದು. ಇದರಲ್ಲಿ ಇವನು ಎಂದಿಗೂ ಭ್ರಷ್ಟನಾಗುವುದಿಲ್ಲ. ನನ್ನ ಮಾಯೆಯಿಂದ ನನ್ನ ದೇಹದಲ್ಲಿ ಕುಷ್ಟರೋಗವನ್ನು ಅವನಿಗೆ ತೋರಿಸಿದೆನು.

ಶ್ಲೇಷ್ಮಮೂತ್ರಮಲಾನಾಂ ಚ ಘೃಣಾ ನ್ಯೈವ ಕರೋತಿ ಚ ।
ವ್ರಣಾಂಭೋದಯತೇ ನಿತ್ಯಂ ಸ್ವಹಸ್ತೇನ ಮಹಾಯಶಾಃ ॥ ೪೨ ॥

ಅಂಗಸಂವಾಹನಂ ತದ್ವತ್ಕರೋತಿ ಚ ಮಹಾಮತಿಃ ।
ದುಸ್ಸಹಂ ವಚನಂ ಮಹ್ಯಂ ದಾರುಣಂ ಸಹತೇ ತದಾ ॥ ೪೩ ॥

ಕುತ್ಸನೇ ತಾಡನೇ ಚೈವ ಸದಾ ಮಿಷ್ಟಪ್ರವಾಚಕಃ ।
ಏವಂ ದುಃಖಸಮಾಚಾರೋ ಮಮ ಪುತ್ರೋ ಮಹಾಮತಿಃ ॥ ೪೪ ॥

ದುಃಖಾನಾಂ ಸಾಗರೇ ಮಗ್ನಃ ಬಹುಕ್ಲೇಶೈಸ್ತು ಕ್ಲೇಶಿತಃ ।
ಅಪನೇಷ್ಯಾಮ್ಯಹಂ ದುಃಖಂ ವಿಷ್ಣೋಶ್ಚೈವ ಪ್ರಸಾದತಃ ॥ ೪೫ ॥

ಚಿಂತಯಿತ್ವಾ ಚಿರಂ ವಿಪ್ರಃ ಶಿವಶರ್ಮಾ ಮಹಾಮತಿಃ ।
ಪುನರ್ಮಾಯಾಂ ಚಕಾರಾಽಥ ಕುಂಭಾದಪಹೃತಂ ಪಯಃ ।
ಪಶ್ಚಾತ್ತಂ ಚ ಸಮಾಹೂಯ ಸೋಮಶರ್ಮಾಣಮಬ್ರವೀತ್ ॥ ೪೬ ॥

---

೪೨. ಶ್ಲೇಷ್ಮ, ಮಲ, ಮೂತ್ರಗಳನ್ನು ತೆಗೆಯುವುದರಲ್ಲಿ ಸ್ವಲ್ಪವೂ ಬೇಸರ ಪಡಲಿಲ್ಲ. ಮಹಾ ಯಶಸ್ವಿಯಾದ ಇವನು ತನ್ನ ಕೈಯಿಂದಲೆ ಗಾಯಗಳನ್ನು ತೊಳೆಯುತ್ತಿದ್ದನು.

೪೩. ಆ ಬುದ್ಧಿಶಾಲಿಯು ನನಗೆ ಕೈಕಾಲುಗಳನ್ನು ಒತ್ತುತ್ತಿದ್ದನು. ನಾನು ಆಡುವ ಕಠಿಣವಾದ ಮಾತುಗಳನ್ನೂ ಸಹ ಸಹಿಸುತ್ತಾನೆ.

೪೪. ನಾನು ಅವನನ್ನು ನಿಂದಿಸಿದರೂ ಹೊಡೆದರೂ ಅವನು ಒಳ್ಳೆಯ ಮಾತುಗಳನ್ನೇ ಆಡುತ್ತಾನೆ. ಈರೀತಿಯಾಗಿ ಮಹಾ ಬುದ್ಧಿಯುಳ್ಳ ಇವನು ದುಃಖ ಭಾಗಿಯಾಗಿರುವನು.

೪೫. ದುಃಖಸಾಗರದಲ್ಲಿ ಮುಳುಗಿ ಅನೇಕ ಕಷ್ಟಗಳಿಂದ ಪೀಡಿತನಾಗಿದ್ದಾನೆ. ಆದಪ್ರಯುಕ್ತ ಮಹಾವಿಷ್ಣುವಿನ ಅನುಗ್ರಹದಿಂದ ಇವನ ದುಃಖವನ್ನು ಹೋಗಲಾಡಿಸುತ್ತೇನೆ.

೪೬. ಹೀಗೆಂದು ಆ ಬ್ರಾಹ್ಮಣನು ಆಲೋಚಿಸಿ ಮಾಯೆಯಿಂದ ಕುಂಭದಲ್ಲಿರುವ ಅಮೃತವನ್ನು ಕಾಣದಂತೆ ಮಾಡಿ ಆಮೇಲೆ ಮಗನನ್ನು ಕರೆದು ಹೇಳಿದನು.

**ತವ ಹಸ್ತೇ ಮಯಾ ದತ್ತಮಮೃತಂ ವ್ಯಾಧಿನಾಶನಂ ।**
**ತನ್ಮೇ ಶೀಘ್ರಂ ಪ್ರಯಚ್ಛಸ್ವ ಯಥಾ ಪಾನಂ ಕರೋಮ್ಯಹಂ ।**
**ಯೇನ ನೀರುಗ್ಭವಾಮ್ಯದ್ಯ ಪ್ರಸಾದಾದ್ವಿಷ್ಣುಶರ್ಮಣಃ ॥ ೪೭ ॥**

**ಏವಮುಕ್ತೇ ತದಾ ವಾಕ್ಯೇ ಋಷಿಣಾ ಶಿವಶರ್ಮಣಾ ।**
**ಸಮುತ್ಥಾಯ ತ್ವರಾಯುಕ್ತಃ ಸೋಮಶರ್ಮಾ ಕಮಂಡಲುಂ ॥ ೪೮ ॥**

**ತಂ ಚ ರಿಕ್ತಂ ತತೋ ದೃಷ್ಟ್ವಾ ಹ್ಯಮೃತೇನ ವಿನಾ ಕೃತಂ ।**
**ಕಸ್ಯ ಪಾಪಸ್ಯ ವೈ ಕರ್ಮ ಕೇನ ಮೇ ವಿಪ್ರಿಯಂ ಕೃತಂ ॥ ೪೯ ॥**

**ಇತಿ ಚಿಂತಾಪರೋ ಭೂತ್ವಾ ಸೋಮಶರ್ಮಾ ಸುದುಃಖಿತಃ ।**
**ಪಿತುರಗ್ರೇ ಚ ವೃತ್ತಾಂತಂ ಕಥಯಿಷ್ಯಾಮ್ಯಹಂ ಯದಾ ॥ ೫೦ ॥**

**ಕೋಪಂ ಪ್ರಯಾಸ್ಯತಿ ತದಾ ಗುರುರ್ಮೇ ವ್ಯಾಧಿಪೀಡಿತಃ ।**
**ಸುಚಿರಂ ಚಿಂತಯಿತ್ವಾ ತು ಸೋಮಶರ್ಮಾ ಮಹಾಮತಿಃ ।**
**ಯದಿ ಮೇ ಸತ್ಯಮಸ್ತೀತಿ ಗುರುಶುಶ್ರೂಷಣಂ ಯದಿ ॥ ೫೧ ॥**

---

೪೭. ರೋಗವನ್ನು ನಾಶಮಾಡಬಲ್ಲ ಅಮೃತವನ್ನು ನಿನ್ನ ಕೈಲಿ ಕೊಟ್ಟಿದ್ದೆ ನಷ್ಟೆ. ಅದನ್ನು ನಾನು ಕುಡಿಯಬೇಕು. ಜಾಗ್ರತೆಯಾಗಿ ತಂದುಕೊಡು. ವಿಷ್ಣು ಶರ್ಮನ ಅನುಗ್ರಹದಿಂದ ರೋಗವನ್ನು ಕಳೆದುಕೊಳ್ಳುತ್ತೇನೆ.

೪೮-೫೦. ಶಿವಶರ್ಮನು ಹೀಗೆ ಹೇಳುತ್ತಲೂ ಸೋಮಶರ್ಮನು ಜಾಗ್ರತೆ ಯಾಗಿ ಎದ್ದು ನೋಡುವಲ್ಲಿ ಕುಂಭದಲ್ಲಿ ಅಮೃತವಿಲ್ಲದೆ ಶೂನ್ಯವಾಗಿದ್ದುದು ಕಂಡು ಬಂತು. ಆಗ ಅದನ್ನು ನೋಡಿ ಇದೇನು, ಯಾವ ದುಷ್ಟನು ಈ ಪಾಪಕೆಲಸವನ್ನು ಮಾಡಿರಬಹುದು? ತಂದೆಯ ಸಮೀಪದಲ್ಲಿ ಈ ವಿಷಯದಲ್ಲಿ ಹೇಳಿದರೆ ಮೊದಲೇ ವ್ಯಾಧಿಪೀಡಿತನಾದ ಅವನು ನನ್ನಮೇಲೆ ಇನ್ನಷ್ಟು ಕೋಪಮಾಡುತ್ತಾನೆ. ಹೀಗೆಂದು ಯೋಚಿಸಿ,

೫೧-೫೩. ನಾನು ಸತ್ಯವನ್ನು ಪರಿಪಾಲನೆಮಾಡುವವನೂ, ಕಪಟವಿಲ್ಲದೆ ಗುರುಶುಶ್ರೂಷೆಯನ್ನು ಮಾಡುವವನೂ, ಇಂದ್ರಿಯನಿಗ್ರಹದಿಂದ ತಪಸ್ಸನ್ನು ಮಾಡು

**ತಪಸ್ತಪ್ತಂ ಮಯಾ ಪೂರ್ವಂ ನಿರ್ವ್ಯಲೀಕೇನ ಚೇತಸಾ ।**
**ದಮಶೌಚಾದಿಭಿಸ್ಸತ್ಯಂ ಧರ್ಮಮೇವ ಪ್ರಪಾಲಿತಂ ।**
**ತದಾ ಘಟೋಽಮೃತಯುತೋ ಭವತ್ವೇಷ ನ ಸಂಶಯಃ　　॥ ೫೨ ॥**

**ಯಾವದೇವಂ ಮಹಾಭಾಗಶ್ಚಿಂತಯಿತ್ವಾ ವಿಲೋಕಯೇತ್ ।**
**ತಾವಚ್ಚಾಮೃತಪೂರ್ಣಸ್ತು ಪುನರೇವಾಭವದ್ಘಟಃ　　॥ ೫೪ ॥**

**ತಂ ದೃಷ್ಟ್ವಾ ಹರ್ಷಸಂಯುಕ್ತಃ ಸೋಮಶರ್ಮಾ ಮಹಾಯಶಾಃ ।**
**ಗತ್ವಾ ಗುರುಂ ನಮಸ್ಕೃತ್ಯ ಕುಂಭಮಾದಾಯ ಸತ್ವರಂ　　॥ ೫೪ ॥**

**ಗೃಹಾಣ ತ್ವಂ ಪಿತಶ್ಚೇಮಂ ಪಯಃಕುಂಭಂ ಸಮಾಗತಂ ।**
**ಪಾನಂ ಕುರು ಮಹಾಭಾಗ ಗದಾನ್ಮುಕ್ತೋ ಭವಾಽಚಿರಂ　　॥ ೫೫ ॥**

**ಏತದ್ವಾಕ್ಯಂ ಮಹಾಪುಣ್ಯಂ ಸತ್ಯಧರ್ಮಾರ್ಥಕಂ ಪುನಃ ।**
**ಶಿವಶರ್ಮಾ ಸುತಸ್ಯಾಪಿ ಶ್ರುತ್ವಾ ಚ ಮಧುರಾಕ್ಷರಂ ।**
**ಹರ್ಷೇಣ ಮಹತಾವಿಷ್ಟ ಇದಂ ವಚನಮಬ್ರವೀತ್　　॥ ೫೬ ॥**

**ಇತಿ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಶಿವಶರ್ಮೋಪಾಖ್ಯಾನೇ ಚತುರ್ಥೋಽಧ್ಯಾಯಃ**

---

ವವನೂ, ಧರ್ಮಾಚರಣೆಯಲ್ಲಿ ಆಸಕ್ತನೂ ಆಗಿದ್ದಲ್ಲಿ, ಈ ಕುಂಭವು ಮುಂಚಿನಂತೆ ಅಮೃತದಿಂದ ತುಂಬಲ್ಪಡಲಿ ಎಂದನು.

೫೩. ಹೀಗೆ ಹೇಳಿ ನೋಡುವಷ್ಟರಲ್ಲಿ ಆ ಘಟವು ಅಮೃತದಿಂದ ತುಂಬಿತ್ತು.

೫೪-೫೫. ಮಹಾಯಶಸ್ವಿಯಾದ ಸೋಮಶರ್ಮನು ಸಂತೋಷದಿಂದ ಅಮೃತಕುಂಭವನ್ನು ತೆಗೆದುಕೊಂಡು ತಂದೆಗೆ ನಮಸ್ಕರಿಸಿ ಎಲೈ ತಂದೆಯೇ, ಈ ಅಮೃತ ಕುಂಭವನ್ನು ತಂದಿದ್ದೇನೆ ಅದನ್ನು ತೆಗೆದುಕೋ. ಯಥೇಷ್ಟವಾಗಿ ಅಮೃತಪಾನ ವನ್ನು ಮಾಡಿ, ಕುಷ್ಠರೋಗದಿಂದ ಬಿಡುಗಡೆ ಹೊಂದು, ಎಂದನು.

೫೬. ಶಿವಶರ್ಮನು ಸತ್ಯ ಧರ್ಮ ಅರ್ಥಗಳಿಂದ ಕೂಡಿದ ಇಂಪಾದ ಮಗನ ಮಾತನ್ನು ಕೇಳಿ ಬಹು ಸಂತೋಷದಿಂದ ಈ ಮಾತನ್ನು ಹೇಳಿದನು.

ಇಲ್ಲಿಗೆ ಪದ್ಮಪುರಾಣದ ಭೂಮಿಖಂಡದಲ್ಲಿ ಶಿವಶರ್ಮನ ಕಥೆಯಲ್ಲಿ ನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ಪಂಚಮೋಽಧ್ಯಾಯಃ

॥ ಶಿವಶರ್ಮೋವಾಚ ॥

ತಪಸಾ ದಮಶೌಚಾಭ್ಯಾಂ ಗುರುಶುಶ್ರೂಷಯಾ ತಥಾ ।
ಭಕ್ತ್ಯಾ ಭಾವೇನ ತುಷ್ಟೋಽಸ್ಮಿ ತವಾದ್ಯ ಚ ಸುಪುತ್ರಕೆ ।
ತ್ಯಜಸ್ವ ವೈಕೃತಂ ರೂಪಂ ಮತ್ತಸ್ಸುಖಮವಾಪ್ನುಹಿ ॥ ೧ ॥

ಏವಮುಕ್ತ್ವಾ ಸುತಂ ವಿಪ್ರೋ ದರ್ಶಯಾಮಾಸ ತಾಂ ತನುಂ ।
ಯಥಾ ಪೂರ್ವಂ ಸ್ಥಿತೌ ತೌ ತು ತಥಾಽಸೌ ದೃಷ್ಟವಾನ್ ಗುರೂ ॥ ೨ ॥

ದೀಪ್ತಿಮಂತೌ ಮಹಾತ್ಮಾನೌ ಸೂರ್ಯಬಿಂಬೋಪಮಾಪ್ರಭೌ ।
ನನಾಮ ಪಾದೌ ಸದ್ಭಕ್ತ್ಯಾ ಹ್ಯುಭಯೋಸ್ತು ಮಹಾತ್ಮನೋಃ ॥ ೩ ॥

---

## ಐದನೆಯ ಅಧ್ಯಾಯವು.

೧. ಶಿವಶರ್ಮನು ಹೇಳಿದನು :—" ತಪಸ್ಸು, ಇಂದ್ರಿಯನಿಗ್ರಹ, ಸದಾಚಾರ, ಗುರುಶುಶ್ರೂಷೆ ಮತ್ತು ಪಿತೃಭಕ್ತಿ, ಇವುಗಳಿಂದ ನಿನ್ನ ವಿಷಯದಲ್ಲಿ ಈಗ ನಾನು ಸಂತೋಷಗೊಂಡಿರುವೆನು. ನಿನ್ನ ದುಃಖವನ್ನು ತ್ಯಜಿಸು. ನನ್ನಿಂದ ಸೌಖ್ಯವನ್ನು ಹೊಂದು."

೨. ಹೀಗೆಂದು ಶಿವಶರ್ಮನು ಮಗನಿಗೆ ಹೇಳಿ ತನ್ನ ದಿವ್ಯಶರೀರವನ್ನು ತೋರಿಸಿದನು. ಪೂರ್ವದಲ್ಲಿ ಯಾವರೀತಿ ಇತ್ತೋ ಹಾಗಿರುವ ತಾಯಿತಂದೆಗಳನ್ನು ಸೋಮಶರ್ಮನು ನೋಡಿದನು.

೩. ಬಳಿಕ ಸೂರ್ಯಮಂಡಲದಂತೆ ಕಾಂತಿಯುಳ್ಳ ಮಹಾತ್ಮರಾದ ತಾಯಿ ತಂದೆಗಳ ಪಾದಗಳಿಗೆ ಭಕ್ತಿಯಿಂದ ನಮಸ್ಕರಿಸಿದನು.

ತತಸ್ಸುತಂ ಸ ಸಂಭಾಷ್ಯ ಹರ್ಷೇಣ ಮಹತಾನ್ವಿತಃ ।
ವಿಷ್ಣೋಃ ಪ್ರಸಾದಾದ್ಧರ್ಮಾತ್ಮಾ ಭಾರ್ಯಯಾ ಸಹ ಕೇಶವಂ ॥ ೪ ॥

ಜಗಾಮ ನಿಜಪುಣ್ಯೈಶ್ಚ ಯೋಗಾಭ್ಯಾಸೇನ ಸತ್ತಮಃ ।
ಪ್ರವಿಷ್ಟೋ ವೈಷ್ಣವಂ ಧಾಮ ಸ ಮುನಿರ್ದುರ್ಲಭಂ ಪದಂ ॥ ೫ ॥

ನ ತ್ವನ್ಯೈಃ ಪ್ರಾಪ್ಯತೇ ಪುಣ್ಯೈಸ್ತಪೋಭಿರ್ಮುಕ್ತಿದಂ ಪದಂ ।
ವಿಷ್ಣೋಸ್ತು ಚಿಂತನೈರ್ನ್ಯಾಸಧ್ಯಾನಜ್ಞಾನೈಸ್ತವೈಸ್ತಥಾ ॥ ೬ ॥

ನ ದಾನೈಸ್ತೀರ್ಥಯಾತ್ರಾಭಿರ್ದೃಶ್ಯತೇ ಮಧುಸೂದನಃ ।
ಸಮಾಧಿಜ್ಞಾನಯೋಗೇನ ದೃಶ್ಯತೇ ಪರಮಂ ಪದಂ ।
ಮಹಾಯೋಗೈರ್ಯಥಾ ವಿಪ್ರಃ ಪ್ರವಿಷ್ಟೋ ವೈಷ್ಣವೀಂ ತನುಂ ॥ ೭ ॥

॥ ಸೂತ ಉವಾಚ ॥

ತತಸ್ತತ್ರ ತಪಸ್ತೇಪೇ ಸೋಮಶರ್ಮಾ ಮಹಾದ್ಯುತಿಃ ।
ಅಶ್ಮಲೋಷ್ಟಸಮಂ ಮೇನೇ ಕಾಂಚನಂ ಭೂಷಣಂ ಪುನಃ ॥ ೮ ॥

---

೪-೫. ಅನಂತರ ಶಿವಶರ್ಮನು ಮಗನನ್ನು ಮಾತನಾಡಿಸಿ ಹೆಚ್ಚಾದ ಆನಂದ ದಿಂದ ಕೂಡಿ ಪತ್ನೀಸಮೇತನಾಗಿ ತನ್ನ ಪುಣ್ಯದಿಂದ ಅಭ್ಯಸ್ತವಾದ ಯೋಗಬಲದಿಂದಲೂ ಭಗವಂತನ ಅನುಗ್ರಹದಿಂದಲೂ ಇತರರಿಂದ ಹೊಂದಲಸಾಧ್ಯವಾದ ವಿಷ್ಣು ಲೋಕವನ್ನು ಸೇರಿದನು.

೬. ಆ ವಿಷ್ಣುವಿನ ಸ್ಥಾನವಾದರೋ ಬೇರೆ ಯಾವವಿಧವಾದ ಪುಣ್ಯ, ತಪಸ್ಸು ಮೊದಲಾದವುಗಳಿಂದ ಹೊಂದಲು ಸಾಧ್ಯವಿಲ್ಲ. ವಿಷ್ಣುವಿನ ಧ್ಯಾನ, ಮನನ, ಸ್ತೋತ್ರಗಳಿಂದ ಮಾತ್ರ ಅಂತಹ ಪರಮಪದವನ್ನು ಹೊಂದಬಹುದು. ಇಂತಹ ಮುಕ್ತಿಸ್ಥಾನವನ್ನು ಆ ಶಿವಶರ್ಮನು ಹೊಂದಿದನು.

೭. ದಾನ ತೀರ್ಥಯಾತ್ರೆಗಳಿಂದಲೂ ಭಗವಂತನನ್ನು ನೋಡುವುದಕ್ಕಾಗುವುದಿಲ್ಲ. ಸಮಾಧಿಜ್ಞಾನಯೋಗಬಲದಿಂದ ಮಾತ್ರ ಆ ಶ್ರೇಷ್ಠವಾದ ಸ್ಥಾನವು ಕಾಣಲ್ಪಡುವುದು. ಅಂಥಾ ಮಹಾಯೋಗದಿಂದ ವಿಷ್ಣುಸ್ಥಾನವನ್ನು ಹೊಕ್ಕನು.

೮. ಆಮೇಲೆ ಅಲ್ಲಿ ಸೋಮಶರ್ಮನು ದಿವ್ಯ ತೇಜಸ್ಸಿನಿಂದ ಬೆಳಗುತ್ತಾ ತಪಸ್ಸನ್ನಾಚರಿಸುತ್ತಿದ್ದನು. ವೈರಾಗ್ಯದಿಂದ ಚಿನ್ನದ ಆಭರಣಗಳನ್ನು ಮಣ್ಣುಹೆಂಟೆಗೆ ಸಮಾನವನ್ನಾಗಿ ಭಾವಿಸಿದನು.

ಜಿತಾಽಹಾರಸ್ಸ ಧರ್ಮಾತ್ಮಾ ವಿಕ್ರಿಯಾಪರಿವರ್ಜಿತಃ ।
ಸ ಸರ್ವಾನ್ವಿಷಯಾಂಸ್ತ್ಯಕ್ತ್ವಾ ಏಕಾಂತಮಪಿ ಸೇವತೇ ॥ ೯ ॥

ಯೋಗಾಸನಸಮಾರೂಢೋ ನಿರಾಶೋ ನಿಷ್ಪರಿಗ್ರಹಃ ।
ತಸ್ಯ ವೇಲಾ ತು ಸಂಪ್ರಾಪ್ತಾ ಮೃತ್ಯುಕಾಲಸ್ಯ ವೈ ತದಾ ॥ ೧೦ ॥

ಆಗತಾ ದಾನವಾ ವಿಪ್ರಂ ಸೋಮಶರ್ಮಾಣಮಂತಿಕೇ ।
ಮೃತ್ಯುಕಾಲೇ ತು ಸಂಪ್ರಾಪ್ತೇ ಪ್ರಾಣಯಾತ್ರಾಪ್ರವರ್ತಿಕೇ ॥ ೧೧ ॥

ಶಾಲಗ್ರಾಮೇ ಮಹಾಕ್ಷೇತ್ರೇ ಋಷೀಣಾಂ ಮಾನವರ್ಧನೇ ।
ಕೇಚಿದ್ವದಂತಿ ವೈ ದೈತ್ಯಾಃ ಕೇಚಿದ್ವದಂತಿ ದಾನವಾಃ ॥ ೧೨ ॥

ಏವಂ ವಿಧೋ ಮಹಾನ್ ಶಬ್ದಃ ಕರ್ಣರಂಧ್ರಗತಸ್ತದಾ ।
ತಸ್ಯೈವ ವಿಪ್ರವರ್ಯಸ್ಯ ಸುಚಿರಾತ್ಸೋಮಶರ್ಮಣಃ ॥ ೧೩ ॥

ಜ್ಞಾನಧ್ಯಾನವಿಲಗ್ನಸ್ಯ ಪ್ರವಿಷ್ಟಂ ದೈತ್ಯಜಂ ಭಯಂ ।
ತೇನ ಧ್ಯಾನೇನ ತಸ್ಯಾಪಿ ದೈತ್ಯಭೂತೇನ ವೈ ತದಾ ॥ ೧೪ ॥

ಸತ್ವರಂ ಚ ಗತತಃ ಪ್ರಾಣಾ ಗತಾಸ್ತಸ್ಯ ಮಹಾತ್ಮನಃ ।
ದೈತ್ಯಭಾವೇನ ಸಂಯುಕ್ತಃ ಸ ಹಿ ಮೃತ್ಯುವಶಂ ಗತಃ ॥ ೧೫ ॥

---

೯. ಆಹಾರನಿಯಮವುಳ್ಳ ಆ ಧರ್ಮಿಷ್ಠನು ಎಲ್ಲಾ ವ್ಯವಹಾರಗಳನ್ನೂ ಸರ್ವಸಂಗಗಳನ್ನೂ ತ್ಯಜಿಸಿ ಏಕಾಂತವಾಸಿಯಾಗಿರುತ್ತಿದ್ದನು.

೧೦. ಯೋಗಾಸನದಲ್ಲಿದ್ದುಕೊಂಡು ಆಶಾರಹಿತನಾಗಿ ಪರಿಗ್ರಹಪರಾಙ್ಮುಖನಾದ ಆ ಸೋಮಶರ್ಮನಿಗೆ ಮರಣಕಾಲವು ಪ್ರಾಪ್ತವಾಯಿತು.

೧೧-೧೩. ಋಷಿಗಳಿಗೆ ಮೋಕ್ಷದಾಯಕವಾದ ಸಾಲಗ್ರಾಮಕ್ಷೇತ್ರದಲ್ಲಿ ಈ ಸೋಮಶರ್ಮನಿಗೆ ಅಂತ್ಯಕಾಲವೊದಗಲು ಆಕಾಲಕ್ಕೆ ಸರಿಯಾಗಿ ದಾನವರು ಬಂದರು. ಅವರು ಬಂದದ್ದನ್ನು ನೋಡಿ ಅಲ್ಲಿದ್ದ ಕೆಲವರು ದೈತ್ಯರು ಬಂದರೆಂದೂ ದಾನವರು ಬಂದರೆಂದೂ ದೊಡ್ಡಶಬ್ದದಿಂದ ಕೂಗಲಾಗಿ ಮೃತ್ಯುಮುಖದಲ್ಲಿರುವ ಸೋಮಶರ್ಮನ ಕಿವಿಗೆ ಈ ಶಬ್ದವು ಕೇಳಿಸಿತು.

೧೪-೧೫. ಜ್ಞಾನಯೋಗ ಧ್ಯಾನಯೋಗಗಳಲ್ಲಿ ಮಗ್ನನಾದ ಇವನು ಅವರ ಗಲಾಟೆಯಿಂದ ಬಹಿರ್ಮುಖನಾಗಲು ಆಗ ಇವನಿಗೆ ದೈತ್ಯರ ಭೀತಿಯುಂಟಾಯಿತು. ದೈತ್ಯರ ಸ್ಮರಣದಿಂದಲೇ ಇವನು ಮರಣವನ್ನು ಹೊಂದಿದನು.

**ತಸ್ಮಾದ್ದೈತ್ಯಗೃಹೇ ಜಾತೋ ಹಿರಣ್ಯಕಶಿಪೋಸ್ಸುತಃ ।**
**ದೇವಾಸುರೇ ಮಹಾಯುದ್ಧೇ ನಿಹತಶ್ಚಕ್ರಪಾಣಿನಾ　　　　॥ ೧೬ ॥**

**ಯುಧ್ಯಮಾನೇನ ತೇನಾಪಿ ಪ್ರಹ್ಲಾದೇನ ಮಹಾತ್ಮನಾ ।**
**ಸುದೃಷ್ಟಂ ವಾಸುದೇವತ್ವಂ ವಿಶ್ವರೂಪಸಮನ್ವಿತಂ　　　　॥ ೧೭ ॥**

**ಯೋಗಾಭ್ಯಾಸೇನ ಪೂರ್ವೇಣ ಜ್ಞಾನಮಾಸೀನ್ಮಹಾತ್ಮನಃ ।**
**ಸಸ್ಮಾರ ಪೂರ್ವಕಂ ಸರ್ವಂ ಚರಿತಂ ಶಿವಶರ್ಮಣಃ　　　　॥ ೧೮ ॥**

**ಪ್ರಾಗಹಂ ಸೋಮಶರ್ಮಾಖ್ಯಃ ಪ್ರವಿಷ್ಟೋ ದಾನವೀಂ ತನುಂ ।**
**ಅಸ್ಮಾತ್ಕಾಯಾತ್ಕದಾ ಪುಣ್ಯಂ ಕೇವಲಂ ಧಾಮ ಉತ್ತಮಂ　　　　॥ ೧೯ ॥**

**ಪ್ರಯಾಸ್ಯಾಮಿ ಮಹಾಪುಣ್ಯೈರ್ಜ್ಞಾನಾಖ್ಯೈರ್ಮೋಕ್ಷದಾಯಕೈಃ ।**
**ಸಮರೇ ಸ್ಮರಯತಾ ತೇನ ಪ್ರಹ್ಲಾದೇನ ಮಹಾತ್ಮನಾ　　　　॥ ೨೦ ॥**

**ಏವಂ ವಿಧಾ ಕಥಾ ಪೂರ್ವಂ ಶ್ರೂಯತೇ ದ್ವಿಜಸತ್ತಮಾಃ ।**
**ಏವಂ ತು ಚ ಸಮಾಖ್ಯಾತಂ ಸರ್ವಸಂದೇಹನಾಶನಂ　　　　॥ ೨೧ ॥**

---

೧೬. ಆದುದರಿಂದ ಸೋಮಶರ್ಮನು ದೈತ್ಯರಾಜನಾದ ಹಿರಣ್ಯಕಶಿಪುವಿನ ಮನೆಯಲ್ಲಿ ಅವನಿಗೆ ಮಗನಾಗಿ ಹುಟ್ಟಿದನು. ದೇವಾಸುರಯುದ್ಧದಲ್ಲಿ ಮಹಾವಿಷ್ಣುವಿನಿಂದ ಕೊಲ್ಲಲ್ಪಟ್ಟನು.

೧೭. ಆ ಯುದ್ಧಮಾಡುವಾಗಲೂ ಮಹಾತ್ಮನಾದ ಪ್ರಹ್ಲಾದನಿಗೆ ವಿಶ್ವರೂಪದಿಂದ ಕೂಡಿದ ವಾಸುದೇವನ ಸ್ವರೂಪವು ಚೆನ್ನಾಗಿ ಗೋಚರವಾಯಿತು.

೧೮. ಪ್ರಹ್ಲಾದನಿಗೆ ಪೂರ್ವಜನ್ಮಯೋಗಬಲದಿಂದ ಹಿಂದಿನ ಜನ್ಮದಲ್ಲಿ ನಡೆದ ತನ್ನ ಮತ್ತು ಶಿವಶರ್ಮನ ಚರಿತ್ರೆಯು ಜ್ಞಾಪಕಕ್ಕೆ ಬಂದಿತು.

೧೯-೨೦. ಪೂರ್ವದಲ್ಲಿ ನಾನು ಸೋಮಶರ್ಮನಾಗಿದ್ದು ಆಮೇಲೆ ದಾನವ ಶರೀರವನ್ನು ಹೊಂದಿದೆನು. ಈ ದೇಹವನ್ನು ಬಿಟ್ಟು ಜ್ಞಾನದಿಂದಲೂ ಪುಣ್ಯದಿಂದಲೂ ಯಾವಾಗ ಉತ್ತಮವಾದ ಲೋಕವನ್ನು ಹೊಂದುವೆನೋ ಎಂದು ಪ್ರಹ್ಲಾದನು ರಣರಂಗದಲ್ಲಿ ಸ್ಮರಿಸುತ್ತಿದ್ದನು.

೨೧. ಎಲೈ ವಿಪ್ರರೇ, ಈರೀತಿಯಾದ ಕಥೆ ಮೊದಲಿಂದಲೂ ಪ್ರಸಿದ್ಧವಾಗಿರುವುದು. ಸಮಸ್ತ ಸಂಶಯನಿವಾರಕವಾದ ಈ ಕಥೆಯನ್ನು ನಿಮಗೂ ಹೇಳಿರುವೆನು.

ಪ್ರಹ್ಲಾದೇ ನಿಹತೇ ಸಂಖ್ಯೇ ದೇವದೇವೇನ ವಿಷ್ಣುನಾ ।
ರುರುದೇ ಕಮಲಾ ಸಾ ತು ಹತಪುತ್ರಾ ಚ ಕಾಮಿನೀ ॥ ೨೨ ॥

ಪ್ರಹ್ಲಾದಸ್ಯ ತು ಯಾ ಮಾತಾ ಹಿರಣ್ಯಕಶಿಪೋಃ ಪ್ರಿಯಾ ।
ಪ್ರಹ್ಲಾದಸ್ಯ ಮಹಾಶೋಕೈರ್ದಿವಾ ರಾತ್ರೌ ಪ್ರಶೋಚತಿ ॥ ೨೩ ॥

ಪತಿವ್ರತಾಂ ಮಹಾಭಾಗಾಮಾಗತ್ಯ ಭಗವತ್ಪ್ರಿಯಃ ।
ರುದಮಾನಾ ದಿವಾ ರಾತ್ರೌ ನಾರದಸ್ತಾಮುವಾಚ ಹ ॥ ೨೪ ॥

ಮಾ ಶುಚಸ್ತ್ವಂ ಮಹಾಭಾಗೇ ಪುತ್ರಾರ್ಥಂ ಪುಣ್ಯಭಾಗಿನಿ ।
ನಿಹತೋ ವಾಸುದೇವೇನ ತವ ಪುತ್ರಸ್ಸಮೇಷ್ಯತಿ ॥ ೨೫ ॥

ಭೂಯಸ್ಸ್ವಲಕ್ಷಣೋಪೇತಸ್ತ್ವಸುರಶ್ಚ ಮಹಾಮತಿಃ ।
ಪ್ರಹ್ಲಾದೇತಿ ಚ ವೈ ನಾಮ ಪುನರಸ್ಯ ಭವಿಷ್ಯತಿ ॥ ೨೬ ॥

ವಿಹೀನಶ್ಚಾಸುರೈರ್ಭಾವೈರ್ದೇವತ್ವೇನ ಸಮನ್ವಿತಃ ।
ಇಂದ್ರತ್ವಂ ಭೋಕ್ಷ್ಯತೇ ಭದ್ರೇ ಸರ್ವದೇವೈರ್ನಮಸ್ಕೃತಃ ॥ ೨೭ ॥

---

೨೨-೨೩. ಯುದ್ಧದಲ್ಲಿ ಪ್ರಹ್ಲಾದನು ವಿಷ್ಣುವಿನಿಂದ ಹತನಾಗಲು ಪ್ರಹ್ಲಾದನ ತಾಯಿಯೂ ಹಿರಣ್ಯಕಶಿಪುವಿನ ಭಾರ್ಯೆಯೂ ಆದ ಕಮಲಾ ಎಂಬುವಳು ಹಗಲಿರುಳೂ ಪುತ್ರಶೋಕದಿಂದ ಅಳುತ್ತಿದ್ದಳು.

೨೪. ಭಗವದ್ಭಕ್ತನಾದ ನಾರದನು ಹಗಲಿರುಳೂ ದುಃಖಪಡುತ್ತಿರುವ ಪತಿವ್ರತೆಯಾದ ಕಮಲೆಯನ್ನು ಕುರಿತು,

೨೫. ಎಲೈ ಪುಣ್ಯಶಾಲಿನಿಯೇ, ನೀನು ಮಗನಿಗೋಸ್ಕರ ಅಳಬೇಡ. ವಿಷ್ಣುವಿನಿಂದ ಮಡಿದ ನಿನ್ನ ಮಗನು ತಿರುಗಿ ಬರುತ್ತಾನೆ.

೨೬. ಮಹಾತ್ಮನಾದ ಆತನು ಒಳ್ಳೇಲಕ್ಷಣಗಳಿಂದಕೂಡಿ ಅಸುರನಾಗಿ ನಿನ್ನ ಉದರದಲ್ಲಿಯೇ, ಹುಟ್ಟುತ್ತಾನೆ. ಅವನಿಗೆ ಪ್ರಹ್ಲಾದನೆಂದೇ ಹೆಸರು

೨೭. ರಾಕ್ಷಸಭಾವವು ಹೋಗಿ ದೇವತ್ವದಿಂದ ಕೂಡಿಕೊಂಡು ಸರ್ವದೇವನಮಸ್ಕೃತನಾಗಿ ಇಂದ್ರತ್ವವನ್ನು ಹೊಂದುತ್ತಾನೆ.

ಸುಖೀಭವ ಮಹಾಭಾಗೇ ತೇನ ಪುತ್ರೇಣ ವೈ ಸದಾ।
ನ ಪ್ರಕಾಶ್ಯಂ ತ್ವಯಾ ದೇವಿ ಭವಾರ್ಥದಂ ಚ ಕಸ್ಯಚಿತ್ ॥ ೨೮ ॥

ವಕ್ತವ್ಯಂ ಜ್ಞಾನಭಾವ್ಯೈಸ್ತತ್ಸಂಗೋಪ್ಯಂ ಕುರು ಸರ್ವದಾ ।
ಏವಮುಕ್ತ್ವಾ ಗತೋ ವಿಪ್ರೋ ನಾರದೋ ಮುನಿಸತ್ತಮಃ ॥ ೨೯ ॥

ಕಮಲಾಯಾಶ್ಚೋದರೇ ತು ಜನ್ಮಾಸ್ಯಾನುತ್ತಮಂ ಪುನಃ ।
ಪ್ರಹ್ಲಾದೇತಿ ಚ ವೈ ನಾಮ ತಸ್ಯ ಖ್ಯಾತಂ ಮಹಾತ್ಮನಃ ॥ ೩೦ ॥

ಬಾಲ್ಯಭಾವಂ ಗತೋ ವಿಪ್ರಾಃ ಕೃಷ್ಣಮೇವ ವ್ಯಚಿಂತಯತ್ ।
ನರಸಿಂಹಪ್ರಸಾದೇನ ದೇವರಾಜೋಽಭವದ್ದಿವಿ ॥ ೩೧ ॥

ದೇವತ್ವಂ ಲಭ್ಯ ಚೈವಾಸಾವೈಂದ್ರಂ ಪದಮನುತ್ತಮಂ ।
ಮೋಕ್ಷಂ ಯಾಸ್ಯತಿ ಧರ್ಮಾತ್ಮಾ ವೈಷ್ಣವಂ ಧಾಮ ಚೋತ್ತಮಂ ॥ ೩೨ ॥

ಅಸಂಖ್ಯಾತಾ ಮಹಾಭಾಗಾಃ ಸೃಷ್ಟೇರ್ಭಾವಾ ಹ್ಯನೇಕಶಃ ।
ಮೋಹ ಏವಂ ನ ಕರ್ತವ್ಯಃ ಜ್ಞಾನವದ್ಭಿರ್ಮಹಾತ್ಮಭಿಃ ॥ ೩೩ ॥

---

೨೮ ಎಲೈ ಮಹಾಭಾಗ್ಯಳೇ ಆ ಮಗನಿಂದ ಸರ್ವದಾ ಸೌಖ್ಯವನ್ನು ಹೊಂದುವಿ. ಈ ವಿಷಯವನ್ನು ಯಾರಿಗೂ ಹೇಳಬೇಡ.

೨೯. ಇದನ್ನು ಗುಟ್ಟಾಗಿಟ್ಟಿರು ಎಂದು ಹೇಳಿ ನಾರದನು ಹೊರಟು ಹೋದನು.

೩೦, ಅವನಿಗೆ ಪುನಃ ಕಮಲೆಯ ಉದರದಲ್ಲಿಯೇ ಜನ್ಮವು ಪ್ರಾಪ್ತವಾಗಿ ಪ್ರಸಿದ್ಧವಾದ ಪ್ರಹ್ಲಾದನೆಂಬ ಹೆಸರೂ ಇಡಲ್ಪಟ್ಟಿತು.

೩೧. ಬಾಲ್ಯದಿಂದಲೇ ವಿಷ್ಣುವಿನಲ್ಲಿ ಭಕ್ತಿಯುಳ್ಳವನಾಗಿ ನೃಸಿಂಹಾನುಗ್ರಹದಿಂದ ದೇವತೆಗಳಿಗೆ ಅಧಿಪತಿಯಾದನು.

೩೨. ಆ ಧರ್ಮಾತ್ಮನು ದೇವತ್ವವನ್ನೂ ಇಂದ್ರತ್ವವನ್ನೂ ಹೊಂದಿ ಉತ್ತಮವಾದ ವಿಷ್ಣುವಿನ ಪರಮಪದವನ್ನು ಹೊಂದುವನು.

೩೩. ಎಲೈ ಮಹಾನುಭಾವರೇ, ಸೃಷ್ಟಿಯ ರೀತಿಗಳು ಅನೇಕ ವಿಧವಾಗಿವೆ. ಎಣಿಸುವುದಕ್ಕೂ ಸಾಧ್ಯವಿಲ್ಲ, ಆದುದರಿಂದ ಜ್ಞಾನಿಗಳಾದ ಮಹಾತ್ಮರು ಇದನ್ನು ತಿಳಿದು ಮೋಹವನ್ನು ಹೊಂದಬಾರದು,

ಏತದ್ವಸ್ಸರ್ವಮಾಖ್ಯಾತಂ ಯಥಾ ಪೃಷ್ಟಂ ದ್ವಿಜೋತ್ತಮಾಃ ।
ಅನ್ಯಂ ಪೃಚ್ಛತ ವೈ ಪ್ರಶ್ನಂ ಸಂದೇಹಂ ವೋ ಭಿನದ್ಮ್ಯಹಂ ॥ ೩೪ ॥

ವಿಜಯಂ ದೇವತಾನಾಂ ಚ ದಾನವಾನಾಂ ಮಹಾಕ್ಷಯಂ ।
ಕೃತಂ ಹಿ ದೇವದೇವೇನ ಸ್ಥಾಪಿತಂ ಭುವನತ್ರಯಂ ॥ ೩೫ ॥

॥ ಋಷಯ ಊಚುಃ ॥

ಇಂದ್ರತ್ವಂ ಕಸ್ಯ ಸಂಜಾತಂ ದೇವಾನಾಂ ರಾಜ್ಯಧಾರಕಂ ।
ಕೇನ ದತ್ತಂ ತ್ವಮಾಚಕ್ಷ್ವ ವಿಸ್ತರಾದ್ದ್ವಿಜಸತ್ತಮ ॥ ೩೬ ॥

॥ ಸೂತ ಉವಾಚ ॥

ವಿಸ್ತರೇಣ ಪ್ರವಕ್ಷ್ಯಾಮಿ ಇಂದ್ರತ್ವಂ ಯೇನ ಸತ್ತಮಾಃ ।
ಪ್ರಾಪ್ತಮೇವ ಮಹಾಭಾಗಾ ಯಥಾ ಪುಣ್ಯತಮೇನ ಚ ॥ ೩೭ ॥

ಹತೇಷು ತೇಷು ದೈತ್ಯೇಷು ಸಮಸ್ತೇಷು ಮಹಾಹವೇ ।
ಅತಿನಷ್ಟೇಷು ಪಾಪೇಷು ಗೋವಿಂದೇನ ಮಹಾತ್ಮನಾ ॥ ೩೮ ॥

---

೩೪. ಎಲೈ ವಿಪ್ರರೇ, ನೀವು ಕೇಳಿದಂತೆ ಎಲ್ಲವನ್ನೂ ತಿಳಿಸಿರುವೆನು. ಬೇರೆ ಏನಿದ್ದರೂ ಕೇಳಿ. ನಿಮ್ಮ ಸಂದೇಹವನ್ನು ತೊಲಗಿಸುತ್ತೇನೆ.

೩೫. ದೇವತೆಗಳಿಗೂ ದೇವನಾದ ವಿಷ್ಣುವು ದೇವತೆಗಳಿಗೆ ವಿಜಯವನ್ನೂ, ದೈತ್ಯರಿಗೆ ನಾಶವನ್ನೂ ಉಂಟುಮಾಡಿ ಮೂರು ಲೋಕವನ್ನು ಸರಿಯಾಗಿ ಸ್ಥಾಪಿಸಿದನು.

೩೬. ಋಷಿಗಳು ಕೇಳಿದರು:— ದೇವತೆಗಳ ರಾಜ್ಯವನ್ನು ನಿರ್ವಹಿಸುವ ಇಂದ್ರಪದವಿಯು ಯಾರಿಗಾಯಿತು? ಯಾರು ಕೊಟ್ಟರು? ಎಲೈ ವಿಪ್ರನೇ ಇವನ್ನು ವಿಸ್ತಾರವಾಗಿ ಹೇಳು.

೩೭. ಸೂತನು ಹೇಳುವನು :- ಎಲೈ ಋಷಿಗಳೇ, ಯಾವ ಪುಣ್ಯಶಾಲಿಯಿಂದ ಹೇಗೆ ಇಂದ್ರಪದವಿಯು ಪ್ರಾಪ್ತವಾಯಿತೋ ಅದನ್ನು ವಿಸ್ತಾರವಾಗಿ ಹೇಳುತ್ತೇನೆ.

೩೮. ಒಂದಾನೊಂದು ಮಹಾಯುದ್ಧದಲ್ಲಿ ಮಹಾಮಹಿಮನಾದ ವಿಷ್ಣುವಿನಿಂದ ಪಾಪಿಗಳಾದ ಸಮಸ್ತ ದೈತ್ಯರೂ ಕೊಲ್ಲಲ್ಪಟ್ಟರು.

**ತತೋ ದೇವಾಸ್ಸಗಂಧರ್ವಾ ನಾಗಾ ವಿದ್ಯಾಧರಾಸ್ತಥಾ ।**
**ಸಂಪ್ರೋಚುರ್ಮಾಧವಂ ಸರ್ವೇ ಬದ್ಧಪ್ರಾಂಜಲಯಸ್ತತಃ ॥ ೩೯ ॥**

**ಭಗವನ್ ದೇವದೇವೇಶ ಹೃಷೀಕೇಶ ನಮೋಽಸ್ತು ತೇ ।**
**ವಿಜ್ಞಾಪಯಾಮಹೇ ತ್ವಾಂ ವೈ ತತ್ಸರ್ವಮವಧಾರ್ಯತಾಂ ॥ ೪೦ ॥**

**ಶಾಸ್ತಾ ಗೋಪ್ತಾ ಚ ಪುಣ್ಯಾತ್ಮಾ ಅಸ್ಮಾಕಂ ಕುರು ಕೇಶವ ।**
**ರಾಜಾನಂ ಪುಣ್ಯಧರ್ಮಾಣಂ ತ್ವಮಿಂದ್ರಂ ಲೋಕಶಾಸನಂ ॥ ೪೧ ॥**

**ತ್ರೈಲೋಕ್ಯಸ್ಯ ಪ್ರಜಾ ದೇವ ಯಮಾಶ್ರಿತ್ಯ ಸುಖಂ ವಸೇತ್ ।**
**॥ ವಾಸುದೇವ ಉವಾಚ ॥**
**ಮಮ ಲೋಕೇ ಮಹಾಭಾಗಾ ವೈಷ್ಣವೇನ ಸಮನ್ವಿತಃ ॥ ೪೨ ॥**

**ತೇಜಸಾ ಬ್ರಾಹ್ಮಣಶ್ರೇಷ್ಠಶ್ಚಿರಕಾಲಂ ನಿವಾಸಿತಃ ।**
**ತಸ್ಯ ಕಾಲಃ ಪ್ರಪೂರ್ಣಶ್ಚ ಮಮ ಲೋಕೇ ಮಹಾತ್ಮನಃ ॥ ೪೩ ॥**

**ವಸತಸ್ತಸ್ಯ ವಿಪ್ರಸ್ಯ ಮದ್ಭಕ್ತಸ್ಯ ಸುರೋತ್ತಮಾಃ ।**
**ತೇಜಸಾ ವೈಷ್ಣವೇನೈವ ಭವತಾಂ ಪಾಲಕೋ ಹಿ ಸಃ ॥ ೪೪ ॥**

---

೩೯. ಆ ಮೇಲೆ ದೇವತೆಗಳು, ಗಂಧರ್ವರು, ನಾಗರು, ವಿದ್ಯಾಧರರು, ಎಲ್ಲರೂ ಕೈಮುಗಿದುಕೊಂಡು ಮಾಧವನನ್ನು ಕುರಿತು ಹೇಳಿದರು.

೪೦. ಭಗವಂತನೇ, ದೇವದೇವನೇ, ಹೃಷೀಕೇಶನೇ ನಿನಗೆ ನಮಸ್ಕಾರವು. ನಿನ್ನಲ್ಲಿ ವಿಜ್ಞಾಪನೆಯನ್ನು ಮಾಡುತ್ತೇವೆ. ಸಮಸ್ತವನ್ನೂ ಸಾವಧಾನದಿಂದ ಕೇಳಬೇಕು.

೪೧. ಹೇ ಕೇಶವ, ನಮ್ಮನ್ನು ಶಿಕ್ಷಿಸಿ, ರಕ್ಷಿಸಿ ಕಾಪಾಡುವ ಮಹಾತ್ಮನೊಬ್ಬ ನನ್ನು ನಮಗೆ ಪ್ರಭುವಾಗಿ ಕರುಣಿಸು. ಮೂರು ಲೋಕದಲ್ಲಿರುವ ಸಮಸ್ತ ಪ್ರಜೆಯೂ ಆ ಮಹಾನುಭಾವನನ್ನು ಆಶ್ರಯಿಸಿ ಸುಖವಾಗಿರಬೇಕು. ಆ ರೀತಿ ಅನುಗ್ರಹಿಸೆಂದು ಕೇಳಿಕೊಂಡರು.

೪೨-೪೪. ವಾಸುದೇವನು ಹೇಳಿದನು:—ಎಲೈ ಪೂಜ್ಯರಾದ ಸುರೋತ್ತಮರೇ ಕೇಳಿ. ವಿಷ್ಣುತೇಜಸ್ಸಿನಿಂದ ಕೂಡಿದ ಒಬ್ಬ ಮಹಾತ್ಮನು ನನ್ನ ಲೋಕದಲ್ಲಿ ಬಹಳ ಕಾಲದಿಂದಲೂ ಇರುವನು. ಅವನಿಗೆ ನನ್ನ ಲೋಕದಲ್ಲಿರಬೇಕಾದ ಅವಧಿಯು ಮುಗಿಯಿತು. ಅವನು ನನ್ನ ಭಕ್ತನು. ಅವನೇ ನಿಮಗೆಲ್ಲಾ ಪ್ರಭುವಾಗುತ್ತಾನೆ.

ಭವಿಷ್ಯತಿ ಸ ಧರ್ಮಾತ್ಮಾ ಸರ್ವಧರ್ಮಾನುರಂಜಕಃ ।
ಪಾಲಕೋ ಧಾರಕಶ್ಚೈವ ಸ ಚ ಬ್ರಾಹ್ಮಣಸತ್ತಮಃ ॥ ೪೫ ॥

ಭವಿಷ್ಯತಿ ಸ ಧರ್ಮಾತ್ಮಾ ಭವತಾಂ ತ್ರಾಣಕಾರಣಾತ್ ।
ಅದಿತ್ಯಾಸ್ತನಯಶ್ಚೈವ ಸುವ್ರತಾಖ್ಯೋ ಮಹಾಮನಾಃ ॥ ೪೬ ॥

ಮಹಾಬಲೋ ಮಹಾವೀರ್ಯಃ ಸ ಚ ಇಂದ್ರೋ ಭವಿಷ್ಯತಿ ।

ಸೂತ ಉವಾಚ

ಏವಂ ವರಾನ್ ಸ ದೇವೇಶೋ ದದೌ ದೇವೇಭ್ಯ ಉತ್ತಮಾನ್ ॥ ೪೭ ॥

ದೇವಾ ವಿಜಯಿನಸ್ಸರ್ವೇ ವಿಷ್ಣುನಾ ಸಹ ಸತ್ತಮಾಃ ।
ಕಶ್ಯಪಂ ಪಿತರಂ ದ್ರಷ್ಟುಂ ಮಾತರಂ ಚ ತತೋ ಗತಾಃ ॥೪೮ ॥

ಪ್ರಣೇಮುಸ್ತೇ ಮಹಾತ್ಮಾನಾವುಭಾವೇತೌ ಸುಖಾಸನೌ ।
ಊಚುಃ ಪ್ರಾಂಜಲಯಸ್ಸರ್ವೇ ಹರ್ಷೇಣ ಮಹತಾನ್ವಿತಾಃ ॥ ೪೯ ॥

ಯುವಯೋಶ್ಚ ಪ್ರಸಾದೇನ ದೇವತ್ವಂ ಹಿ ಗತಾ ವಯಂ
ಹರ್ಷೇಣ ಮಹತಾವಿಷ್ಟೋ ದೇವಾನ್ ವಾಕ್ಯಮುವಾಚ ಸಃ । ॥ ೫೦ ॥

---

೪೫. ಎಲ್ಲಾ ಧರ್ಮಗಳನ್ನೂ ಆಚರಿಸುವ ಆ ಬ್ರಾಹ್ಮಣಶ್ರೇಷ್ಠನು ನಿಮಗೆ ಪಾಲಕನಾಗಿ ಸರ್ವವಿಧದಲ್ಲಿಯೂ ನಿಮ್ಮನ್ನು ಕಾಪಾಡುತ್ತಾನೆ.

೪೬. ಬಲಶಾಲಿಯೂ ಮಹಾವೀರ್ಯವಂತನೂ ಆದ ಆ ಸುವ್ರತನೆಂಬುವನು ಮುಂದೆ ಅದಿತಿದೇವಿಗೆ ಮಗನಾಗಿ ಹುಟ್ಟಿ ದೇವೇಂದ್ರನಾಗುತ್ತಾನೆ.

೪೭-೪೮. ಸೂತನು ಹೇಳುತ್ತಾನೆ:—ಈ ರೀತಿಯಾಗಿ ಉತ್ತಮವಾದ ವರಗಳನ್ನು ಮಹಾವಿಷ್ಣುವು ದೇವತೆಗಳಿಗೆ ಕೊಟ್ಟನು. ಬಳಿಕ ಜಯಶಾಲಿಗಳಾದ ದೇವತೆಗಳು ವಿಷ್ಣುವಿನೊಡನೆ ತಮ್ಮ ತಾಯಿತಂದೆಗಳಾದ ಅದಿತಿಕಶ್ಯಪರನ್ನು ನೋಡಲು ಹೊರಟರು.

೪೯. ಸುಖಾಸನದಲ್ಲಿ ಕುಳಿತಿರುವ ಮಹಾತ್ಮರಾದ ಅದಿತಿಕಶ್ಯಪರನ್ನು ಕಂಡು ಅತ್ಯಾನಂದದಿಂದ ಕೈಮುಗಿದುಕೊಂಡು,

೫೦. ನಿಮ್ಮ ದಯೆಯಿಂದ ನಾವು ದೇವತ್ವವನ್ನು ಹೊಂದಿ ಸುಖವಾಗಿರುವೆವು ಎಂದು ಹೇಳಿದರು. ಆಗ ಕಶ್ಯಪನು ಅತ್ಯಾನಂದದಿಂದ ದೇವತೆಗಳನ್ನು ಕುರಿತು ಇಂತೆಂದನು.

**ಕಶ್ಯಪ ಉವಾಚ**

**ಯೂಯಂ ವೈ ಸತ್ಯಧರ್ಮೇಣ ವರ್ತಮಾನಾಸ್ಸದೈವ ಹಿ ।**
**ಆವಯೋಶ್ಚ ಪ್ರಸಾದೇನ ತಪಸಶ್ಚ ಪ್ರಭಾವತಃ ॥ ೫೧ ॥**

**ಪ್ರಾಪ್ತವಂತೋ ಭವಂತಸ್ತು ದೇವತ್ವಂ ಚಾಽಕ್ಷಯಂ ಪದಂ ।**
**ವರಮೇವಂ ದದಾಮ್ಯೇಷ ಬಹುಪ್ರೀತಿಸಮನ್ವಿತಃ ॥ ೫೨ ॥**

**ಅಮರಾ ನಿರ್ಜರಾಶ್ಚೈವ ಹ್ಯಕ್ಷಯಾಶ್ಚ ಭವಿಷ್ಯಥ ।**
**ಸರ್ವಕಾಮಸಮೃದ್ಧಾರ್ಥಾಃ ಸರ್ವಸಿದ್ಧಿಸಮನ್ವಿತಾಃ ॥ ೫೩ ॥**

**ದೇವಾ ನಾಗಾಶ್ಚ ಗಂಧರ್ವಾ ಮತ್ಪ್ರಸಾದಾನ್ಮಹಾಸುರಾಃ ।**

**ವಿಷ್ಣುರುವಾಚ**

**ವರಂ ವರಯ ಭದ್ರಂ ತೇ ದೇವಮಾತರ್ಯಶಸ್ವಿನಿ ।**
**ಮನಸಾ ಚೇಪ್ಸಿತಂ ಸರ್ವಂ ತತ್ತೇ ದದ್ಮಿ ಸುನಿಶ್ಚಿತಂ ॥ ೫೪ ॥**

**ಅದಿತಿರುವಾಚ**

**ಪೂರ್ವಂ ಪುತ್ರವತೀ ಭೂತಾ ಪ್ರಸಾದಾತ್ತವ ಮಾಧವ ।**
**ಅಮರಾ ನಿರ್ಜರಾಸ್ಸರ್ವೇ ಚಾಕ್ಷಯಾಃ ಪುಣ್ಯವತ್ಸಲಾಃ ॥ ೫೫ ॥**

---

೫೧. ಕಶ್ಯಪನು ಹೇಳುತ್ತಾನೆ:—ನೀವು ಯಾವಾಗಲೂ ಸತ್ಯದಿಂದಲೂ ಧರ್ಮದಿಂದಲೂ ಇರುವಿರಿ. ನಮ್ಮ ಅನುಗ್ರಹದಿಂದಲೂ ತಪಸ್ಸಾಮರ್ಥ್ಯದಿಂದಲೂ ನೀವು ನಾಶರಹಿತವಾದ ದೇವತ್ವವನ್ನು ಹೊಂದಿರುವಿರಿ.

೫೨-೫೩. ದೇವತೆಗಳೂ ನಾಗರೂ ಗಂಧರ್ವರೂ ಅಸುರರೂ ಆದ ನಿಮಗೆ ಬಹು ಸಂತೋಷದಿಂದ ವರವನ್ನು ಕೊಡುತ್ತೇನೆ. ನೀವು ಮರಣರಹಿತರಾಗಿಯೂ ಮುಪ್ಪಿಲ್ಲದವರಾಗಿಯೂ ಸಕಲೇಷ್ಟಾರ್ಥಗಳಿಂದ ಪೂರ್ಣರಾಗಿಯೂ ಸಮಸ್ತ ಸಿದ್ಧಿಗಳಿಂದ ಕೂಡಿದವರಾಗಿಯೂ ಆಗಿರಿ.

೫೪. ವಿಷ್ಣುವು ಹೇಳಿದನು:—ಎಲೌ ದೇವಮಾತೆಯೇ, ನಿನಗೆ ಮಂಗಳವಾಗಲಿ. ನೀನು ಅಪೇಕ್ಷಿಸುವ ವರವನ್ನು ನಾನು ಖಂಡಿತವಾಗಿಯೂ ಕೊಡುತ್ತೇನೆ.

೫೫. ಅದಿತಿಯು ಹೇಳುವಳು:—ಓ ಮಾಧವನೇ ನಿನ್ನ ದಯದಿಂದಲೇ ಮೊದಲು ನಾನು ಪುತ್ರವತಿಯಾದೆನು. ಆ ಪುತ್ರರು ಮರಣರಹಿತರೂ ಜರಾವರ್ಜಿತರೂ ಯಾರಿಂದಲೂ ನಾಶವಿಲ್ಲದವರೂ ಪುಣ್ಯಶಾಲಿಗಳೂ ಆಗಿರುವರು.

ಅಮೀ ಪುತ್ರಾ ಮಯಾ ಲಬ್ಧಾಃ ಶ್ರೂಯತಾಂ ಮಧುಸೂದನ ।
ಸುತರಾಂ ತ್ವಂ ಚ ಗೋವಿಂದ ಸರ್ವಕಾಮಸಮೃದ್ಧಿದಃ ॥ ೫೬ ॥

ಮಮ ಗರ್ಭೇ ಪಸಂಶ್ಚೈವ ಭವಾಂಶ್ಚ ಮಮ ನಂದನಃ ।
ತ್ವಯಾ ಪುತ್ರೇಣ ನಿತ್ಯಂ ಚ ಯಥಾ ನಂದಾಮಿ ಕೇಶವ ॥ ೫೭ ॥

ಏವಂ ಮಹೋದಯಂ ನಾಥ ಪೂರಯಸ್ವ ಮನೋರಥಂ ।

ವಾಸುದೇವ ಉವಾಚ

ಭವತ್ಯಾ ದೇವಕಾರ್ಯಾರ್ಥಂ ಗಂತವ್ಯಂ ಮಾನುಷಂ ವಪುಃ ।
ತದಾಹಂ ತವ ಗರ್ಭೇ ವೈ ವಾಸಂ ಯಾಸ್ಯಾಮಿ ನಿಶ್ಚಿತಂ ॥ ೫೮ ॥

ಯುಗೇ ದ್ವಾದಶಕೇ ಪ್ರಾಪ್ತೇ ಭೂಭಾರಹರಣಾಯ ವೈ ।
ಜಮದಗ್ನಿಸುತೋ ದೇವಿ ರಾಮೋ ನಾಮ ದ್ವಿಜೋತ್ತಮಃ ॥ ೫೯ ॥

ಪ್ರತಾಪೀ ತೇಜಸಾ ಯುಕ್ತಃ ಸರ್ವಕ್ಷತ್ರವಧಾಯ ಚ ।
ತವ ಪುತ್ರೋ ಭವಿಷ್ಯಾಮಿ ಸರ್ವಶಸ್ತ್ರಭೃತಾಂ ವರಃ ॥ ೬೦ ॥

---

೫೬-೫೭. ಓ ಮಧುಸೂದನನೇ, ಇಂತಹ ಪುತ್ರರು ನನ್ನಲ್ಲಿ ಹುಟ್ಟಿದರು. ನೀನಾದರೋ ಸಕಲರ ಇಷ್ಟಾರ್ಥಗಳನ್ನೂ ಪರಿಪೂರ್ಣಮಾಡುವವನು. ಆದುದರಿಂದ ಎಲೈ ಕೇಶವನೇ, ನನ್ನ ಹೊಟ್ಟೆಯಲ್ಲಿ ನೀನೇ ಮಗನಾಗಿ ಹುಟ್ಟಬೇಕು. ಪುತ್ರನಾದ ನಿನ್ನಿಂದ ನಾನು ಯಾವಾಗಲೂ ಸಂತೋಷಪಡಬೇಕೆಂದು ನನಗೆ ಅಪೇಕ್ಷೆ ಇರುವುದು. ಈ ನನ್ನ ಇಷ್ಟಾರ್ಥವನ್ನು ನೆರವೇರಿಸು ಎಂದು ಪ್ರಾರ್ಥಿಸಿದಳು.

೫೮. ವಾಸುದೇವನು ಹೇಳುವನು :— ನೀನು ದೇವಕಾರ್ಯನಿರ್ವಹಣ ಕ್ಕೋಸ್ಕರ ಮಾನುಷದೇಹವನ್ನು ಧರಿಸಬೇಕು. ಆಗ ನಾನು ನಿನ್ನ ಗರ್ಭದಲ್ಲಿ ಖಂಡಿತವಾಗಿಯೂ ಪುತ್ರನಾಗಿ ಹುಟ್ಟುತ್ತೇನೆ.

೫೯-೬೦. ವೈವಸ್ವತಮನ್ವಂತರದ ಹನ್ನೆರಡನೆಯ ಚತುರ್ಯುಗದಲ್ಲಿ ಭೂಭಾರವನ್ನು ನಾಶಮಾಡುವುದಕ್ಕೋಸ್ಕರ ಬ್ರಾಹ್ಮಣಜಾತಿಯಲ್ಲಿ ಜಮದಗ್ನಿಯ ಪುತ್ರನಾಗಿಯೂ ಪ್ರತಾಪ ತೇಜಸ್ಸು ಇವುಗಳಿಂದ ಕೂಡಿದವನಾಗಿ ಸರ್ವಕ್ಷತ್ರಿಯರ ನಾಶಕ್ಕೋಸ್ಕರ ನಿನ್ನ ಮಗನಾಗಿಯೂ ಹುಟ್ಟುತ್ತೇನೆ.

ಚತುರ್ವಿಂಶತಿಕೇ ಪ್ರಾಪ್ತೇ ತ್ರೇತಾಖ್ಯೇ ತು ತಥಾ ಯುಗೇ ।
ರಾಮೋ ನಾಮ ಭವಿಷ್ಯಾಮಿ ತವ ಪುತ್ರಃ ಪತಿವ್ರತೇ ॥ ೬೧ ॥

ಪುನಃ ಪುತ್ರೋ ಭವಿಷ್ಯಾಮಿ ತವೈವ ಶ್ರುಣು ಚಾನಘೇ ।
ಅಷ್ಟಾವಿಂಶತಿಕೇ ಪ್ರಾಪ್ತೇ ದ್ವಾಪರಾಂತೇ ಯುಗೇ ತದಾ ॥ ೬೨ ॥

ಸರ್ವದೈತ್ಯವಿನಾಶಾರ್ಥೇ ಭೂಭಾರಹರಣಾಯ ಚ ।
ವಾಸುದೇವೋಽಥ ತೇ ಪುತ್ರೋ ಭವಿಷ್ಯಾಮಿ ನ ಸಂಶಯಃ ॥ ೬೩ ॥

ಇದಾನೀಂ ಕುರು ಕಲ್ಯಾಣಿ ಮದ್ವಾಕ್ಯಂ ಧರ್ಮಸಂಯುತಂ ।
ಸರ್ವಲಕ್ಷಣಸಂಪನ್ನಂ ಸತ್ಯಧರ್ಮಸಮನ್ವಿತಂ ॥ ೬೪ ॥

ಸರ್ವಜ್ಞಂ ಸರ್ವದಂ ದೇವಿ ಪುತ್ರಮುತ್ಪಾದ್ಯ ಸುಂದರಂ ।
ಇಂದ್ರತ್ವಂ ತಸ್ಯ ದಾಸ್ಯಾಮಿ ಇಂದ್ರಸ್ಸೋಽಪಿ ಭವಿಷ್ಯತಿ ॥ ೬೫ ॥

ಏವಂ ಸಂಭಾಷಿತಂ ಶ್ರುತ್ವಾ ಮಹಾಹರ್ಷಸಮನ್ವಿತಾ ।
ದೇವದೇವಪ್ರಸಾದೇನ ಇಂದ್ರಃ ಪುತ್ರೋ ಭವಿಷ್ಯತಿ ॥ ೬೬ ॥

---

೬೧. ಅಲ್ಲದೆ, ಅದೇ ಮನುವಿನ ಇಪ್ಪತ್ತನೇಳನೆಯ ತ್ರೇತಾಯುಗದಲ್ಲಿ ಶ್ರೀರಾಮನೆಂಬ ಹೆಸರಿನಿಂದ ನಿನ್ನ ಮಗನಾಗಿ ಹುಟ್ಟುತ್ತೇನೆ.

೬೨-೬೩. ಎಲೈ ಪಾಪರಹಿತಳೇ, ಅದೇ ವೈವಸ್ವತಮನುವಿನ ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಸಮಸ್ತ ದೈತ್ಯರನ್ನು ಸಂಹರಿಸುವುದಕ್ಕೂ, ಭೂಮಿಯ ಭಾರವನ್ನು ಕಮ್ಮಿಮಾಡುವುದಕ್ಕೂ, ವಾಸುದೇವನೆಂಬ ಹೆಸರಿನಿಂದ ಪುನಃ ನಿನ್ನ ಉದರದಲ್ಲಿ ಜನಿಸುತ್ತೇನೆ.

೬೪-೬೫. ಧರ್ಮಯುಕ್ತವಾದ ನನ್ನ ಮಾತನ್ನು ಕೇಳು. ಎಲೌ ಕಲ್ಯಾಣಿ, ಇಷ್ಟೇ ಅಲ್ಲದೆ ಸರ್ವಲಕ್ಷಣಸಂಪನ್ನನಾಗಿಯೂ ಸತ್ಯದಿಂದಲೂ ಧರ್ಮದಿಂದಲೂ ಕೂಡಿ ಸರ್ವಜ್ಞನೂ ದಾನಿಯೂ ಆದ ಸುಂದರನಾದ ಒಬ್ಬ ಮಗನನ್ನು ನಿನಗೆ ಕೊಟ್ಟು, ಅವನಿಗೆ ಇಂದ್ರಪದವಿಯನ್ನು ಕೊಡುತ್ತೇನೆ ಎಂದು ಹೇಳಿದನು.

೬೬. ದೇವೋತ್ತಮನಾದ ವಿಷ್ಣುವಿನ ಅನುಗ್ರಹದಿಂದ ಇಂದ್ರನು ತನಗೆ ಮಗನಾಗುವನೆಂದು ಅದಿತಿದೇವಿಯು ತಿಳಿದು ಮಹಾನಂದಭರಿತಳಾಗಿ, ಎಲೈ ಮಹಾಭಾಗನೇ ಹಾಗೆಯೇ ಆಗಲಿ ನಿನ್ನ ಮಾತಿನಂತೆ ನಡೆಯುತ್ತೇನೆ ಎಂದಳು.

ಏವಮಸ್ತು ಮಹಾಭಾಗ ತವ ವಾಕ್ಯಂ ಕರೋಮ್ಯಹಂ ।
ತತಸ್ತಾ ದೇವತಾಸ್ಸರ್ವಾ ಜಗ್ಮುಸ್ಸ್ವಸ್ಥಾನಮೇವ ಹಿ ।
ಹರಿಣಾ ಸಹ ತೇ ಸರ್ವೇ ನಿರಾತಂಕಾ ಮುದಾನ್ವಿತಾಃ ॥ ೬೭ ॥

ಸೂತ ಉವಾಚ

ಅದಿತಿಃ ಕಶ್ಯಪಂ ಪ್ರಾಹ ಋತುಂ ಪ್ರಾಪ್ಯ ಮನಸ್ವಿನೀ ।
ಭಗವನ್ ದೀಯತಾಂ ಪುತ್ರಸ್ಸುರೇಂದ್ರಪದಭುಂಜಕಃ ॥ ೬೮ ॥

ಚಿಂತಯಿತ್ವಾ ಕ್ಷಣಂ ವಿಪ್ರಸ್ತಾಮುವಾಚ ಮನಸ್ವಿನೀಂ ।
ಏವಮಸ್ತು ಮಹಾಭಾಗೇ ತವ ಪುತ್ರೋ ಭವಿಷ್ಯತಿ ॥ ೬೯ ॥

ತ್ರೈಲೋಕ್ಯಸ್ಯಾಪಿ ಕರ್ತಾ ಚ ಯಜ್ಞಭೋಕ್ತಾ ಸ ಏವ ಚ ।
ತಸ್ಯಾಶ್ಶಿರಸಿ ಸಂನ್ಯಸ್ಯ ಸ್ವಹಸ್ತಂ ಚ ದ್ವಿಜೋತ್ತಮಃ ॥ ೭೦ ॥

---

೬೭. ಆಮೇಲೆ ವಿಷ್ಣುವಿನೊಡಗೂಡಿ ಆ ದೇವತೆಗಳು ಯೋಚನೆಯನ್ನು ಬಿಟ್ಟು ಸಂತೋಷದಿಂದ ಕೂಡಿ ತಮ್ಮ ಸ್ವಸ್ಥಾನವನ್ನು ಸೇರಿದರು.

೬೮. ಸೂತನು ಹೇಳುತ್ತಾನೆ:—ಹೀಗಿರುವಾಗ ಅದಿತಿಯು ಒಂದುದಿನ ಋತುಸ್ನಾನಮಾಡಿ ಕಶ್ಯಪನನ್ನು ಕುರಿತು, ಹೇ ಭಗವಂತನೇ, ಸುರೇಂದ್ರಸ್ಥಾನವನ್ನನು ಭವಿಸುವ ಪುತ್ರನನ್ನ ದಯಪಾಲಿಸು ಎಂದಳು.

೬೯. ಆಗ ಕಶ್ಯಪಮುನಿಯು ಕ್ಷಣಕಾಲ ಮಾತ್ರ ಯೋಚಿಸಿ, ಎಲೈ ಮಹಾ ಭಾಗ್ಯಳೇ ಹಾಗೆಯೇ ಆಗಲಿ. ನಿನಗೆ ಪುತ್ರನಾಗುತ್ತಾನೆ. ಯೋಚಿಸಬೇಡ ಎಂದು ಹೇಳಿದನು.

೭೦. ಮೂರು ಲೋಕಕ್ಕೆ ಪ್ರಭುವೂ, ಯಜ್ಞದಲ್ಲಿ ಹವಿಸ್ಸನ್ನು ಭುಜಿಸುವನೂ ಆದ ಸಾಕ್ಷಾತ್ ಭಗವಂತನೇ ನಿನಗೆ ಪುತ್ರನಾಗಿ ಹುಟ್ಟುತ್ತಾನೆಂದು ಆಕೆಯ ತಲೆಯ ಮೇಲೆ ಅಭಯ ಹಸ್ತವನ್ನಿಟ್ಟು ಸಂತೈಸಿ, ಬಳಿಕ ತಾನು ವಿಷ್ಣುಲೋಕವಲ್ಲಿದ್ದುಕೊಂಡು ತಪಸ್ಸನ್ನು ಮಾಡುತ್ತಿದ್ದನು.

**ತಪಶ್ಚಕಾರ ತೇಜಸ್ವೀ ವಿಷ್ಣುಲೋಕೇ ವರ್ಸ ಸದಾ ।**
**ತಸ್ಯ ಪುಣ್ಯಕ್ಷಯಾಜ್ಜಾತಂ ವಿಷ್ಣುಲೋಕಾದ್ದ್ವಿಜೋತ್ತಮಾಃ ॥ ೭೧ ॥**

**ಪತನಂ ಕರ್ಮವಶತಸ್ತತಸ್ತಸ್ಯಾ ದ್ವಿಜೋತ್ತಮಾಃ ।**
**ಪುಣ್ಯಗರ್ಭಂ ಗತೋ ವಿಪ್ರ ಅದಿತ್ಯಾಸ್ತು ಮಹಾತಪಾಃ ॥ ೭೨ ॥**

**ಇಂದ್ರತ್ವಂ ಭೋಕ್ತುಕಾಮಾರ್ಥಂ ಸತ್ಯಪುಣ್ಯೇನ ಕರ್ಮಣಾ ।**
**ಗರ್ಭಂ ದಧಾರ ಸಾ ದೇವೀ ಪುಣ್ಯೇನ ತಪಸಾ ಕಿಲ ॥ ೭೩ ॥**

**ತಪಸ್ತೇಪೇ ನಿರಾಲಸ್ಯಾ ವನವಾಸಂ ಗತಾ ಸತೀ ।**
**ದಿವ್ಯಂ ವರ್ಷಶತಂ ಯಾತಂ ತಪಂತ್ಯಾಂ ದೇವಮಾತರಿ ॥ ೭೪ ॥**

**ಅತಪ್ಯತ ತಪಸ್ತೀವ್ರಂ ದುಷ್ಕರಂ ದೇವತಾಸುರೈಃ ।**
**ತಸ್ಯಾಸ್ತು ತಪಸಾ ತೇನ ತೇಜಸಾ ಚ ಸಮನ್ವಿತಾ ॥ ೭೫ ॥**

**ಸೂರ್ಯತೇಜಃಪ್ರತೀಕಾಶಾ ದ್ವಿತೀಯ ಇವ ಭಾಸ್ಕರಃ ।**
**ಶುಶುಭೇ ಸಾ ಯಥಾ ದೀಪ್ತಾ ಪರಮಂ ಧ್ಯಾನಮಾಸ್ಥಿತಾ ॥ ೭೬ ॥**

---

೭೧-೭೨. ಇತ್ತ ಆ ಸುವ್ರತನಿಗೆ ಪುಣ್ಯವು ನಶಿಸಿದ ಪ್ರಯುಕ್ತ ವಿಷ್ಣುಲೋಕದಿಂದ ಪತನವಾಯಿತು. ಅನಂತರ ಅದಿತಿ ದೇವಿಯು ಗರ್ಭವನ್ನು ಧರಿಸಿದಳು.

೭೩. ಸತ್ಯವಾಕ್ಯದಿಂದಲೂ ಪುಣ್ಯಕಾರ್ಯದಿಂದಲೂ ತಪಸ್ಸನ್ನಾಚರಿಸುತ್ತಿರುವ ಆ ಅದಿತಿಯು ಇಂದ್ರ ಪದವಿಯನ್ನು ಹೊಂದುವ ಗರ್ಭವನ್ನು ಪುಣ್ಯಾತಿಶಯದಿಂದ ಧರಿಸಿದಳು.

೭೪. ಅದಿತಿಯು ವನದಲ್ಲಿದ್ದುಕೊಂಡು ಸ್ವಲ್ಪವೂ ಬೇಸರಪಡದೆ ತಪಸ್ಸನ್ನು ಮಾಡುತ್ತಿರಲು ದೇವಮಾನದಲ್ಲಿ ನೂರು ವರ್ಷಗಳು ಕಳೆದವು.

೭೫-೭೬. ದೇವಾಸುರರಿಂದಲೂ ನಡೆಸಲಾಸಾಧ್ಯವಾದ ತಪಸ್ಸನ್ನು ಅದಿತಿಯು ಆಚರಿಸಿದಳು. ಅದಿತಿಯು ಧ್ಯಾನಮಗ್ನಳಾಗಿ ತಪಸ್ಸನ್ನಾಚರಿಸುತ್ತಿರುವಾಗ ಅವಳ ತಪಶ್ಶಕ್ತಿಯಿಂದುಂಟಾದ ತೇಜಸ್ಸಿನಿಂದ ಎರಡನೆಯ ಸೂರ್ಯನಂತೆ ಪ್ರಕಾಶಿಸುತ್ತಿದ್ದಳು.

**ರೂಪೇಣಾಧಿಕತಾಂ ಯಾತಾ ತಪಸಸ್ತೇಜಸಾ ತದಾ ।**
**ಲಯಧ್ಯಾನಪರಾ ಸಾ ಚ ವಾಯುಭಕ್ಷಾ ತಪಸ್ವಿನೀ ॥ ೭೭ ॥**

**ಅಧಿಕಂ ಶುಶುಭೇ ದೇವೀ ದಕ್ಷಸ್ಯ ತನಯಾ ತದಾ ।**
**ಸಿದ್ಧಾಶ್ಚ ಋಷಯಸ್ಸರ್ವೇ ದೇವಾಶ್ಚಾಪಿ ಮಹೌಜಸಃ ।**
**ಸ್ತುವಂತಿ ತಾಂ ಮಹಾಭಾಗಾಂ ರಕ್ಷಂತಿ ಚ ಸುತತ್ಪರಾಂ ॥ ೭೮ ॥**

**ಪೂರ್ಣೇ ವರ್ಷಶತೇ ತಸ್ಯಾ ವಿಷ್ಣುಸ್ತತ್ರ ಸಮಾಗತಃ ।**
**ತಾಮುವಾಚ ಮಹಾಭಾಗಾಮದಿತಿಂ ತಪಸಾನ್ವಿತಾಂ ॥ ೭೯ ॥**

**ದೇವಿ ಗರ್ಭಸ್ಸುಸಂಪೂರ್ಣಸ್ಸೂತಿಕಾಲಃ ಪ್ರವರ್ತತೇ ।**
**ತವೈವ ತಪಸಾ ಪುಷ್ಟಸ್ತೇಜಸಾ ಚ ಪ್ರವರ್ಧಿತಃ ॥ ೮೦ ॥**

**ಅದ್ಯೈವ ಗರ್ಭಮೇತಂ ತ್ವಂ ಮುಂಚ ಮುಂಚ ಯಶಸ್ವಿನಿ ।**
**ಏವಮಾಭಾಷ್ಯ ದೇವೇಶಃ ಸ ಜಗಾಮ ಸ್ವಕಂ ಗೃಹಂ ॥ ೮೧ ॥**

---

೭೭. ದಕ್ಷಪುತ್ರಿಯಾದ ಆ ಅದಿತಿಯು ವಾಯುವನ್ನು ಮಾತ್ರ ಆಹಾರವಾಗಿ ತೆಗೆದುಕೊಳ್ಳುತ್ತ ಧ್ಯಾನದಲ್ಲಿ ಲೀನಳಾಗಿ ತಪಸ್ಸನ್ನಾಚರಿಸುತ್ತಿರುವಾಗ ಅತ್ಯಂತ ಕಾಂತಿಯಿಂದ ಪ್ರಕಾಶಿಸುತ್ತಿದ್ದಳು.

೭೮. ಸಿದ್ಧರೂ, ಮಹರ್ಷಿಗಳೂ, ತೇಜಸ್ವಿಗಳಾದ ದೇವತೆಗಳೂ ಅದಿತಿಯನ್ನು ಹೊಗಳುತ್ತಿದ್ದರು. ಕಾಡಿನಲ್ಲಿ ಒದಗಬಹುದಾದ ವಿಘ್ನಗಳಿಂದ ರಕ್ಷಿಸುತ್ತಲೂ ಇದ್ದರು.

೭೯. ಅದಿತಿಗೆ ತಪಸ್ಸಿನಲ್ಲಿ ಒಂದುನೂರು ವರ್ಷಗಳು ಕಳೆಯಲು ಮಹಾವಿಷ್ಣುವು ಅಲ್ಲಿಗೆ ಬಂದು ಆಕೆಯನ್ನು ಕುರಿತು ಇಂತೆಂದನು.

೮೦-೮೧. ಎಲೈ ದೇವಿಯೇ, ನಿನ್ನ ಗರ್ಭವು ಸಂಪೂರ್ಣವಾಗಿ ಬೆಳೆದಿದೆ. ಪ್ರಸವಕಾಲವು ಪ್ರಾಪ್ತವಾಗಿ ಗರ್ಭವು ನಿನ್ನ ತೇಜಸ್ಸಿನಿಂದಲೂ ಪುಷ್ಟವಾಗಿದೆ. ಎಲೈ ಯಶಸ್ವಿನಿಯೇ, ನೀನು ಈಗಲೇ ಗರ್ಭವನ್ನು ವಿಸರ್ಜಿಸಿ ಪುತ್ರನನ್ನು ಪಡೆ, ಎಂದು ಹೇಳಿ ವಿಷ್ಣುವು ಸ್ವಸ್ಥಾನಕ್ಕೆ ಹೊರಟುಹೋದನು.

ಅಸೂತ ಪುತ್ರಂ ಸಾ ದೇವೀ ಕಾಲೇ ಪ್ರಾಪ್ತೇ ಮಹೋದಯೇ ।
ಸುಪುತ್ರಂ ದೀಪ್ತಿಸಂಯುಕ್ತಂ ದ್ವಿತೀಯಮಿವ ಭಾಸ್ಕರಂ ॥ ೮೨ ॥

ಸುಭಗಂ ಚಾರುಸರ್ವಾಂಗಂ ಸರ್ವಲಕ್ಷಣಸಂಯುತಂ ।
ಚತುರ್ಭುಜಂ ಮಹಾಕಾಯಂ ಲೋಕಪಾಲಂ ಸುರೇಶ್ವರಂ ॥ ೮೩ ॥

ತೇಜೋಜ್ವಾಲಾಸಮಾಕೀರ್ಣಂ ಚಕ್ರಪದ್ಮಸುಹಸ್ತಕಂ ।
ಚಂದ್ರಬಿಂಬಾನುಕಾರೇಣ ವದನೇನ ಮಹಾಪ್ರಭಂ ॥ ೮೪ ॥

ರಾಜಮಾನಂ ಮಹಾಪ್ರಾಜ್ಞಂ ತೇಜಸಾ ವೈಷ್ಣವೇನ ಚ ।
ಅನ್ಯೈಶ್ಚ ಲಕ್ಷಣೈರ್ದಿವ್ಯೈರ್ದಿವ್ಯಭಾವೈರಲಂಕೃತಂ ॥ ೮೫ ॥

ಸರ್ವಲಕ್ಷಣಸಂಪೂರ್ಣಂ ಚಂದ್ರಾಸ್ಯಂ ಕಮಲೇಕ್ಷಣಂ ।
ಆಜಗ್ಮುಸ್ತತ್ರ ತೇ ದೇವಾ ಋಷಯೋ ವೇದಪಾರಗಾಃ ॥ ೮೬ ॥

ಗಂಧರ್ವಾಶ್ಚ ತಥಾ ನಾಗಾಃ ಸಿದ್ಧಾ ವಿದ್ಯಾಧರಾಸ್ತಥಾ ।
ಋಷಯಸ್ಸಪ್ತ ತೇ ದಿವ್ಯಾಃ ಪೂರ್ವಾಪರಮಹೌಜಸಾ ॥ ೮೭ ॥

---

೮೨. ಬಳಿಕ ಅದಿತಿದೇವಿಯು ಮಹೋದಯಕಾಲದಲ್ಲಿ ಎರಡನೆಯ ಸೂರ್ಯನಂತೆ ಕಾಂತಿಯುತನಾದ ಒಬ್ಬ ಸುಪುತ್ರನನ್ನು ಹೆತ್ತಳು.

೮೩-೮೫. ಆ ಪುತ್ರನಾದರೋ ಮನೋಹರವಾದ ಅವಯವಗಳಿಂದ ಕೂಡಿ ಸರ್ವಾಂಗಸುಂದರನಾಗಿಯೂ, ಸರ್ವಲಕ್ಷಣಸಂಪನ್ನನಾಗಿಯೂ ಶೋಭಿಸುತ್ತಿದ್ದನು. ಚತುರ್ಭುಜಗಳು, ದೊಡ್ಡದಾದ ಶರೀರ, ಲೋಕಪಾವಕನಾದ ಇಂದ್ರನಂತೆ ಅತಿ ತೇಜಸ್ಸಿನಿಂದ ಕೂಡಿದ ಶರೀರ ಸೊಬಗು, ಕೈಗಳಲ್ಲಿ ಚಕ್ರ ಪದ್ಮಗಳು, ಚಂದ್ರನಂತೆ ಆಹ್ಲಾದಕರವಾದ ಸುಂದರವಾದ ಮುಖ, ಕಮಲದಂತೆ ಮನೋಹರವಾದ ಕಣ್ಣುಗಳು ಇವುಗಳಿಂದ ಕೂಡಿ ಒಪ್ಪುತ್ತಿರುವ ಸುಪುತ್ರನನ್ನು ಅದಿತಿಯು ಪ್ರಸವಿಸಿದಳು.

೮೬-೮೮. ಆ ಮಗುವನ್ನು ನೋಡುವ ಸಲುವಾಗಿ ದೇವತೆಗಳೂ, ವೇದವಿದರಾದ ಋಷಿಗಳೂ, ಗಂಧರ್ವರೂ, ನಾಗರೂ, ಸಿದ್ಧಪುರುಷರೂ, ವಿದ್ಯಾಧರರೂ, ಭೂತಭವಿಷ್ಯದ್ವರ್ತಮಾನಗಳನ್ನು ಬಲ್ಲ ಸಪ್ತರ್ಷಿಗಳೂ, ಮಂಗಳಪ್ರದರೂ ಪುಣ್ಯ

**ಅನ್ಯೇ ಚ ಮುನಯಃ ಪುಣ್ಯಾಃ ಪುಣ್ಯಮಂಗಳದಾಯಿನಃ ।**
**ಆಜಗ್ಮುಸ್ತೇ ಮಹಾತ್ಮಾನೋ ಹರ್ಷನಿರ್ಭರಮಾನಸಾಃ ॥ ೮೮ ॥**

**ತಸ್ಮಿನ್ ಜಾತೇ ಮಹಾಭಾಗೇ ಭಗವಂತೋ ಮಹೌಜಸಿ ।**
**ಆಜಗ್ಮುರ್ದೇವತಾಸ್ಸರ್ವೇ ಪರ್ವತಾಸ್ತು ತಪಸ್ವಿನಃ ॥ ೮೯ ॥**

**ಕ್ಷೀರಾದ್ಯಾಸ್ಸಾಗರಾಸ್ಸರ್ವೇ ನದ್ಯಶ್ಚೈವ ತಥಾಮಲಾಃ ।**
**ಮೂರ್ತಿಮಂತಸ್ತತಸ್ಸರ್ವೇ ಯೇ ಚಾನ್ಯೇ ಹಿ ಚರಾಚರಾಃ ॥ ೯೦ ॥**

**ಮಂಗಲೈಸ್ತು ಮಹೋತ್ಸಾಹಂ ಚಕ್ರುಸ್ಸರ್ವೇ ಸುರೇಶ್ವರಾಃ ।**
**ನನೃತುಶ್ಚಾಪ್ಸರಸ್ಸಂಘಾ ಗಂಧರ್ವಾ ಲಲಿತಂ ಜಗುಃ ॥ ೯೧ ॥**

**ವೇದಮಂತ್ರೈಸ್ತತೋ ದೇವಾ ಬ್ರಾಹ್ಮಣಾ ವೇದಪಾರಗಾಃ ।**
**ಸ್ತುವಂತಿ ತಂ ಮಹಾತ್ಮಾನಂ ಸುತಂ ವೈ ಕಶ್ಯಪಸ್ಯ ಚ ॥ ೯೨ ॥**

**ಬ್ರಹ್ಮಾ ರುದ್ರಶ್ಚ ವಿಷ್ಣುಶ್ಚ ವೇದಾಶ್ಚೈವ ಸಮಾಗತಾಃ ।**
**ಸಾಂಗೋಪಾಂಗೈಶ್ಚ ಸಂಯುಕ್ತಾಸ್ತಸ್ಮಿನ್ ಜಾತೇ ಮಹೌಜಸಿ ॥ ೯೩ ॥**

---

ವಂತರೂ ಆದ ಮುನಿಗಳೂ ಮಹಾತ್ಮರೂ ಸಹ ಸಂತೋಷಯುಕ್ತರಾಗಿ ಅಲ್ಲಿಗೆ ಬಂದರು.

೮೯-೯೦. ಆ ಮಹಾತ್ಮನು ಹುಟ್ಟುತ್ತಲೇ ಭಗಶಬ್ದವಾಚ್ಯರೂ, ತೇಜಸ್ಸಂಪನ್ನರೂ ಆದ ತಪಸ್ವಿಗಳೂ, ಕ್ಷೀರಾದಿ ಸಪ್ತ ಸಮುದ್ರಗಳೂ, ಪರ್ವತಗಳೂ, ಪವಿತ್ರವಾದ ನದಿಗಳೂ, ಚರಾಚರಾತ್ಮಕವಾದ ಸಮಸ್ತ ಭೂತಗಳೂ ದೇಹಧಾರಿಗಳಾಗಿ ಅಲ್ಲಿಗೆ ಬಂದರು.

೯೧ ಆ ಮಗುವು ಹುಟ್ಟಿದಸ್ರುಯುಕ್ತ ಸಮಸ್ತ ದೇವತೆಗಳೂ ಮಂಗಳಕರಗಳಾದ ಉತ್ಸವವನ್ನು ಮಾಡಿದರು. ಅಪ್ಸರಸ್ತ್ರೀಯರ ಸಮೂಹಗಳು ನಾಟ್ಯವಾಡಿದರು. ಗಂಧರ್ವರು ಇಂಪಾಗಿ ಹಾಡಿದರು.

೯೨. ಕಶ್ಯಪರ್ಷಿಯ ಪುತ್ರನೂ ಮಹಾತ್ಮನೂ ಆದ ಇಂದ್ರನನ್ನು ವೇದಪಾರಂಗತರಾದ ಬ್ರಾಹ್ಮಣರು ವೇದಮಂತ್ರಗಳಿಂದ ಸ್ತುತಿಸುತ್ತಿದ್ದರು.

೯೩. ಅಂಗ ರಹಸ್ಯಗಳಿಂದ ಕೂಡಿದ ನಾಲ್ಕು ವೇದಗಳೂ, ಬ್ರಹ್ಮ, ವಿಷ್ಣು, ಮಹೇಶ್ವರರೂ ಸಹ ಇಂದ್ರನನ್ನು ಸ್ತುತಿಸಿದರು.

**ಮಂಗಳಂ ಚಕ್ರಿರೇ ಸರ್ವೇ ಗೀತಪುಣ್ಯೈರ್ಮಹೋತ್ಸವೈಃ ।**
**ಹರ್ಷೇಣ ನಿರ್ಭರಾಸ್ಸರ್ವೇ ಪೂಜಯಂತೋ ಮಹೌಜಸಃ ॥ ೯೪ ॥**

**ಬ್ರಹ್ಮಾದ್ಯಾಶ್ಚ ತ್ರಯೋ ದೇವಾಃ ಕಶ್ಯಪೋಽಥ ಬೃಹಸ್ಪತಿಃ ।**
**ಚಕ್ರಿರೇ ನಾಮಕರ್ಮಾದಿ ತಸ್ಯೈವ ಹಿ ಮಹಾತ್ಮನಃ ॥ ೯೫ ॥**

**ವಸುದತ್ತೇತಿ ವಿಖ್ಯಾತೋ ವಸುದೇತಿ ಪುನಸ್ತ್ವವ ।**
**ಆಖಂಡಲೇತಿ ತ್ವನ್ನಾಮ ಮರುತ್ವಾನ್ನಾಮ ತೇ ಪುನಃ ॥ ೯೬ ॥**

**ಮಘವಾ ಚ ಬಿಡೌಜಾಸ್ತ್ವಂ ಪಾಕಶಾಸನ ಇತ್ಯಪಿ ।**
**ಶಕ್ರಶ್ಚೈವ ಹಿ ವಿಖ್ಯಾತ ಇಂದ್ರಶ್ಚೈವೇತಿ ತೇ ಸುತಃ ॥ ೯೭ ॥**

**ಇತ್ಯೇತಾನಿ ಚ ನಾಮಾನಿ ತಸ್ಯೈವ ಚ ಮಹಾತ್ಮನಃ ।**
**ಚಕ್ರುಶ್ಚ ದೇವತಾಸ್ಸರ್ವಾಃ ಸಂತುಷ್ಟಾ ಹೃಷ್ಟಮಾನಸಾಃ ॥ ೯೮ ॥**

**ಸ್ನಾನಂ ತೇ ಕಾರಯಾಮಾಸುಃ ಸಂಸ್ಕಾರಾಂಶ್ಚ ಮಹಾಸುರಾಃ ।**
**ವಿಶ್ವಕರ್ಮಾಣಮಾಹೂಯ ದದುರಾಭರಣಾನಿ ಚ ॥ ೯೯ ॥**

---

೯೪. ಎಲ್ಲರೂ ಗೀತಗಳಿಂದಲೂ ಉತ್ಸವಗಳಿಂದಲೂ ಮಂಗಳವನ್ನಾಚರಿಸಿದರು. ಎಲ್ಲರೂ ಸಂತೋಷದಿಂದ ಕೂಡಿ ಇಂದ್ರನನ್ನು ಪೂಜಿಸುತ್ತಿದ್ದರು.

೯೫. ಬ್ರಹ್ಮ ವಿಷ್ಣು ಮಹೇಶ್ವರರೂ, ಕಶ್ಯಪರ್ಷಿಯೂ ಬೃಹಸ್ಪತ್ಯಾಚಾರ್ಯನೂ ಇವರೆಲ್ಲರೂ ಸೇರಿ ಆ ಮಗುವಿಗೆ ನಾಮಕರಣವನ್ನು ಮಾಡಿದರು.

೯೬. ವಸುದತ್ತ, ವಸುದ, ಆಖಂಡಲ, ಮರುತ್ವಾನ್ ಎಂದು ಆ ಮಗುವಿಗೆ ಅನೇಕ ಹೆಸರುಗಳನ್ನಿಟ್ಟರು.

೯೭. ಕಶ್ಯಪನನ್ನು ಕುರಿತು ದೇವತೆಗಳು ನಿನ್ನ ಮಗನಿಗೆ ಮಘವ, ಬಿಡೌಜಾ, ಪಾಕಶಾಸನ, ಶಕ್ರ ಎಂದೂ ಹೆಸರಾಗಲಿ ಎಂದರು.

೯೮. ಇದೇ ಮೊದಲಾದ ಅನೇಕ ನಾಮಗಳನ್ನು ದೇವತೆಗಳು ಆ ಶಿಶುವಿಗೆ ಸಂತೋಷಪೂರ್ವಕವಾಗಿ ಇಟ್ಟರು.

೯೯. ಆತನಿಗೆ ದೇವತೆಗಳು ಸ್ನಾನವನ್ನು ಮಾಡಿಸಿದರು. ಅಸುರರು ಮಿಕ್ಕ ಸಂಸ್ಕಾರಗಳನ್ನು ನಡೆಸಿದರು. ವಿಶ್ವಕರ್ಮನನ್ನು ಕರೆದು ಅವನ ಮೂಲಕ ಆಭರಣಗಳನ್ನು ಕೊಡಿಸಿದರು.

ತಾನಿ ಪುಣ್ಯಾನಿ ದಿವ್ಯಾನಿ ತಸ್ಮೈ ತೇ ತು ಮಹಾತ್ಮನೇ ।
ಜಾತೇ ತಸ್ಮಿನ್ ಮಹಾಭಾಗೇ ದೇವರಾಜೇ ಮಹಾತ್ಮನಿ ॥ ೧೦೦ ॥

ಏವಂ ಮುದಂ ತತಃ ಪ್ರಾಪುಃ ಸರ್ವೇ ದೇವಾ ಮಹೌಜಸಃ ।
ಪುಣ್ಯೇ ತಿಥೌ ತಥಾ ಋಕ್ಷೇ ಸುಮುಹೂರ್ತೇ ಮಹಾಮತಿಃ ॥ ೧೦೧ ॥

ಇಂದ್ರತ್ವೇ ಸ್ಥಾಪಿತೋ ದೇವೈರಭಿಷಿಕ್ತಸ್ಸುಮಂಗಲೈಃ ।
ಪ್ರಾಪ್ತವಾನೈಂದ್ರಂ ಪದಂ ತೇನ ಪ್ರಸಾದಾತ್ತಸ್ಯ ಚಕ್ರಿಣಃ ॥ ೧೦೨ ॥

ತಪಶ್ಚಕಾರ ತೇಜಸ್ವೀ ವಸುದತ್ತಸ್ಸುರೇಶ್ವರಃ ।
ಉಗ್ರೇಣ ತೇಜಸಾ ಯುಕ್ತೋ ವಜ್ರಪಾಶಾಂಕುಶಾಯುಧಃ ॥ ೧೦೩ ॥

॥ ಸೂತ ಉವಾಚ ॥

ಉಗ್ರಂ ಸಮಸ್ತಂ ತಪಸಃ ಪ್ರಭಾವಂ
ವಿಲೋಕ್ಯ ಶುಕ್ರೋ ನಿಜಗಾದ ಗಾಥಾಂ ।
ಲೋಕೇಷು ಚಾನ್ಯೋ ನ ಭವಿಷ್ಯತೀತಿ
ಯಥಾ ಹಿ ಚಾಯಂ ಚ ಸುದರ್ಶನೀಯಃ ॥ ೧೦೪ ॥

---

೧೦೦-೧೦೨. ಹುಟ್ಟಿದ ಆ ಮಗುವಿಗೆ ಉತ್ತಮವಾದ ಅನೇಕ ಆಭರಣಗಳನ್ನು ಕೊಟ್ಟು ಬಹು ಸಂಭ್ರಮದಿಂದ ಪುಣ್ಯಕರವಾದ ತಿಥಿ, ವಾರ, ನಕ್ಷತ್ರ, ಯೋಗ, ಕರಣ ಇವುಗಳಿಂದ ಕೂಡಿದ ದಿವ್ಯಮುಹೂರ್ತದಲ್ಲಿ ದೇವತೆಗಳೆಲ್ಲರೂ ಸೇರಿ ಆ ಪುತ್ರನನ್ನು ಇಂದ್ರಪದವಿಯಲ್ಲಿ ಪಟ್ಟಾಭಿಷೇಕ ಮಾಡಿದರು. ಹೀಗೆ ವಿಷ್ಣುವಿನ ಅನುಗ್ರಹದಿಂದ ಆ ಕಶ್ಯಪಪುತ್ರನಿಗೆ ಇಂದ್ರಪದವಿಯು ಪ್ರಾಪ್ತವಾಯಿತು.

೧೦೩. ಬಳಿಕ ತೇಜಸ್ವಿಯಾದ ಇಂದ್ರನು ವಜ್ರಪಾಶಾಂಕುಶಾದಿಗಳಿಂದ ಭೂಷಿತನಾಗಿ ಉಗ್ರವಾದ ತಪಸ್ಸನ್ನಾಚರಿಸಿದನು.

೧೦೪. ಸೂತನು ಹೇಳಿದನು:—ಶುಕ್ರಾಚಾರ್ಯನು ಉಗ್ರತಪಸ್ವಿಯಾದ ಇಂದ್ರನ ಪ್ರಭಾವವನ್ನು ನೋಡಿ ಒಂದು ಗಾಥೆಯನ್ನು ಹೇಳಿದನು. ಲೋಕದಲ್ಲಿ ಇವನಂತೆ ಇರುವ ಸುಲಕ್ಷಣವಂತನಾದ ಪುರುಷನು ಮತ್ತೊಬ್ಬನು ಹುಟ್ಟುವುದಿಲ್ಲ.

**ವಿಷ್ಣೋಃ ಪ್ರಸಾದಾತ್ತಪಸಾ ಮಹಾತ್ಮನಾ**
**ಸಂಪ್ರಾಪ್ತಮೈಶ್ವರ್ಯಮಿಹೈವ ದಿವ್ಯಂ ।**
**ಅನೇನ ತುಲ್ಯೋ ನ ಭವಿಷ್ಯತೀತಿ**
**ಲೋಕೇಷು ಚಾನ್ಯಸ್ತಪಸೋಗ್ರವೀರ್ಯಃ** ॥ ೧೦೫ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ದೇವಾಸುರೈಃ ಇಂದ್ರಾಭಿಷೇಕೋನಾಮ ಪಂಚಮೋಧ್ಯಾಯಃ**

---

೧೦೫. ವಿಷ್ಣುವಿನ ಅನುಗ್ರಹದಿಂದಲೂ ತಪಸ್ಸಿನಿಂದಲೂ ಮಹಾತ್ಮನಾದ ಇಂದ್ರನಿಗೆ ದಿವ್ಯವಾದ ಐಶ್ವರ್ಯವು ಪ್ರಾಪ್ತವಾಯಿತು. ಲೋಕದಲ್ಲಿ ಇವನಂತೆ ಉಗ್ರತಪಸ್ಸನ್ನು ಮಾಡುವ ಮನುಷ್ಯನು ದೊರೆಯುವುದಿಲ್ಲ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ದೇವಾಸುರರು ಇಂದ್ರನಿಗೆ ಪಟ್ಟಾಭಿಷೇಕಮಾಡಿದರೆಂಬ ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ಷಷ್ಠೋಽಧ್ಯಾಯಃ

॥ ಸೂತ ಉವಾಚ ॥

ಕಶ್ಯಪಸ್ಯ ಚ ಭಾರ್ಯಾನ್ಯಾ ದನುರ್ನಾಮ ತಪಸ್ವಿನೀ ।
ಪುತ್ರಶೋಕೇನ ಸಂತಪ್ತಾ ಸಂಪ್ರಾಪ್ತಾ ದಿತಿಮಂದಿರಂ ॥ ೧ ॥

ರುದಮಾನಾ ಪ್ರಣಮ್ಯೈವ ಪಾದಪದ್ಮಯುಗಂ ತದಾ ।
ದುಃಖೇನ ಮಹತಾ ಪ್ರಾಪ್ತಾ ದಿತಿಸ್ತಾಂ ಪ್ರತ್ಯಬೋಧಯತ್ ॥ ೨ ॥

॥ ದಿತಿರುವಾಚ ॥

ತನ್ಮೈವ ಹಿ ಮಹಾಭಾಗೇ ಕಿಮಿದಂ ರೋದಕಾರಣಂ ।
ಪುತ್ರಿಣ್ಯಶ್ಚೈಕಪುತ್ರೇಣ ಲೋಕೇ ನಾರ್ಯೋ ಭವಂತಿ ವೈ ॥ ೩ ॥

---

## ಆರನೆಯ ಅಧ್ಯಾಯವು.

೧-೨. ಸೂತನು ಹೇಳುತ್ತಾನೆ:—ಇತ್ತ ಕಶ್ಯಪನ ಬೇರೊಬ್ಬ ಹೆಂಡತಿಯಾದ ದನು ಎಂಬುವಳು ಪುತ್ರಶೋಕದಿಂದ ದುಃಖಿತಳಾಗಿ ತನ್ನ ಸವತಿಯಾದ ದಿತೀದೇವಿಯ ಮನೆಗೆ ಬಂದು ಅತಿ ದುಃಖದಿಂದ ಕೂಡಿ ದಿತಿಯ ಕಾಲುಗಳಿಗೆ ಅಳುತ್ತಲೇ ನಮಸ್ಕರಿಸಿ ನಿಂತಿರಲು, ದಿತಿಯು ಅವಳನ್ನು ಸಮಾಧಾನಪಡಿಸಲು ಇಂತೆಂದಳು.

೩. ದಿತಿಯು ಹೇಳಿದಳು:—ಅಮ್ಮಾ ದನುದೇವಿ, ನೀನು ಹೀಗೆ ಅಳುವುದಕ್ಕೆ ಕಾರಣವೇನು? ಎಲೈ ಮಹಾಭಾಗಳೇ, ಲೋಕದಲ್ಲಿ ಸ್ತ್ರೀಯರಿಗೆ ಒಬ್ಬ ಮಗನಿದ್ದರೂ ಸಹ ಅವರು ಪುತ್ರವತಿಯರೆನಿಸಿಕೊಳ್ಳುವುದಿಲ್ಲವೇ?

ಭವತೀ ಶತ್ರುಪಕ್ಷಾಣಾಂ ಗುಣಿನಾಮಪಿ ಭಾಮಿನೀ ।
ಮಾತಾ ತ್ವಮಸಿ ಕಲ್ಯಾಣಿ ಶುಂಭಾದೀನಾಂ ಮಹಾತ್ಮನಾಂ ॥ ೪ ॥

ಕಸ್ಮಾದ್ದುಃಖಂ ತ್ವಯಾ ಪ್ರಾಪ್ತಮೇತನ್ಮೇ ಕಾರಣಂ ವದ ।
ಹಿರಣ್ಯಕಶಿಪೂ ರಾಜಾ ಹಿರಣ್ಯಾಕ್ಷೋ ಮಹಾಬಲಃ ॥ ೫ ॥

ಯಸ್ಯಾಃ ಪುತ್ರೌ ಮಹಾತ್ಮಾನೌ ಮಹಾಬಲಪರಾಕ್ರಮೌ ।
ಕಸ್ಮಾದ್ದುಃಖಂ ಮಹಜ್ಜಾತಂ ತಸ್ಮಾಚ್ಚೈವ ಸಖೀ ವದ ॥ ೬ ॥

ಏವಮಾಭಾಷ್ಯ ಸಾ ದೇವೀ ತಾಂ ದಿತಿರ್ದುಃಖಸಂಯುತಾಂ ।
ಆಖ್ಯಾಹಿ ಕಾರಣಂ ಸರ್ವಂ ಯಸ್ಮಾದ್ರೋದಿಷಿ ಸಾಂಪ್ರತಂ ।
ಏವಮಾಭಾಷ್ಯ ತಾಂ ದೇವೀಂ ವಿರರಾಮ ಮನಸ್ವಿನೀ ॥ ೭ ।

ದನುರುವಾಚ

ಪಶ್ಯ ಪಶ್ಯ ಮಹಾನಗೇ ಸಪತ್ನ್ಯಾಶ್ಚ ಮನೋರಥಂ ।
ಪರಿಪೂರ್ಣಂ ಕೃತಂ ತೇನ ದೇವದೇವೇನ ಚಕ್ರಿಣಾ ॥ ೮ ॥

---

೪. ಎಲೈ ಮಂಗಳಪ್ರದಳೇ, ತಮ್ಮ ಶತ್ರುಗಳಾದ ಇಂದ್ರಾದಿ ದೇವತೆಗಳ ಗುಣಗಳಿಗೆ ಸರಿಸಮಾನರಾದ ಶುಂಭಾದಿದಾನವರಿಗೆ ನೀನು ಜನನಿಯಾಗಿರುವೆಯಷ್ಟೆ.

೫-೭. ನಿನ್ನ ಮಗನಾದ ಹಿರಣ್ಯಕಶಿಪುವು ರಾಜನಾಗಿದ್ದಾನೆ. ಹಿರಣ್ಯಾಕ್ಷನೆಂಬ ಮತ್ತೊಬ್ಬ ಮಗನೂ ಮಹಾವೀರ್ಯವಂತನು. ಹೀಗಿದ್ದರೂ ನಿನ್ನ ದುಃಖಕ್ಕೆ ಕಾರಣವೇನು? ಎಲೌ ಸಖಿಯೇ, ನಿನ್ನ ಇಬ್ಬರು ಪುತ್ರರು ಮಹಾಮಹಿಮರೂ ಅತಿ ಪರಾಕ್ರಮಿಗಳೂ ಆಗಿರುವಾಗ ನಿನಗೆ ಯಾರಿಂದ ಇಂಥ ಮಹಾದುಃಖವು ಪ್ರಾಪ್ತವಾಯಿತು? ಇಗ ನೀನು ಅಳುತ್ತಿರುವುದೇತಕ್ಕೆ? ನಿನ್ನ ದುಃಖಕ್ಕೆ ಕಾರಣವನ್ನು ಹೇಳು ಎಂದು ದಿತಿಯು ದುಃಖಿತಳಾದ ದನುವನ್ನು ಸಂತೈಸಿದಳು.

೮. ದನುವು ಹೇಳಿದಳು :—ಎಲೈ ಮಹಾಭಾಗಳೇ, ನೋಡು, ದೇವದೇವನಾದ ಮಹಾವಿಷ್ಣುವಿನಿಂದ ನನ್ನ ಸವತಿಯ ಇಷ್ಟಾರ್ಥವು ನೆರವೇರಿಸಲ್ಪಟ್ಟಿತು.

ಯಥಾ ಪೂರ್ವಂ ವರೋ ದತ್ತೋ ಹ್ಯದಿತ್ಯೈ ದೇವಿ ವಿಷ್ಣುನಾ ।
ತಥೇದಾನೀಂ ಚ ಪುತ್ರಾಯ ತಸ್ಯಾ ದತ್ತೋ ವರೋ ಮಹಾನ್ ॥ ೯ ॥

ಕಶ್ಯಪಾದ್ವಿಶ್ರುತೋ ಜಾತಸ್ತ್ರೈಲೋಕ್ಯಪಾಲಕಸ್ಸುತಃ ।
ಇಂದ್ರತ್ವಂ ತಸ್ಯ ವೈ ದತ್ತಂ ತವ ಪುತ್ರಾದ್ವಿಹೃತ್ಯ ಚ ॥ ೧೦ ॥

ಮನೋರಥೈಸ್ತು ಸಂಪೂರ್ಣಾ ಅದಿತಿಸ್ಸುಖವರ್ಧಿನೀ ।
ಕನೀಯಾನ್ ವಸುದತ್ತಶ್ಚ ತಸ್ಯ ಪುತ್ರಶ್ಚ ಸಂಪ್ರತಿ ।
ಐಂದ್ರಂ ಪದಂ ಸುದುಷ್ಪ್ರಾಪ್ಯಂ ದೇವೈಸ್ಸಾರ್ಧಂ ಭುನಕ್ತಿ ಚ ॥ ೧೧ ॥

॥ ದಿತಿರುವಾಚ ॥

ಕಸ್ಮಾತ್ಪದಾತ್ಪರಿಭ್ರಷ್ಟೋ ಮಮ ಪುತ್ರೋ ಮಹಾಮತಿಃ ।
ಅನ್ಯೇ ಚ ದಾನವಾ ದೈತ್ಯಾಸ್ತೇಜೋಭ್ರಷ್ಟಾಃ ಕಥಂ ಸಖೇ ॥ ೧೨ ॥

ತಸ್ಯ ತ್ವಂ ಕಾರಣಂ ಬ್ರೂಹಿ ವಿಸ್ತರೇಣ ಯಶಸ್ವಿನಿ ।
ತಾಮಾಭಾಷ್ಯ ದಿತಿರ್ವಾಕ್ಯಂ ವಿರರಾಮ ಸುದುಃಖಿತಾ ॥ ೧೩ ॥

---

೯. ಎಲೈ ದೇವಿಯೇ, ಪೂರ್ವದಲ್ಲಿ ಅದಿತಿಗೆ ವಿಷ್ಣುವಿನಿಂದ ಯಾವರೀತಿ ವರವು ಕೊಡಲ್ಪಟ್ಟಿತೋ ಅದೇ ರೀತಿ ಈಗ ಅವಳ ಮಗನಿಗೂ ವಿಷ್ಣುವು ವರವನ್ನು ಕೊಟ್ಟನು.

೧೦. ನನ್ನ ಸವತಿಯಾದ ಅದಿತಿಗೆ ಮೂರುಲೋಕವನ್ನೂ ಪಾಲಿಸತಕ್ಕ ಮಗನು ಹುಟ್ಟಿರುವನೆಂದು ಕಶ್ಯಪನೇ ನನಗೆ ಹೇಳಿರುವನು. ನಿನ್ನ ಮಗನನ್ನು ತಪ್ಪಿಸಿ ಆ ಅದಿತಿಪುತ್ರನಿಗೆ ಇಂದ್ರಪದವಿಯನ್ನು ಕೊಟ್ಟಿರುವನಂತೆ.

೧೧. ಮೊದಲೇ ಅತಿ ಸೌಖ್ಯವನ್ನು ಅನುಭವಿಸುತ್ತಿರುವ ಅದಿತಿಯು ಈಗ ಇನ್ನೂ ಇಷ್ಟಾರ್ಥಗಳನ್ನು ಪಡೆದು ಸುಖಿಸುತ್ತಿದ್ದಾಳೆ. ಈಗ ಅವಳ ಕನಿಷ್ಠಪುತ್ರನಾದ ವಸುದತ್ತನೆಂಬುವನು ದೇವತೆಗಳೊಡಗೂಡಿ ಇಂದ್ರಪದವಿಯನ್ನು ಅನುಭವಿಸುತ್ತಲಿರುವನು. ಇದಕ್ಕಿಂತಲೂ ನನಗೆ ದುಃಖಕ್ಕೆ ಬೇರೆ ಕಾರಣವು ಬೇಕೇ?

೧೨-೧೩. ದಿತಿಯು ಹೇಳುತ್ತಾಳೆ:—ಮಹಾಬುದ್ಧಿಶಾಲಿಯಾದ ನನ್ನ ಮಗನು ಯಾವಾಗ ಇಂದ್ರಪದವಿಯಿಂದ ತಿರಸ್ಕೃತನಾದನು? ಎಲೈ ಸಖಿಯೇ

॥ ದನುರುವಾಚ ॥

ದೇವಾಶ್ಚ ದಾನವಾಸ್ಸರ್ವೇ ಕ್ರೋಧಾಚ್ಚ ಸಂಗರಂ ಗತಾಃ ।
ತತ್ರ ಯುದ್ಧಂ ಮಹಜ್ಜಾತಂ ದೈತ್ಯಸಂಕ್ಷಯಕಾರಣಂ ॥ ೧೪ ॥

ದೈವೈಶ್ಚ ವಿಷ್ಣುನಾ ಯುದ್ಧೇ ಮಮ ಪುತ್ರಾ ನಿಪಾತಿತಾಃ ।
ತಥೈವ ತವ ಪುತ್ರಾಶ್ಚ ಹತಾ ದೇವೇನ ಚಕ್ರಿಣಾ ॥ ೧೫ ॥

ವನೇ ಗಜಾನ್ ಯಥಾ ಸಿಂಹೋ ದ್ರಾವಯೇತ್ಸ್ವೇನ ತೇಜಸಾ ।
ತಥಾ ತೇ ಮಾಮಕಾಃ ಪುತ್ರಾಃ ನಿಹತಾಶ್ಶಂಖಪಾಣಿನಾ ॥ ೧೬ ॥

ಕಾಲನೇಮಿಮುಖಂ ಸೈನ್ಯಂ ದುರ್ಜಯಂ ಯತ್ಸುರಾಸುರೈಃ ।
ನಾಶಿತಂ ಮರ್ದಿತಂ ಸರ್ವಂ ದ್ರಾವಿತಂ ವಿಕಲೀಕೃತಂ ॥ ೧೭ ॥

ಸ್ವೀಯಾರ್ಚಿಭಿರ್ಯಥಾ ವಹ್ನಿಸ್ತೃಣಾನಿ ಜ್ವಾಲಯೇದ್ವನೇ ।
ತಥಾ ದೈತ್ಯಗಣಾನ್ ಸರ್ವಾನ್ನಿರ್ದಹತ್ಯೇವ ಕೇಶವಃ ॥ ೧೮ ॥

---

ಮಿಕ್ಕದಾನವರೂ ದೈತ್ಯರೂ ಹೇಗೆ ತೇಜೋಹೀನರಾದರು? ಎಲೈ ಯಶಸ್ವಿನಿಯೇ ಆ ನಾಶದ ಕಾರಣವನ್ನು ಹೇಳು ಎಂದು ದಿತಿಯು ದನುವನ್ನು ಪ್ರಶ್ನಿಸಿ, ಅತಿ ದುಃಖ ದಿಂದ ಸುಮ್ಮನಾದಳು.

೧೪. ದನುವು ಹೇಳಿದಳು:—ದೇವತೆಗಳೂ ದಾನವರೂ ಕೋಪದಿಂದ ಯುದ್ಧಸನ್ನದ್ಧರಾದರು. ಅವರಿಬ್ಬರಿಗೂ ದೊಡ್ಡ ಯುದ್ಧವಾಯಿತು. ಆ ಯುದ್ಧವೇ ದೈತ್ಯರ ನಾಶಕ್ಕೆ ಕಾರಣವಾಯಿತು.

೧೫. ದೇವತೆಗಳಿಂದೊಡಗೂಡಿದ ವಿಷ್ಣುವಿನಿಂದ ನನ್ನ ಪುತ್ರರು ಹತರಾದರು. ಹಾಗೆಯೇ ಚಕ್ರಧಾರಿಯಾದ ವಿಷ್ಣುವಿನಿಂದ ನಿನ್ನ ಪುತ್ರರೂ ಮೃತರಾದರು.

೧೬. ಕಾಡಿನಲ್ಲಿ ಸಿಂಹವು ತನ್ನ ಪರಾಕ್ರಮದಿಂದ ಆನೆಗಳನ್ನು ಹೇಗೆ ಭೀತಿ ಗೊಳಿಸುವುದೋ ಹಾಗೆಯೇ ವಿಷ್ಣುವು ನನ್ನ ಪುತ್ರರನ್ನೂ, ನಿನ್ನ ಪುತ್ರರನ್ನೂ ಸಂಹರಿಸಿದನು.

೧೭. ಕಾಲನೇಮಿ ಎಂಬ ಅಸುರನ ಮುಂದಾಳುತ್ವದಲ್ಲಿ ಸುರಾಸುರರಿಂದಲೂ ಜಯಿಸುವುದಕ್ಕೆ ಅಸಾಧ್ಯವಾದ ದೈತ್ಯ ಸೈನ್ಯವೆಲ್ಲವೂ ವಿಷ್ಣುವಿನಿಂದ ನುಚ್ಚುನೂರಾಗಿ ನಾಶವಸ್ಪೈದಿತು. ಕಳಿದುಳಿದ ಸೈನ್ಯವು ದಿಕ್ಕಾಪಾಲಾಗಿ ಚದರಿಹೋಯಿತು.

೧೮. ಕಾಡಿನಲ್ಲಿ ಅಗ್ನಿಯು ತನ್ನ ಜ್ವಾಲೆಗಳಿಂದ ಅಲ್ಲಿರುವ ಹುಲ್ಲನ್ನು ದಹಿಸು ವಂತೆ ಕೇಶವನು ದೈತ್ಯಸಮೂಹವನ್ನು ನಿರ್ಮೂಲಮಾಡಿದನು.

**ಮಮ ಪುತ್ರಾ ಮೃತಾ ದೇವಿ ಬಹುಶಸ್ತ್ವವ ನಂದನಾಃ ।**
**ವಹ್ನಿಂ ಪ್ರಾಪ್ಯ ಯಥಾ ಸರ್ವೇ ಶಲಭಾ ಯಾಂತಿ ಸಂಕ್ಷಯಂ ॥ ೧೯ ॥**

**ತಥಾ ತೇ ದಾನವಾಸ್ಸರ್ವೇ ಹರಿಂ ಪ್ರಾಪ್ಯ ಕ್ಷಯಂ ಗತಾಃ ।**
**ಏವಮೇವ ಹಿ ವೃತ್ತಾಂತಂ ದಿತಿಶ್ಶುಶ್ರಾವ ದಾರುಣಂ ॥ ೨೦ ॥**

**॥ ದಿತಿರುವಾಚ ॥**

**ವಜ್ರಪಾತೋಪಮಂ ಭದ್ರೇ ವದಸ್ಯೇವಂ ಕಥಂ ಮಮ ।**
**ಏವಮಾಭಾಷ್ಯ ತಾಂ ದೇವೀಂ ಮೂರ್ಛಿತಾ ನಿಪಪಾತ ಹ ॥ ೨೧ ॥**

**ಹಾ ಹಾ ಕಷ್ಟಂ ಮಹಜ್ಜಾತಂ ಬಹುದುಃಖಂ ಪ್ರತಾಪಕಂ ।**
**ರುರೋದ ಕರುಣಂ ಸಾಪಿ ಪುತ್ರಶೋಕಸಮಪೀಡಿತಾ ॥ ೨೨ ॥**

**ತಾಂ ದೃಷ್ಟ್ವಾ ಸ ಮುನಿಶ್ರೇಷ್ಠ ಉವಾಚ ವಚನಂ ಶುಭಂ ।**
**ಮಾ ರೋದಿಷಿ ಚ ಭದ್ರಂ ತೇ ನೈವಂ ಶೋಚಂತಿ ತ್ವದ್ವಿಧಾಃ ॥ ೨೩ ॥**

---

೧೯. ಪತಂಗಗಳು ಬೆಂಕಿಯ ಉರಿಗೆ ಸಿಕ್ಕಿ ಹೇಗೆ ನಾಶವಾಗುವುವೋ ಹಾಗೆಯೇ ನಿನ್ನ ಮಕ್ಕಳೂ ನನ್ನ ಮಕ್ಕಳೂ ವಿಷ್ಣುವಿನ ಕೂಡ ಯುದ್ಧಮಾಡಿ ನಾಶವಾದರು.

೨೦. ಹಾಗೆಯೇ ದಾನವರೂ ವಿಷ್ಣುವಿನಿಂದ ಹತರಾದರು ಎಂಬ ಘೋರ ವಾದ ವೃತ್ತಾಂತವನ್ನು ದಿತಿಯು ಕೇಳಿ ಬಳಿಕ,

೨೧. ದಿತಿಯು ಹೇಳಿದಳು :—ಎಲೈ ಮಂಗಳಕರಳೇ, ಸಿಡಿಲಿಗೆ ಸಮಾನ ವಾದ ಈ ಸಮಾಚಾರವನ್ನು ನೀನು ಹೇಳುತ್ತಿರುವುದನ್ನು ನಾನೆಂತುಕೇಳಲಿ? ಎಂದು ಹೇಳಿ ಮೂರ್ಛೆಗೊಂಡು ಕೆಳಗೆ ಬಿದ್ದಳು.

೨೨. ಹಾ, ಕಷ್ಟ, ಕಷ್ಟ! ಈ ಮಹಾದುಃಖವು ನನ್ನನ್ನು ಸುಡುತ್ತಿರು ವುದಲ್ಲಾ, ಎಂದು ಪುತ್ರ ಮರಣ ದುಃಖದಿಂದ ನೊಂದಮನಸ್ಸುಳ್ಳ ಆಕೆಯು ಅಯ್ಯೋ, ಅಯ್ಯೋ, ಎಂದು ಬಹು ದುಃಖದಿಂದ ಗೋಳಿಡುತ್ತಿದ್ದಳು.

೨೩. ದಿತಿಯು ಹೀಗೆ ಅಳುತ್ತಿರುವುದನ್ನು ಕಶ್ಯಪನು ನೋಡಿ, ಅಳಬೇಡ, ನಿನಗೆ ಒಳ್ಳೆಯದಾಗುವುದು. ನಿನ್ನಂಥವರು ಅಳಬಾರದು ಎಂದು ಸಮಾಧಾನ ಮಾಡಿದನು.

**ಸತ್ತ್ವವಂತೋ ಮಹಾಭಾಗೇ ಲೋಭಮೋಹೇನ ವರ್ಜಿತಾಃ ।**
**ಕಸ್ಯ ಪುತ್ರಾ ಹಿ ಸಂಸಾರೇ ಕಸ್ಯ ದೇವಿ ಸುಬಾಂಧವಾಃ ॥ ೨೪ ॥**

**ನಾಸ್ತಿ ಕಸ್ಯ ಹಿ ಕೇನಾಽಪಿ ತತ್ಸರ್ವಂ ಶ್ರೂಯತಾಂ ಪ್ರಿಯೇ ।**
**ದಕ್ಷಸ್ಯಾಪಿ ಸುತಾ ಯೂಯಂ ಸುಂದರ್ಯಶ್ಚೈವ ಮಾಮಕಾಃ ॥ ೨೫ ॥**

**ಭವತೀನಾಮಹಂ ಭರ್ತಾ ಭರಕಃ ಪೂರಕಶ್ಶುಭೇ ।**
**ಪೋಷಕಃ ಪಾಲಕಶ್ಚೈವ ರಕ್ಷಕೋಽಸ್ಮಿ ವರಾನನೇ ॥ ೨೬ ॥**

**ಕಸ್ಮಾದ್ವೈರಂ ಕೃತಂ ಕ್ರೂರೈರಸುರೈರಜಿತಾತ್ಮಭಿಃ ।**
**ತವ ಪುತ್ರಾ ಮಹಾಭಾಗೇ ಸತ್ಯಧರ್ಮವಿವರ್ಜಿತಾಃ ॥ ೨೭ ॥**

**ತೇನ ದೋಷೇಣ ತೇ ಸರ್ವೇ ತವ ದೋಷೇಣ ವೈ ಶುಭೇ ।**
**ನಿಹತಾ ವಾಸುದೇವೇನ ದೇವೈಶ್ಚ ಸುನಿಪಾತಿತಾಃ ॥ ೨೮ ॥**

---

೨೪. ಎಲೈ ಮಹಾಭಾಗಳೇ, ಸತ್ತ್ವಗುಣಾಧಿಕರು ಲೋಭಕ್ಕೂ ಮೋಹಕ್ಕೂ ವಶರಾಗುವುದಿಲ್ಲ. ಈ ಸಂಸಾರದಲ್ಲಿ ಯಾರಿಗೆ ಯಾರು ಮಕ್ಕಳು? ಯಾರು ಯಾರಿಗೆ ಬಂಧುಗಳು ?

೨೫. ಒಬ್ಬರಿಂದ ಮತ್ತೊಬ್ಬರಿಗೆ ಆಗಬೇಕಾದ್ದೇನೂ ಇಲ್ಲ. ಅದೆಲ್ಲವನ್ನೂ ವಿಶದವಾಗಿ ಹೇಳುತ್ತೇನೆ ಕೇಳು. ನೀವೆಲ್ಲರೂ ದಕ್ಷನ ಹೆಣ್ಣುಮಕ್ಕಳು ಮತ್ತೂ ನನ್ನ ಭಾರ್ಯೆಯರು.

೨೬. ಎಲೈ ಮಂಗಳಾಂಗಿಯೇ, ನಿಮಗೆ ನಾನು ಗಂಡನು. ನಿಮ್ಮನ್ನು ಕಾಪಾಡುವವನೂ, ನಿಮ್ಮ ಇಷ್ಟಾರ್ಥಗಳನ್ನು ಪೂರೈಸಿ, ನಿಮ್ಮನ್ನು ಪೋಷಿಸಿ ಸಲಹುವವನೂ ನಾನೇ ಆಗಿರುವೆನು.

೨೭. ಎಲೈ ಮಹಾಭಾಗಳೇ, ನಿನ್ನ ಮಕ್ಕಳಾದರೋ ಜಿತೇಂದ್ರಿಯರಾಗಿರದೆ ಸ್ವೇಚ್ಛಾಚಾರಿಗಳಾಗಿರುವರು. ಸತ್ಯವನ್ನೂ ಧರ್ಮವನ್ನೂ ಬಿಟ್ಟು ಮನಸ್ಸಿಗೆ ನಡೆಯುತ್ತಿರುವರು. ಇಂತವರು ದೇವತೆಗಳೊಡನೆ ವೈರವನ್ನೇತಕ್ಕೆ ಬೆಳೆಸಬೇಕಾಗಿತ್ತು ?

೨೮. ಆ ನಿನ್ನ ದೋಷದಿಂದಲೂ ನಿನ್ನ ಮಕ್ಕಳ ದೋಷದಿಂದಲೂ ಅಸುರರು ವಿಷ್ಣುವಿನಿಂದಲೂ ದೇವತೆಗಳಿಂದಲೂ ಕೊಲ್ಲಲ್ಪಟ್ಟರು.

ತಸ್ಮಾಚ್ಛೋಕೋ ನ ಕರ್ತವ್ಯಃ ಸತ್ಯಮೋಕ್ಷವಿನಾಶನಃ ।
ಶೋಕೋ ಹಿ ನಾಶಯೇತ್ಪುಣ್ಯಂ ಕ್ಷಯಾತ್ಪುಣ್ಯಸ್ಯ ನಶ್ಯತಿ ॥ ೨೯ ॥

ತಸ್ಮಾಚ್ಛೋಕಂ ಪರಿತ್ಯಜ್ಯ ವಿಘ್ನರೂಪಂ ವರಾನನೇ ।
ಆತ್ಮದೋಷಪ್ರಭಾವೇಣ ದಾನವಾ ಮರಣಂ ಗತಾಃ ॥ ೩೦ ॥

ದೇವಾ ನಿಮಿತ್ತಭೂತಾಶ್ಚ ನಾಶಿತಾಸ್ಸ್ವೇನ ಕರ್ಮಣಾ ।
ಏವಂ ಜ್ಞಾತ್ವಾ ಮಹಾಭಾಗೇ ಸಮಾಗಚ್ಛ ಸುಖಂ ಪ್ರತಿ ॥ ೩೧ ॥

ಏವಮುಕ್ತ್ವಾ ಮಹಾಯೋಗೀ ತಾಂ ಪ್ರಿಯಾಂ ದುಃಖಭಾಗಿನೀಂ ।
ವಿಷಾದಾಚ್ಚ ನಿವೃತ್ತೋಽಸೌ ವಿರರಾಮ ಮಹಾಮತಿಃ ॥ ೩೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ದಿತಿವಿಲಾಪೋ ನಾಮ ಷಷ್ಠೋಽಧ್ಯಾಯಃ

---

೨೯. ಆದುದರಿಂದ ನೀನು ಶೋಕಿಸಬೇಡ. ದುಃಖವೆಂಬುದು ಸತ್ಯವನ್ನೂ ಮೋಕ್ಷವನ್ನೂ ನಾಶಮಾಡುವದು. ಶೋಕವು ಪುಣ್ಯವನ್ನು ನಾಶಮಾಡುವುದು. ಪುಣ್ಯವು ನಷ್ಟವಾದರೆ ಮರಣವು ತಪ್ಪದು.

೩೦. ಎಲೈ ಸುಂದರಮುಖಿಯೇ, ವಿಘ್ನಕಾರಿಯಾದ ಈ ಶೋಕವನ್ನು ತ್ಯಜಿಸು. ದಾನವರು ತಮ್ಮ ದೋಷದಿಂದಲೇ ಮೃತರಾದರು.

೩೧. ಹೇ ಮಹಾನುಭಾವಳೇ, ನಿನ್ನ ಪುತ್ರರು ಸಾಯುವುದಕ್ಕೆ ದೇವತೆಗಳು ನಿಮಿತ್ರಮಾತ್ರರೆಂದು ತಿಳಿ. ತಮ್ಮ ಕರ್ಮದಿಂದಲೇ ಅಸುರರು ನಾಶವನ್ನೈದಿದರು. ಇದನ್ನು ನೀನು ಚೆನ್ನಾಗಿ ತಿಳಿದು ನಿಶ್ಚಿಂತಳಾಗು ಎಂದು ಸಂತೈಸಿದನು.

೩೨. ಮಹಾಬುದ್ಧಿಶಾಲಿಯೂ ಜ್ಞಾನಿಯೂ ಆದ ಕಶ್ಯಪನು ದುಃಖಪಡುತ್ತಿರುವ ಹೆಂಡತಿಯನ್ನು ಈ ರೀತಿಯಾಗಿ ಸಮಾಧಾನಪಡಿಸಿ ತಾನೂ ಸಹ ದುಃಖವನ್ನು ಬಿಟ್ಟು ಸಮಾಧಾನದಿಂದಿದ್ದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ದಿತಿಯ ವಿಲಾಪವೆಂಬ
ಆರನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ಸಪ್ತಮೋಽಧ್ಯಾಯಃ

॥ ದಿತಿರುವಾಚ ॥

ಸತ್ಯಮುಕ್ತಂ ತ್ವಯಾ ನಾಥ ಸರ್ವಮೇವ ನ ಸಂಶಯಃ ।
ಭರ್ತೃಸ್ನೇಹಂ ಪರಿತ್ಯಜ್ಯ ಗತಾ ಸಾಪತ್ನಜಂ ದ್ವಿಜ ॥ ೧ ॥

ಅಭಿಮಾನೇನ ದುಃಖೇನ ಮಾನಭಂಗೇನ ಸತ್ತಮ ।
ಮಹಾದುಃಖೇನ ಸಂತಪ್ತಾ ಕರಿಷ್ಯೇ ಪ್ರಾಣಮೋಚನಂ ॥ ೨ ॥

॥ ಕಶ್ಯಪ ಉವಾಚ ॥

ಶ್ರೂಯತಾಮಭಿಧಾಸ್ಯಾಮಿ ಯಥಾ ಶಾಂತಿರ್ಭವಿಷ್ಯತಿ ।
ನ ಕಃ ಕಸ್ಯ ಭವೇತ್ಪುತ್ರೋ ನ ಮಾತಾ ನ ಪಿತಾ ಶುಭೇ ॥ ೩ ॥

---

೧. ದಿತಿಯು ಹೇಳುತ್ತಾಳೆ :—ಎಲೈ ನಾಥನೇ, ನೀನು ಹೇಳಿದುದು ಸತ್ಯವು. ಸಂಶಯವಿಲ್ಲ. ಗಂಡನಲ್ಲಿರುವ ಸ್ನೇಹವನ್ನು ಬಿಟ್ಟು ಸವತಿಯಿಂದ ಹುಟ್ಟಿದ ದ್ವೇಷವನ್ನು ಹೊಂದಿ ದುಃಖಪಡುತ್ತಿರುವೆನು.

೨. ಅಭಿಮಾನದಿಂದಲೂ ಮಾನಹಾನಿಯಿಂದಲೂ ಉಂಟಾದ ಅತಿಶಯ ದುಃಖದಿಂದ ನಾನು ಬೆಂದುಹೋಗಿದ್ದೇನೆ. ಆದ್ದರಿಂದ ಪ್ರಾಣತ್ಯಾಗವನ್ನು ಮಾಡುತ್ತೇನೆ.

೩. ಕಶ್ಯಪನು ಹೇಳುತ್ತಾನೆ :—ಎಲೈ ಶುಭಕರಳೇ, ನಿನ್ನ ಮನಸ್ಸುಸಮಾಧಾನ ಹೊಂದುವಂತೆ ಇನ್ನೂ ವಿವರವಾಗಿ ಹೇಳುತ್ತೇನೆ. ಯಾವನೂ ಯಾವನಿಗೆ ಮಗನಾಗುವುದಿಲ್ಲ. ಯಾರಿಗೆ ಯಾರೂ ತಾಯಿಯಾಗುವುದಿಲ್ಲ. ಯಾರು ಯಾರಿಗೆ ತಂದೆಯೂ ಆಗುವುದಿಲ್ಲ.

ನ ಭ್ರಾತಾ ಬಾಂಧವಾಃ ಕಸ್ಯ ನ ಚ ಸ್ವಜನಬಾಂಧವಾಃ ।
ಏವಂ ಸಂಸಾರಸಂಬಂಧೋ ಮಾಯಾಮೋಹಸಮನ್ವಿತಃ ॥ ೪ ॥

ಸ್ವಯಮೇವ ಪಿತಾ ದೇವಿ ಸ್ವಯಂ ಮಾತಾಥ ಬಾಂಧವಾಃ ।
ಸ್ವಯಂ ಸ್ವಜನವರ್ಗಶ್ಚ ಸ್ವಯಂ ಸರ್ವಸ್ಸನಾತನಃ ॥ ೫ ॥

ಆಚಾರೇಣ ನರೋ ದೇವಿ ಸುಖಿತ್ವಮುಪಜಾಯತೇ ।
ಅನಾಚಾರೇಣ ಪಾಪೇನ ನಾಶಂ ಯಾತಿ ತಥಾ ಧ್ರುವಂ ॥ ೬ ॥

ಕ್ರೂರಯೋನಿಂ ಪ್ರಯಾತ್ಯೇವಂ ನರೋ ದೇವಿ ನ ಸಂಶಯಃ ।
ಕರ್ಮಣಾ ಸತ್ಯಹೀನೇನ ಮಹಾಪಾಪೇನ ಮೋಹಿತಃ ॥ ೭ ॥

ರಿಪುತ್ವಂ ವರ್ತತೇ ಮರ್ತ್ಯಃ ಪ್ರಾಣಿನಾಂ ನಿತ್ಯಸಂಸ್ಥಿತಃ ।
ಸತ್ಯೇನ ವರ್ತತೇ ಮರ್ತ್ಯೋ ಯದಾ ಲೋಕೇ ಪ್ರಿಯೇ ಶುಭೇ ।
ತದಾ ತಸ್ಯ ಭವಂತ್ಯೇವಂ ಮಿತ್ರಾಸ್ಸರ್ವತ್ರ ಭಾಮಿನಿ ॥ ೮ ॥

---

೪. ಯಾರಿಗೆ ಯಾರೂ ಸಹೋದರರಾಗಲೀ ಬಂಧುವಾಗಲೀ ಸ್ವಜನರಾಗಿ ಯಾಗಲೀ ಆಗುವುದಿಲ್ಲ ಈ ರೀತಿ ಸಂಸಾರಸಂಬಂಧವು ಮಾಯೆಯಿಂದಲೂ ಮೋಹದಿಂದಲೂ ಉಂಟಾಗಿದೆ.

೫. ಎಲೈ ದೇವಿಯೇ, ತನಗೆ ತಾನೆ ತಂದೆಯು, ತಾನೇ ತಾಯಿಯು, ತಾನೇ ಬಂಧುವು, ತಾನೇ ಸ್ವಜನವು, ಕಡೆಗೆ ತಾನೇ ಸನಾತನಪುರುಷನೂ ಆಗಿರುತ್ತಾನೆ. ಎಂದರೆ ತಾನು ಮಾಡಿದ ಕರ್ಮವೇ ತನಗೆ ಸುಖದುಃಖಗಳನ್ನುಂಟುಮಾಡುವುದು. ಬೇರೆ ಯಾರೂ ಸುಖದುಃಖಗಳಿಗೆ ಕಾರಣರಲ್ಲ.

೬. ಎಲೈ ದೇವಿ, ಮನುಷ್ಯನು ಸದಾಚಾರದಿಂದ ಸುಖವನ್ನು ಅನುಭವಿಸುತ್ತಾನೆ. ಪಾಪಪ್ರಚುರವಾದ ಅನಾಚಾರದಿಂದ ಖಂಡಿತವಾಗಿ ನಾಶಹೊಂದುತ್ತಾನೆ.

೭. ಮಾನವನು ಸತ್ಯಬಾಹಿರವಾದ ಕರ್ಮದಿಂದ ಉಂಟಾಗುವ ಮಹಾಪಾಪದಿಂದ ಮೋಹಿತನಾಗಿ ಖಂಡಿತವಾಗಿಯೂ ನೀಚಯೋನಿಯಲ್ಲಿ ಹುಟ್ಟುತ್ತಾನೆ. ಇದರಲ್ಲಿ ಸಂಶಯವಿಲ್ಲ.

೮. ಎಲೈ ಪ್ರಿಯಳೇ, ಲೋಕದಲ್ಲಿ ಪ್ರಾಣಿಗಳಿಗೆ ಕೇಡನ್ನು ಬಯಸುವ ಮನುಷ್ಯನಿಗೆ ಎಲ್ಲರೂ ಶತ್ರುಗಳಾಗುತ್ತಾರೆ. ಸತ್ಯವಚನದಿಂದ ನಡೆಯುವ ಮನುಷ್ಯನಿಗೆ ಎಲ್ಲರೂ ಹಿತಚಿಂತಕರಾಗುವರು.

**ಕೃಷಿಕಾರೋ ಯದಾ ದೇವಿ ಕ್ಷೇತ್ರೇ ಬೀಜಂ ಸುಸಂಸ್ಥಿತಃ ।**
**ಯಾದೃಶಂ ತು ವಪತ್ಯೇವ ತಾದೃಶಂ ಫಲಮುಶ್ನುತೇ　　　　॥ ೯ ॥**

**ತಥಾ ಚ ತವ ಪುತ್ರೈಶ್ಚ ಸಾಧುಭಿಸ್ಸ್ಪರ್ಧಿತಂ ಸಹ ।**
**ಕರ್ಮಣಸ್ತಸ್ಯ ತಸ್ಮಾತ್ತ್ವಂ ಫಲಂ ಭುಂಕ್ಷ್ವ ಸುಸಂಸ್ಥಿತಂ　　　　॥ ೧೦ ॥**

**ತವ ಪುತ್ರಾ ಮಹಾಭಾಗೇ ತಪಶ್ಶಾಂತಿವಿವರ್ಜಿತಾಃ ।**
**ತೇನ ಪಾಪೇನ ತೇ ಸರ್ವೇ ಪತಿತಾ ವೈ ಮಹತ್ಪದಾತ್　　　　॥ ೧೧ ॥**

**ಏವಂ ಜ್ಞಾತ್ವಾ ಶಮಂ ಗಚ್ಛ ಮುಂಚ ದುಃಖಂ ಸುಖಂ ತಥಾ ।**
**ಕಸ್ಯ ಪುತ್ರಾಶ್ಚ ಮಿತ್ರಾಣಿ ಕಸ್ಯ ಸ್ವಜನಬಾಂಧವಾಃ ।**
**ಆತ್ಮಕರ್ಮಾನುಸಾರೇಣ ಫಲಂ ಭುಂಜಂತಿ ಜಂತವಃ　　　　॥ ೧೨ ॥**

**ಪರಾರ್ಥೇ ಚಿಂತನಂ ದೇವಿ ತತ್ತ್ವಜ್ಞಾನೇನ ಪಂಡಿತಾಃ ।**
**ನ ಕುರ್ವಂತಿ ಮಹಾತ್ಮಾನೋ ವ್ಯರ್ಥಮೇವಂ ನ ಸಂಶಯಃ　　　　॥ ೧೩ ॥**

---

೯. ವ್ಯವಸಾಯವನ್ನು ಮಾಡುವವನು ಭೂಮಿಯಲ್ಲಿ ಎಂತಹ ಬೀಜವನ್ನು ಬಿತ್ತುತ್ತಾನೆಯೋ ಅಂತಹ ಫಲವನ್ನೇ ಹೊಂದುವನು.

೧೦. ಹಾಗೆಯೇ ನಿನ್ನ ಮಕ್ಕಳು ಸಾಧುಗಳೊಡನೆ ಜಗಳವಾಡಿದರು. ಆ ಕರ್ಮದ ಫಲವನ್ನು ನೀನೂ ಅನುಭವಿಸಬೇಕಾಯಿತು.

೧೧. ಎಲೈ ಪುಣ್ಯವಂತಳೇ, ನಿನ್ನ ಮಕ್ಕಳಾದರೋ ತಪಸ್ಸು, ಶಾಂತಿ ಇವುಗಳನ್ನು ಬಿಟ್ಟು ದುರಾಚಾರಿಗಳಾಗಿದ್ದರು. ಆ ಪಾಪದಿಂದಲೇ ಅವರೆಲ್ಲರೂ ಮಹತ್ಪದವಿಯಿಂದ ಅಧೋಗತಿಗೆ ಇಳಿಯಬೇಕಾಯಿತು.

೧೨. ಈ ರೀತಿ ತಿಳಿದು ಮನಃಶಾಂತಿಯನ್ನು ಹೊಂದು. ಸುಖವನ್ನೂ ದುಃಖವನ್ನೂ ಸಮವೆಂದು ತಿಳಿದು ಸಮಾಧಾನವನ್ನು ತಂದುಕೋ. ಯಾರು ಯಾರಿಗೆ ಪುತ್ರರು ? ಮಿತ್ರರೂ ಬಂಧುಗಳೂ ಸ್ವಂತಜನರೂ ಎಂದರೇನು ? ಪ್ರಾಣಿಗಳು ತಮ್ಮ ತಮ್ಮ ಕರ್ಮಾನುಸಾರವಾಗಿ ಫಲವನ್ನು ಅನುಭವಿಸುತ್ತವೆ.

೧೩. ಜ್ಞಾನಿಗಳು ಇನ್ನಾವ ವಿಷಯವನ್ನೂ ಗಮನಿಸದೆ ತತ್ತ್ವಜ್ಞಾನದಲ್ಲಿ ಮಾತ್ರ ಮಗ್ನರಾಗಿರುತ್ತಾರೆ. ನಿಶ್ಚಯವಾಗಿಯೂ ವ್ಯರ್ಥವಾಗಿ ಕಾಲ ಕಳೆಯುವುದಿಲ್ಲ.

**ಪಂಚಭೂತಾತ್ಮಕಂ ಕಾಯಂ ಕೇವಲಂ ಸಂಧಿಜರ್ಜರಂ ।**
**ಆತ್ಮಾ ಮಿತ್ರಂ ಕೃತಂ ತೇನ ಸರ್ವಂ ದೇವಿ ನಿಶಾಮಯ ॥ ೧೪ ॥**

**ಆತ್ಮಾ ನಾಮ ಮಹಾಪುಣ್ಯಃ ಸರ್ವಗಸ್ಸರ್ವದರ್ಶನಃ ।**
**ಸರ್ವಸಿದ್ಧಿಸ್ತು ಸರ್ವಾತ್ಮಾ ಸಾತ್ತ್ವಿಕೆಸ್ಸರ್ವಸಿದ್ಧಿದಃ ॥ ೧೫ ॥**

**ಏವಂ ಸರ್ವಮಯೋ ದೇವಿ ಭ್ರಮತ್ಯೇಕೋ ನಿರಂಜನಃ ।**
**ಭ್ರಮತಾ ನಿರ್ಜನೇ ಯೇನ ಮೂರ್ತಿಮಂತೋ ದ್ವಿಜೋತ್ತಮಾಃ ॥ ೧೬ ॥**

**ಚತ್ವಾರೋ ದರ್ಶಿತಾಃ ಪುಣ್ಯಾಃ ಬುದ್ಧಿಮಂತೋ ಮಹೌಜಸಃ ।**
**ಪಂಚಮಶ್ಶ್ವಸನಶ್ಚೈವ ಪೂರ್ವಾಣಾಂ ಮಿತ್ರಮೇವ ಚ ॥ ೧೭ ॥**

**ಅಥೋ ಆತ್ಮಾ ಸಮಾಯಾತೋ ಜ್ಞಾನಸಾಹಾಯ್ಯ ಏವ ವಾ ।**
**ಸ ತಾನ್ ದೃಷ್ಟ್ವಾ ಮಹಾತ್ಮಾ ವೈ ಜ್ಞಾನಮಾತ್ಮಾ ಸಮಬ್ರವೀತ್ ॥ ೧೮ ॥**

---

೧೪. ಈ ದೇಹವು ಪೃಥಿವ್ಯಾದಿಪಂಚಭೂತಗಳಿಂದ ಮಾಡಲ್ಪಟ್ಟಿದ್ದು. ಅಲ್ಲಲ್ಲಿ ಸಂಧಿಸಿರೋಣದರಿಂದ ಶಿಥಿಲವಾದುದು. ಇಂಥ ಶರೀರದಲ್ಲಿ ಅಭಿಮಾನವನ್ನು ಬಿಟ್ಟು ಆತ್ಮನೊಡನೆ ಸ್ನೇಹಮಾಡಬೇಕು. ಎಲೈ ದೇವಿಯೇ, ಆ ರೀತಿ ಹೇಳುತ್ತೇನೆ ಕೇಳು.

೧೫. ಆತ್ಮನೆಂಬುದು ಮಹಾಪುಣ್ಯಮಯವಾದುದು. ಎಲ್ಲಾ ಕಡೆಯೂ ವ್ಯಾಪಿಸಿರುವಂತಹುದು. ಎಲ್ಲವನ್ನೂ ನೋಡುವಂತಹುದು. ಸರ್ವಸಿದ್ಧಿಗಳಿಂದಲೂ ಪೂರ್ಣವಾಗಿರುವುದು. ಎಲ್ಲರಲ್ಲಿಯೂ ಇರುವುದು. ಸತ್ತ್ವಗುಣಪ್ರಚುರವಾದುದು. ತನ್ನನ್ನು ಸೇವಿಸುವವರಿಗೆ (ಆತ್ಮನನ್ನು ತಿಳಿಯಬೇಕೆಂಬ ಇಚ್ಛೆಯುಳ್ಳವರಿಗೆ, ಸಮಸ್ತವನ್ನೂ ಕೊಡುವುದು.

೧೬-೧೮ ಇಂತಹ ಪ್ರಭಾವವುಳ್ಳ ಆತ್ಮನು ಯಾವುದರ ಲೇಪವೂ ಇಲ್ಲದೆ ಒಬ್ಬನೇ ಸುತ್ತುತ್ತಿರುವನು. ಇಂಥ ಆತ್ಮನು ನಿರ್ಜನವಾದ ಸ್ಥಳದಲ್ಲಿ ಬ್ರಾಹ್ಮಣ ದೇಹಧಾರಿಗಳಾದ ಪೃಥಿವಿ, ನೀರು, ಅಗ್ನಿ, ಆಕಾಶ ಇವರನ್ನು ನೋಡಿದನು. ಆಮೇಲೆ ಇವರ ಸಖನಾದ ವಾಯುವೂ ಬಂದನು. ಅಲ್ಲಿಗೆ ಜ್ಞಾನವೂ ಬಂದು ಸೇರಿತು. ಇವರೆಲ್ಲರನ್ನೂ ನೋಡಿ ಮಹಾತ್ಮನಾದ ಆತ್ಮನು ಜ್ಞಾನವನ್ನು ಕುರಿತು ಹೇಳಿದನು.

ಜ್ಞಾನಂ ಪಶ್ಯ ಅಮೀ ಪಂಚ ಮಂತ್ರಯಂತಃ ಪರಸ್ಪರಂ ।
ಗಚ್ಛ ತ್ವಂ ಮಮ ವಾಕ್ಯೇನ ಯೂಯಂ ಕ ಇತಿ ಪೃಚ್ಛ ಹ ॥ ೧೯ ॥

ಜ್ಞಾನಂ ವಾಕ್ಯಂ ಪರಂ ಶ್ರುತ್ವಾ ಸಾರ್ಥಸ್ತಸ್ಯ ಮಹಾತ್ಮನಃ ।
ತದಾಹಾಽಽತ್ಮಾನಮಾರಾಧ್ಯಮೇತೈಃ ಕಿಂ ತೇ ಪ್ರಯೋಜನಂ ।
ತತ್ತ್ವತೋ ಬ್ರೂಹಿ ತತ್ಸರ್ವಂ ಭವಾಂಚ್ಛುದ್ಧೋ ಹಿ ಸರ್ವದಾ ॥ ೨೦ ॥

॥ ಆತ್ಮೋವಾಚ ॥

ಏತೇ ಪಂಚ ಮಹಾಪ್ರಾಜ್ಞಾ ರೂಪವಂತೋ ಮನಸ್ವಿನಃ ।
ಗತ್ವಾ ಸಂದರ್ಶಯಾಮ್ಯೇತಾನಾಭಾಷ್ಯೇ ಜ್ಞಾನ ಶ್ರೂಯತಾಂ ॥ ೨೧ ॥

ಭವ್ಯಾನೇತಾನ್ ಪ್ರವಕ್ಷ್ಯಾಮಿ ಪಂಚಮೀಂ ಗತಿಮಾಗತಾನ್ ।
ದೂತ ತ್ವಂ ಗಚ್ಛ ಭೋ ಜ್ಞಾನ ಕುಶಲೋ ದೂತಕರ್ಮಣಿ ॥ ೨೨ ॥

॥ ಜ್ಞಾನ ಮುವಾಚ ॥

ತ್ವಮಾತ್ಮಂಚ್ಛ್ರೂಯತಾಂ ವಾಕ್ಯಂ ಸತ್ಯಂ ಸತ್ಯಂ ವದಾಮ್ಯಹಂ ।
ಏತೇಷಾಂ ಸಂಗತಿಸ್ತಾತ ಕಾರ್ಯಾ ನೈವ ತ್ವಯಾ ಕದಾ ॥ ೨೩ ॥

---

೧೯. "ಎಲೈ ಜ್ಞಾನವೇ ನೋಡು. ಈ ಐವರೂ ಒಬ್ಬರಿಗೊಬ್ಬರು ಮಾತನಾಡುತ್ತಿದ್ದಾರೆ. ನನ್ನ ಮಾತಿನಂತೆ ನೀನು ಅವರಲ್ಲಿಗೆ ಹೋಗಿ ನೀವು ಯಾರೆಂದು ಕೇಳು" ಎನ್ನಲು,

೨೦. ಜ್ಞಾನವು ಮಹಾತ್ಮನಾದ ಆತ್ಮನ ಮಾತನ್ನು ಕೇಳಿ, ಇವರಿಂದ ನಿನಗೇನು ಪ್ರಯೋಜನ? ನಿಜವಾಗಿ ಹೇಳು, ನೀನು ಸರ್ವದಾ ಶುದ್ಧನಲ್ಲವೆ?

೨೧-೨೨. ಆತ್ಮನು ಹೇಳುತ್ತಾನೆ:—ಎಲೈ ಜ್ಞಾನವೇ, ಈ ಐವರೂ ಮಹಾಬುದ್ಧಿವಂತರು, ರೂಪವಂತರು. ಆದುದರಿಂದ ಇವರನ್ನು ಹೋಗಿ ನೋಡುತ್ತೇನೆ. ಮತ್ತೂ ಮಾತನಾಡುತ್ತೇನೆ. ಈ ಐವರು ದಿವ್ಯಪುರುಷರೂ ಒಟ್ಟಿನಲ್ಲಿ ಸೇರಿರುವರು. ಅವರಿಗೆ ನಾನು ಹೇಳುತ್ತೇನೆ. ಎಲೈ ಜ್ಞಾನವೇ ನೀನು ದೌತ್ಯವನ್ನು ಮಾಡು. ನೀನು ದೂತಕಾರ್ಯದಲ್ಲಿ ನಿಪುಣನು. ಹೀಗೆನ್ನಲು,

೨೩-೨೪. ಜ್ಞಾನವು ಹೇಳುವುದು:—"ಎಲೈ ಆತ್ಮನೇ, ನನ್ನ ಮಾತನ್ನು ಕೇಳು. ನಿಜವಾಗಿಯೂ ಹೇಳುತ್ತೇನೆ. ಇವರುಗಳ ಸಹವಾಸವನ್ನು ನೀನು

ಪಂಚಾನಾಮಪಿ ಶುದ್ಧಾತ್ಮನ್ ನ ಕಾರ್ಯಂ ಶುಭಮಿಚ್ಛತಾ ।
ಭವತಸ್ಸಂಗತಿಂ ಮೋಹ ಇಚ್ಛತ್ಯೇಷ ಮಹಾಮತೇ ॥ ೨೪ ॥

॥ ಆತ್ಮೋವಾಚ ॥

ಏತೇಷಾಂ ಸಂಗತಿಂ ಜ್ಞಾನ ಕಸ್ಮಾದ್ವಾರಯತೇ ಭವಾನ್ ।
ತನ್ಮೇ ತ್ವಂ ಕಾರಣಂ ಬ್ರೂಹಿ ಯಾಥಾತಥ್ಯೇನ ಪಂಡಿತ ॥ ೨೫ ॥

॥ ಜ್ಞಾನ ಉವಾಚ ॥

ಏತೇಷಾಂ ಸಂಗಮಾತ್ರಾತ್ತು ಮಹದುಃಖಂ ಭವಿಷ್ಯತಿ ।
ದುಃಖಮೂಲಾ ಹಿ ಪಂಚೈವ ಶೋಕಸಂತಾಪಕಾರಕಾಃ ॥ ೨೬ ॥

ಏವಮಸ್ತು ಮಹಾಪ್ರಾಜ್ಞ ಕರಿಷ್ಯೇ ವಚನಂ ತವ ।
ಜ್ಞಾನಮಾಭಾಷ್ಯ ಸ ಹ್ಯಾತ್ಮಾ ಧ್ಯಾನೇನ ಸಹ ಸಂಗತಃ ॥ ೨೭ ॥

॥ ಕಶ್ಯಪ ಉವಾಚ ॥

ತತಃ ಪಂಚೈವ ತೇ ತತ್ರಾದ್ರಾಕ್ಷುರಾತ್ಮಾನಮೇವ ಚ ।
ಬುದ್ಧಿಮೂಚುಸ್ಸಮಾಹೂಯ ಸಂಗತ್ಯಾತ್ಮಾನಮೇವ ಹಿ ॥ ೨೮ ॥

---

ಯಾವಾಗಲೂ ಮಾಡಕೂಡದು. ಎಲೈ ಪರಿಶುದ್ಧನೇ, ಶುಭವನ್ನು ಕೋರುವವನು ಈ ಐವರ ಸಹವಾಸವನ್ನೂ ಮಾಡಲೇಬಾರದು. ಮಹಾಮತಿಯೇ ನಿನ್ನೊಡನೆ ಮೋಹನು ಸ್ನೇಹವನ್ನು ಅಪೇಕ್ಷಿಸುತ್ತಾನೆ.

೨೫. ಆತ್ಮನು ಹೇಳುತ್ತಾನೆ:—ಎಲೈ ಪಂಡಿತನೇ, ಇವರ ಸಹವಾಸವನ್ನು ಮಾಡಬೇಡವೆಂದು ಏತಕ್ಕೋಸ್ಕರ ನನ್ನನ್ನು ತಡೆಯುತ್ತೀಯೆ? ಅದಕ್ಕೆ ಸರಿಯಾದ ಕಾರಣವನ್ನು ಹೇಳು.

೨೬. ಜ್ಞಾನವು ಹೇಳುವುದು :—"ಇವರ ಸಹವಾಸಮಾತ್ರದಿಂದಲೇ ಮಹಾ ದುಃಖವುಂಟಾಗುವುದು. ಈ ಐದು ಜನರೇ ದುಃಖಕ್ಕೆ ಮೂಲಕಾರಣರು. ಶೋಕ ಸಂತಾಪಗಳನ್ನುಂಟುಮಾಡತಕ್ಕವರು" ಎನ್ನಲು,

೨೭. ಎಲೈ ಪ್ರಾಜ್ಞನೇ ಹಾಗೆಯೇ ಆಗಲಿ. ನಿನ್ನ ಮಾತಿನಂತೆ ನಡೆಯುತ್ತೇನೆ ಎಂದು ಆತ್ಮನು ಜ್ಞಾನಕ್ಕೆ ಹೇಳಿ ಧ್ಯಾನಮಗ್ನನಾದನು.

೨೮-೨೯. ಕಶ್ಯಪನು ಹೇಳುತ್ತಾನೆ:—ಅನಂತರ ಆ ಐವರೂ ಆತ್ಮನನ್ನು ನೋಡಿದರು. ಆತ್ಮನೊಡನೆ ಸ್ನೇಹಮಾಡಬೇಕೆಂಬ ಇಚ್ಛೆಯಿಂದ ಅವರು ಬುದ್ಧಿ

**ದೂತತ್ವಂ ಕುರು ಕಲ್ಯಾಣಿ ಹ್ಯಸ್ಮಾಕಮಾತ್ಮನಾ ಸಹ ।**
**ಪಂಚತತ್ತ್ವಾ ಮಹಾತ್ಮಾನೋ ವಿಶ್ವಸ್ಯ ಧಾರಕಾಶ್ಚ್ಯಭಾಃ ॥ ೨೯ ॥**

**ಭವಂತಂ ಮಿತ್ರಮಿಚ್ಛಂತಿ ಇತ್ಯಾಭಾಷ್ಯ ಮಹಾಮತಿಂ ।**
**ಗತ್ವಾ ಬುದ್ಧೇ ತ್ವಯಾ ಕಾರ್ಯಂ ಕರ್ತವ್ಯಂ ಸಾಂಪ್ರತಂ ವ್ರಜ ॥ ೩೦ ॥**

**ಏವಮಸ್ತು ಮಹಾಭಾಗಾಃ ಕರಿಷ್ಯೇ ಕಾರ್ಯಮುತ್ತಮಂ ।**
**ಏವಮಾಭಾಷ್ಯ ತಾನ್ ಸಾ ವೈ ಗತಾ ಹ್ಯಾತ್ಮಾನಮೇವ ತಂ ॥ ೩೧ ॥**

**ಅಹಂ ಬುದ್ಧಿರ್ಮಹಾಭಾಗ ಭವಂತಂ ಸಮುಪಾಗತಾ ।**
**ದೂತತ್ವೇ ಮಹತಾಂ ಪಾರ್ಶ್ವಾತ್ತೇಷಾಂ ತ್ವಂ ವಚನಂ ಶೃಣು ॥ ೩೨ ॥**

**ಭವನ್ಮೈತ್ರೀಂ ಸಮಿಚ್ಛಂತಿ ಹ್ಯಕ್ಷಯಾಂ ಪಂಚ ಚಾತ್ಮಕಾಃ ।**
**ಕುರು ಮೈತ್ರಂ ಮಹಾಪ್ರಾಜ್ಞ ಜಹಿ ಧ್ಯಾನಂ ಸುದೂರತಃ ॥ ೩೩ ॥**

---

ಯನ್ನು ಕರೆದು ಎಲೈ ಮಂಗಳಕರಳೇ, ಆತ್ಮನೊಡನೆ ನಮಗೆ ದೌತ್ಯವನ್ನು ಮಾಡು. ಆತ್ಮನೊಡನೆ ನಮ್ಮ ವಿಷಯವಾಗಿ ಪಂಚತತ್ತ್ವವುಳ್ಳವರೆಂದೂ ಪ್ರಪಂಚವನ್ನು ಧರಿಸಿರುವವರೆಂದೂ ಹೇಳು.

೩೦. ನಿನ್ನನ್ನು ಅವರು ಮಿತ್ರನನ್ನಾಗಿ ತಿಳಿದುಕೊಂಡಿದ್ದಾರೆ ಎಂಬುದಾಗಿ ತಿಳಿಸು. ಹೇ ಬುದ್ಧಿಯೇ, ಈ ಕಾರ್ಯವನ್ನು ಈಗಲೇ ನೆರವೇರಿಸಬೇಕು, ಹೊರಡು ಎಂದರು.

೩೧-೩೩. ಹಾಗೆಯೇ ಆಗಲಿ. ನಿಮ್ಮ ಕೆಲಸವನ್ನು ಮಾಡುತ್ತೇನೆಂದು ಹೇಳಿ ಬುದ್ಧಿಯು ಆತ್ಮನ ಹತ್ತಿರಕ್ಕೆ ಹೋಗಿ ಎಲೈ ಮಹಾಭಾಗ್ಯವಂತನೇ, ನಾನು ಬುದ್ಧಿಯು. ನಿನ್ನ ಬಳಿಗೆ ಬಂದಿದ್ದೇನೆ. ದೊಡ್ಡವರ ಕಡೆಯಿಂದ ದೌತ್ಯಕ್ಕಾಗಿ ನಾನು ಕಳುಹಿಸಲ್ಪಟ್ಟಿರುವೆನು. ಅವರ ಮಾತನ್ನು ಕೇಳು. ಎಲೈ ಮಹಾಪ್ರಜ್ಞೆಯುಳ್ಳವನೇ, ಆ ಐವರೂ ನಿನ್ನ ಸ್ನೇಹವನ್ನು ಇಚ್ಛಿಸುತ್ತಾರೆ. ಅವರೊಡನೆ ಸಹವಾಸವನ್ನು ಮಾಡು. ಧ್ಯಾನವನ್ನು ದೂರದಲ್ಲಿ ಬಿಡು ಎಂದಳು.

॥ ಜ್ಞಾನ ಉವಾಚ ॥

ನ ಕರ್ತವ್ಯಸ್ತ್ವಯಾ ಚಾತ್ಮನ್ ನೈತೇಷಾಂ ವೈ ಸಮಾಗಮಃ ।
ಏಷಾಂ ಸಂಸರ್ಗಮಾತ್ರೇಣ ಮಹದ್ದುಃಖಂ ಭವಿಷ್ಯತಿ ॥ ೩೪ ॥

ಮಯಾ ಜ್ಞಾನೇನ ಹೀನಸ್ತ್ವಂ ಕಥಂ ಕರ್ಮ ಕರಿಷ್ಯಸಿ ।
ಏವಮೇವ ನ ಕರ್ತವ್ಯಮೇತೇಷಾಂ ವೈ ಸಮಾಗಮಃ ॥ ೩೫ ॥

ಗರ್ಭವಾಸೋ ಹಿ ಭವತೋ ಭವಿಷ್ಯತ್ಯನ್ಯಥಾ ವಿಭೋ ।
ಜ್ಞಾನೇನೈವ ಮಯಾ ಹೀನೋ ಹ್ಯಜ್ಞಾನಂ ಯಾಸ್ಯಸಿ ಧ್ರುವಂ ॥ ೩೬ ॥

ಏವಮುಕ್ತ್ವಾ ತಮಾತ್ಮಾನಂ ವಿರರಾಮ ಮಹಾಮತಿಃ ।
ತತಸ್ತ್ವಾಮಾಗತಾಂ ಬುದ್ಧಿಮಾತ್ಮಾ ಪ್ರೋವಾಚ ನಿಶ್ಚಿತಂ ॥ ೩೭ ॥

ಜ್ಞಾನಧ್ಯಾನೌ ಮಹಾತ್ಮಾನಾತ್ಮಾನೋ ಮಮ ಶೋಭನೌ ।
ತತ್ರ ಯಾನಂ ನ ಮೇ ಯುಕ್ತಂ ತದ್ಬುದ್ಧೇ ಕಿಂ ಕರೋಮ್ಯಹಂ ॥ ೩೮ ॥

---

೩೪. ಜ್ಞಾನವು ಹೇಳುತ್ತದೆ:—ಎಲೈ ಆತ್ಮನೇ ಇವರ ಸಹವಾಸವನ್ನು ನೀನು ಮಾಡಬೇಡ. ಇವರ ಸಹವಾಸದಿಂದ ನಿನಗೆ ಹೆಚ್ಚಾದ ಕೇಡುಂಟಾಗುತ್ತದೆ.

೩೫. ಜ್ಞಾನವೆಂಬ ನಾನು ಇಲ್ಲದೆ ಇದ್ದರೆ ನೀನು ಕೆಲಸಗಳನ್ನು ಹೇಗೆ ಮಾಡುವೆ ? ಆದುದರಿಂದ ಅವರ ಸಹವಾಸವನ್ನು ಮಾಡಬಾರದು.

೩೬. ನನ್ನನ್ನು ಬಿಟ್ಟರೆ ನಿನಗೆ ಗರ್ಭವಾಸದುಃಖವು ಖಂಡಿತ. ಅದೂ ಅಲ್ಲದೇ ಅಜ್ಞಾನದಿಂದ ಖಂಡಿತವಾಗಿಯೂ ಆವರಿಸಲ್ಪಡುತ್ತೀಯೆ.

೩೭. ಜ್ಞಾನವು ಆತ್ಮನಿಗೆ ಈ ರೀತಿ ಹೇಳಿ ಸುಮ್ಮನಾಯಿತು. ಆಮೇಲೆ ಆತ್ಮನು ಬುದ್ಧಿಯನ್ನು ಕುರಿತು ಇಂತೆಂದನು.

೩೮. ನನಗೆ ಜ್ಞಾನವೂ ಧ್ಯಾನವೂ ಯೋಗ್ಯವಾದ ಸಹವಾಸವು. ಆದುದರಿಂದ ಆ ಐವರು ಇರುವ ಕಡೆ ಬರಲು ಸಾಧ್ಯವಿಲ್ಲ. ಎಲೈ ಬುದ್ಧಿಯೇ, ನಾನೇನು ಮಾಡಲಿ ? ಎನ್ನಲು,

**ಏವಂ ಶ್ರುತ್ವಾ ಗತಾ ಬುದ್ಧಿಸ್ತೇಷಾಂ ಪಾರ್ಶ್ವೇ ಯಶಸ್ವಿನೀ ।**
**ಸಮಾಚಷ್ಟೇ ಸಮಗ್ರಂ ತತ್ಕಥನಂ ಜ್ಞಾನಧ್ಯಾನಯೋಃ　　॥ ೩೯ ॥**

**ತತಸ್ತೇ ಪಂಚಕಾಸ್ಸರ್ವೇ ಆತ್ಮಾನಂ ಪ್ರತಿಜಗ್ಮಿರೇ ।**
**ಮೈತ್ರಮೇವ ಪ್ರತೀಚ್ಛಾಮೋ ಭವತೋ ನಿತ್ಯಮೇವ ಹಿ　　॥ ೪೦ ॥**

**ಯಸ್ಮಾಚ್ಛುದ್ಧೋಽಸಿ ಲೋಕೇಶ ತಸ್ಮಾತ್ತ್ವಾಂ ಸಮುಪಾಗತಾಃ ।**
**ಸ್ವಯಮೇವ ವಿಚಾರ್ಯೈವ ಹ್ಯುತ್ತರಂ ನಃ ಪ್ರದೀಯತಾಂ　　॥ ೪೧ ॥**

**॥ ಆತ್ಮೋವಾಚ ॥**

**ಯೂಯಂ ಪಂಚೈವ ಸಂಪ್ರಾಪ್ತಾ ಮಮ ಮೈತ್ರಂ ಸಮಿಚ್ಛಥ ।**
**ಸ್ವೀಯಂ ಗುಣಂ ಪ್ರಭಾವಂ ಚ ಕಥಯಂತು ಮಮಾಗ್ರತಃ　　॥ ೪೨ ॥**

**॥ ಭೂಮಿರುವಾಚ ॥**

**ಸರ್ವಕಾರ್ಯಸ್ಯ ಸಂಸ್ಥಾನಂ ಚರ್ಮಮಾಂಸಸಮನ್ವಿತಂ ।**
**ಅಸ್ಥಿಮೂಲದೃಢತ್ವಂ ಚ ನಖಲೋಮಸಮನ್ವಿತಂ　　॥ ೪೩ ॥**

---

೩೯. ಬುದ್ಧಿಯು ಈ ರೀತಿಯಾದ ಆತ್ಮನ ಮಾತನ್ನು ಕೇಳಿ ಹಿಂತಿರುಗಿ, ಆ ಐವರಿಗೂ ಜ್ಞಾನ, ಧ್ಯಾನ, ಇವರುಗಳ ಸಮಾಚಾರವೆಲ್ಲವನ್ನೂ ತಿಳಿಸಿದಳು.

೪೦-೪೧. ಆಮೇಲೆ ಐವರೂ ಆತ್ಮನ ಬಳಿಗೆ ಬಂದು ಅಯ್ಯಾ ನಾವು ನಿನ್ನೊಡನೆ ಸ್ನೇಹವನ್ನು ಅಪೇಕ್ಷಿಸುತ್ತೇವೆ. ನೀನು ಶುದ್ಧನಾಗಿರುವುದರಿಂದ ನಾವು ನಿನ್ನ ಬಳಿಗೆ ಬಂದೆವು. ನೀನು ಚೆನ್ನಾಗಿ ಆಲೋಚಿಸಿ ನಮಗೆ ಉತ್ತರವನ್ನು ಕೊಡು ಎಂದರು.

೪೨. ಆತ್ಮನು ಹೇಳುತ್ತಾನೆ:—ನೀವು ಐವರೂ ನನ್ನ ಸ್ನೇಹವನ್ನು ಅಪೇಕ್ಷಿಸಿರುವಿರಿ. ನಿಮ್ಮ ಗುಣ, ಪ್ರಭಾವ ಇವುಗಳನ್ನು ನನ್ನೆದುರಿಗೆ ವಿಶದವಾಗಿ ಹೇಳಿರಿ.

೪೩-೪೪. ಭೂಮಿಯು ಹೇಳಿತು :—ಎಲ್ಲಾ ಕೆಲಸಕ್ಕೂ ನಾನು ಆಧಾರವು ಮತ್ತು ದೇಹದಲ್ಲಿರುವ ಚರ್ಮ, ಮಾಂಸ, ಮೂಳೆ, ಗಟ್ಟಿಯಾಗಿರುವಿಕೆ, ಉಗುರು,

ಪ್ರಭಾವೋ ಹಿ ಮಹಾಪ್ರಾಜ್ಞ ಕಾಯಮಧ್ಯೇ ಮಮೈವ ಹಿ ।
ನಾಸಿಕಾಗಮನೋ ಗಂಧಃ ಸ ಮೇ ಭೃತ್ಯೋ ಮಹಾಮನಾಃ ॥ ೪೪ ॥

॥ ಆಕಾಶ ಉವಾಚ ॥

ಅಹಮಾಕಾಶಕಃ ಪ್ರಾಪ್ತೋ ಮಮ ಕಾಯೇ ಪ್ರಭಾವಕಂ ।
ಶ್ರೂಯತಾಮಭಿಧಾಸ್ಯಾಮಿ ಪರಬ್ರಹ್ಮಸ್ವರೂಪಿಣೇ ॥ ೪೫ ॥

ಬಾಹ್ಯಂತರಾವಕಾಶಶ್ಚ ಶೂನ್ಯಸ್ಥಾನೇ ವಸಾಮ್ಯಹಂ ।
ಮಮೈವ ಭೃತ್ಯೌ ಶ್ರವಣೇ ಶ್ರವಣಾರ್ಥಂ ಪ್ರತಿಷ್ಠಿತೌ ॥ ೪೬ ॥

॥ ವಾಯುರುವಾಚ ॥

ಯತ್ಸ್ವರೂಪೇ ಚ ನಿಃಶ್ವಾಸೇ ಕರೋಮ್ಯೇವಂ ಶುಭಾಶುಭಂ ।
ಕರ್ಮ ಕಾಯೇ ಸ್ಥಿತಂ ನಿತ್ಯಂ ಸ್ಪರ್ಶಾಖ್ಯಸ್ತತ್ರ ಮೇ ಗುಣಃ ॥ ೪೭ ॥

॥ ತೇಜ ಉವಾಚ ॥

ಕಾಯೇ ಸೂರ್ಯಸ್ಯ ವೈ ನಿತ್ಯಂ ವಿನಿಯೋಗಂ ಕರೋಮ್ಯಹಂ ।
ಸಬಾಹ್ಯಾಭ್ಯಂತರಂ ಸರ್ವಂ ದ್ರವ್ಯಾದ್ರವ್ಯಂ ಪ್ರದರ್ಶಯೇ ॥ ೪೮ ॥

---

ಕೂದಲು ಇವೆಲ್ಲವೂ ನನ್ನ ಸ್ವರೂಪವಾದ ಕಾರ್ಯಗಳೇ. ಮೂಗಿನಿಂದ ಗ್ರಹಿಸುವ ವಾಸನೆಯೇ ನನ್ನ ಆಳು.

೪೫-೪೬. ಬಳಿಕ ಆಕಾಶವು ಹೇಳಿತು :—ಆ ದೇಹದಲ್ಲಿ ಆಕಾಶಸ್ಥಾನವನ್ನು ಹೊಂದಿದೇನೆ. ಪರಬ್ರಹ್ಮಸ್ವರೂಪನಾದ ನಿನಗೆ ನನ್ನ ವಿಷಯವನ್ನು ಹೇಳುತ್ತೇನೆ. ಒಳಗೂ, ಹೊರಗೂ ಅವಕಾಶವುಳ್ಳವನಾಗಿ ಏನೂ ಇಲ್ಲದ ಜಾಗದಲ್ಲಿದ್ದೇನೆ. ಕೇಳು ವುದಕ್ಕೆ ಇರುವ ಎರಡು ಕಿವಿಗಳು ನನಗೆ ಆಳುಗಳಾಗಿವೆ.

೪೭. ಆಮೇಲೆ ವಾಯುವು ಹೇಳುತ್ತದೆ :—ಉಚ್ಛ್ವಾಸ ನಿಃಶ್ವಾಸಗಳು ನನ್ನ ಸ್ವರೂಪವು. ಇದರಿಂದ ಒಳ್ಳೆಯದು ಕೆಟ್ಟದು ಇವುಗಳನ್ನು ಮಾಡುತ್ತೇನೆ. ನಾನೂ ದೇಹದಲ್ಲಿದ್ದೇನೆ. ಇದರಲ್ಲಿ ಸ್ಪರ್ಶವೆಂಬುದು ನನ್ನ ಗುಣ.

೪೮-೪೯. ತೇಜಸ್ಸು ಹೇಳುತ್ತದೆ :—ನಾನು ಯಾವಾಗಲೂ ಸೂರ್ಯನ ಶರೀರದಲ್ಲಿ ಇರುವೆನು. ನಾನು ಒಳಗೂ ಹೊರಗೂ ಇರುವ ವಸ್ತುಗಳೆಲ್ಲವನ್ನೂ ನನ್ನ ಸ್ವರೂಪವಾದ ಬೆಳಕಿನಿಂದ ತೋರಿಸುತ್ತೇನೆ. ಪದಾರ್ಥಗಳನ್ನು ಕಂಡುಹಿಡಿ

**ತತ್ರ ನೇತ್ರೇ ಚ ಭೃತ್ಯೌ ಮೇ ದ್ರವ್ಯಲಬ್ಧಪ್ರಸಾಧಕೌ ।**
**ಏವಂ ಮಯಾತ್ಮವ್ಯಾಪಾರಸ್ತವಾಗ್ರೇ ಕಥಿತಃ ಪರಃ　　॥ ೪೯ ॥**

**॥ ಆಪ ಊಚುಃ ॥**

**ಶುಕ್ರಂ ಮಜ್ಜಾ ತಥಾ ಲಾಲಾ ಪಲಂ ತ್ವಕ್ಸಂಧಿಸಂಸ್ಥಿತಂ ।**
**ರುಧಿರಂ ಪ್ರೇಷಯಾಮೋ ವೈ ಕಾಯಮಧ್ಯೇಸ್ಥಿತಾ ವಯಂ　　॥ ೫೦ ॥**

**ಸಂಪೋಷಯಾಮೋಽಹರ್ನಿಶಮಮ್ಮೃತೇನ ಕಳೇಬರಂ ।**
**ಏವಂಮಯಃ ಸುವ್ಯಾಪಾರಃ ಕಾಯಪತ್ತನಕೇಽರ್ಪಿತಃ　　॥ ೫೧ ॥**

**ಅಮಾತ್ಯಂ ರಸನಾಂ ವಿದ್ಧಿ ರಸಾಸ್ವಾದಕರೀಂ ಪರಾಂ ।**

**॥ ನಾಸಿಕೋವಾಚ ॥**

**ಸುಗಂಧೇನ ಪರಾಂ ಪುಷ್ಟಿಂ ಕಾಯಸ್ಯಾಪಿ ಕರೋಮ್ಯಹಂ　　॥ ೫೨ ॥**

**ದುರ್ಗಂಧಂ ತು ಪರಿತ್ಯಜ್ಯ ಕಾಯೇ ಸರ್ವಂ ಪ್ರದರ್ಶಯೇ ।**
**ಬುದ್ಧಿಯುಕ್ತಾ ಮಹಾಭಾಗ ತಸ್ಯಾ ಭಾವೇನ ಭಾವಿತಾ　　॥ ೫೩ ॥**

---

ಯುವುದರಲ್ಲಿ ಕಣ್ಣುಗಳು ನನ್ನ ಸೇವಕರು. ಈ ರೀತಿ ದೇಹವೆಂಬ ಪಟ್ಟಣದಲ್ಲಿದ್ದು ಕೊಂಡು ನನ್ನ ಕೆಲಸವನ್ನು ಮಾಡುತ್ತಿರುವೆನು.

೫೦. ಜಲವು ಹೇಳಿತು:—ರೇತಸ್ಸು, ಕೊಬ್ಬು, ಜೊಲ್ಲು, ಸಂಧಿಯಲ್ಲಿರುವ ಮಾಂಸಖಂಡಗಳು ಇವು ನನ್ನ ರೂಪವು. ದೇಹಮಧ್ಯದಲ್ಲಿದ್ದುಕೊಂಡು ಎಲ್ಲಾ ಕಡೆಗೂ ರಕ್ತವನ್ನು ಕಳುಹಿಸುತ್ತಿರುತ್ತೇನೆ.

೫೧. ನೀರಿನಿಂದ ನಿತ್ಯವೂ ದೇಹವನ್ನು ಪೋಷಿಸುತ್ತಿರುತ್ತೇವೆ. ದೇಹವೆಂಬ ಪಟ್ಟಣದಲ್ಲಿ ಈರೀತಿಯಾದ ವ್ಯಾಪಾರ ನನ್ನದು. ರುಚಿಯನ್ನುಂಟುಮಾಡುವ ನಾಲಗೆಯು ನನ್ನ ಮಂತ್ರಿಯು.

೫೨-೫೩. ಮೂಗು ಹೇಳುತ್ತದೆ:—ಸುಗಂಧದಿಂದ ದೇಹಕ್ಕೆ ಪುಷ್ಟಿಯನ್ನು ಕೊಡುತ್ತೇನೆ. ದುರ್ಗಂಧವನ್ನು ಬಿಡಿಸಿ ಶರೀರದಲ್ಲಿ ಸರ್ವವನ್ನೂ ತೋರಿಸುತ್ತೇನೆ. ಎಲೈ ಮಹಾಭಾಗನೇ ಬುದ್ಧಿವಂತಿಕೆಯಿಂದ ಕೂಡಿಕೊಂಡು ಅದರಂತೆಯೇ ಇದ್ದು

ಸ್ವಾಮಿಕಾರ್ಯಾಯ ಕಾಯೇಽಸ್ಮಿನ್ನಹಂ ತಿಷ್ಠಾಮಿ ನಿಶ್ಚಲಾ ।
ಗಂಧಂ ಮಮ ಗುಣಂ ವಿದ್ಧಿ ದ್ವಿವಿಧಂ ಯತ್ಪ್ರವರ್ತಿತಂ ॥ ೫೪ ॥

॥ ಶ್ರವಣೇ ಊಚತುಃ ॥

ಕಾರ್ಯಾಕಾರ್ಯಾದಿಕಂ ಶಬ್ದಂ ಲೋಕೈರುಕ್ತಂ ಶುಭಾಶುಭಂ ।
ಶೃಣುಯಾವಸ್ಸುಕಾಯಸ್ಥೌ ಸತ್ಯಾಸತ್ಯಂ ಪ್ರಿಯಾಪ್ರಿಯಂ ॥ ೫೫ ॥

ಶಬ್ದೋ ಹಿ ಮೇ ಗುಣಃ ಪ್ರೋಕ್ತೋ ಮಮ ವ್ಯಾಪಾರ ಏವ ಹಿ ।
ಯೋಜಯಾಮಿ ನ ಸಂದೇಹೋ ಯದಾ ಬುದ್ಧಿಃ ಪ್ರಪೂರಯೇತ್ ॥ ೫೬ ॥

॥ ತ್ವಗುವಾಚ ॥

ಪಂಚರೂಪಾತ್ಮಕೋ ವಾಯುಶ್ಶರೀರೇಽಸ್ಮಿನ್ವ್ಯವಸ್ಥಿತಃ ।
ಸ ಬಾಹ್ಯಾಭ್ಯಂತರಾಂ ಚೇಷ್ಟಾಂ ತೇಷಾಂ ಜಾನಾಮಿ ನಿಶ್ಚಿತಂ ॥ ೫೭ ॥

ಶೀತೋಷ್ಣಮಾತಪಂ ವರ್ಷಂ ವಾಯೋಸ್ಸ್ಫುರಣಮೇವ ಚ ।
ಸರ್ವಂ ಜಾನಾಮಿ ಸಂಸ್ಪರ್ಶಾದಂಗಶ್ಲೇಷಾದಿಕಂ ನೃಣಾಂ ॥ ೫೮ ॥

---

ಸ್ವಾಮಿಕಾರ್ಯಕ್ಕೋಸ್ಕರ ಈ ದೇಹದಲ್ಲಿ ನಿಶ್ಚಲನಾಗಿದ್ದೇನೆ. ಎರಡು ವಿಧಗಳಾಗಿರುವ ಸುಗಂಧ ದುರ್ಗಂಧಗಳು ನನ್ನ ಗುಣಗಳೆಂದು ತಿಳಿ.

೫೫. ಕಿವಿಗಳು ಹೇಳುತ್ತವೆ:—ಇಷ್ಟಶಬ್ದಗಳನ್ನೂ, ಅನಿಷ್ಟಶಬ್ದಗಳನ್ನೂ ಜನಗಳಿಂದ ಹೇಳಲ್ಪಡುವ ಶುಭವನ್ನೂ, ಅಶುಭವನ್ನೂ, ಸತ್ಯವನ್ನೂ, ಅಸತ್ಯವನ್ನೂ ಪ್ರಿಯವನ್ನೂ, ಅಪ್ರಿಯವನ್ನೂ ಶರೀರದಲ್ಲಿದ್ದುಕೊಂಡು ಕೇಳುತ್ತೇವೆ.

೫೬. ಶಬ್ದವು ನಮ್ಮ ಗುಣವು. ದೇಹದಲ್ಲಿದ್ದುಕೊಂಡು ಬುದ್ಧಿಯು ಹೇಳಿದಾಗ ಅದರಂತೆ ನಡೆಯುವುದು ನಮ್ಮ ವ್ಯಾಪಾರವು.

೫೭-೫೮. ಚರ್ಮವು ಹೇಳುತ್ತದೆ:—ಈ ಶರೀರದಲ್ಲಿ ವಾಯುವು ಐದುವಿಧವಾಗಿ ಇರುವದು. ದೇಹದ ಒಳಗೂ ಹೊರಗೂ ಆಗುವ ವಾಯುವಿನ ಚಲನವನ್ನು ನಾನು ತಿಳಿಯುತ್ತೇನೆ. ಶೀತೋಷ್ಣಗಳು, ಬಿಸಿಲು, ಮಳೆ, ಗಾಳಿಯು ಬೀಸುವಿಕೆ, ಮಾನವರ ಮುಟ್ಟುವಿಕೆ, ಆಲಿಂಗನ ಇವೆಲ್ಲವನ್ನೂ ಸ್ಪರ್ಶದಿಂದ ತಿಳಿಯುತ್ತೇನೆ. ನನ್ನ

**ಸ್ಪರ್ಶ ಏವ ಗುಣೋ ಮಹ್ಯಮೇತತ್ಸರ್ವಂ ವದಾಮ್ಯಹಂ ।**
**ಏವಂ ಹಿ ತೇ ಸಮಾಖ್ಯಾತೋ ಹ್ಯಾತ್ಮವ್ಯಾಪಾರ ಏವ ಹಿ ॥ ೫೯ ॥**

**॥ ನೇತ್ರೇ ಊಚತುಃ ॥**

**ಸಂಸಾರೇ ಯಾನಿ ರೂಪಾಣಿ ಭವ್ಯಾಭವ್ಯಾನಿ ಸತ್ತಮ ।**
**ಯದಾ ಪ್ರೇರಯತೇ ಬುದ್ಧಿಸ್ತದಾ ಪಶ್ಯಾವ ನಾನ್ಯಥಾ ॥ ೬೦ ॥**

**ವಸಾವಃ ಕಾಯಮಧ್ಯೇ ವೈ ರೂಪಂ ಗುಣ ಇಹಾವಯೋಃ ।**
**ಏವಂ ವ್ಯಾಪಾರ ಉಕ್ತೋಽಸೌ ಕಾಯಮಧ್ಯೇ ಮಹಾಮತೇ ॥ ೬೧ ॥**

**॥ ಜಿಹ್ವೋವಾಚ ॥**

**ಬುದ್ಧಿಯುಕ್ತಾ ಹ್ಯಹಂ ತಾತ ರಸಭೇದಾನ್ವಿಚಾರಯೇ ।**
**ಕ್ಷಾರಮಾಮ್ಲಾದಿಕಂ ಸರ್ವಂ ನೀರಸಂ ಸ್ವಾದು ಚಿಂತಯೇ ॥ ೬೨ ॥**

**ವ್ಯಾಪಾರೇಣ ಹ್ಯನೇನಾಪಿ ನಿತ್ಯಯುಕ್ತಾ ವಸಾಮ್ಯಹಂ ।**
**ಇಂದ್ರಿಯಾಣಾಂ ಹಿ ಸರ್ವೇಷಾಂ ಬುದ್ಧಿರೇವ ಪ್ರಣಾಯಕಃ ॥ ೬೩ ॥**

**ಏವಂ ಪಂಚ ಸಮಾಯಾತಾನೀಂದ್ರಿಯಾಣಿ ಪ್ರಿಯೇ ಶೃಣು ।**
**ಸ್ವೀಯಾನಿ ಯಾನಿ ಕರ್ಮಾಣಿ ಕಥಯಂತಿ ಪುನಃ ಪುನಃ ॥ ೬೪ ॥**

---

ಗುಣವು ಸ್ಪರ್ಶವು. ಇವೆಲ್ಲವನ್ನೂ ಹೇಳಿದ್ದೇನೆ. ಈರೀತಿಯಾಗಿ ನನ್ನ ಕೆಲಸವನ್ನು ದೇಹದಲ್ಲಿದ್ದುಕೊಂಡು ನೆರವೇರಿಸುತ್ತೇನೆ.

೬೦-೬೧. ಕಣ್ಣುಗಳು ಹೇಳುತ್ತವೆ:—ಸಂಸಾರದಲ್ಲಿ ಪ್ರಾಪ್ತವಾಗಬಹುದಾದ ಒಳ್ಳೆಯ ಮತ್ತು ಕೆಟ್ಟ ರೂಪಗಳನ್ನು ಬುದ್ಧಿಯು ಪ್ರೇರಿಸಿದಾಗ ನೋಡುತ್ತೇವೆ. ದೇಹದ ಮಧ್ಯದಲ್ಲಿ ವಾಸಮಾಡುತ್ತೇವೆ. ನಮ್ಮ ಗುಣವು ರೂಪವು. ಎಲೈ ಮಹಾ ಬುದ್ಧಿಯುಳ್ಳವನೇ, ಇವೇ ನಮ್ಮ ವ್ಯಾಪಾರವು.

೬೨-೬೩. ನಾಲಗೆಯು ಹೇಳುತ್ತದೆ:—ಅಯ್ಯಾ, ನಾನು ಬುದ್ಧಿಯೊಡನೆ ಸೇರಿದಾಗ ಉಪ್ಪು, ಹುಳಿ ಮುಂತಾದುವನ್ನೂ, ಸಪ್ಪೆ, ರುಚಿಗಳನ್ನೂ ತಿಳಿಯುತ್ತೇನೆ. ಈ ವ್ಯಾಪಾರದಿಂದ ಕೂಡಿ ದೇಹದಲ್ಲಿದ್ದೇನೆ. ಸಮಸ್ತ ಇಂದ್ರಿಯಕ್ಕೂ ಬುದ್ಧಿಯೇ ಯಜಮಾನನು.

೬೪. ಈರೀತಿಯಾಗಿ ಪಂಚೇಂದ್ರಿಯಗಳು ಬಂದು ತಮ್ಮ ತಮ್ಮ ಕರ್ಮಗಳನ್ನು ಹೇಳಿದವು.

ಅಥ ಬುದ್ಧಿಸ್ಸಮಾಯಾತಾ ತಮುವಾಚ ಮಹಾಮತಿಂ ।
ಮದ್ವಿಹೀನೋ ಯದಾ ಕಾಯಸ್ತದಾ ನಶ್ಯತಿ ನಾನ್ಯಥಾ ॥ ೬೫ ॥

ತಸ್ಮಾತ್ತ್ವಂ ಮಾಂ ಸಮಾಸ್ಥಾಯ ಪ್ರವರ್ತಸ್ವ ಮಹಾಮತೇ ।
ಅಥ ಕರ್ಮ ಸಮಾಯಾತಮಾತ್ಮಾನಮಿದಮಬ್ರವೀತ್ ।
ಅಹಂ ಕರ್ಮ ಮಹಾಭಾಗ ತವ ಪಾರ್ಶ್ವಂ ಸಮಾಗತಂ ॥ ೬೬ ॥

ತ್ವಾಂ ಪ್ರೇಷಯಾಮ್ಯಹಂ ತಾತ ಯಥಾ ನ್ಯೆ ಯೇನ ಗಚ್ಛ ಹ ।
ಏವಮಾಕರ್ಣ್ಯ ತತ್ಸರ್ವಮಾತ್ಮಾ ಪ್ರೋವಾಚ ತಾನ್ ಪ್ರತಿ ॥ ೬೭ ॥

ಯೂಯಂ ಪಂಚಾತ್ಮಕಾ ಯುಕ್ತಾಃ ಸರ್ವಸಾಧಾರಣಾಃ ಕಿಲ ।
ತಸ್ಮಾನ್ಮೈತ್ರಂ ಸಮಿಚ್ಛಾಮಿ ತತ್ರ ಪಂಚಾತ್ಮಕಂ ಪ್ರತಿ ।
ಬ್ರುವಂತು ಕಾರಣಂ ಸರ್ವೇ ಮಾಮಗ್ರೇ ಸರ್ವಮೇವ ತತ್ ॥ ೬೮ ॥

---

೬೫. ಅನಂತರ ಬುದ್ಧಿಯು ಬಂದು ಆತ್ಮನೊಡನೆ ಈರೀತಿ ಹೇಳಿತು--ನಾನಿಲ್ಲದಿದ್ದರೆ ಶರೀರವು ನಾಶವಾಗುತ್ತದೆ, ಆದ್ದರಿಂದ ನೀನು ನನ್ನನ್ನು ಹೊಂದಿ ಕೆಲಸಗಳನ್ನು ಮಾಡು.

೬೬. ಆಮೇಲೆ ಕರ್ಮವು ಬಂದು ಆತ್ಮನನ್ನು ಕುರಿತು, ಎಲೈ ಮಹಾ ಭಾಗ್ಯವಂತನೇ, ನಾನು ಕರ್ಮವು, ನಿನ್ನ ಬಳಿಗೆ ಬಂದಿರುವೆನು.

೬೭. ಅಯ್ಯಾ, ನೀನು ಯಾವರೀತಿ ಹೋಗಬೇಕೋ ಹಾಗೆ ನಾನು ನಿನ್ನನ್ನು ಕಳುಹಿಸುತ್ತೇನೆ, ಎಂದಿತು. ಆತ್ಮನು ಇವೆಲ್ಲವನ್ನೂ ಕೇಳಿ ಎಲ್ಲರನ್ನೂ ಕುರಿತು ಹೀಗೆ ಹೇಳಿದನು.

೬೮. ನೀವು ಐವರೂ ಒಟ್ಟಿಗೆ ಸೇರಿಕೊಂಡು ಸಾಮಾನ್ಯವಾಗಿ ಎಲ್ಲರಲ್ಲೂ ಇರುವಿರಿ. ಈ ಪಂಚಾತ್ಮಕರಾದ ನಿಮ್ಮಲ್ಲಿ ನಾನು ಮಿತ್ರತ್ವವನ್ನು ಅಪೇಕ್ಷಿಸುತ್ತೇನೆ. ನನ್ನ ಸ್ನೇಹವನ್ನು ನೀವೂ ಕೋರುತ್ತಿರುವಿರಿ. ಅದರ ಕಾರಣವನ್ನು ನನಗೆ ವಿಶದವಾಗಿ ತಿಳಿಸಿ ಎಂದನು.

॥ ಪಂಚಾತ್ಮಕಾ ಊಚುಃ ॥

ಅಸ್ಮತ್ಸಂಗಪ್ರಸಂಗೇನ ಪಿಂಡಮೇವ ಪ್ರಜಾಯತೇ ।
ತಸ್ಮಿನ್ ಪಿಂಡೇ ಮಹಾದೇವ ಭವಾನ್ ವಸತಿ ಸುವ್ರತ ॥ ೬೯ ॥

ತಿಷ್ಠಾಮೋ ಹ ವಯಂ ಸರ್ವೇ ಪ್ರಸಾದಾತ್ತವ ತತ್ರ ಹಿ ।
ಏತಸ್ಮಾತ್ಕಾರಣಾನ್ಮೈತ್ರಮಿಚ್ಛಾಮಸ್ತವ ನಿತ್ಯಶಃ ॥ ೭೦ ॥

॥ ಆತ್ಮೋವಾಚ ॥

ಏವಮಸ್ತು ಮಹಾಭಾಗಾ ಭವತಾಂ ಪ್ರಿಯಮೇವ ಚ ।
ಕರಿಷ್ಯೇ ನಾತ್ರ ಸಂದೇಹೋ ಮೈತ್ರಂ ಹಿ ಪ್ರೀತಿಕಾರಣಾತ್ ॥ ೭೧ ॥

ವಾರ್ಯಮಾಣೋ ಮಹಾಭಾಗೋ ಜ್ಞಾನೇನಾಪಿ ಮಹಾತ್ಮನಾ ।
ಧ್ಯಾನೇನ ಚ ಮಹಾತ್ಮಾಸೌ ತೇಷಾಂ ಸಂಗತಿಮಾಗತಃ ॥ ೭೨ ॥

ಸ ತೈಃ ಪ್ರಮೋಹಿತಸ್ತತ್ರ ರಾಗದ್ವೇಷಾದಿಭಿಸ್ತಥಾ ।
ಪಂಚತತ್ತ್ವಸಮಾಯುಕ್ತಃ ಕಾಯತ್ವಂ ಗತವಾನ್ ಪ್ರಭುಃ ॥ ೭೩ ॥

---

೬೯: ಪಂಚಭೂತಗಳೂ ಒಟ್ಟಿಗೆ ಹೇಳುತ್ತವೆ:—ಎಲೈ ಶ್ರೇಷ್ಠವಾದ ನಡತೆಯುಳ್ಳವನೇ, ನಮ್ಮ ಸಹವಾಸದಿಂದ ಪಿಂಡವು ಉತ್ಪನ್ನವಾಗುವುದು. ಆ ಪಿಂಡದಲ್ಲಿ ನೀನು ವಾಸಮಾಡುವೆ.

೭೦. ನಿನ್ನನುಗ್ರಹದಿಂದ ನಾವೆಲ್ಲರೂ ಅದರಲ್ಲಿರಬೇಕಾಗಿದೆ. ಆದುದರಿಂದ ನಿನ್ನೊಡನೆ ಸ್ನೇಹವನ್ನು ಅಪೇಕ್ಷಿಸುತ್ತೇವೆ.

೭೧. ಆತ್ಮನು ಹೇಳಿದನು:—ಎಲೈ ಮಹಾಶಯರೇ, ಹಾಗೆಯೇ ಆಗಲಿ. ನಿಮ್ಮ ಇಷ್ಟದಂತೆ ನಡೆಯುತ್ತೇನೆ. ನಿಮ್ಮ ಪ್ರೀತಿಕಾರಣದಿಂದ ಸ್ನೇಹವನ್ನು ಮಾಡುತ್ತೇನೆ. ಸಂದೇಹವಿಲ್ಲ ಎನ್ನಲು,

೭೨. ಅವರ ಸಹವಾಸವು ಬೇಡವೆಂದು ಜ್ಞಾನಧ್ಯಾನಗಳು ಆತ್ಮನನ್ನು ಎಷ್ಟು ತಡೆದರೂ ಸಹ ಆತ್ಮನು ಅವರ ಮಾತನ್ನು ಲಕ್ಷಿಸದೆ ಪಂಚಭೂತಗಳ ಸಹವಾಸವನ್ನು ಮಾಡಿದನು.

೭೩. ರಾಗದ್ವೇಷಾದಿಗಳಿಂದ ಕೂಡಿರುವ ಆ ಪಂಚಭೂತಗಳ ಮಾತುಗಳಿಗೆ ಬೆರಗಾಗಿ ಆತ್ಮನು ಅವರ ಸಹವಾಸವನ್ನು ಮಾಡಿ ಪಂಚಭೂತಾತ್ಮಕವಾದ ಶರೀರ

ಯದಾ ಗರ್ಭೇ ಸಮಾಯಾತೋ ವಿಣ್ಮೂತ್ರಸಮಾಕುಲೇ ।
ದುರ್ಗಂಧೇ ಪಿಚ್ಛಿಲಾವರ್ತೇ ಪತಿತಸ್ತೈಸ್ಸುಸಂಯುತಃ ॥ ೭೪ ॥

ಅಂಗೇನ ವ್ಯಾಕುಲೋ ಭೂತಃ ಪಂಚಾತ್ಮಕಾನುವಾಚ ಸಃ ।
ಭೋ ಭೋಃ ಪಂಚಾತ್ಮಕಾಸ್ಸರ್ವೇ ಶೃಣುಧ್ವಂ ವಚನಂ ಮಮ ॥ ೭೫ ॥

ಭವತಾಂ ಹಿ ಪ್ರಸಂಗೇನ ಮಹಾದುಃಖೇನ ಮೋಹಿತಃ ।
ನರ್ವಸ್ಮಿನ್ ಪಿಚ್ಛಿಲೇ ಘೋರೇ ಪತಿತೋಽಸ್ಮಿ ಮಹಾಭಯೇ ॥ ೭೬ ॥

॥ ಪಂಚಾತ್ಮಕಾಃ ಊಚುಃ ॥

ತಾವತ್ಸಂಸ್ಥೀಯತಾಂ ರಾಜನ್ ಯಾವದ್ಗರ್ಭಂ ಪ್ರಪೂರಯೇತ್ ।
ಪಶ್ಚಾನ್ನಿರ್ಗಮನಂ ತೇ ವೈ ಭವಿಷ್ಯತಿ ನ ಸಂಶಯಃ ॥ ೭೭ ॥

ಅಸ್ಮಾಕಂ ಹಿ ಭವಾನ್ ಸ್ವಾಮೀ ಕಾಯದೇಶೇ ವ್ಯವಸ್ಥಿತಃ ।
ರಾಜ್ಯಮೇವಂ ಪ್ರಕರ್ತವ್ಯಂ ಸುಖಭೋಕ್ತಾ ಭವಿಷ್ಯಸಿ ॥ ೭೮ ॥

---

ಪ್ರಾಪ್ತಿಯನ್ನು ಪಡೆದನು. ಎಂದರೆ ಆತ್ಮನು ವಿವೇಕಜ್ಞಾನಗಳನ್ನು ಮರೆತು ಮೋಹ ಪರವಶನಾಗಿ ಜನ್ಮಮೃತ್ಯುಜರಾಸಂಬಂಧವಾದ ಶರೀರದಲ್ಲಿ ನೆಲಸಿ ಸಂಸಾರಿಯಾದನು.

೭೪. ಮಲಮೂತ್ರಗಳಿಂದ ತುಂಬಿದ ಗರ್ಭದಲ್ಲಿ ಆತ್ಮನು ಪ್ರವೇಶಿಸಿದ ಕೂಡಲೇ ದುರ್ಗಂಧಮಯವಾದ ಗೆರಣೆಯಂತಿರುವ ಮಾಂಸದತುಂಡುಗಳ ಮಧ್ಯದಲ್ಲಿ ಬಿದ್ದನು.

೭೫-೭೬. ಗರ್ಭದಲ್ಲಿ ಇರುವಾಗ ತನ್ನ ಅಂಗಗಳಿಗೆ ಏಟು ತಗಲುವುದರಿಂದ ಖಿನ್ನನಾಗಿ, ಆತ್ಮನು ಪಂಚತತ್ತ್ವಗಳನ್ನು ಕುರಿತು ಎಲೈ ಪಂಚಭೂತಗಳೇ ನಿಮ್ಮಗಳ ದುಃಖಪ್ರದವಾದ ಸಹವಾಸದಿಂದ ನಾನು ಬುದ್ಧಿಗೆಟ್ಟು ಅತಿ ಭಯಂಕರವಾದ ಈ ಮಾಂಸಮಯವಾದ ಗರ್ಭಕೂಪದಲ್ಲಿ ಬಿದ್ದಿರುವೆನು. ನಿಮ್ಮ ಮಾತನ್ನು ಕೇಳಿದ್ದರಿಂದ ನನಗೆ ಈ ಗತಿಯುಂಟಾಯಿತು ಎಂದು ಹೇಳಿದನು.

೭೭-೭೮. ಪಂಚಾತ್ಮಕರು ಹೇಳುವರು:—ಎಲೈ ಪ್ರಭುವೇ, ಗರ್ಭವು ಪೂರ್ಣವಾಗಿ ಬೆಳೆಯುವ ಪರ್ಯಂತವೂ ನೀನು ಅಲ್ಲೇ ಇರಬೇಕು. ಅದು ಬೆಳೆದು ಪೂರ್ತಿಯಾದಕೂಡಲೇ ನೀನು ಈಚೆಗೆ ಬರಬಹುದು. ಸಂಶಯಪಡಬೇಡ. ಈ ದೇಹದಲ್ಲಿ

**ತೇಷಾಂ ತದ್ವಚನಂ ಶ್ರುತ್ವಾ ಚಾऽತ್ಮಾ ದುಃಖೇನ ಪೀಡಿತಃ ।
ಗಂತುಮಿಚ್ಛನ್ನಸೌ ತಸ್ಮಾತ್ಪಲಾಯನಪರೋऽಭವತ್ ॥ ೭೯ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ದೇವಾಸುರ
ಪ್ರಕರಣೇ ಶರೀರೋತ್ಪತ್ತಿಕಥನಂ ನಾಮ
ಸಪ್ತಮೋऽಧ್ಯಾಯಃ**

---

ವಾಸಮಾಡಿಕೊಂಡು ನಮಗೆ ಪ್ರಭುವಾಗಿರು. ಅಲ್ಲಿ ಸುಖವನ್ನು ಅನುಭವಿಸುತ್ತಾ ದೇಹವೆಂಬ ರಾಜ್ಯವನ್ನು ಆಳಬಹುದು ಎಂದು ಹೇಳಲು,

೭೯. ಪಂಚಭೂತಗಳ ಮಾತನ್ನು ಆತ್ಮನು ಕೇಳಿ ಅತಿ ದುಃಖದಿಂದ ಕೂಡಿ ಆ ದೇಹದಿಂದ ಹೊರಗೆ ಹೊರಡಲು ಅಪೇಕ್ಷೆಯುಳ್ಳವನಾಗಿ ಓಡಿಹೋಗುವುದಕ್ಕೆ ಯತ್ನಿಸುತ್ತಿದ್ದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ದೇವಾಸುರಪ್ರಕರಣದಲ್ಲಿ
ಶರೀರೋತ್ಪತ್ತಿಕಥನವೆಂಬ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
# ಅಷ್ಟಮೋಽಧ್ಯಾಯಃ

**ಕಶ್ಯಪ ಉವಾಚ**

ಸ ಗರ್ಭೋರ್ಣ ವ್ಯಾಕುಲೋ ಜಾತಃ ಖಿದ್ಯಮಾನೋ ದಿನೇ ದಿನೇ ।
ದುಃಖಕ್ರಾಂತೋ ಹಿ ಧರ್ಮಾತ್ಮಾ ಸರ್ವಪೀಡಾಭಿಪೀಡಿತಃ ॥ ೧ ॥

ಅಧೋಮುಖಸ್ತು ಗರ್ಭಸ್ಥೋ ಮೋಹಜಾಲೇನ ಬಂಧಿತಃ ।
ಆಧಿವ್ಯಾಧಿಸಮಾಕ್ರಾಂತೋ ಹಾಹಾಭೂತೋ ವಿಚೇತನಃ ।
ದುಃಖೇನ ಮಹತಾಽವಿಷ್ಟೋ ಜ್ಞಾನಮಾಹಪ್ರಪೀಡಿತಃ । ॥ ೨ ॥

**ಆತ್ಮೋವಾಚ**

ತವ ವಾಕ್ಯಂ ಮಹಾಪ್ರಾಜ್ಞ ನ ಕೃತಂ ತು ಮಯಾ ತದಾ

---

## ಎಂಟನೆಯ ಅಧ್ಯಾಯವು.

೧. ಕಶ್ಯಪನು ಹೇಳಿದನು:—ಆ ಗರ್ಭವು ದಿನದಿನಕ್ಕೂ ದುಃಖಪಡುತ್ತಾ ಖೇದಗೊಂಡಿತು. ಅದರಲ್ಲಿದ್ದ ಆತ್ಮನು ಅನೇಕವಿಧವಾದ ಹಿಂಸೆಗಳಿಗೆ ಒಳಗಾಗಿ ದುಃಖಪಡುತ್ತಿದ್ದನು.

೨. ಮೋಹದಿಂದ ಕೂಡಿದವನಾಗಿ, ಕೆಳಮುಖವಾಗಿ ಗರ್ಭದಲ್ಲಿದ್ದುಕೊಂಡು ಯೋಚನೆಯಿಂದಲೂ, ರೋಗದಿಂದಲೂ ಪೀಡಿತನಾಗಿ ಶಕ್ತಿಯಿಲ್ಲದೆ ಹಾ ಹಾ ಎಂದು ಸಂಕಟಪಡುತ್ತಿದ್ದನು. ಆಗ ಅತ್ಯಂತ ದುಃಖದಿಂದ ಪೀಡಿತನಾಗಿ ಜ್ಞಾನವನ್ನು ಕುರಿತು ಹೇಳಿದನು.

೩. ಆತ್ಮನು ಹೇಳುತ್ತಾನೆ:—ಎಲೈ ಮಹಾ ಪ್ರಜ್ಞೆಯುಳ್ಳವನೇ, ಆಗ ನಿನ್ನ ಮಾತನ್ನು ಕೇಳಲಿಲ್ಲ. ಧ್ಯಾನವು ತಡೆದರೂ ಅವನನ್ನೂ ಲಕ್ಷಿಸದೆ ಈ ಮಹಾ

ಧ್ಯಾನೇನ ವಾರ್ಯಮಾಣೋಽಪಿ ಪತಿತೋ ಮೋಹಸಂಕಟೇ
ತಸ್ಮಾದ್ರಕ್ಷ ಮಹಾಪ್ರಾಜ್ಞ ಗರ್ಭವಾಸಾತ್ಸುದಾರುಣಾತ್ । ॥ ೩ ॥

ಜ್ಞಾನಮುವಾಚ

ಮಯಾ ತ್ವಂ ವಾರಿತೋ ಹ್ಯಾತ್ಮನ್ ಕೃತಂ ವಾಕ್ಯಂ ನ ಚೈವ ಮೇ
ಪಂಚಾತ್ಮಕೈರ್ಮಹಾಕ್ರೂರೈಃ ಪತಿತೋ ಗರ್ಭಸಂಕಟೇ ॥ ೪ ॥

ಇದಾನೀಂ ಗಚ್ಛ ತ್ವಂ ಧ್ಯಾನಂ ತಸ್ಮಾತ್ತ್ವಂ ಪ್ರಾಪ್ಸ್ಯಸೇ ಸುಖಂ ।
ಗರ್ಭವಾಸಾದ್ಭವತ್ಯೇವ ಮೋಕ್ಷಸ್ತೇ ನ ಚ ಸಂಶಯಃ ॥ ೫ ॥

ತಸ್ಯ ತದ್ವಚನಂ ಶ್ರುತ್ವಾ ಜ್ಞಾತ್ವಾ ಜ್ಞಾನಸ್ಯ ತತ್ವತಾಂ ।
ಧ್ಯಾನಮಾಹೂಯ ಪ್ರೋವಾಚ ಶ್ರೂಯತಾಂ ವಚನಂ ಮಮ ॥ ೬ ॥

ತ್ವಾಮಹಂ ಶರಣಂ ಪ್ರಾಪ್ತೋ ಧ್ಯಾನ ಮಾಂ ರಕ್ಷ ನಿತ್ಯಶಃ ।
ಏವಮಸ್ತು ಮಹಾಪ್ರಾಜ್ಞ ಧ್ಯಾನಮಾಹ ಮಹಾಮತೇ ॥ ೭ ॥

---

ಮೋಹದಲ್ಲಿ ಬಿದ್ದು ತೊಳಲುತ್ತಿರುವೆನು. ಆದ್ದರಿಂದ ಕಷ್ಟಪ್ರದವಾದ ಗರ್ಭವಾಸ ದಿಂದ ನನ್ನನ್ನು ತಪ್ಪಿಸಿ ಕಾಪಾಡು ಎಂದು ಕೇಳಿಕೊಂಡನು.

೪. ಜ್ಞಾನವು ಹೇಳುವುದು:—ಎಲೈ ಆತ್ಮನೇ, ನಾನು ನಿನ್ನನ್ನು ಎಷ್ಟುಬಗೆ ಯಾಗಿ ತಡೆದರೂಕೂಡ ನನ್ನ ಮಾತನ್ನು ಕೇಳಲಿಲ್ಲ. ಮಹಾ ಕ್ರೂರಿಗಳಾದ ಪಂಚ ತತ್ತ್ವಗಳ ಮಾತಿಗೆ ಮರುಳಾಗಿ ಗರ್ಭಕೂಪದಲ್ಲಿ ಬಿದ್ದು ಸಂಕಟಪಡುತ್ತಿರುವೆ.

೫. ಈಗ ನೀನು ಧ್ಯಾನದಬಳಿಗೆ ಹೋಗು, ಅವನಿಂದ ನಿನಗೆ ಸೌಖ್ಯವಾಗು ವುದು. ಗರ್ಭವಾಸದಿಂದಲೇ ನಿನಗೆ ಮೋಕ್ಷವಾಗುವುದು. ಇದರಲ್ಲಿ ಸಂಶಯವಿಲ್ಲ ಎನ್ನಲು,

೬-೭. ಆತ್ಮನು ಜ್ಞಾನದ ಮಾತುಗಳನ್ನು ಕೇಳಿ ಜ್ಞಾನದ ಸ್ವರೂಪವನ್ನು ತಿಳಿದು ಧ್ಯಾನವನ್ನು ಕರೆದು ನಾನು ಹೇಳುವ ಮಾತನ್ನು ಕೇಳು. ಎಲೈ ಧ್ಯಾನವೇ ನಾನು ನಿನ್ನನ್ನು ಮೊರೆಹೊಕ್ಕಿರುವೆನು, ನನ್ನನ್ನು ಸರ್ವದಾ ಕಾಪಾಡು ಎಂದು ಹೇಳಲು ಧ್ಯಾನವು ಹಾಗೆಯೇ ಆಗಲಿ ಎಂದಿತು.

**ಏತದ್ವಾಕ್ಯಂ ತತಶ್ರುತ್ವಾ ಹ್ಯಾತ್ಮಾ ವೈ ಧ್ಯಾನಮಾಗತಃ ।**
**ಧ್ಯಾನೇನ ಹಿ ಸಮಂ ಗರ್ಭೇ ಸಂಸ್ಥಿತೋ ಮೋಹವರ್ಜಿತಃ ॥ ೮ ॥**

**ಯದಾ ಧ್ಯಾನಂ ಗತೋ ಹ್ಯಾತ್ಮಾ ವಿಸ್ಮೃತಂ ಗರ್ಭಜಂ ಭಯಂ ।**
**ಸ ದ್ವಾಭ್ಯಾಂ ಸಹಿತಸ್ತತ್ರ ಹ್ಯಾತ್ಮಾ ಮೋಹವಿವರ್ಜಿತಃ ॥ ೯ ॥**

**ಚಿಂತಯನ್ನೇವ ವೈ ನಿತ್ಯಮಾತ್ಮಕಂ ಸುಖಮೇವ ಹಿ ।**
**ಇತೋ ನಿಷ್ಕ್ರಾಂತಮಾತ್ರಸ್ತು ತ್ಯಜೇ ಪಂಚಾತ್ಮಕಂ ವಪುಃ ॥ ೧೦ ॥**

**ಏವಂ ಚಿಂತಯತೇ ನಿತ್ಯಂ ಗರ್ಭವಾಸಗತಃ ಪ್ರಭುಃ ।**
**ಸೂತಿಕಾಲೇ ತು ಸಂಪ್ರಾಪ್ತೇ ಪ್ರಾಜಾಪತ್ಯೇನ ಶೋಭನೇ ॥ ೧೧ ॥**

**ವಾಯುನಾ ಚಾಲಿತೋ ಗರ್ಭಃ ಪ್ರಾಣೇನಾಪಿ ಬಲೀಯಸಾ ।**
**ಯೋನಿರ್ವಿಕಾಸಮಾಯಾತಿ ಚತುರ್ವಿಂಶಾಂಗುಲಂ ತದಾ ॥ ೧೨ ॥**

---

೮. ಆಮೇಲೆ ಆತ್ಮವು ಈ ಮಾತನ್ನು ಕೇಳಿ ಧ್ಯಾನದೊಡನೆ ಸ್ನೇಹ ಮಾಡಿದನು. ಅವನೊಡನೆ ಇದ್ದಪ್ರಯುಕ್ತ ಗರ್ಭದಲ್ಲಿ ಮೋಹವೆಂಬ ದುಃಖದಿಂದ ಬಿಡುಗಡೆಯಾದನು.

೯. ಧ್ಯಾನವೂ ಜೊತೆಯಲ್ಲಿ ಇದ್ದಪ್ರಯುಕ್ತ ಗರ್ಭವಲ್ಲಿ ಹುಟ್ಟುವ ಭೀತಿಯು ತಪ್ಪಿತು. ಆ ಆತ್ಮನು ಜ್ಞಾನ, ಧ್ಯಾನಗಳ ಸಹವಾಸದಲ್ಲಿ ಇರೋಣದರಿಂದ ಮೋಹ ರಹಿತನಾಗಿದ್ದನು.

೧೦. ಯಾವಾಗಲೂ ಆತ್ಮನು ತನ್ನ ಸುಖವನ್ನೇ ಯೋಚಿಸುತ್ತಾ ಈ ಗರ್ಭ ದಿಂದ ಹೊರಗೆ ಬಂದಮೇಲೆ ಪಂಚತತ್ತ್ವಾತ್ಮಕ ಶರೀರವನ್ನು ತ್ಯಜಿಸುತ್ತೇನೆ. ಹೀಗೆಂದು ಗರ್ಭದಲ್ಲಿರುವ ಆತ್ಮನು ಯೋಚಿಸುತ್ತಿರುತ್ತಾನೆ.

೧೧-೧೨. ಪ್ರಸವಕಾಲದಲ್ಲಿ ಪ್ರಾಜಾಪತ್ಯ ಎಂಬ ವಾಯುವಿನಿಂದಲೂ, ಪ್ರಾಣ ವಾಯುವಿನಿಂದಲೂ ಗರ್ಭವು ಕದಲಿಸಲ್ಪಡುತ್ತದೆ. ಆಗ ಯೋನಿಯು ಇಪ್ಪತ್ತನಾಲ್ಕು ಅಂಗುಲದಷ್ಟು ವಿಶಾಲವಾಗುವುದು, ಆದರೆ ಗರ್ಭವು ಐಪ್ಪತ್ತೈದು ಅಂಗುಲ ದಪ್ಪ

**ಪಂಚವಿಂಶಾಂಗುಲೋ ಗರ್ಭಸ್ತೇನ ಪೀಡಾ ವಿಜಾಯತೇ ।**
**ಏವಂ ಸಂಪೀಡ್ಯಮಾನಸ್ತು ಮೂರ್ಛಯಾ ಮೂರ್ಛಿತಃ ಪ್ರಿಯೇ ॥ ೧೩ ॥**

**ಪತಿತೋ ಭೂಮಿಭಾಗೇ ತು ಜ್ಞಾನಧ್ಯಾನಸಮನ್ವಿತಃ ।**
**ಪ್ರಾಜಾಪತ್ಯೇನ ದಿವ್ಯೇನ ವಾಯುನಾ ಸ ಪೃಥಕ್ಕೃತಃ ॥ ೧೪ ॥**

**ಭೂಮಿಸಂಸ್ಪರ್ಶಮಾತ್ರೇಣ ಜ್ಞಾನಧ್ಯಾನೇ ತು ವಿಸ್ಮೃತೇ ।**
**ಸಂಸಾರಮೋಹಸಂದಗ್ಧ ಆತ್ಮಾ ಪ್ರಿಯತಯಾ ಸ್ಥಿತಃ ॥ ೧೫ ॥**

**ಗುಣದೋಷಸಮಾಕ್ರಾಂತೋ ಮಹಾಮೋಹಸಮನ್ವಿತಃ ।**
**ಖಾನಪಾನಾದಿಕಂ ಸರ್ವಮಿಚ್ಛತ್ಯೇವ ದಿನೇ ದಿನೇ ॥ ೧೬ ॥**

**ಏವಂ ಸಂಸ್ಪೃಷ್ಟಮಾನಸ್ತು ಹ್ಯಾತ್ಮಾ ಪಂಚಾತ್ಮಕೈಸ್ಸಹ ।**
**ನ್ಯಾಪ್ಯತೇ ಇಂದ್ರಿಯೈಸ್ಸರ್ವೈರ್ವಿಷಯೈಃ ಪಾಪಕಾರಿಭಿಃ ॥ ೧೭ ॥**

---

ವಿರುವುದರಿಂದ ಯೋನಿಯಿಂದ ಹೊರಗೆ ಬರುವಾಗ ಗರ್ಭಕ್ಕೆ ನೋವುಂಟಾಗುತ್ತದೆ. ಈರೀತಿ ದುಃಖಗೊಂಡು ಆತ್ಮನು ಮೂರ್ಛಿತನಾಗುವನು.

೧೪. ಆತ್ಮನು ಜ್ಞಾನ, ಧ್ಯಾನ ಇವುಗಳಜೊತೆಯಲ್ಲಿ ಗರ್ಭದಿಂದ ಹೊರಟು ಭೂಮಿಯಮೇಲೆ ಬಿದ್ದು ಪ್ರಾಜಾಪತ್ಯವೆಂಬ ವಾಯುವಿನಿಂದ ಆತ್ಮನು ಬೇರೆಯಾಗುತ್ತಾನೆ.

೧೫. ಭೂಸ್ಪರ್ಶವಾದಕೂಡಲೇ ಜ್ಞಾನ, ಧ್ಯಾನ ಇವುಗಳನ್ನು ಮರೆಯುತ್ತಾನೆ ಪುನಃ ಆತ್ಮನು ಸಂಸಾರಮೋಹವೆಂಬ ಅಗ್ನಿಯಿಂದ ಸುಡಲ್ಪಡುವನು ಎಂದರೆ ಸಂಸಾರ ಮೋಹಕ್ಕೆ ಸಿಕ್ಕುವನು.

೧೬. ಗುಣ, ದೋಷ ಇವುಗಳಿಂದಲೂ, ಮೋಹದಿಂದಲೂ ಕೂಡಿ ನಿತ್ಯವೂ ತಿನ್ನುವುದರಲ್ಲಿಯೂ, ಕುಡಿಯುವುದರಲ್ಲಿಯೂ ಆಸಕ್ತನಾಗಿರುತ್ತಾನೆ

೧೭. ಈರೀತಿಯಾಗಿ ಆತ್ಮನು ಪಂಚಭೂತಗಳಿಂದ ತಾಡಿತನಾಗಿ ಪಾಪಪ್ರಚುರವಾದ ವಿಷಯಗಳಿಂದಲೂ, ಇಂದ್ರಿಯಗಳಿಂದಲೂ ಆವೃತನಾಗುವನು ಎಂದರೆ ತನ್ನ ನಿಜಸ್ವರೂಪವನ್ನು ಮರೆತು ವಿಷಯಾದಿ ಸುಖಗಳಲ್ಲಿ ಆಸಕ್ತನಾಗುವನು.

**ಬಾಂಧವಾನಾಂ ಸುಸಂಮೋಹೇ ಭಾರ್ಯಾದೀನಾಂ ತಥೈವ ಚ ।**
**ಆಕುಲವ್ಯಾಕುಲೋ ದೇವಿ ಜಾಯತೇ ಚ ದಿನೇ ದಿನೇ ॥ ೧೮ ॥**

**ಮಹಾಮೋಹೇನ ಸಂದಗ್ಧೋ ಮೋಹಜಾಲಂ ಗತಃ ಪ್ರಭುಃ ।**
**ಕೈವರ್ತೇನ ಯಥಾ ನದ್ಯಾಂ ಶಕುಲೋ ಜಾತಬಂಧನಃ । ॥ ೧೯ ॥**

**ಚಲಿತುಂ ನೈವ ಶಕ್ನೋತಿ ತಥಾ ಚಾಸೀತ್ಪ್ರಬಂಧಿತಃ ।**
**ಮೋಹಜಾಲೈಸ್ತು ತೈಸ್ಸರ್ವೈರ್ದೃಢಬಂಧೈಸ್ತು ಬಂಧಿತಃ ॥ ೨೦ ॥**

**ಏವಮಾತ್ಮಾ ಪ್ರಪಂಚೇನ ವ್ಯಾಪಿತೋ ವ್ಯಾಪಕೇನ ಹಿ ।**
**ಜ್ಞಾನವಿಜ್ಞಾನವಿಭ್ರಷ್ಟೋ ರಾಗದ್ವೇಷಾದಿಭಿರ್ಹತಃ ॥ ೨೧ ॥**

**ಕಾಮೇನ ಪೀಡ್ಯಮಾನಸ್ತು ಕ್ರೋಧೇನೈವ ತಥೈವ ವಾ ।**
**ಪ್ರಕೃತ್ಯಾ ಕರ್ಮಣಾ ಬದ್ಧೋ ಮಹಾಮೂಢೋ ವಿಜಾಯತೇ ॥ ೨೨ ॥**

**ಏವಂ ಮೂಢೋ ಯದಾತ್ಮಾಸೌ ಕಾಮಕ್ರೋಧವಶಂ ಗತಃ ।**
**ಲೋಭರಾಗಾದಿಭಿಸ್ಸರ್ವೈರ್ವ್ಯಾಪ್ತಸ್ತೈರ್ದುರಾತ್ಮಭಿಃ ॥ ೨೩ ॥**

---

೧೮. ಬಂಧುಗಳು, ಹೆಂಡತಿ ಮುಂತಾದವರ ಮೋಹದಲ್ಲಿ ಸಿಕ್ಕಿಕೊಂಡು ದಿನದಿನವೂ ತೊಂದರೆಪಡುತ್ತಲೇ ಇರುವನು.

೧೯. ಆತ್ಮನು ಮಹಾಮೋಹಯುಕ್ತನಾಗಿ ಮೋಹವೆಂಬ ಬಲೆಯಲ್ಲಿ ಬಿದ್ದು ನದಿಯಲ್ಲಿ ಬೆಸ್ತನಿಂದ ಹಿಡಿಯಲ್ಪಟ್ಟ ಸಣ್ಣ ಮೀನಿನಂತೆ ಆಗುತ್ತಾನೆ.

೨೦. ಬಂಧನದಲ್ಲಿರುವ ಮೀನು ಹೇಗೆ ಚಲಿಸಲಾರದೋ ಹಾಗೆಯೇ ಆತ್ಮನು ಬಂಧುಬಳಗವೆಂಬ ಮೋಹಜಾಲದಿಂದ ಚೆನ್ನಾಗಿ ಬಂಧಿತನಾಗುತ್ತಾನೆ.

೨೧-೨೨. ಈರೀತಿ ಆತ್ಮನು ಅಗಾಧವಾದ ಸಂಸಾರದಿಂದ ಬಂಧಿತನಾಗಿ ಜ್ಞಾನ ವಿಜ್ಞಾನಶೂನ್ಯನಾಗಿಯೂ, ರಾಗದ್ವೇಷಗಳಿಂದ ತಾಡಿತನಾಗಿಯೂ, ಕಾಮ, ಕ್ರೋಧ ಇವುಗಳಿಂದ ಕೂಡಿ ಪ್ರಕೃತಿಯಿಂದಲೂ, ಕರ್ಮದಿಂದಲೂ ಕಟ್ಟಲ್ಪಟ್ಟು ಮಹಾ ಮೂಢನಾಗುತ್ತಾನೆ.

೨೩. ಹೀಗೆ ಆತ್ಮನು ಮೂಢನಾಗಿ ಕಾಮಕ್ರೋಧಗಳಿಗೆ ವಶನಾಗಿ ಲೋಭ, ರಾಗ ಇವುಗಳಿಂದ ಆವರಿಸಲ್ಪಡುತ್ತಾನೆ.

ಇಯಂ ಭಾರ್ಯಾ ಹ್ಯಯಂ ಪುತ್ರ ಇದಂ ಮಿತ್ರಮಿದಂ ಗೃಹಂ ।
ಏವಂ ಸಂಸಾರಜಾಲೇನ ಮಹಾಮೋಹೇನ ಬಂಧಿತಃ ॥ ೨೪ ॥

ಪುತ್ರಶೋಕಾದಿಭಿರ್ದುಃಖೈಃ ಸಂತಪ್ತೋ ಹ್ಯನಿಶಂ ತದಾ ।
ಜರಯಾ ವ್ಯಾಧಿಭಿಶ್ಚೈವ ಸಂಗ್ರಸ್ತಶ್ಚಾಧಿಭಿಸ್ತಥಾ ॥ ೨೫ ॥

ಏವಮಾತ್ಮಾ ಸಂಪ್ರತಪ್ತೋ ದುಃಖಮೋಹೈಸ್ಸುದಾರುಣೈಃ ।
ಅಭಿಮಾನೈರ್ಮಾನಭಂಗೈರ್ನಾನಾದುಃಖೈಶ್ಚ ಖಂಡಿತಃ ॥ ೨೬ ॥

ವೃದ್ಧತ್ವೇನ ತಥಾ ದೇವಿ ಶಬಳತ್ವೇನ ಪೀಡಿತಃ ।
ದುಃಖಂ ಚಿಂತಯತೇ ನಿತ್ಯಂ ಮಹಾಭೂತೋ ವಿಚೇತನಃ ॥ ೨೭ ॥

ರಾತ್ರೌ ಸ್ವಪ್ನಾನ್ ಪ್ರಪಶ್ಯೇತ ದಿವಾ ಚೈತನ್ಯವರ್ಜಿತಃ ।
ವೈಕಲ್ಯೇನ ಸ ಮೋಹೇನ ವ್ಯಾಪ್ತೋ ದೇವಿ ದಿನೇ ದಿನೇ ॥ ೨೮ ॥

ಸಂಸಾರೇ ಭ್ರಮಮಾಣೇನ ವೈರಾಗ್ಯಂ ತತ್ರ ದರ್ಶಿತಂ ।
ನಿಶ್ಶಂಕಂ ಬಂಧುಹೀನಂ ಚ ಪ್ರಶಾಂತಂ ತುಷ್ಟಮೇವ ಚ ॥ ೨೯ ॥

---

೨೪. ಇವಳು ನನ್ನ ಹೆಂಡತಿ, ಇವನು ನನ್ನ ಮಗನು, ಇವನು ಮಿತ್ರನು, ಇದು ನನ್ನ ಮನೆ ಎಂಬ ಸಂಸಾರವ್ಯಾಮೋಹದಿಂದ ಬಂಧಿಸಲ್ಪಡುತ್ತಾನೆ.

೨೫. ಪುತ್ರಶೋಕವೇ ಮೊದಲಾದ ದುಃಖಗಳಿಂದ ಯಾವಾಗಲೂ ತಪ್ತನಾಗಿ ಮುಪ್ಪಿನಿಂದಲೂ, ರೋಗದಿಂದಲೂ, ವ್ಯಸನಗಳಿಂದಲೂ ಕೂಡಿರುತ್ತಾನೆ.

೨೬-೨೭. ಹೀಗೆ ಆತ್ಮನು ದುಃಖ ಮೋಹಗಳಿಂದ ಸಂಕಟಪಡುತ್ತಾ ಮಾನ ಹಾನಿ, ನಾನಾದುಃಖಗಳು, ಮುಪ್ಪು, ರೋಗ, ವ್ಯಸನ ಮುಂತಾದುವುಗಳಿಂದ ಕೂಡಿ ಯಾವಾಗಲೂ ಚೈತನ್ಯಶೂನ್ಯನಾಗಿ ದುಃಖವನ್ನೇ ಅನುಭವಿಸುತ್ತ ಇರುತ್ತಾನೆ.

೨೮. ಎಲೈ ದಿತಿದೇವಿಯೇ, ಆತ್ಮನು (ದೇಹಿಯು) ರಾತ್ರಿಯಲ್ಲಿ ಸ್ವಪ್ನಗಳನ್ನು ಕಾಣುತ್ತಾನೆ. ಹಗಲು ಜ್ಞಾನಹೀನನಾಗಿರುತ್ತಾನೆ. ಈರೀತಿಯಾದ ಮೋಹದಿಂದ ನಿತ್ಯವೂ ಕೂಡಿದವನಾಗುತ್ತಾನೆ. ಹೀಗೆ ಬಹಳ ಕಾಲ

೨೯. ಸಂಸಾರದಲ್ಲಿ ಸುತ್ತುತ್ತಿರುವಾಗ ಆತನಿಗೆ ಭಯರಹಿತವಾಗಿಯೂ, ಬಂಧುಬಳಗವಿಲ್ಲದೆ ಕೇವಲ ಶಾಂತವಾದ ಮನಸ್ಸಿನಿಂದಲೂ ಕೂಡಿರುವ ವೈರಾಗ್ಯವು ಗೋಚರವಾಯಿತು.

ತಮುವಾಚ ತದಾತ್ಮಾ ವೈ ಕಾಮಕ್ರೋಧವಿವರ್ಜಿತಂ ।
ಕೋ ಭವಾನ್ನಗ್ನರೂಪೇಣ ಕಥಂ ಮಿತ್ರೈರ್ನ ಲಜ್ಜಸೇ ॥ ೩೦ ॥

ಯತ್ರ ಲೋಕಾಸ್ತ್ರಿಯೋ ವೃದ್ಧಾ ಯುವತ್ಯೋ ಮಾತರಸ್ತಥಾ ।
ಏತಾಸಾ ಹಿ ಗತೋ ಮಧ್ಯೇ ನ ವಿಭಾಸಿ ಹ್ಯನಾವೃತಃ ॥ ೩೧ ॥

ವೀತರಾಗ ಉವಾಚ

ಕೋ ಹ್ಯತ್ರ ನಗ್ನೋ ದೃಶ್ಯೇತ ನ ನಗ್ನೋಽಸ್ಮೀತಿ ವೈ ಕದಾ ।
ಸುಸಂಬದ್ಧಸ್ತ್ವಹಂ ಜ್ಞಾನಪರಿಧಾನಸಮನ್ವಿತಃ ॥ ೩೨ ॥

ನ ನಗ್ನೋಽಸ್ಮಿ ಕದಾ ದಿವ್ಯ ಭವಾನ್ನಗ್ನಃ ಪ್ರದೃಶ್ಯತೇ ।
ಇಂದ್ರಿಯಾರ್ಥವಶೇ ವರ್ತೀ ಮರ್ಯಾದಾಯಾಶ್ಚ ವರ್ಜಿತಃ ॥ ೩೩ ॥

ಆತ್ಮೋವಾಚ

ಪುರುಷಸ್ಯ ಕಾ ಹಿ ಮರ್ಯಾದಾ ತಾಮಾಚಕ್ಷ್ವ ಚ ಸುವ್ರತ ।
ವಿಸ್ತರೇಣ ಮಹಾಪ್ರಾಜ್ಞ ಯದಿ ಜಾನಾಸಿ ನಿಶ್ಚಿತಂ ॥ ೩೪ ॥

---

೩೦-೩೧. ಆಗ ಆತ್ಮನು ಕಾಮಕ್ರೋಧರಹಿತವಾಗಿರುವ ವೈರಾಗ್ಯವನ್ನು ಕಂಡು ಅಯ್ಯಾ, ನೀನು ಯಾರು? ಏಕೆ ಬೆತ್ತಲೆಯಾಗಿ ಸುತ್ತುತ್ತಿರುವೆ? ನಿನಗೆ ಮಿತ್ರರಾರೂ ಇಲ್ಲವೇ? ಯಾವ ಸ್ಥಳದಲ್ಲಿ ಜನರು, ಹೆಂಗಸರು, ವೃದ್ಧರು, ಯುವತಿಯರು, ತಾಯಿಯರು ಇರುತ್ತಾರೋ ಅವರ ಮಧ್ಯೇ ಬಟ್ಟೆಯಿಲ್ಲದೆ ನೀನು ಈರೀತಿ ಇರುವುದು ಚೆನ್ನಾಗಿ ಕಾಣಿಸುವುದಿಲ್ಲ ಎಂದನು.

೩೨. ವೀತರಾಗನು (ವೈರಾಗ್ಯವು) ಹೇಳುತ್ತಾನೆ:—ಇಲ್ಲಿ ಬೆತ್ತಲೆಯಾಗಿರುವವರು ಯಾರು? ನಿನ್ನ ಕಣ್ಣಿಗೆ ಹಾಗೆ ಕಂಡಿತೇ? ನಾನೇನೂ ಬೆತ್ತಲೆಯಾಗಿಲ್ಲ, ಜ್ಞಾನವೆಂಬ ವಸ್ತ್ರವನ್ನುಟ್ಟು ಅಲಂಕೃತನಾಗಿಯೇ ಇರುವೆನು.

೩೩. ನಾನು ಬೆತ್ತಲಯಾಗಿ ಕಾಣುವುದಿಲ್ಲ. ನೀನೇ ಬೆತ್ತಲೆಯಾಗಿ ಕಾಣುತ್ತೀಯೆ. ಇಂದ್ರಿಯಗಳು ಹೇಳಿದಂತೆ ಕುಣಿಯುತ್ತಾ ಮರ್ಯಾದೆಯಿಲ್ಲದೆ ಇರುವೆ ಎಂದನು.

೩೪. ಆತ್ಮನು ಹೇಳುತ್ತಾನೆ:—ಎಲೈ ಸುವ್ರತನೇ, ಪುರುಷನಿಗೆ ಮರ್ಯಾದೆಯು ಯಾವುದೆಂಬುದನ್ನು ನೀನು ನಿಶ್ಚಯವಾಗಿ ತಿಳಿದಿದ್ದರೆ ಅದನ್ನು ವಿಸ್ತಾರವಾಗಿ ನನಗೆ ಹೇಳು.

**ವೀತರಾಗೋ ಮಹಾಪ್ರಾಜ್ಞಸ್ತಮುವಾಚ ಮಹಾಮತಿಃ ।**
**ಸುಸ್ಥೈರ್ಯಂ ಭಜತೇ ಚಿತ್ತಂ ಸುಖದುಃಖೇಷು ನಿತ್ಯದಾ**
**ಕ್ಲೇಶಿತಂ ಸರ್ವಭಾವೈಶ್ಚ ತೇಷ್ವಲಂ ನ ಪರಿತ್ಯಜೇತ್ । ॥ ೩೫ ॥**

**ಅಥ ಲಜ್ಜಾಂ ಪ್ರವಕ್ಷ್ಯಾಮಿ ಮನೋ ಯಾ ಹಿ ವಿಶತ್ಯಲಂ ।**
**ಮಯಾದ್ಯೈವಂ ನ ಕರ್ತವ್ಯಂ ನಗ್ನಸ್ಥಾನವಿವರ್ಜಿತಃ ॥ ೩೬ ॥**

**ಪಶ್ಚಾತ್ತಾಪಸುಸಂಲೀನಃ ಸಾ ಲಜ್ಜಾ ಪರಿಕಥ್ಯತೇ ।**
**ಕಸ್ಯ ಲಜ್ಜಾ ಪ್ರಕರ್ತವ್ಯಾ ದ್ವಿತೀಯೋ ನಾಸ್ತಿ ಸರ್ವದಾ ॥ ೩೭ ॥**

**ಏಕಶ್ಚ ಪುರುಷೋ ದಿವ್ಯಃ ಕಸ್ಯ ಕಿಂಚಿನ್ನ ನಾಶಯೇತ್ ।**
**ಅಥ ಲೋಕಾನ್ ಪ್ರವಕ್ಷ್ಯಾಮಿ ಯೇ ತ್ವಯಾ ಪರಿಕೀರ್ತಿತಾಃ ॥ ೩೮ ॥**

---

೩೫-೩೬. ಬುದ್ಧಿಶಾಲಿಯಾದ ವೀತರಾಗನು ಆತ್ಮನನ್ನು ಕುರಿತು ಇಂತೆಂದನು ಅಯ್ಯಾ, ನನ್ನ ಚಿತ್ತವು ಸುಖದುಃಖಗಳಲ್ಲಿ ಸಮನಾಗಿ, ವಿಕಾರವನ್ನು ಹೊಂದದೆ ದೃಢವಾಗಿದೆ. ಸುಖದುಃಖಗಳಾದಿಯಾದ ಮನಸ್ಸಿನ ಸರ್ವಭಾವಗಳೂ ನನ್ನ ಚಿತ್ತವನ್ನು ಕ್ಷುಬ್ಧ ಮಾಡಿದರೂ ಅವುಗಳಲ್ಲಿ ನನ್ನ ಮನಸ್ಸು ಆಸಕ್ತವಾಗುವುದೇ ಇಲ್ಲ. ಇನ್ನು ಲಜ್ಜೆಯೆಂದರೇನೆಂಬುದನ್ನು ಹೇಳುತ್ತೇನೆ. ಯಾವುದು ಮನಸ್ಸಿನಲ್ಲಿ ವಿಶೇಷವಾಗಿ ಪ್ರವೇಶಿಸುವುದೋ ಅದೇ ಲಜ್ಜೆಯು. ಎಂದರೆ ಮನಸ್ಸಿನಲ್ಲಿ ಉಂಟಾಗಬಹುದಾದ ದುರ್ಭಾವನೆಗಳನ್ನು ಇತರರಿಗೆ ಕಾಣಿಸದಂತೆ ಮುಚ್ಚಿಕೊಳ್ಳುವುದೇ ಲಜ್ಜೆಯೆನಿಸುವುದು. ನನ್ನ ಮನಸ್ಸಿನಲ್ಲಿ ಅಂತಹ ದುರ್ಭಾವನೆಗೆ ಅವಕಾಶವೇ ಇಲ್ಲ. ಆದುದರಿಂದ ನಾನು ನಗ್ನನಾಗಿಯೂ ಇಲ್ಲ, ಇನ್ನು ನನಗೆ ಲಜ್ಜೆಯೆಲ್ಲಿಯದು ?

೩೭. ಅಲ್ಲದೆ ಕೆಟ್ಟಕೆಲಸಗಳನ್ನು ಮಾಡಿ ಪಶ್ಚಾತ್ತಾಪದಿಂದ ಕೂಡಿದ್ದರೆ ಅದೂ ಲಜ್ಜೆಯೇ ಆಗುವುದು. ಆವಿಧವಾದ ದುಷ್ಕರ್ಮಗಳನ್ನು ನಾನು ಮಾಡುವುದಿಲ್ಲ ಮತ್ತು ನನ್ನಂತಿರುವವನು ಮತ್ತೊಬ್ಬನು ಇಲ್ಲದಿರುವುದರಿಂದ ನಾನು ಯಾರಿಗೆ ಹೆದರಿ ಲಜ್ಜೆಪಡಬೇಕು ?

೩೮. ಪುರುಷಶಬ್ದವಾಚ್ಯನು ಪರಮಾತ್ಮನೊಬ್ಬನೇ. ಅವನಿಗೆ ನಾಶವೆಂದಿಗೂ ಇಲ್ಲ. ಇನ್ನು ಲೋಕವಿಚಾರಗಳನ್ನು ಹೇಳುತ್ತೇನೆ.

ಯಥಾ ಕುಲಾಲಕಶ್ಚಕ್ರೇ ಮೃತ್ಪಿಂಡಂ ಚ ನಿಧಾಪಯೇತ್ ।
ಭ್ರಾಮಯಿತ್ವಾ ತು ಸೂತ್ರೇಣ ನಾನಾಭೇದಾನ್ ಪ್ರಕಾರಯೇತ್ ॥ ೩೯ ॥

ಭಾಂಡಾನಾಂ ತು ಸಹಸ್ರಾಣಿ ಸ್ವೇಚ್ಛಯಾ ಮತಿಸಂಸ್ಥಿತಃ ।
ತಥಾಯಂ ಸೃಜತೇ ಧಾತಾ ನಾನಾರೂಪಾಣಿ ಚಾನ್ಯಥಾ ॥ ೪೦ ॥

ಪಶ್ಚಾದ್ವಿನಾಶಮಾಯಾಂತಿ ಯೇನ ಕೇನಾಪಿ ಹೇತುನಾ ।
ತೇ ಆಲೋಕಾ ಮಹಾಪ್ರಾಜ್ಞಾ ನಾಶಮಾಯಾಂತಿ ಯೇನ ವೈ ॥ ೪೧ ॥

ಸರ್ವದೈವ ಸ್ಥಿತಾ ಯೇ ಚ ಯೇ ಲೋಕಾಶ್ಚ ಸನಾತನಾಃ ।
ತೇಷಾಂ ಲಜ್ಜಾ ಪ್ರಕರ್ತವ್ಯಾ ನ ವರ್ತಂತೇ ಹಿ ತೇ ಭುವಿ ॥ ೪೨ ॥

ಆಕಾಶವಾಯುತೇಜಾಂಸಿ ಪೃಥ್ವೀ ಚಾಪಶ್ಚ ಪಂಚಮಾಃ ।
ಅಮೀ ಲೋಕಾಃ ಪ್ರಕಾಶಂತೇ ಯೇ ಚ ಸರ್ವತ್ರ ಸಂಸ್ಥಿತಾಃ ॥ ೪೩ ॥

ಸರ್ವತ್ರೈವ ಚ ವರ್ತಂತೇ ಕಸ್ಯ ಲಜ್ಜಾ ವಿಧೀಯತೇ ।
ಸ್ತ್ರೀಣಾಂ ರೂಪಂ ಪ್ರವಕ್ಷ್ಯಾಮಿ ಶ್ರೂಯತಾಂ ತಾತ ಸಾಂಪ್ರತಂ ॥ ೪೪ ॥

---

೩೯-೪೦. ಯಾವರೀತಿ ಕುಂಬಾರನು ಚಕ್ರದಲ್ಲಿ ಮಣ್ಣನ್ನಿಟ್ಟು ಸೂತ್ರದಿಂದ ತಿರುಗಿಸಿ ನಾನಾಬಗೆಯ ಅನೇಕಸಹಸ್ರ ಪದಾರ್ಥಗಳನ್ನು ತನ್ನ ಮನಸ್ಸಿನ ಕಲ್ಪನೆಯಂತೆ ನಿರ್ಮಿಸುತ್ತಾನೋ ಹಾಗೆಯೇ ಬ್ರಹ್ಮನೂ ನಾನಾವಿಧವಾದ ಪ್ರಪಂಚಗಳನ್ನು ಸೃಷ್ಟಿಸುತ್ತಾನೆ.

೪೧. ಅನಂತರ ಕಾರಣಾಂತರಗಳಿಂದ ಆ ಪ್ರಪಂಚಗಳು ನಾಶವಾಗುತ್ತವೆ. ಪ್ರಾಜ್ಞರೂ, ಬುದ್ಧಿವಂತರೂ ಎಲ್ಲರೂ ನಾಶಹೊಂದುವರು. ನಾಶವಾಗದೇ ಯಾರೂ ಸ್ಥಿರವಾಗಿ ಇರುವುದಿಲ್ಲ.

೪೨. ಯಾರು ಯಾವಾಗಲೂ ಇರುವರೋ, ಯಾವ ಲೋಕಗಳು ನಿತ್ಯವಾಗಿವೆಯೋ ಅವರ ವಿಷಯದಲ್ಲಿ ಮಾತ್ರ ಲಜ್ಜೆಪಡಬೇಕು. ಅಂಥವರು ಯಾರೂ ಭೂಮಿಯಲ್ಲಿಲ್ಲ.

೪೩. ಅಂತರಿಕ್ಷ, ವಾಯು, ಅಗ್ನಿ, ಭೂಮಿ, ನೀರು ಇವೇ ಈ ಲೋಕದಲ್ಲಿ ಕಾಣಬರುತ್ತವೆ. ಇವೇ ಎಲ್ಲಾ ಕಡೆಯೂ ಇರುತ್ತವೆ.

೪೪. ಅವು ಸರ್ವತ್ರ ಇರುವುದರಿಂದ ಅವುಗಳ ವಿಷಯದಲ್ಲಿ ಲಜ್ಜೆಪಡಬೇಕಾದ ಕಾರಣವೇನು? ಅಯ್ಯಾ, ಇನ್ನು ಸ್ತ್ರೀಯರ ರೂಪವನ್ನು ಹೇಳುತ್ತೇನೆ, ಕೇಳು.

ಯಥಾ ಘಟಸಹಸ್ರೇಷು ಸೋದಕೇಷು ವಿರಾಜತೇ ।
ಏಕಶ್ಚಂದ್ರೋ ಹಿ ಸರ್ವತ್ರ ಭವಾನ್ ತದ್ವದ್ವಿರಾಜಸೇ ॥ ೪೫ ॥

ಗತೋ ಜಂತುಸಹಸ್ರೇಷು ಮೋಹಬದ್ಧೋ ಮಹಾತ್ಮವಾನ್ ।
ಸ್ಥಾವರೇಷು ಚ ಸರ್ವೇಷು ಜಂಗಮೇಷು ತಥಾ ಭವಾನ್ ॥ ೪೬ ॥

ಯೋನಿದ್ವಾರೇಣ ಪಾಪೇನ ಮಾಯಾಮೋಹಮಯೇನ ವೈ ।
ಕುಚಾಭ್ಯಾಮುಚ್ಛ್ರಿತಾಭ್ಯಾಂ ಚ ವಯಸಾ ಚ ವಿರಾಜತೇ ॥ ೪೭ ॥

ತ್ವಜ್ಮಾಂಸಸ್ಯ ತಥಾ ವೃದ್ಧಿಂ ದೃಷ್ಟ್ವಾ ಧಾತ್ರಾ ನ ಸಂಶಯಃ ।
ಪತನಾಯ ಚ ಲೋಕಾನಾಂ ಮೋಹರೂಪಂ ವಿದರ್ಶಿತಂ ॥ ೪೮ ॥

ನ ಭವತ್ಯೇವ ಸಾ ನಾರೀ ಯಾ ತ್ವಯಾ ಪರಿಕೀರ್ತಿತಾ ।
ಲೀಲಯಾ ಕುರುತೇ ಧಾತಾ ವಿನೋದಾಯ ಸ ಆತ್ಮನಃ ॥ ೪೯ ॥

---

೪೫. ನೀರಿನಿಂದ ತುಂಬಲ್ಪಟ್ಟ ಸಾವಿರಾರು ಕುಂಭಗಳಲ್ಲಿ ಒಬ್ಬನೇ ಚಂದ್ರನು ಪ್ರಕಾಶಿಸುವಂತೆ ನೀನು (ಆತ್ಮನು) ಪ್ರತಿಯೊಬ್ಬರಲ್ಲಿಯೂ ವಿರಾಜಿಸುತ್ತೀಯೆ.

೪೬. ಹಾಗೆಯೇ ಆತ್ಮನು ಅನೇಕ ಪ್ರಾಣಿಗಳಲ್ಲಿ ಮೋಹದಿಂದ ಬದ್ಧನಾಗಿ ಸೇರಿದ್ದಾನೆ ಮತ್ತು ಸ್ಥಾವರ, ಜಂಗಮ, ಚರ, ಅಚರ ಇವುಗಳಲ್ಲೂ ಸಹ ಇದ್ದಾನೆ.

೪೭. ಪಾಪಮಯವಾದ ಮತ್ತು ಅತ್ಯಂತ ಮೋಹವನ್ನುಂಟುಮಾಡತಕ್ಕ ಯೋನಿದ್ವಾರದಿಂದಲೂ, ಉನ್ನತವಾದ ಸ್ತನಗಳಿಂದಲೂ, ನಡುಪ್ರಾಯವುಳ್ಳ ವಯಸ್ಸಿನಿಂದಲೂ ಸ್ತ್ರೀಯು ಸೌಂದರ್ಯಯುಕ್ತಳಾಗಿ ಕಾಣಿಸುತ್ತಾಳೆ.

೪೮. ಮತ್ತು ಆ ಸ್ತ್ರೀಯ ಶರೀರದ ಸೊಬಗು, ವಿಲಾಸ, ವೈಯ್ಯಾರಾದಿಗಳು ಲೋಕದ ಜನರನ್ನು ಮೋಹಗೊಳಿಸುತ್ತವೆ. ಆದುದರಿಂದ ಜನರ ನಾಶಕ್ಕೋಸ್ಕರವೇ ಬ್ರಹ್ಮನು ಸ್ತ್ರೀಯನ್ನು ಸೃಷ್ಟಿಸಿರುವನು, ಈ ವಿಷಯದಲ್ಲಿ ಸಂಶಯವೇನೂ ಇಲ್ಲ.

೪೯. ನೀನು ಹೇಳಿದವರು ಸ್ತ್ರೀಯೇ ಆಗುವುದಿಲ್ಲ. ಇಂತವರನ್ನು ಬ್ರಹ್ಮನು ತನ್ನ ವಿನೋದಕ್ಕಾಗಿ ಸೃಷ್ಟಿಮಾಡಿರುತ್ತಾನೆ.

ಯಥಾ ನಾರ್ಯಾಸ್ತಥಾ ಪುಂಸೋ ಜೀವಸ್ಸರ್ವತ್ರ ಸಂಸ್ಥಿತಃ ।
ಕುಚಯೋನಿವಿಹೀನಾ ಯೇ ಜೀವನ್ಮುಕ್ತಾಸ್ಸ ಏವ ಹಿ ॥ ೫೦ ॥

ನರಸ್ತು ಪುರುಷಃ ಪ್ರೋಕ್ತಃ ನಾರೀ ಪ್ರಕೃತಿರುಚ್ಯತೇ ।
ರಮತೇ ತೇನ ವೈ ಸಾರ್ಧಂ ನ ಮುಕ್ತಾ ಹಿ ಕದಾಚನ ॥ ೫೧ ॥

ಭರ್ವಾ ಪ್ರಕೃತಿಸಂಯುಕ್ತಃಸ್ತ್ರೀಪುರುಷೇಷು ಪ್ರದೃಶ್ಯತೆ ।
ಕಃ ಕಸ್ಯ ಕುರುತೇ ಲಜ್ಜಾಮೇವಂ ಜ್ಞಾತ್ವಾ ಸಮಂ ವ್ರಜ ॥ ೫೨ ॥

ವೃದ್ಧಾಂ ಪ್ರಿಯಾಂ ಪ್ರವಕ್ಷ್ಯಾಮಿ ಸದಾ ವೃದ್ಧಾ ವರಾನನೇ ।
ಜರಾಜರ್ಜರಿತಾ ಜಾತಾ ಯಸ್ಯಾಃ ಪ್ಯಂಗೇ ವರಾನನೇ ॥ ೫೩ ॥

ಶ್ವೇತೈಶ್ಚೈವ ತಥಾ ಕೇಶೈಃ ಪಲಿತೈಶ್ಚ ಸಮಾಕುಲಾ ।
ಬಲಹೀನಾಽಥ ದೀನಾಽಪಿ ವ್ಯಾಪಿತಾ ಬಲಿನಾ ತದಾ ॥ ೫೪ ॥

---

೫೦. ಯಾವ ಜೀವನು ಹೆಂಗಸರಲ್ಲಿರುವನೋ ಅವನೇ ಪುರುಷರಲ್ಲಿಯೂ ಇರುವನು. ಕುಚ, ಯೋನಿ ಇವುಗಳಿಂದ ರಹಿತರಾದ ಜೀನಿಗಳು ಎಂದರೆ ಇವುಗಳಿಗೆ ಮೋಹಪರವಶರಾಗದಿರುವ ಜೀವಿಗಳನ್ನು ಜೀವಂತರಾಗಿರುವಾಗಲೇ ಮುಕ್ತರೆಂದು ಹೇಳಬಹುದು.

೫೧. ನರನನ್ನು ಪುರುಷನೆಂದೂ, ನಾರಿಯನ್ನು ಪ್ರಕೃತಿಯೆಂದೂ ಹೇಳುತ್ತಾರೆ. ಸ್ತ್ರೀಪುರುಷರು ಯಾವಾಗಲೂ ರತ್ಯಾಸಕ್ತರಾಗಿದ್ದರೆ ಅವರಿಗೆ ಮೋಕ್ಷವೇ ಇಲ್ಲ.

೫೨. ನೀನು ಪ್ರಕೃತಿವಿಶಿಷ್ಟನಾಗಿ ಸ್ತ್ರೀಪುರುಷರಿಬ್ಬರಲ್ಲಿಯೂ ಕಾಣುವೆ. ಎಂದರೆ ಸ್ತ್ರೀಯರಲ್ಲಿಯೂ, ಪುರುಷರಲ್ಲಿಯೂ ಇರುವ ಆತ್ಮನು ಒಬ್ಬನೇ ಆದುದರಿಂದ ಯಾರನ್ನುನೋಡಿ ಯಾರು ಲಜ್ಜಿಸಬೇಕು? ಇದನ್ನು ತಿಳಿದು ಸರ್ವಸಮಭಾವವನ್ನು ಹೊಂದಿ ಸುಮ್ಮನಿರು.

೫೩. ಎಲೈ ವರಾನನೇ (ದಿತಿಯೇ) ಮುದುಕಿಯ ಸ್ವರೂಪವನ್ನು ಹೇಳುತ್ತೇನೆ, ಕೇಳು ಯಾವ ಸ್ತ್ರೀಯು ಮುಪ್ಪಿನಿಂದ ಶಕ್ತಿಗೊಂದಿರುವಳೋ ಅವಳೇ ವೃದ್ಧಳು.

೫೪-೫೫. ಬಿಳಿಯ ಕೂದಲಿಂದಲೂ ಚರ್ಮವು ಸುಕ್ಕುಬೀಳುವುದರಿಂದಲೂ

ನೇಯಂ ವೃದ್ಧಾ ಭವೇನ್ನಾರೀ ಪರಂ ವೃದ್ಧಾ ಚ ಕಥ್ಯತೇ ।
ಏತಸ್ಯಾ ಲಕ್ಷಣಂ ಪ್ರೋಕ್ತಂ ಯುವತೀಂ ಪ್ರವದಾಮ್ಯಹಂ ॥ ೫೫ ॥

ಜ್ಞಾನೇನ ವರ್ಧತೇ ನಿತ್ಯಂ ಜೀವಪಾರ್ಶ್ವೇ ಸಮಾಧಿನಾ ।
ಸುಮತಿರ್ನಾಮ ಯಾ ಪ್ರೋಕ್ತಾ ಸಾ ಚ ವೈ ಯುವತೀ ಭವೇತ್ ॥ ೫೬ ॥

ನಾರೀ ಪುರುಷಲೋಕೇಷು ಸರ್ವೇಷ್ವೇವ ಪ್ರತಿಷ್ಠಿತಾ ।
ಲಜ್ಜಾ ತಸ್ಯಾಃ ಪ್ರಕರ್ತವ್ಯಾ ಚಾನ್ಯಚ್ಚೈವ ವದಾಮ್ಯಹಂ ॥ ೫೭ ॥

ಮಾತರಂ ಚ ಪ್ರವಕ್ಷ್ಯಾಮಿ ಯಾ ತ್ವಯಾ ಪರಿಕೀರ್ತಿತಾ ।
ಪ್ರಾಣಿನಾಮಂಗದೇಶೇಷು ಸದೈವ ಚೇತನಾ ಸ್ಥಿತಾ ॥ ೫೮ ॥

ಪರಜ್ಞಾನಪ್ರದಾ ಯಾ ಚ ಸಾ ಪ್ರಜ್ಞಾ ಪರಿಕಥ್ಯತೇ ।
ಪ್ರಜ್ಞಾ ಮಾತಾ ಸಮಾಖ್ಯಾತಾ ಪ್ರಾಣಿನಾಂ ಪಾಲನಾಯ ಸಾ ॥ ೫೯ ॥

ಸಂಸ್ಥಿತಾ ಸರ್ವಲೋಕೇಷು ಪೋಷಣಾಯ ಹಿತಾಯ ಚ ।
ಸುಮತಿರ್ನಾಮ ಯಾ ಪ್ರೋಕ್ತಾ ಸಾ ಮಾತಾಪರಿಕಥ್ಯತೇ ॥ ೬೦ ॥

---

ಬಲಹೀನತೆಯಿಂದಲೂ ದೈನ್ಯದಿಂದಲೂ ಕೂಡಿರುವವಳು ಮುದುಕಿ ಎನ್ನಿಸಿಕೊಳ್ಳು ವಳು. ಇನ್ನು ಯುವತಿಯ ಲಕ್ಷಣವನ್ನು ಹೇಳುತ್ತೇನೆ.

೫೬. ವಯಸ್ಸು ಆದಂತೆ ಯಾರಿಗೆ ಜ್ಞಾನವೂ ವೃದ್ಧಿಯಾಗುವುದೋ ಆಕೆಯು ಸುಮತಿ ಎನ್ನಿಸಿಕೊಳ್ಳುವಳು. ಅವಳೇ ಯುವತೀಶಬ್ದವಾಚ್ಯಳು.

೫೭. ಪುರುಷರಿರುವ ಜಾಗದಲ್ಲೆಲ್ಲಾ ನಾರಿಯು ಇದ್ದರೆ ಅವಳಿಗೆ ಲಜ್ಜೆಯು ಸಹಜವಾದುದು. ಇನ್ನೂ ಹೇಳುವೆನು ಕೇಳು.

೫೮-೫೯. ತಾಯಿಯ ವಿಷಯವನ್ನು ಹೇಳುತ್ತೇನೆ. ಪ್ರಾಣಿಗಳ ಅವಯವ ಗಳಲ್ಲಿ ಯಾವಾಗಲೂ ಚೈತನ್ಯವಿದೆ. ಪರಲೋಕದ ಜ್ಞಾನವನ್ನು ಯಾವುದು ಕೊಡು ವುದೋ ಅದೇ ಪ್ರಜ್ಞೆಯು. ಪ್ರಜ್ಞೆಯೇ ಮಾತೆಯು. ಅದೇ ಪ್ರಾಣಿಗಳನ್ನು ರಕ್ಷಿಸುವುದು.

೬೦. ಆ ಮಾತೆಯು ಪ್ರಾಣಿಗಳ ಪೋಷಣೆಗೋಸ್ಕರ ಎಲ್ಲಾ ಲೋಕದಲ್ಲಿಯೂ ಇರುತ್ತಾಳೆ. ಹಿಂದೆ ಹೇಳಿದ ಸುಮತಿಯನ್ನು ಕೂಡ ಮಾತೆಯೆಂದು ಹೇಳುವರು.

ಸಂಸಾರದ್ವಾರಮಾರ್ಗಾಣಿ ಯಾನಿ ರೂಪಾಣಿ ನಿತ್ಯಶಃ ।
ಭವಂತಿ ಮಾತರೋ ಹ್ಯೇತಾಃ ಬಹುದುಃಖಪ್ರದರ್ಶಕಾಃ ।
ಮಾತೃರೂಪಂ ಸಮಾಖ್ಯಾತಮನ್ಯತ್ಕಿಂ ತೇ ವದಾಮ್ಯಹಂ ॥ ೬೧ ॥

ಆತ್ಮೋವಾಚ

ಭವಾನ್ ಕೋ ಹಿ ಸಮಾಖ್ಯಾತಃ ಮಮ ಸಂತಾಪನಾಶಕಃ ।
ವಿಸ್ತರೇಣ ಸಮಾಖ್ಯಾಹಿ ಸ್ವರೂಪಮಾತ್ಮನಸ್ಸಮಂ ॥ ೬೨ ॥

ವೀತರಾಗ ಉವಾಚ

ಯಸ್ಮಾತ್ಕಾಮಾ ನಿವರ್ತಂತೇ ವೀತರಾಗಸ್ಯ ಕಥ್ಯತೇ ।
ಶುದ್ಧೋ ಯತ್ನಾತ್ಪ್ರಪಶ್ಯೇತ್ತು ಕರ್ಮಾಣ್ಯೇ ತಾನಿ ಚಾಽನ್ಯಥಾ ॥ ೬೩ ॥

ಯತ್ಸಮೀಪಂ ಹಿ ನಾಽಯಾಂತಿ ಹ್ಯಾಶಾಶ್ಚೈವ ಕದಾಚನ ।
ಕ್ರೋಧೋ ಲೋಭಸ್ತಥಾ ಮೋಹೋ ಯದ್ಭಯಾತ್ಪ್ರಳಯಂ ಗತಾಃ ೬೪

ವೀತರಾಗೋಽಸ್ಮಿ ಭದ್ರಂ ತೇ ವಿವೇಕೋ ಮಮ ಬಾಂಧವಃ ।

---

೬೧. ಸಂಸಾರಕ್ಕೆ ಎಷ್ಟು ವಿಧವಾದ ಬಾಗಿಲುಗಳುಂಟೋ ಅವೆಲ್ಲವೂ ದುಃಖ ಪ್ರದರ್ಶಕಗಳು. ಅವನ್ನೂ ಮಾತೆಯರೆಂದೇ ಹೇಳುತ್ತಾರೆ. ಮಾತೃಸ್ವರೂಪವನ್ನು ತಿಳಿಸಿದೆನು. ಮತ್ತೇನನ್ನು ಹೇಳಲಿ?

೬೨. ಆತ್ಮನು ಹೇಳುವೆನು :—ನನ್ನ ಸಂತಾಪವನ್ನು ನಾಶಗೊಳುಸುವಂತೆ ಸಮಂಜಸವಾಗಿ ಬೋಧಿಸುತ್ತಿರುವ ನೀನು ಯಾರು? ಆತ್ಮಸ್ವರೂಪವನ್ನು ನಾನು ಕೇಳಬೇಕೆಂದಿರುವೆನು. ಅದನ್ನು ವಿಸ್ತಾರವಾಗಿ ಹೇಳು.

೬೩. ವೀತರಾಗನು ಹೇಳುತ್ತಾನೆ:—ಯಾವನಿಗೆ ಆಶೆಗಳು ಇರುವುದಿಲ್ಲವೋ ಅವನೇ ವೀತರಾಗನು. ಬಹುಪ್ರಯತ್ನದಿಂದ ಶುದ್ಧನಾಗಿರುವವನು ಮಾತ್ರವೇ ವೀತರಾಗನೆನಿಸಿಕೊಳ್ಳುವನು. ಬೇರೆ ವಿಧವಾಗಿ ಸಾಧ್ಯವಿಲ್ಲ.

೬೪. ಕ್ರೋಧ, ಲೋಭ, ಮೋಹ ಇವುಗಳು ಯಾವ ಪುರುಷನಿಗೆ ಹೆದರಿ ಸಮೀಪಕ್ಕೇ ಬರುವುದಿಲ್ಲವೋ ಅವನೇ ವೀತರಾಗನು. ಅಂತಹ ವೀತರಾಗನೇ ನಾನು. ವಿವೇಕನು ನನ್ನ ಬಂಧುವು. ನಿನಗೆ ಒಳ್ಳೆಯದಾಗಲಿ.

ಆತ್ಮೋವಾಚ

ಕೀದೃಶೋಽಸೌ ತವ ಭ್ರಾತಾ ವಿವೇಕೋ ನಾಮ ನಾಮತಃ ।
ತಸ್ಯೈವ ಲಕ್ಷಣಂ ಬ್ರೂಹಿ ಭ್ರಾತುರಾತ್ಮನ ಏವ ಚ ॥ ೬೫ ॥

ವೀತರಾಗ ಉವಾಚ

ತಸ್ಯೈವ ಲಕ್ಷಣಂ ರೂಪಂ ನ ವದಾಮಿ ತವಾಽಗ್ರತಃ ।
ಭ್ರಾತುಸ್ತಸ್ಯ ಮಹಾಭಾಗ ಆಹ್ವಾನಂ ಚ ಕರೋಮ್ಯಹಂ ॥ ೬೬ ॥

ಭೋ ಭೋ ವಿವೇಕ ಮದ್ಭ್ರಾತರಾವಯೋಸ್ತ್ವಂ ವಚಶ್ಶೃಣು ।
ಏಹ್ಯೇಹಿ ಸುಮಹಾಭಾಗ ಮಮ ಸ್ನೇಹಾನ್ಮಹಾಮತೇ ॥ ೬೭ ॥

ಕಶ್ಯಪ ಉವಾಚ

ಶಾಂತಿಕ್ಷಮಾಭ್ಯಾಂ ಸಂಯುಕ್ತೋ ಭಾರ್ಯಾಭ್ಯಾಂ ಚ ಸಮಾಗತಃ ।
ಸರ್ವದೃಕ್ಸರ್ವಗೋ ವ್ಯಾಪೀ ಸರ್ವಸತ್ತ್ವಪರಾಯಣಃ ॥ ೬೮ ॥

ಸಂದೇಹಾನಾಂ ಚ ಸರ್ವೇಷಾಂ ಯೋ ರಿಪುರ್ಜ್ಞಾನವತ್ಸಲಃ ।
ಧಾರಣಾ ಧೀಶ್ಚ ದ್ವೇ ಪುತ್ರ್ಯೌ ತಸ್ಯೈವ ಹಿ ಮಹಾತ್ಮನಃ ॥ ೬೯ ॥

---

೬೫. ಆತ್ಮನು ಹೇಳುವನು :—ನಿನ್ನ ಸೋದರನಾದ ವಿವೇಕನೆಂಬುವನು ಯಾರು ? ಅವನು ಆತ್ಮನಿಗೂ ಸಹೋದರನೇ ತಾನೇ ? ಅವನ ಲಕ್ಷಣವನ್ನು ತಿಳಿಸು.

೬೬. ವೀತರಾಗನು ಹೇಳುವನು :—ಆ ವಿವೇಕನ ಲಕ್ಷಣಗಳನ್ನೂ ರೂಪವನ್ನೂ ನಿನ್ನ ಮುಂದೆ ಹೇಳುವುದಕ್ಕೆ ಬದಲಾಗಿ ಆ ಸಹೋದರನನ್ನೇ ಇಲ್ಲಿಗೆ ಕರೆಯುತ್ತೇನೆ ಎಂದು ಹೇಳಿ,

೬೭. ಎಲೈ ಸಹೋದರನಾದ ವಿವೇಕನೇ, ನಮ್ಮಿಬ್ಬರ ಮಾತನ್ನೂ ಕೇಳು. ಎಲೈ ಮಹಾಮತಿಯೇ, ನನ್ನಲ್ಲಿರುವ ಸ್ನೇಹದಿಂದ ಇಲ್ಲಿಗೆ ಬಾ ಎಂದು ವಿವೇಕನನ್ನು ಕರೆದನು.

೬೮-೭೨. ಕಶ್ಯಪನು ಹೇಳುತ್ತಾನೆ :—ಹೀಗೆ ಕರೆಯಲು ವಿವೇಕನೆಂಬುವನು ಅಲ್ಲಿಗೆ ಬಂದನು. ಅವನ ಜತೆಯಲ್ಲಿ ಶಾಂತಿ, ಕ್ಷಮೆ ಎಂಬ ಅವನ ಇಬ್ಬರು ಹೆಂಡರಿದ್ದರು. ಅವನು ಸರ್ವಸ್ಥಳಗಳಲ್ಲಿಯೂ ವ್ಯಾಪ್ತನಾಗಿ ಸಮಸ್ತವನ್ನೂ ನೋಡು

ತಸ್ಯ ಯೋಗಸ್ಸುತೋ ಜ್ಯೇಷ್ಠೋ ಮೋಕ್ಷೋ ಯಸ್ಯ ಮಹಾಗುರುಃ ।
ನಿರ್ಮಲೋ ನಿರಹಂಕಾರೋ ನಿರಾಶೋ ನಿಷ್ಪರಿಗ್ರಹಃ ॥ ೨೦ ॥

ಸರ್ವವೇಲಾಪ್ರಸನ್ನಾತ್ಮಾ ಗತದ್ವಂದ್ವೋ ಮಹಾಮತಿಃ ।
ಸ ವಿವೇಕಸ್ಸಮಾಯಾತೋ ಗುಣರತ್ನೈರ್ವಿಭೂಷಿತಃ ॥ ೨೧ ॥

ಯಸ್ಯಾಮಾತ್ಯೌ ಮಹಾತ್ಮಾನೌ ಸತ್ಯಧರ್ಮೌ ಮಹಾಮತೀ
ಕ್ಷಮಾಶಾಂತಿಸಮಾಯುಕ್ತಸ್ಸ ವಿವೇಕಸ್ಸಮಾಗತಃ ॥ ೨೨ ॥

ವೀತರಾಗಮುವಾಚೇದಮಾಹೂತೋಽಹಂ ಸಮಾಗತಃ ।
ತದ್ಭ್ರಾತಃ ಕಾರಣಂ ಸರ್ವಂ ಕಥ್ಯತಾಂ ಹಿ ಮಮಾಗ್ರತಃ ॥
ಯಮಾಶ್ರಿತ್ಯ ತ್ವಯಾಽದ್ಯೈವ ಕೃತಮಾಹ್ವಾನಮೇವ ಮೇ ॥ ೨೩ ॥

ವೀತರಾಗ ಉವಾಚ

ಪುಮಾನ್ ಸ್ಥಿತೋಽಯಂ ಪುರತೋ ಮಹಾಪಾಶೈರ್ನಿಯಂತ್ರಿತಃ ।
ಮೋಹಸ್ಯ ದಾರುಣೈರ್ಭ್ರಾತಃ ಸಂಸಾರಸ್ಯ ಚ ಬಂಧನೈಃ ॥ ೨೪ ॥

---

ತ್ತಿರುವವನು ಅಲ್ಲದೆ ಜ್ಞಾನದಲ್ಲಿ ವಿಶ್ವಾಸವುಳ್ಳ ಆ ವಿವೇಕನು ಸಕಲಸಂದೇಹಗಳನ್ನೂ ತೊಲಗಿಸಲು ಸಮರ್ಥನು. ಅವನೊಡನೆ, ಧಾರಣಾ, ಧೀ ಎಂಬ ಇಬ್ಬರು ಹೆಣ್ಣು ಮಕ್ಕಳಿದ್ದರು. ಮತ್ತು ಇವನ ಜ್ಯೇಷ್ಠಪುತ್ರನಾದ ಯೋಗನೂ, ಗುರುವಾದ ಮೋಕ್ಷ ಎಂಬುವನೂ ಅವನ ಜತೆಯಲ್ಲಿಯೇ ಇದ್ದರು. ಈ ವಿವೇಕನಿಗೆ ಆಸೆಯೆಂಬುವುದಿಲ್ಲ. ಅಹಂಕಾರವೂ ಇಲ್ಲ ಆದುದರಿಂದ ಇಚ್ಛಾದ್ವೇಷಾದಿ ಕೆಟ್ಟ ಬುದ್ಧಿಯಿಲ್ಲದೆ ಸದಾ ನಿರ್ಮಲನಾಗಿಯೂ ಪರಿಗ್ರಹಪರಾಙ್ಮುಖನಾಗಿಯೂ, ಪ್ರಸನ್ನಮುಖದಿಂದ ಶೋಭಿಸುತ್ತಿರುವವನಾಗಿ ಇದ್ದನು. ಸರ್ವಸದ್ಗುಣಗಳಿಂದ ಅಲಂಕೃತನೂ, ಮಹಾಬುದ್ಧಿವಂತನೂ ಆದ ಈ ವಿವೇಕನಿಗೆ ಇವನಂತೆಯೇ ಬುದ್ಧಿವಂತರೂ ಮಹಾತ್ಮರೂ ಆದ ಸತ್ಯ, ಧರ್ಮ ಎಂಬ ಇಬ್ಬರು ಮಂತ್ರಿಗಳಿರುವರು. ಇವರೆಲ್ಲರಿಂದೊಡಗೂಡಿ ವಿವೇಕನು ವೀತರಾಗನ ಮಾತಿನಂತೆ ಅವನ ಬಳಿಗೆ ಬಂದನು.

೨೩. ಅನಂತರ ವಿವೇಕನು ವೀತರಾಗನನ್ನು ಕುರಿತು ಅಯ್ಯಾ, ನೀನು ನನನ್ನು ಕರೆದ ಕಾರಣವೇನು ? ನಿನ್ನ ಮಾತಿನಂತೆ ಇಲ್ಲಿಗೆ ಬಂದಿರುವೆನು, ಆದುದರಿಂದ ನನ್ನನ್ನು ಕರೆದ ಕಾರಣವನ್ನು ತಿಳಿಸು ಎಂದನು.

೨೪-೨೬. ವೀತರಾಗನು ಹೇಳುತ್ತಾನೆ:--ಎಲೈ ಸಹೋದರನೇ, ಮೋಹರೂಪವಾದ ಮತ್ತು ಭಯಂಕರವಾದ ಪಾಶಗಳಿಂದ ಬಂಧಿತನಾದ ಪುರುಷನು ನಮ್ಮೆದುರಿಗೆ

**ಸರ್ವಸ್ಯ ವ್ಯಾಪಕಸ್ಸ್ವಾಮೀ ಹ್ಯಯಮಾತ್ಮಾ ಮಮೈವ ಚ ।**
**ಪಂಚತತ್ತ್ವೈಸ್ಸಮಾವಿಷ್ಟೋ ಜ್ಞಾನಧ್ಯಾನವಿವರ್ಜಿತಃ ॥ ೭೫ ॥**

**ಪೃಚ್ಛ್ಯತಾಮೇನಮಾತ್ಮಾನಂ ಭವಾಸ್ತತ್ತ್ವೇಷು ಕೋವಿದಃ ।**
**ವೀತರಾಗವಚಶ್ಶ್ರುತ್ವಾ ವಿವೇಕೋ ವಾಕ್ಯಮಬ್ರವೀತ್ ॥ ೭೬ ॥**

**ವಿವೇಕ ಉವಾಚ**

**ಸುಖೇನ ಸ್ಥೀಯತೇ ದೇವ ಭವತಾ ವಿಶ್ವನಾಯಕ ।**
**ಆಗತೇ ತ್ವಯಿ ಸಂಸಾರೇ ಕಿಂ ಕಿಂ ಭುಕ್ತಂ ಸುಖಂ ಶುಭಂ ॥ ೭೭ ॥**

**ಆತ್ಮೋವಾಚ**

**ಗರ್ಭವಾಸೇ ಮಹದ್ದುಃಖಂ ಪ್ರಭುಕ್ತಂ ದಾರುಣಂ ಮಯಾ ।**
**ಭುಕ್ತಮೇವ ಮಹಾಪ್ರಾಜ್ಞ ಜ್ಞಾನಮೋಹೇನ ವೈ ಸದಾ ॥ ೭೮ ॥**

**ದೇಹೇಽಪಿ ಜ್ಞಾನವಿಭ್ರಷ್ಟೋ ಜಾತೋಽಹಂ ಲೋಕಸಂಗತಃ ।**
**ಬಾಲ್ಯೇ ಚಾಽಜ್ಞಾನತಸ್ತಾತ ಕೃತ್ಯಾಽಕೃತ್ಯಂ ಕೃತಂ ಮಯಾ ॥ ೭೯ ॥**

---

ನಿಂತಿರುವನು. ಸರ್ವತ್ರ ಇರುವ ಈತನು ಸಂಸಾರಬಂಧನಗಳಿಂದಲೂ, ಪಂಚತತ್ತ್ವ ಗಳಿಂದಲೂ ಕೂಡಿ ಜ್ಞಾನ, ಧ್ಯಾನರಹಿತನಾಗಿರುವನು. ನೀನು ತತ್ತ್ವಜ್ಞಾನಿಗಳಲ್ಲಿ ಶ್ರೇಷ್ಠನೆನಿಸಿರುವೆ. ಆದ್ದರಿಂದ ಇವನನ್ನು ಪ್ರಶ್ನಿಸು ಎಂದು ಹೇಳಲು, ವಿವೇಕನು ಹೀಗೆ ಹೇಳಿದನು.

೭೭. ವಿವೇಕನು ಹೇಳಿದನು:—ಎಲೈ ವಿಶ್ವನಾಯಕನೇ, ನೀನು ಸೌಖ್ಯವಾಗಿದ್ದೀಯಾ? ನೀನು ಸಂಸಾರಕ್ಕೆ ಬಂದಮೇಲೆ ಯಾವ ಯಾವ ಒಳ್ಳೆಯ ಸುಖಗಳನ್ನು ಅನುಭವಿಸಿರುವೆ? ಹೇಳು ಎನಲು,

೭೮. ಆತ್ಮನು ಹೇಳುತ್ತಾನೆ:—ಹೇ ಮಹಾಪ್ರಾಜ್ಞನೇ, ಜ್ಞಾನದಿಂದಲೂ, ಮೋಹದಿಂದಲೂ ಪೀಡಿತನಾಗಿ ನಾನು ಗರ್ಭದಲ್ಲಿದ್ದುಕೊಂಡು ಬಗೆಬಗೆಯ ದುಃಖಗಳನ್ನು ಅನುಭವಿಸಿದೆನು.

೭೯. ಜ್ಞಾನಹೀನನಾಗಿ ದೇಹದಲ್ಲಿ ಜನಿಸಿದೆನು. ಲೋಕದಲ್ಲಿ ಇದ್ದುಕೊಂಡು ಬಾಲ್ಯದಲ್ಲಿ ಅಜ್ಞಾನದಿಂದ ಒಳ್ಳೆಯ ಮತ್ತು ಕೆಟ್ಟಕೆಲಸಗಳನ್ನು ಮಾಡಿದೆನು.

ತಾರುಣ್ಯೇ ಚ ಕೃತಾ ಕ್ರೀಡಾ ಭುಕ್ತಾ ಭಾರ್ಯಾ ಅನೇಕಶಃ ।
ವಾರ್ಧಕಂ ಪ್ರಾಪ್ಯ ಸಂತಪ್ತಃ ಪುತ್ರಶೋಕಾದಿಭಿಸ್ತಥಾ ॥ ೬೦ ॥

ಭಾರ್ಯಾದೀನಾಂ ವಿಯೋಗೈಸ್ತು ದಗ್ಧೋಽಸ್ಮ್ಯಹಮಹರ್ನಿಶಂ ।
ದುಃಖೈರನೇಕಸಂವರ್ಣೈಃ ಸಂತಪ್ತೋಽಸ್ಮಿ ದಿನೇ ದಿನೇ ॥ ೬೧ ॥

ದಿವಾರಾತ್ರೌ ಮಹಾಪ್ರಾಜ್ಞ ನ ವಿಂದಾಮಿ ಸುಖಂ ಕ್ವಚಿತ್ ।
ಏವಂ ದುಃಖೈಸ್ತು ಸಂತಪ್ತಃ ಕಿಂ ಕರೋಮಿ ಮಹಾಮತೇ ॥ ೬೨ ॥

ತಮುಪಾಯಂ ವದಸ್ವೈವ ಸುಖಂ ವಿಂದಾಮಿ ಯೇನ ವೈ ।
ಅಸ್ಮಾತ್ಸಂಸಾರಜಾಲೌಘಾನ್ಮೋಚಯಾದ್ಯ ಸುಬಂಧನಾತ್ ॥ ೬೩ ॥

॥ ವಿವೇಕ ಉವಾಚ ॥

ಭವಾನ್ ಶುದ್ಧೋಽಸ್ತಿ ನಿರ್ದ್ವಂದ್ವೋ ಹ್ಯಪಾಪೋಽಸ್ತಿ ಜಗತ್ಪತೇ ।
ವಶಂ ಗಚ್ಛ ಮಹಾತ್ಮಾನಂ ವೀತರಾಗಂ ಸುಖಪ್ರದಂ ॥ ೬೪ ॥

---

೬೦. ಯೌವನಕಾಲದಲ್ಲಿ ಅನೇಕವಿಧವಾದ ಕ್ರೀಡಾದಿ ವಿನೋದಗಳಲ್ಲಿ ಆಸಕ್ತನಾಗಿದ್ದೆನು. ಅನೇಕ ಹೆಂಡತಿಯರಲ್ಲಿ ಸುಖವನ್ನು ಅನುಭವಿಸಿದೆನು. ಮುದಿತನದಲ್ಲಿ ಪುತ್ರಶೋಕಾದಿಗಳಿಂದ ಪೀಡಿತನಾಗಿರುವೆನು.

೬೧. ಹೆಂಡತಿ, ಮೊದಲಾದವರ ವಿರಹದುಃಖದಿಂದ ಹಗಲಿರುಳೂ ಸಂಕಟ ಪಟ್ಟೆನು. ಇನ್ನೂ ನಾನಾವಿಧವಾದ ದುಃಖಗಳಿಂದ ಬಳಲುತ್ತಿದ್ದೇನೆ.

೬೨. ಎಲೈ ಮಹಾಬುದ್ಧಿಯುಳ್ಳವನೇ, ಹಗಲಿನಲ್ಲಾಗಲೀ, ರಾತ್ರಿಯಲ್ಲಾಗಲೀ, ಸ್ವಲ್ಪಸುಖವನ್ನೂ ಕಾಣದೇ ಇರುವೆನು, ಈರೀತಿ ದುಃಖಗಳಿಂದ ಪೀಡಿತನಾಗಿದ್ದೇನೆ, ಏನುಮಾಡಲಿ?

೬೩. ಯಾವುದರಿಂದ ಸುಖವನ್ನು ಹೊಂದುವೆನೋ, ಅಂತಹ ಉಪಾಯವನ್ನು ಹೇಳು. ಈಸಂಸಾರಬಂಧನದಿಂದ ನನ್ನನ್ನು ಮೋಚನೆಮಾಡು. ಎಂದು ಕೇಳಿಕೊಂಡನು

೬೪. ವಿವೇಕನು ಹೇಳಿದನು.:— ನೀನು ಸುಖದುಃಖಾದಿದ್ವಂದ್ವವರ್ಜಿತನಾಗಿಯೂ, ಪಾಪರಹಿತನಾಗಿಯೂ, ಶುದ್ಧನಾಗಿಯೂ ಇರುವೆ. ಸುಖವನ್ನು ಕೊಡತಕ್ಕ ಮಹಾತ್ಮನಾದ ವೀತರಾಗನ ಬಳಿಗೆ ಹೋಗು. ಅವನು ನಿನಗೆ ಸುಖಪ್ರದವಾದ ಮಾರ್ಗವನ್ನು ತೋರಿಸುವನು.

**ನಿಸ್ಸಂಶಯಂ ತ್ವಯಾ ದೃಷ್ಟಂ ನಗ್ನಮಾಚಾರವರ್ಜಿತಂ ।**
**ಸುಖಪ್ರದರ್ಶಕೋ ಹ್ಯೇಷಃ ಸರ್ವಸಂತಾಪನಾಶಕಃ ॥ ೮೫ ॥**

**ಏವಮಾಕರ್ಣ್ಯ ಶುದ್ಧಾತ್ಮಾ ವೀತರಾಗಃ ಗತಂ ಪುನಃ ।**
**ತಮುವಾಚ ಸುಸಂದೀನಶ್ಶ್ರೂಯತಾಂ ವಚನಂ ಮಮ ॥ ೮೬ ॥**

**ಸುಖಂ ವಿಂದಾಮಿ ಯೇನಾಹಂ ತಂ ಮಾರ್ಗಂ ಮಮ ದರ್ಶಯ ।**
**ಏವಮಸ್ತು ಮಹಾಪ್ರಾಜ್ಞ ಕರಿಷ್ಯೇ ವಚನಂ ತವ ॥ ೮೭ ॥**

**ಪುನರ್ಗಚ್ಛ ವಿವೇಕಂ ಹಿ ಸುಖವಾರ್ತಾ ಕೃತಾ ತ್ವಯಾ ।**
**ಸುಖಮಾರ್ಗಸ್ಯ ವೈ ವಕ್ತಾ ತವ ಏಷ ಭವಿಷ್ಯತಿ ॥ ೮೮ ॥**

**ವೀತರಾಗೇಣ ಪುಣ್ಯೇನ ಪ್ರೇಷಿತೋ ಗತವಾನ್ ಪ್ರಭುಃ ।**
**ತಮುವಾಚ ಮಹಾತ್ಮಾನಂ ವಿವೇಕಂ ಶುದ್ಧಸತ್ತ್ವಮಂ ॥ ೮೯ ॥**

---

೮೫-೮೬. ನಗ್ನನಾಗಿಯೂ, ಆಚಾರಹೀನನಾಗಿಯೂ, ಇರುವ ಅವನನ್ನು ನೀನು ನೋಡಿರುವಿಯಷ್ಟೆ ? ಅವನೇ ನಿನಗೆ ಸುಖವನ್ನು ತೋರಿಸುವವನು. ನಿಶ್ಚಯವಾಗಿಯೂ ಸಂಸಾರದುಃಖಗಳನ್ನು ನಾಶಮಾಡುವವನು, ಎಂದು ವಿವೇಕನು ಹೇಳಲು ಶುದ್ಧನಾದ ಆತ್ಮನು ವೀತರಾಗನ ಬಳಿಗೆ ಬಂದು ದೀನನಾಗಿ ಅಯ್ಯಾ ನನ್ನ ಮಾತನ್ನು ದಯವಿಟ್ಟು ಕೇಳು.

೮೭-೮೮. ಯಾವುದರಿಂದ ನಾನು ಸುಖವನ್ನು ಹೊಂದುವೆನೋ, ಆ ದಾರಿಯನ್ನು ತೋರಿಸು ಎಂದು ಆತ್ಮನು ಪ್ರಾರ್ಥಿಸಲು, ವೀತರಾಗನು ಹಾಗೆಯೇ ಆಗಲಿ, ನಿನ್ನ ಮಾತನ್ನು ನಡೆಯಿಸುತ್ತೇನೆ. ಈಗ ನೀನು ಪುನಃ ವಿವೇಕನ ಬಳಿಗೆ ಹೋಗಿ ಅವನನ್ನು ಒಳ್ಳೆಯಮಾತಿನಿಂದ ಆದರಿಸಿ ಅವನಿಂದ ನೀನು ಸೌಖ್ಯಹೊಂದುವ ರೀತಿಯನ್ನು ಕೇಳಿ ತಿಳಿದುಕೊಳ್ಳುವವನಾಗು. ಎಂದನು.

೮೯. ವೀತರಾಗನು ಹೀಗೆ ಹೇಳಿ ಕಳುಹಿಸಲು ಆತ್ಮನು ವಿವೇಕನ ಸಮೀಪಕ್ಕೆ ಬಂದು ಅಯ್ಯಾ ನಿನ್ನನ್ನು ಮರೆಹೊಕ್ಕಿರುವೆನು ಸಂಸಾರಬಂಧನದಿಂದ ನನ್ನನ್ನು ರಕ್ಷಿಸು.

**ಸುಖಂ ಮೇ ದರ್ಶಯ ತ್ವಂ ಹಿ ವೀತರಾಗೇಣ ಪ್ರೇಷಿತಃ ।**
**ಭವಚ್ಛರಣಮಾಪನ್ನೋ ರಕ್ಷ ಸಂಸಾರದಾರುಣಾತ್ ॥ ೯೦ ॥**

**॥ ವಿವೇಕ ಉವಾಚ ॥**

**ಜ್ಞಾನಂ ಗಚ್ಛ ಮಹಾಪ್ರಾಜ್ಞ ಸ ತೇ ಸರ್ವಂ ವದಿಷ್ಯತಿ ।**
**ಆತ್ಮಾ ತಥೋಕ್ತಸ್ಸಂಪ್ರಾಪ್ತೋ ಯತ್ರ ಜ್ಞಾನಂ ಪ್ರತಿಷ್ಠಿತಂ ॥ ೯೧ ॥**

**ಭೋ ಭೋ ಜ್ಞಾನ ಮಹಾತೇಜಃ ಸರ್ವಭಾವಪ್ರದರ್ಶಕ ।**
**ಶರಣಂ ತ್ವಾಮಹಂ ಪ್ರಾಪ್ತಸ್ಸುಖಂ ಮಾರ್ಗಂ ಪ್ರದರ್ಶಯ ॥ ೯೨ ॥**

**॥ ಜ್ಞಾನಮುವಾಚ ॥**

**ಭೃತ್ಯೋಽಹಂ ತವ ಲೋಕೇಶ ತ್ವಂ ಮಾಂ ವೇತ್ಸಿ ನ ಸುವ್ರತ ।**
**ಮಯಾ ಧ್ಯಾನೇನ ವೈ ಪೂರ್ವಂ ವಾರಿತಸ್ತ್ವಂ ಪುನಃ ಪುನಃ ॥ ೯೩ ॥**

**ಪಂಚಾತ್ಮಕಾನಾಂ ಸಂಗೇನ ಚಾಪದಂ ಪ್ರಾಪ್ತವಾನ್ ಭವಾನ್ ।**
**ಧ್ಯಾನಂ ಗಚ್ಛ ಮಹಾಪ್ರಾಜ್ಞ ಸ ತೇ ದಾತಾ ಸುಖಸ್ಯ ಚ ॥ ೯೪ ॥**

---

೯೦. ವೀತರಾಗನು ನನ್ನನ್ನು ನಿನ್ನಬಳಿಗೆ ಕಳುಹಿಸಿರುವನು. ನನಗೆ ಸುಖವನ್ನು ತೋರಿಸು. ನಿನ್ನನ್ನು ಮರೆಹೊಕ್ಕಿದ್ದೇನೆ ಸಂಸಾರಸಾಗರದಿಂದ ನನ್ನನ್ನು ಕಾಪಾಡು ಎಂದನು.

೯೧. ವಿವೇಕನು ಹೇಳುತ್ತಾನೆ:—ಎಲೈ ಮಹಾಪ್ರಾಜ್ಞನೇ, ಜ್ಞಾನದ ಬಳಿಗೆ ಹೋಗು. ಜ್ಞಾನವೇ ನಿನಗೆ ಸರ್ವವನ್ನೂ ತಿಳಿಸುತ್ತದೆ ಎಂದೆನಲು, ಆತ್ಮನು ಜ್ಞಾನದ ಬಳಿಗೆ ಬಂದನು.

೯೨. ಸರ್ವಭಾವವನ್ನೂ ತೋರಿಸುವ ಮಹಾತೇಜಸ್ಸುಳ್ಳ ಎಲೈ ಜ್ಞಾನವೇ? ನಿನ್ನನ್ನು ಮರೆಹೊಕ್ಕಿರುವೆನು ನನಗೆ ಸುಖಮಾರ್ಗವನ್ನು ತೋರಿಸು, ಎಂದನು.

೯೩. ಜ್ಞಾನವು ಹೇಳುತ್ತದೆ:—ಎಲೈ ಸ್ವಾಮಿಯೇ, ನಾನು ನಿನ್ನ ಸೇವಕನು, ನೀನು ನನ್ನನ್ನು ಗುರ್ತಿಸಲಾರೆ. ನನ್ನಿಂದಲೂ, ಧ್ಯಾನದಿಂದಲೂ, ನೀನು ಅನೇಕಬಾರಿ ಅಕೃತ್ಯದಿಂದ ನಿವಾರಿಸಲ್ಪಟ್ಟಿರುವೆ.

೯೪. ಪಂಚಭೂತಗಳೊಡನೆ ನೀನು ಸಹವಾಸಮಾಡಿದಪ್ರಯುಕ್ತ ಕಷ್ಟಕ್ಕೆ ಒಳಗಾದೆ. ಎಲೈ ಪ್ರಾಜ್ಞನೇ ನೀನು ಧ್ಯಾನದ ಬಳಿಗೆ ಹೋಗು, ಅದು ಸುಖವನ್ನು ಕೊಡುತ್ತದೆ ಎನಲು,

ಜ್ಞಾನೇನ ಪ್ರೇಷಿತೋ ಹ್ಯಾತ್ಮಾ ಧ್ಯಾನಮಾಶ್ರಿತ್ಯ ಸಂಸ್ಥಿತಃ ।
ಸುಖಮತ್ಯಂತಸಿದ್ಧಂ ಚ ಧ್ಯಾನ ಮೇ ದರ್ಶಯಸ್ವ ಹ ॥
ಭವಚ್ಛರಣಮಾಯಾತಂ ಮಾಮೇವಂ ಪರಿರಕ್ಷಯ ॥ ೯೫ ॥

ಏವಂ ಸಂಭಾಷಿತಂ ತಸ್ಯ ಧ್ಯಾನಮಾಕರ್ಣ್ಯ ತದ್ವಚಃ ।
ಸಮುವಾಚ ಪುನಶ್ಚಾಪಿ ತಮಾತ್ಮಾನಂ ಸ ಮಿತ್ರವತ್ ॥ ೯೬ ॥

ನೈವ ತ್ಯಾಜ್ಯೋಽಸ್ಮ್ಯಹಂ ತಾತ ಸರ್ವಕರ್ಮಸು ಸಂಸ್ಥಿತಃ ।
ತ್ವಯೈವ ವೀತರಾಗೇಣ ವಿವೇಕೇನ ಸದೈವ ಹಿ ॥ ೯೭ ॥

ಧ್ಯಾನಯುಕ್ತೋ ಭವಸ್ವ ತ್ವಮಾತ್ಮಾನಮವಲೋಕಯ ।
ಆತ್ಮವಾಂಸ್ತ್ವಂ ಸ್ಥಿರೋ ಭೂತ್ವಾ ನಿರಾತಂಕೋಽವಿಕಲ್ಪಿತಃ ॥ ೯೮ ॥

ಯಥಾ ದೀಪೋ ನಿವಾತಸ್ಥೋ ಕಜ್ಜಲಂ ವಮತೇ ಸ್ಥಿರಂ ।
ತಥಾ ದೋಷಾನ್ ಪ್ರಜ್ವಲಿತ್ವಾ ದರ್ಶನಂ ಹಿ ಪ್ರಯಾಸ್ಯಸಿ ॥ ೯೯ ॥

ಏಕಾಂತಸ್ಥೋ ನಿರಾಹಾರೋ ಮಿತಾಶೀ ಭವ ಸರ್ವದಾ ।
ನಿರ್ದ್ವಂದ್ವಶ್ಶಬ್ದಸಂಹೀನೋ ನಿಶ್ಚಲೋಪಾಸನೇ ಸ್ಥಿತಃ ॥ ೧೦೦ ॥

---

೯೫. ಜ್ಞಾನದಿಂದ ಕಳುಹಿಸಲ್ಪಟ್ಟ ಆತ್ಮನು ಧ್ಯಾನದ ಬಳಿಗೆ ಬಂದು ಎಲೈ, ಧ್ಯಾನವೇ ನನಗೆ ಉತ್ತಮವಾದ ಸುಖವನ್ನು ತೋರಿಸು, ನಿನ್ನನ್ನು ಮರೆಹೊಕ್ಕಿರುವೆನು ನನ್ನನ್ನು ಕಾಪಾಡು, ಎಂದನು.

೯೬-೯೭. ಧ್ಯಾನವು ಆತ್ಮನ ಮಾತನ್ನು ಕೇಳಿ ಆತ್ಮನನ್ನು ಕುರಿತು, ಪುನಃ ಅವನನ್ನು ಸ್ನೇಹಿತನಂತೆ ಅಯ್ಯಾ, ನನ್ನನ್ನು ಯಾವಾಗಲೂ ಬಿಟ್ಟಿರಬೇಡ. ವೀತರಾಗ ವಿವೇಕ, ಧ್ಯಾನ, ಇವರ ಜೊತೆಯಲ್ಲಿದ್ದುಕೊಂಡು ಆತ್ಮನ ಸ್ವರೂಪವನ್ನು ಚೆನ್ನಾಗಿ ತಿಳಿದುಕೋ.

೯೮-೯೯. ಹೀಗೆ ನೀನು ಆತ್ಮಸ್ವರೂಪವನ್ನು ತಿಳಿದು ಸ್ಥಿರವಾಗಿದ್ದರೆ, ಗಾಳಿಯಿಂದ ಚಲಿಸುತ್ತಿರುವ ದೀಪವು ಕಾಡಿಗೆಯನ್ನು ತಳ್ಳುವಂತೆ ನೀನು ದೋಷಗಳನ್ನು ಹೊರದೂಡಿ ಶುದ್ಧನಾಗಿ ಕಾಣುತ್ತೀಯೆ.

೧೦೦. ನೀನು ಏಕಾಂತದಲ್ಲಿದ್ದುಕೊಂಡು ನಿರಾಹಾರಿಯಾಗಿಯೋ, ಅಥವಾ ಮಿತಾಹಾರಿಯಾಗಿಯೋ, ಆಗಬೇಕು. ಸುಖದುಃಖಾದಿದ್ವಂದ್ವಗಳನ್ನು ಜಯಿಸಿ,

**ಆತ್ಮಾನಮಾತ್ಮನಾ ಧ್ಯಾಯನ್ ಮಯ್ಯೈವ ಸ್ಥಿರಬುದ್ಧಿನಾ ।**
**ಪ್ರಾಪ್ಸ್ಯಸೇ ಪರಮಂ ಸ್ಥಾನಂ ತದ್ವಿಷ್ಣೋಃ ಪರಮಂ ಪದಂ ॥ ೧೦೧ ॥**

**ಇತಿ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಅಧ್ಯಾತ್ಮಕಥನಂ ನಾಮ ಅಷ್ಟಮೋಽಧ್ಯಾಯಃ**



---

ಶಬ್ದಾದಿ ವಿಷಯಸುಖಗಳಲ್ಲಿ ಆಸಕ್ತಿಯಿಲ್ಲದೆ ನಿಶ್ಚಲನಾಗಿರು. ಇದೇ ನೀನು ಮಾಡಬೇಕಾದ ಉಪಾಸನೆಯು.

೧೦೧. ಆತ್ಮನನ್ನು ಆತ್ಮನಿಂದಲೇ ನೋಡುತ್ತ ಸ್ಥಿರವಾದ ಬುದ್ಧಿಯಿಂದಲೂ, ನನ್ನ ಸಹಾಯದಿಂದಲೂ, ನೀನು ಶ್ರೇಷ್ಠಸ್ಥಾನವಾದ ವಿಷ್ಣುವಿನ ಪರಮಪದವನ್ನು ಹೊಂದುವೆ ಎಂದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇದಾಂತನಿರೂಪಣವೆಂಬ ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ನವಮೋಽಧ್ಯಾಯಃ

॥ ಕಶ್ಯಪ ಉವಾಚ ॥

ಏವಂ ಸಂಭೋಧಿತಸ್ತತ್ರ ಹ್ಯಾತ್ಮಾ ಧ್ಯಾನಾಧಿಕೈಸ್ತದಾ ।
ಮೋಕ್ತುಕಾಮಸ್ಸ ತತ್ಕಾರ್ಯಂ ಪಂಚಾತ್ಮಕಂ ಬುದ್ಧಿಮಾನ್ ॥ ೧ ॥

ನಿಮಿತ್ತಾನಿ ಪ್ರಪಶ್ಯೇತ್ತು ಪ್ರಾರ್ಥಿತಂ ನ ಪ್ರಯಾತಿ ಸಃ ।
ವಿಹಾಯ ಕಾಯಂ ನಿರ್ಲಕ್ಷಂ ಪತಿತಂ ನೈವ ಪಶ್ಯತಿ ॥ ೨ ॥

ಸದೈವ ಹಿ ತಯೋರ್ನಾಸ್ತಿ ಸಂಬಂಧಃ ಪ್ರಾಣದೇಹಯೋಃ ।
ಧನಪುತ್ರಕಳತ್ರೈಶ್ಚ ಸಂಬಂಧಃ ಕೇನ ಹೇತುನಾ ॥ ೩ ॥

ಏವಂ ಜ್ಞಾತ್ವಾ ಶಮಂ ಗಚ್ಛ ಕ್ಲೈಬ್ಯಂ ಮಾ ಗಚ್ಛ ಸುಪ್ರಿಯೇ ।
ಅಯಮೇವ ಪರಂ ಬ್ರಹ್ಮ ಹ್ಯಯಮೇವ ಸನಾತನಃ ॥ ೪ ॥

---

## ಒಂಭತ್ತನೆಯ ಅಧ್ಯಾಯವು.

೧-೨. ಕಶ್ಯಪನು ಹೇಳುತ್ತಾನೆ:—ಧ್ಯಾನಾದಿಗಳಿಂದ ಈರೀತಿ ಎಚ್ಚರಗೊಳಿಸಲ್ಪಟ್ಟ ಆತ್ಮನು ಪಂಚತತ್ತ್ವಗಳ ಸಹವಾಸವನ್ನು ಬಿಡಬೇಕೆಂದು ನಿಶ್ಚಯಿಸಿ ಸಮಯವನ್ನು ಕಾಯುತ್ತಿದ್ದನು. ಪ್ರಾರ್ಥಿಸಿದರೂ ಎಲ್ಲೂ ಹೋಗುತ್ತಿರಲಿಲ್ಲ. ದೇಹದಲ್ಲಿ ಸ್ವಲ್ಪವೂ ಲಕ್ಷ್ಯವಿಲ್ಲದೇ ಎಡವುದನ್ನೂ, ಬೀಳುವುದನ್ನೂ, ನೋಡದೇ ಇದ್ದನು.

೩. ಪ್ರಾಣಕ್ಕೂ, ದೇಹಕ್ಕೂ, ಯಾವಾಗಲೂ ಸಂಬಂಧವಿಲ್ಲ. ಹಣ, ಮಗ, ಹೆಂಡತಿ, ಇವುಗಳ ಸಂಬಂಧವು ಯಾವಕಾರಣದಿಂದ ಉಂಟಾಗುವುದೋ, ನಾ ಕಾಣೆ.

೪. ಎಲೈ ಪ್ರಿಯಳೇ ಈರೀತಿ ತಿಳಿದುಕೊಂಡು, ಶಾಂತಿಯನ್ನು ಹೊಂದು. ಅಧೈರ್ಯವನ್ನು ಹೊಂದಬೇಡ. ಹೀಗೆ ತಿಳಿಯುವುದೇ ಪರಬ್ರಹ್ಮತತ್ತ್ವವು. ಇದೇ ಸನಾತನವು.

**ಅಯಮಾತ್ಮಸ್ವರೂಪೇಣ ದೈತ್ಯದೇವೇಷು ಸಂಸ್ಥಿತಃ ।**
**ಅಯಂ ಬ್ರಹ್ಮಾ ಹ್ಯಯಂ ರುದ್ರೋ ಹ್ಯಯಂ ವಿಷ್ಣುಸ್ಸನಾತನಃ ॥ ೫ ॥**

**ಅಯಂ ಸೃಜತಿ ವಿಶ್ವಾನಿ ಹ್ಯಯಂ ಪಾಲಯತೇ ಪ್ರಜಾಃ ।**
**ಸಂಹರತ್ಯೇಷ ಧರ್ಮಾತ್ಮಾ ಧರ್ಮರೂಪೋ ಜನಾರ್ದನಃ ॥ ೬ ॥**

**ಅನೇನೋತ್ಪಾದಿತಾ ದೇವಾ ದಾನವಾಶ್ಚೈವ ಸುಪ್ರಿಯೇ ।**
**ದೇವಾಶ್ಚ ಧರ್ಮಸಂಯುಕ್ತಾ ಧರ್ಮಹೀನಾಸ್ಸುತಾಸ್ತವ ॥ ೭ ॥**

**ಧರ್ಮೋಽಯಂ ಮಾಧವಸ್ಯಾಂಗಂ ಸರ್ವದೇವೈಶ್ಚ ಪಾಲಿತಂ ।**
**ಧರ್ಮಂ ಚ ಚಿಂತಯೇದ್ದೇವಿ ಧರ್ಮಂ ಚೈವ ಪ್ರಪಾಲಯೇತ್ ।**
**ತಸ್ಯ ವಿಷ್ಣುಸ್ಸ ಧರ್ಮಾತ್ಮಾ ಸರ್ವದೈವ ಪ್ರಸಾದವಾನ್ ॥ ೮ ॥**

**ಧರ್ಮೇಣ ವರ್ತಿತಾ ದೇವಾಃ ಸತ್ಯೇನ ತಪಸಾ ಕಿಲ ।**
**ಯೇಷಾಂ ವಿಷ್ಣುಃ ಪ್ರಸನ್ನೋ ವೈ ಧರ್ಮಸ್ತೈರಿಹ ಪಾಲಿತಃ ॥ ೯ ॥**

---

೫. ಈ ಪರಬ್ರಹ್ಮನೇ ಆತ್ಮಸ್ವರೂಪದಿಂದ ದೈತ್ಯರಲ್ಲಿಯೂ, ದೇವತೆಗಳಲ್ಲೂ ಇರುವನು. ಆ ಆತ್ಮನೇ ಬ್ರಹ್ಮ ವಿಷ್ಣು ಮಹೇಶ್ವರರ ರೂಪದಿಂದಲೂ, ಇದ್ದಾನೆ.

೬. ಇವನೇ ಪ್ರಪಂಚಗಳನ್ನು ಸೃಜಿಸುತ್ತಾನೆ. ಪ್ರಜೆಗಳನ್ನು ಕಾಪಾಡುತ್ತಾನೆ. ಎಲೈ ಧರ್ಮರೂಪಳೇ, ಧರ್ಮಾತ್ಮನಾದ ಜನಾರ್ಧನನೇ ಆತ್ಮನಾಗಿ ಕಡೆಯಲ್ಲಿ ಎಲ್ಲವನ್ನೂ ಲಯಮಾಡುತ್ತಾನೆ.

೭. ಎಲೈ ಪ್ರಿಯಳೇ, ಇವನಿಂದಲೇ ದೇವತೆಗಳು, ದಾನವರು ಸೃಷ್ಟಿಸಲ್ಪಟ್ಟರು. ಇವನನುಗ್ರಹದಿಂದಲೇ ದೇವತೆಗಳು ಧರ್ಮಿಷ್ಠರಾದರು. ನಿನ್ನ ಪುತ್ರರೂ ಇವನಿಂದಲೇ ಧರ್ಮರಹಿತರಾದರು,

೮. ಸರ್ವದೇವತೆಗಳಿಂದಲೂ ಪಾಲಿಸಲ್ಪಡುತ್ತಿರುವ ಧರ್ಮವು ವಿಷ್ಣುವಿಗೆ ಒಂದು ಅಂಗವಾಗಿರುವುದು. ಧರ್ಮವನ್ನು ಕುರಿತು ಯಾವಾಗಲೂ ಆಲೋಚಿಸಬೇಕು. ಅಂಥವನಿಗೆ ಧರ್ಮವೇ ಆತ್ಮವಾಗಿಉಳ್ಳ ಮಹಾವಿಷ್ಣುವು ಪ್ರಸನ್ನನಾಗುವನು.

೯. ದೇವತೆಗಳು ಧರ್ಮದಿಂದಲೂ, ಸತ್ಯದಿಂದಲೂ, ತಪಸ್ಸಿನಿಂದಲೂ ಕೂಡಿರುವರು. ಯಾರಿಂದ ಧರ್ಮವು ಪಾಲಿಸಲ್ಪಡುವುದೋ ಅವರಿಗೆ ವಿಷ್ಣುವು ಪ್ರಸನ್ನನಾಗುವನು.

ವಿಷ್ಣೋಃ ಕಾಯಮಿದಂ ಧರ್ಮಃ ಸತ್ಯಂ ಹೃದಯಮೇವ ಚ ।
ಯಸ್ತ್ವಾ ಪಾಲಯತೇ ನಿತ್ಯಂ ತಸ್ಯ ವಿಷ್ಣುಃ ಪ್ರಸೀದತಿ ॥ ೧೦ ॥

ದೂಷಯೇದ್ಯಸ್ಸತ್ಯಧರ್ಮೌ ಪಾಪಮೇವ ಪ್ರಪಾಲಯೇತ್ ।
ತಸ್ಯ ವಿಷ್ಣುಃ ಪ್ರಕುಪ್ಯೇತ ನಾಶಯೇದತಿವೀರ್ಯವಾನ್ ॥ ೧೧ ॥

ವೈಷ್ಣವೈಃ ಪಾಲಿತಂ ಧರ್ಮಂ ತಪಸ್ಸತ್ಯೇನ ಸಂಸ್ಥಿತೈಃ ।
ತೇಷಾಂ ಪ್ರಸನ್ನೋ ಧರ್ಮಾತ್ಮಾ ರಕ್ಷಾಮೇವಂ ಕರೋತಿ ಚ ॥ ೧೨ ॥

ತವ ಪುತ್ರಾ ದನೋಃ ಪುತ್ರಾಃ ಸೈಂಹಿಕೇಯಾಸ್ತಥೈವ ಚ ।
ಅಧರ್ಮೇಣಾಪಿ ಪಾಪೇನ ವರ್ತಿತಾಃ ಪಾಪಚೇತಸಃ ॥ ೧೩ ॥

ಸೂದಿತಾ ವಾಸುದೇವೇನ ಸಮರೇ ಚಕ್ರಪಾಣಿನಾ ।
ಯೋಽಸಾವಾತ್ಮಾ ಮಯಾ ಪ್ರೋಕ್ತಃ ಪೂರ್ವಮೇವ ತವಾಗ್ರತಃ ।
ಸೋಽಯಂ ವಿಷ್ಣುರ್ನ ಸಂದೇಹೋ ಧರ್ಮಾತ್ಮಾ ಸತ್ಯಪಾಲಕಃ ॥ ೧೪ ॥

ದೈತ್ಯಕಾಯೇಷು ಯಸ್ಸ್ವಸ್ಥಃ ಪಾಪಮೇವ ಸಮಾಸ್ಥಿತಃ ।
ಜಘ್ನಿವಾನ್ ದಾನವಾನ್ ದೇವಿ ಸ ಚ ಕ್ರುದ್ಧೋ ಮಹಾಮತಿಃ ॥ ೧೫ ॥

---

೧೦. ಧರ್ಮವೇ ವಿಷ್ಣುವಿನ ಶರೀರವು. ಸತ್ಯವೇ ಅವನ ಹೃದಯವು. ಡನ್ನೂ ಬಿಡದೆ ಪಾಲಿಸುವವನಿಗೆ ವಿಷ್ಣುವು ಪ್ರಸನ್ನನಾಗುವನು.

೧೧. ಯಾರು ಸತ್ಯ, ಧರ್ಮ ಇವುಗಳನ್ನು ನಿಂದಿಸುವರೋ ಮತ್ತು ಪಾಪವನ್ನೇ ಆಚರಿಸುವರೋ ಅವರ ವಿಷಯದಲ್ಲಿ ವಿಷ್ಣುವು ಕೋಪಿಸಿಕೊಳ್ಳುತ್ತಾನೆ. ಅವರನ್ನು ಸಂಹರಿಸುತ್ತಾನೆ.

೧೨. ತಪಸ್ಸು, ಸತ್ಯ ಇವುಗಳಲ್ಲಿ ನಿರತರಾದ ವಿಷ್ಣುಭಕ್ತರಿಂದ ಧರ್ಮವು ರಕ್ಷಿಸಲ್ಪಟ್ಟಿದೆ. ಅವರಿಗೆ ವಿಷ್ಣುವು ಪ್ರಸನ್ನನಾಗಿ ಕಾಪಾಡುತ್ತಾನೆ.

೧೩. ನಿನ್ನ ಮಕ್ಕಳೂ, ದನುವಿನ ಮಕ್ಕಳೂ, ಸಿಂಹಿಕೆಯ ಪುತ್ರರೂ ಅಧರ್ಮದಿಂದ ಕೂಡಿ ಪಾಪಿಗಳಾದ್ದರಿಂದ ಯುದ್ಧದಲ್ಲಿ ಚಕ್ರಧಾರಿಯಾದ ವಿಷ್ಣುವು ಅವರನ್ನು ಕೊಂದನು.

೧೪. ನಾನು ಮೊದಲು ನಿನ್ನೆದುರಿಗೆ ಹೇಳಿದ ಆತ್ಮನೇ ಈ ವಿಷ್ಣುವು. ಆತನು ಧರ್ಮಾತ್ಮನು. ಸತ್ಯಸಂಧನು. ಇದರಲ್ಲಿ ಸಂಶಯವಿಲ್ಲ.

೧೫. ಇವನೇ ದೈತ್ಯರ ಶರೀರದಲ್ಲಿದ್ದುಕೊಂಡು ಪಾಪಾಚರಣೆಯನ್ನು ಮಾಡುತ್ತಿದ್ದನು. ಅವನೇ ಕೋಪಗೊಂಡು ದೈತ್ಯರನ್ನು ಸಂಹರಿಸಿದನು.

**ಸ ಬಾಹ್ಯಾಭ್ಯಂತರೇ ಭೂತ್ವಾ ತವ ಪುತ್ರಾ ನಿಪಾತಿತಾಃ ।**
**ಯೇನ ಚೋತ್ಪಾದಿತಾ ದೇವಿ ತೇನೈವ ವಿನಿಪಾತಿತಾಃ ॥ ೧೬ ॥**

**ತೇಷಾಂ ಮೋಹೋ ನ ಕರ್ತವ್ಯೋ ಭವತ್ಯಾ ವಚನಂ ಶೃಣು ।**
**ಪಾಪೇನ ವರ್ತತೇ ಯೋಽಸೌ ಸ ಏವಂ ನಿಧನಂ ವ್ರಜೇತ್ ॥ ೧೭ ॥**

**ತಸ್ಮಾನ್ಮೋಹಂ ಪರಿತ್ಯಜ್ಯ ಸದಾ ಧರ್ಮಂ ಸಮಾಶ್ರಯ ।**
**ಏವಮಸ್ತು ಮಹಾಭಾಗ ಕರಿಷ್ಯೇ ವಚನಂ ತವ ॥ ೧೮ ॥**

**ಕಶ್ಯಪಂ ಚ ಮುನಿಶ್ರೇಷ್ಠಮೇವಮಾಭಾಷ್ಯ ದುಃಖಿತಾ ।**
**ಸಂಬೋಧಿತಾ ಸಾ ಮುನಿನಾ ದುಃಖಂ ಸಂತ್ಯಜ್ಯ ಸಂಸ್ಥಿತಾ ॥ ೧೯ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ದಿತಿಸಂಬೋಧನಂ ನಾಮ ನವಮೋಧ್ಯಾಯಃ**

---

೧೬. ಆ ವಿಷ್ಣುವೇ ಪ್ರಾಣಿಗಳ ಒಳಗೂ, ಹೊರಗೂ ಇರುವವನಾಗಿ ನಿನ್ನ ಪುತ್ರರನ್ನು ಸಂಹರಿಸಿದನು. ಯಾವನಿಂದ ಸೃಷ್ಟಿಸಲ್ಪಟ್ಟರೋ ಅವನಿಂದಲೇ ಸಂಹೃತರಾದರು.

೧೭. ನೀನು ಪುತ್ರರಾದ ಅವರ ವಿಷಯದಲ್ಲಿ ಮೋಹಕ್ಕೆ ವಶಳಾಗಬೇಡ. ನನ್ನ ಮಾತನ್ನು ಕೇಳು. ಯಾವನು ಪಾಪ ಮಾಡುವನೋ ಅವನು ಈರೀತಿ ಮರಣ ಹೊಂದುವನು.

೧೮. ಹೇ ದೇವೀ, ಆದ್ದರಿಂದ ಮೋಹವನ್ನು ಬಿಟ್ಟು ಧರ್ಮವನ್ನು ಆಶ್ರಯಿಸು ಎಂದು ಕಶ್ಯಪನು ಹೇಳಲು, ದಿತಿಯು ಎಲೈ ಮಹಾತ್ಮನೇ, ನಿನ್ನ ಮಾತಿನಂತೆ ನಡೆಯುತ್ತೇನೆ, ಎಂದಳು.

೧೯. ದುಃಖಿತಳಾದ ದಿತಿಯು ಕಶ್ಯಪನಿಗೆ ಈರೀತಿ ಹೇಳಿ, ಅವನಿಂದ ಜ್ಞಾನೋಪದೇಶ ಹೊಂದಿದವಳಾಗಿ ದುಃಖವನ್ನು ತ್ಯಜಿಸಿ ಸುಖದಿಂದಿದ್ದಳು.

ಇಲ್ಲಿಗೆ ಪದ್ಮ ಮಹಾಪುರಾಣದ ಭೂಮಿಖಂಡದಲ್ಲಿ ದಿತಿಯ ಜ್ಞಾನೋದಯವೆಂಬ ಒಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
## ॥ ದಶಮೋಽಧ್ಯಾಯಃ ॥

॥ ಋಷಯಃ ಊಚುಃ ॥

ತತಸ್ತೇ ದಾನವಾಸ್ಸರ್ವೇ ಹಿರಣ್ಯಕಶಿಪೂತ್ತರಾಃ ।
ಯುದ್ಧಭಗ್ನಾಸ್ತು ಕಿಂ ಕುರ್ಯುರ್ವ್ಯವಸಾಯಂ ಮಹಾಮತೇ ॥ ೧ ॥

ವಿಸ್ತರೇಣಾಪಿ ನೋ ಬ್ರೂಹಿ ತೇಷಾಂ ವೃತ್ತಮನುತ್ತಮಂ ।
ಶ್ರೋತುಮಿಚ್ಛಾಮಹೇ ಸರ್ವೇ ತ್ವತ್ತೋ ವೈ ಸಾಂಪ್ರತಂ ದ್ವಿಜಾಃ ॥ ೨ ॥

॥ ಸೂತ ಉವಾಚ ॥

ಭಗ್ನಾ ರಣಾತ್ತು ತೇ ಸರ್ವೇ ಬಲಹೀನಾಸ್ತು ವೈ ತದಾ ।
ಗತದರ್ಪಾಸ್ಸುದುಃಖಾರ್ತಾ ದೈತ್ಯಾಸ್ತೇ ಪಿತರಂ ಗತಾಃ ॥ ೩ ॥

---

### ಹತ್ತನೆಯ ಅಧ್ಯಾಯವು

೧. ಋಷಿಗಳು ಕೇಳಿದರು:—ಹಿರಣ್ಯಕಶಿಪುವೇ ಮೊದಲಾದ ದಾನವರು ಯುದ್ಧದಲ್ಲಿ ಸತ್ತಮೇಲೆ ಉಳಿದ ದೈತ್ಯರು ಮಾಡಿದಉದ್ಯೋಗವೇನು?

೨. ಅವರ ಚರಿತ್ರೆಯನ್ನು ನಮಗೆ ವಿಸ್ತಾರವಾಗಿ ಹೇಳು, ನಿನ್ನಮೂಲಕವಾಗಿ ನಾವೆಲ್ಲರೂ ಕೇಳಬೇಕೆಂದಿರುತ್ತೇವೆ.

೩. ಸೂತನು ಹೇಳುತ್ತಾನೆ:—ದೈತ್ಯರೆಲ್ಲರೂ ಯುದ್ಧದಲ್ಲಿ ಪರಾಜಿತರಾಗಲು ಉತ್ಸಾಹಹೀನರಾಗಿ ಬಲಗುಂದಿ ಹೆಮ್ಮೆಯಡಗಲು, ದುಃಖದಿಂದ ಪೀಡಿತರಾಗಿ, ತಂದೆಯಾದ ಕಶ್ಯಪನ ಬಳಿಗೆ ಬಂದರು.

॥ ದಾನವಾ ಊಚುಃ ॥
ಭವದ್ಭಿರ್ಯೋತ್ಸಮುತ್ಪತ್ತಿರಸ್ಮಾಕಂ ದ್ವಿಜಸತ್ತಮ ।
ದೇವತಾನಾಂ ಮಹಾಭಾಗ ದಾನವಾನಾಂ ತಥೈವ ಚ ॥ ೪ ॥

ವಯಂ ಚ ದಾನವಾಸ್ಸರ್ವೇ ಬಲವೀರ್ಯಪರಾಕ್ರಮಾಃ ।
ಉಪಾಯಜ್ಞಾಸ್ಸುಧೀರಾಶ್ಚ ಹ್ಯುದ್ಯಮೇನ ಸಮನ್ವಿತಾಃ ॥ ೫ ॥

ವಯಂ ತು ಬಹವಸ್ತಾತ ದೇವಾಸ್ಸ್ವಲ್ಪಾಸ್ತಥೈವ ಚ ।
ಕಥಂ ಜಯಂತಿ ತೇ ಸರ್ವೇ ವಯಂ ಭಗ್ನಾ ಮಹಾಹವಾತ್ ।
ತತ್ಕಿಂ ವೈ ಕಾರಣಂ ತಾತ ಬಲತೇಜಸ್ಸಮನ್ವಿತಾಃ ॥ ೬ ॥

ಮತ್ತನಾಗಸಹಸ್ರಾಣಾಂ ಏಕೈಕಸ್ಯ ಮಹಾಮತೇ ।
ಬಲಮಸ್ತಿ ಚ ದೈತ್ಯಸ್ಯ ನಾಸ್ತಿ ದೇವೇಷು ತಾದೃಶಂ ॥ ೭ ॥

ಜಯಶ್ಚ ದೃಶ್ಯತೇ ತಾತ ದೇವೇಷ್ವೇವ ಮಹಾಹವೇ ।
ತತ್ಸರ್ವಂ ಕಥಯಸ್ವೈವ ಸಂಶಯಂ ಛೇತ್ತುಮರ್ಹಸಿ ॥ ೮ ॥

---

೪. ದಾನವರು ಹೇಳಿದರು:—ಎಲೈ ವಿಪ್ರೋತ್ತಮನೇ, ದೇವತೆಗಳಿಗೂ, ದಾನವರಾದ ನಮಗೂ ನೀನು ಜನಕನಾಗಿದ್ದೀಯೆ.

೫. ದಾನವರಾದ ನಾವೆಲ್ಲರೂ ಬಲ, ವೀರ್ಯ, ಪರಾಕ್ರಮಗಳಿಂದ ಕೂಡಿದವರು. ಮತ್ತು ನಾವು ಉಪಾಯವನ್ನು ಬಲ್ಲವರು, ಧೈರ್ಯವಂತರು, ಉದ್ಯೋಗಪರರು,

೬. ದೇವತೆಗಳಾದರೋ ಸ್ವಲ್ಪಮಂದಿಗಳು ನಾವು ಬಹುಮಂದಿಗಳು. ಹೀಗೆ ಇದ್ದರೂ ಯುದ್ಧದಲ್ಲಿ ನಾವು ಸೋತೆವು ಅವರು ಗೆದ್ದರು, ಅದಕ್ಕೆ ಕಾರಣವೇನು? ನಾವು ಶಕ್ತಿವಂತರೂ, ಪರಾಕ್ರಮಶಾಲಿಗಳೂ, ಆಗಿರುವೆವು.

೭. ನಮ್ಮಲ್ಲಿ ಒಬ್ಬೊಬ್ಬನಿಗೂ ಸಾವಿರಆನೆಗಳ ಬಲವಿದೆ, ದೇವತೆಗಳಿಗೆ ಅಂತಹ ಬಲವಿಲ್ಲ.

೮. ಹೀಗಿದ್ದರೂ ಯದ್ಧದಲ್ಲಿ ದೇವತೆಗಳಿಗೆ ಜಯವು ಸರ್ವದಾ ದೊರೆಯುತ್ತಿರುವುದು,ಅದಕ್ಕೆ ಕಾರಣವನ್ನು ಹೇಳಿ, ನಮ್ಮ ಸಂಶಯವನ್ನು ಪರಿಹರಿಸು. ಎಂದು ಪ್ರಾರ್ಥಿಸಿದರು.

॥ ಕಶ್ಯಪ ಉವಾಚ ॥

ಶೃಣುಧ್ವಂ ಪುತ್ರಕಾಸ್ಸರ್ವೇ ಯದಸ್ಯಾಽಪಿ ಚ ಕಾರಣಂ ।
ಯಸ್ಮಾದ್ಧಿ ದೇವಾಸ್ತೇ ಸರ್ವೇ ಸಮರೇ ಜಯಿನೋಽಭವನ್ ॥ ೯ ॥

ಬೀಜನಿರ್ಮಾಪಕಸ್ತಾತೋ ಮಾತಾ ಕ್ಷೇತ್ರಮಿದಂ ಸದಾ ।
ಧಾರಣೇ ಪಾಲನೇ ಚೈವ ಪೋಷಣೇಷು ತಥೈವ ಚ ॥ ೧೦ ॥

ಕಿಂ ಕುರ್ಯಾದ್ವಿಷಮಾರ್ಥೇಷು ಪಿತಾ ಪುತ್ರೇ ಚ ವೈ ತಥಾ ।
ಅತ್ರ ಪ್ರಧಾನಂ ಕರ್ಮೈವ ಜಾನೀಧ್ವಂ ಬುದ್ಧಿಮಾಶ್ರಿತಾಃ ॥ ೧೧ ॥

ದ್ವಿವಿಧಂ ಕರ್ಮಸಂಬಂಧಂ ಪಾಪಪುಣ್ಯಸಮುದ್ಭವಂ ।
ಸತ್ಯಮೇವಂ ಸಮಾಶ್ರಿತ್ಯ ಕ್ರಿಯತೇ ಧರ್ಮ ಉತ್ತಮಃ ॥ ೧೨ ॥

ತಪೋಧ್ಯಾನಸಮಾಯುಕ್ತಂ ತಾರಣಾಯ ಹಿತಂ ಸುರಾಃ ।
ಪತನಾಯ ಪಾತಕಂ ಪ್ರೋಕ್ತಂ ಸರ್ವದೈವ ನ ಸಂಶಯಃ ॥ ೧೩ ॥

---

೯. ಕಶ್ಯಪನು ಹೇಳುತ್ತಾನೆ:—ಎಲೈ ಪುತ್ರರೇ ಕೇಳಿ, ಏತಕ್ಕೋಸ್ಕರ ದೇವತೆಗಳು ಯುದ್ಧದಲ್ಲಿ ಜಯಹೊಂದಿದರೋ, ಅದರ ಕಾರಣವನ್ನು ತಿಳಿಸುತ್ತೇನೆ.

೧೦. ಬೀಜಹಾಕತಕ್ಕವನು ತಂದೆ, ತಾಯಿಯೇ ಕ್ಷೇತ್ರವು, ಧಾರಣ, ಪೋಷಣ, ಪಾಲನಗಳಲ್ಲಿಯೂ ಹಾಗೆಯೇ.

೧೧. ಕಷ್ಟಬಂದಾಗ ಮಕ್ಕಳ ವಿಷಯದಲ್ಲಿ ತಂದೆಯು ಏನೂ ಮಾಡಲಾರನು ಇವರಲ್ಲಿ ಮುಖ್ಯವಾದುದು ಕರ್ಮವು. ಎಂದರೆ ಕರ್ಮಾನುಸಾರವಾಗಿಯೇ ಎಲ್ಲವೂ ನಡೆಯುವುದು. ಆದುದರಿಂದ ನೀವು ಬುದ್ಧಿಯನ್ನು ಉಪಯೋಗಿಸಿ ವಿಚಾರಮಾಡಿರಿ.

೧೨. ಕರ್ಮದಲ್ಲಿ, ಪಾಪಕರ್ಮವೆಂದೂ, ಪುಣ್ಯಕರ್ಮವೆಂದೂ, ಎರಡು ಬಗೆ ಉಂಟು. ಸತ್ಯವನ್ನು ಆಶ್ರಯಿಸಿ ಮಾಡುವ ಕೆಲಸವು ಉತ್ತಮ ಧರ್ಮವೆನಿಸುವುದು.

೧೩. ಎಲೈ ಮಕ್ಕಳೇ ತಪೋಧ್ಯಾನಗಳಿಂದ ಮಾಡುವ ಕರ್ಮವು, ಪ್ರಾಣಿಗಳನ್ನು ಉದ್ಧರಿಸುವುದು. ಪಾಪಾಚರಣೆಯಿಂದ ಅಧೋಗತಿ ಪ್ರಾಪ್ತಿಯುಂಟಾಗುವುದೇ ಹೊರತು ಅನ್ಯಥಾ ಇಲ್ಲ.

ಬಲೇನ ಪರಿವಾರೇಣ ಚಾಭಿಜಾತ್ಯೇನ ಪುತ್ರಕಾಃ ।
ಪುಣ್ಯಹೀನಸ್ಯ ಪುಂಸೋ ವೈ ತದ್ಫಲಂ ವಿಫಲಾಯತೇ ॥ ೧೪ ॥

ಉನ್ನತಾ ಗಿರಿದುರ್ಗೇಷು ವೃಕ್ಷಾಸ್ಸಂತಿ ಸುಪುತ್ರಕಾಃ ।
ಪತಂತಿ ವಾತವೇಗೇನ ಸಮೂಲಾಸ್ತು ಘನಾ ಯಥಾ ॥ ೧೫ ॥

ಸತ್ಯಧರ್ಮವಿಹೀನಾಸ್ತೇ ತಥಾ ಯಾಂತಿ ಯಮಾಲಯಂ ।
ಸಾಧಾರಣಂ ಪ್ರಾಣಿನಾಂ ಚ ಧರ್ಮ ಏತತ್ಸುಪುತ್ರಕಾಃ ॥ ೧೬ ॥

ಯೇನ ಸಂತರತೇ ಜಂತುರಿಹ ಚೈವ ಪರತ್ರ ಚ ।
ತದ್ಯುಷ್ಮಾಭಿಃ ಪರಿತ್ಯಕ್ತಂ ಸತ್ಯಧರ್ಮಸಮನ್ವಿತಂ ॥ ೧೭ ॥

ಅಧರ್ಮಮಾಶ್ರಿತಂ ಪುತ್ರಾ ಯುಷ್ಮಾಭಿಸ್ಸತ್ಯವರ್ಜಿತೈಃ ।
ಸತ್ಯಧರ್ಮತಪೋಭ್ರಷ್ಟಾಃ ಪತಿತಾ ದುಃಖಸಾಗರೇ ॥ ೧೮ ॥

---

೧೪. ಪುಣ್ಯಹೀನನಾದವನಿಗೆ ಪರಾಕ್ರಮ, ಆಳುಗಳು, ಉನ್ನತವಂಶ, ಇವು ಇದ್ದರೂ ಪ್ರಯೋಜನಕಾರಿಯಲ್ಲ.

೧೫. ಬೆಟ್ಟದ ತುದಿಯಲ್ಲಿ ಮರಗಳು ಎತ್ತರವಾಗಿ ಬೆಳೆದಿರುತ್ತವೆ. ಎಲೈ ಮಕ್ಕಳಿರಾ, ಮೇಘಗಳು ಗಾಳಿಯಿಂದ ಚದರಿಸಲ್ಪಡುವಂತೆ ಅವು ಬಿರುಗಾಳಿಯಿಂದ ಬುಡಸಮೇತವಾಗಿ ಕೆಳಕ್ಕೆ ಬೀಳುತ್ತವೆ.

೧೬. ಅದರಂತೆ ಸತ್ಯ, ಧರ್ಮ, ಇವುಗಳನ್ನು ತ್ಯಜಿಸಿ ಭ್ರಷ್ಟರಾದವರು ನರಕಕ್ಕೆ ಹೋಗುತ್ತಾರೆ ಎಲೈ ಪುತ್ರರೇ ಇದು ಪ್ರಾಣಿಗಳಿಗೆ ಸಾಧಾರಣವಾದ ಧರ್ಮವು

೧೭. ಪ್ರಾಣಿಯು ಇಹದಲ್ಲಾಗಲೀ ಪರದಲ್ಲಾಗಲೀ ಯಾವುದರಿಂದ ಉದ್ಧಾರ ವಾಗುವುದೋ ಅಂತಹ ಧರ್ಮವನ್ನೂ, ಸತ್ಯವನ್ನೂ, ಬಿಟ್ಟುಬಿಟ್ಟಿರುವಿರಿ.

೧೮. ಎಲೈ ಮಕ್ಕಳೇ ಸತ್ಯಭ್ರಷ್ಟರಾದ ನೀವು ಅಧರ್ಮಕಾರ್ಯವಲ್ಲಿ ನಿರತ ರಾದಿರಿ, ನೀವು ಸತ್ಯ, ಧರ್ಮ, ತಪಸ್ಸು, ಇವುಗಳನ್ನು ಬಿಟ್ಟ ಕಾರಣದಿಂದ ದುಃಖ ಸಮುದ್ರದಲ್ಲಿ ಬಿದ್ದಿರುವಿರಿ.

ದೇವಾಶ್ಚ ಸತ್ಯಸಂಪನ್ನಾಃ ಶ್ರೇಯಸಾ ಚ ಸಮನ್ವಿತಾಃ ।
ತಪಶ್ಶಾಂತಿದಮೋಪೇತಾಃ ಸುಪುಣ್ಯಾಃ ಪಾಪವರ್ಜಿತಾಃ ॥ ೧೯ ॥

ಯತ್ರ ಸತ್ಯಂ ಚ ಧರ್ಮಶ್ಚ ತಪಃ ಪುಣ್ಯಂ ತಥೈವ ಚ ।
ಯತ್ರ ವಿಷ್ಣುರ್ಹೃಷೀಕೇಶೋ ಜಯಸ್ತತ್ರ ಪ್ರದೃಶ್ಯತೇ ॥ ೨೦ ॥

ತೇಷಾಂ ಸಹಾಯಸಂಭೂತೋ ವಾಸುದೇವಸ್ಸನಾತನಃ ।
ತಸ್ಮಾಜ್ಜಾಯಂತಿ ತೇ ದೇವಾಃ ಸತ್ಯಧರ್ಮಸಮನ್ವಿತಾಃ ॥ ೨೧ ॥

ಸಹಾಯೇನ ಬಲೇನೈವ ಪೌರುಷೇಣ ತಥೈವ ಚ ।
ಭವಂತಃ ಕಿಲ ವೈ ಪುತ್ರಾಃ ತಪಸ್ಸತ್ಯವಿವರ್ಜಿತಾಃ ॥ ೨೨ ॥

ಯಸ್ಯ ವಿಷ್ಣುಸ್ಸಹಾಯಶ್ಚ ತಪಸಶ್ಚ ಬಲಂ ತಥಾ ।
ತಸ್ಯೈವ ಚ ಜಯೋ ದೃಷ್ಟೋ ಇತಿ ಧರ್ಮವಿದೋ ವಿದುಃ ॥ ೨೩ ॥

---

೧೯. ದೇವತೆಗಳು ತಪಸ್ಸಿನಿಂದಲೂ, ಶ್ರೇಯಸ್ಸಿನಿಂದಲೂ, ಕೂಡಿದ್ದಾರೆ. ಮತ್ತು ತಪಸ್ಸು, ಶಾಂತಿ, ಇಂದ್ರಿಯನಿಗ್ರಹ, ಇವುಗಳಿಂದ ಯುಕ್ತರಾಗಿ ಪಾಪವರ್ಜಿತರಾಗಿದ್ದಾರೆ.

೨೦. ಎಲ್ಲಿ ಸತ್ಯ, ಧರ್ಮ, ಪುಣ್ಯ, ಇವುಗಳು ಇರುವುವೋ ಅಲ್ಲಿ ಹೃಷೀಕೇಶ ನಾಮಕನಾದ ವಿಷ್ಣುವು ಇರುತ್ತಾನೆ. ಅಲ್ಲಿ ಜಯವು ಸಿದ್ಧವು.

೨೧. ಅಂಥವರಿಗೆ ವಾಸುದೇವನೇ ಸಹಾಯಮಾಡುತ್ತಾನೆ. ಆದ್ದರಿಂದ ಸತ್ಯ, ಧರ್ಮಗಳಿಂದ ಕೂಡಿದ ದೇವತೆಗಳು ಜಯವನ್ನು ಹೊಂದುತ್ತಾರೆ.

೨೨. ಎಲೈ ಪುತ್ರರೇ ಸಹಾಯ, ಬಲ, ಪೌರುಷ, ಇವುಗಳಿಂದ ನೀವು ಕೂಡಿದ್ದರೂ, ಸತ್ಯವನ್ನೂ, ತಪಸ್ಸನ್ನೂ ಬಿಟ್ಟು ಭ್ರಷ್ಟರಾಗಿರುವಿರಿ.

೨೩. ಯಾವನಿಗೆ ವಿಷ್ಣುವು ಸಹಾಯಕನೋ ಮತ್ತು ತಪಸ್ಸಿನ ಬಲವು, ಇರುವುದೋ ಅವನಿಗೆ ಜಯವಾಗುತ್ತದೆ. ಎಂದು ಧರ್ಮವೇತ್ತರು ಹೇಳುತ್ತಾರೆ.

ಯೂಯಂ ಧರ್ಮವಿಹೀನಾಸ್ತು ತಪಸ್ಸತ್ಯವಿವರ್ಜಿತಾಃ ।
ಐಂದ್ರಂ ಪದಂ ಬಲೇನೈವ ಪ್ರಾಪ್ತವಂತಶ್ಚ ಪೂರ್ವತಃ ॥ ೨೪ ॥

ತಪೋ ವಿನಾ ಮಹಾಪ್ರಾಜ್ಞಾಃ ಧರ್ಮೇಣ ಯಶಸಾ ವಿನಾ ।
ಪ್ರಾಪ್ಯಾಪ್ಯೈಂದ್ರಪದಂ ಪುತ್ರಾಸ್ತತೋ ಭ್ರಷ್ಟಾ ಭವಂತಿ ಹಿ ॥೨೫ ॥

ತಸ್ಮಾದ್ಯೂಯಂ ಪ್ರಕುರ್ವಂತು ತಪಃ ಪುತ್ರಾಸ್ಸಮನ್ವಿತಾಃ ।
ಅವಿರೋಧೇನ ಸಂಯುಕ್ತಾ ಜ್ಞಾನಧ್ಯಾನಸಮನ್ವಿತಾಃ ।
ವೈರಂ ಚೈವ ನ ಕರ್ತವ್ಯಂ ಕೇಶವೇನ ಸಮಂ ಕದಾ ॥ ೨೬ ॥

ಏವಂವಿಧಾ ಯದಾ ಪುತ್ರಾ ಯೂಯಂ ಧನ್ಯಾ ಭವಿಷ್ಯಥ ।
ಪರಾಂ ಸಿದ್ಧಿಂ ತದಾ ಸರ್ವೇ ಪ್ರಯಾಸ್ಯಥ ನ ಸಂಶಯಃ ॥ ೨೭ ॥

ಏವಂ ಸಂಭಾಷಿತಾಸ್ತೇನ ಕಶ್ಯಪೇನ ಮಹಾತ್ಮನಾ ।
ಸಮಾಕರ್ಣ್ಯ ಪಿತುರ್ವಾಕ್ಯಂ ದಾನವಾಸ್ತೇ ಮಹೌಜಸಃ ॥ ೨೮ ॥

ಪ್ರಣಮ್ಯ ಕಶ್ಯಪಂ ಭಕ್ತ್ಯಾ ಸಮುತ್ಥಾಯ ತ್ವರಾನ್ವಿತಾಃ ।
ಸುಮಂತ್ರಂ ಚಕ್ರಿರೇ ದೈತ್ಯಾಃ ಪರಸ್ಪರಸಮಾಹಿತಾಃ ॥ ೨೯ ॥

---

೨೪. ನೀವು ಧರ್ಮ, ತಪಸ್ಸು, ಸತ್ಯ, ಇವುಗಳಿಂದ ಬಾಹಿರರಾಗಿರುವಿರಿ ಪೂರ್ವದಲ್ಲಿ ನಿಮ್ಮ ಪರಾಕ್ರಮದಿಂದಲೇ ಇಂದ್ರನ ಸ್ಥಾನವನ್ನು ಹೊಂದಿದ್ದಿರಿ.

೨೫. ಎಲೈ ಮಕ್ಕಳೇ ನೀವು ತಪಸ್ಸು, ಧರ್ಮ, ಯಶಸ್ಸು, ಇವುಗಳಿಂದ ಭ್ರಷ್ಟರಾದಪ್ರಯುಕ್ತ ಇಂದ್ರಪದವಿಯಲ್ಲಿದ್ದರೂ, ಅದನ್ನು ಕಳೆದುಕೊಂಡಿರಿ. ಆದುದರಿಂದ ನೀವೆಲ್ಲರೂ ಈಗ ತಪಸ್ಸನ್ನು ಮಾಡಿರಿ.

೨೬. ನೀವು ಜ್ಞಾನಧ್ಯಾನಯುಕ್ತರಾಗಿ ಯಾರಸಂಗಡಲೂ ವಿರೋಧವನ್ನು ಬೆಳೆಸದೆ ಇರಬೇಕು. ಅದರಲ್ಲೂ ಯಾವಾಗಲೂ ವಿಷ್ಣುವಿನೊಡನೆ ವೈರವನ್ನು ಮಾಡಲೇಬಾರದು.

೨೭. ಈರೀತಿಯಾಗಿದ್ದರೆ ನೀವು ಧನ್ಯರಾಗುವಿರಿ. ಆಗ ಉತ್ತಮವಾದ ಸಿದ್ಧಿಯನ್ನು ಪಡೆಯುವಿರಿ ಇದರಲ್ಲಿ ಸಂಶಯವಿಲ್ಲ. ಎಂದು ಕಶ್ಯಪನು ತನ್ನ ಪುತ್ರರಾದ ದೈತ್ಯರಿಗೆ ಬುದ್ಧಿವಾದವನ್ನು ಹೇಳಿದನು.

೨೮-೨೯. ಮಹಾಬಲಿಷ್ಠರಾದ ದಾನವರು ಕಶ್ಯಪನೊಡನೆ ಮಾತನಾಡಿ ಆತನಿಗೆ ನಮಸ್ಕರಿಸಿ ಜಾಗ್ರತೆಯಾಗಿ ಹೊರಟು ಎಲ್ಲರೂ ಬೇರೊಂದುಕಡೆ ಸೇರಿ ಯೋಚಿಸಿದರು.

ಹಿರಣ್ಯಕಶಿಪೂ ರಾಜಾ ತಾನುವಾಚಾತ್ರಾಥ ದಾನವಾನ್ ।
ತಪಶ್ಚೈವ ಕರಿಷ್ಯಾಮೋ ದುಷ್ಕರಂ ಸರ್ವದಾಯಕಂ ॥ ೩೦ ॥

ಹಿರಣ್ಯಾಕ್ಷಸ್ತದೋವಾಚ ಚರಿಷ್ಯೇ ದಾರುಣಂ ತಪಃ ।
ತತೋ ಬಲೇನ ತ್ರೈಲೋಕ್ಯಂ ಗ್ರಹೀಷ್ಯೇ ನಾತ್ರ ಸಂಶಯಃ ॥ ೩೧ ॥

ರಣೇ ನಿರ್ಜಿತ್ಯ ಗೋವಿಂದಂ ತಮಿಮಂ ಪಾಪಚೇತಸಂ ।
ವ್ಯಾಪಾದ್ಯ ದೇವತಾಸ್ಸರ್ವಾ ಪದಮೈಂದ್ರಂ ವ್ರಜಾಮ್ಯಹಂ ॥ ೩೨ ॥

॥ ಬಲಿರುವಾಚ ॥

ಏವಂ ನ ಯುಜ್ಯತೇ ಕರ್ತುಂ ಯುಷ್ಮಾಭಿರ್ದಿತಿಜೇಶ್ವರಾಃ ।
ವಿಷ್ಣುನಾ ಸಹ ಯದ್ವೈರಂ ತದ್ವೈರಂ ನಾಶಕಾರಣಂ ॥ ೩೩ ॥

ದಾನಧರ್ಮೈಸ್ತಥಾ ಪುಣ್ಯೈಸ್ತಪೋಭಿರ್ಯಜ್ಞಯಾಜನೈಃ ।
ತಮಾರಾಧ್ಯ ಹೃಷೀಕೇಶಂ ಸುಖಂ ಗಚ್ಛಂತಿ ಮಾನವಾಃ ॥ ೩೪ ॥

॥ ಹಿರಣ್ಯಕಶಿಪುರುವಾಚ ॥

ಅಹಮೇವಂ ನ ಕರಿಷ್ಯೇ ಹರೇರಾರಾಧನಂ ಕದಾ ।

---

೩೦. ಆಗ ಹಿರಣ್ಯಕಶಿಪುವು ಅವರನ್ನು ಕುರಿತು ನಾವೆಲ್ಲರೂ ಸರ್ವಸಿದ್ಧಿಪ್ರದವಾದ ತಪಸ್ಸನ್ನು ಮಾಡೋಣ ಎಂದನು.

೩೧-೩೨. ಆಗ ಹಿರಣ್ಯಾಕ್ಷನು ಎದ್ದುನಿಂತು ನಾನು ಘೋರವಾದ ತಪಸ್ಸನ್ನು ಮಾಡುತ್ತೇನೆ. ಅದರ ಬಲದಿಂದ ಮೂರುಲೋಕವನ್ನೂ ನಿಸ್ಸಂಶಯವಾಗಿ ಆಕ್ರಮಿಸುವುದಲ್ಲದೇ ಪಾಪಿಯಾದ ಗೋವಿಂದನನ್ನು ಯುದ್ಧದಲ್ಲಿ ಜಯಿಸಿ, ದೇವತೆಗಳನ್ನು ಸಂಹರಿಸಿ, ಇಂದ್ರನ ಪದವಿಯನ್ನು ಹೊಂದುತ್ತೇನೆ, ಎಂದು ನುಡಿದನು.

೩೩. ಬಳಿಕ ಬಲಿಯು ಹೇಳುತ್ತಾನೆ:—ಎಲೈ ದೈತ್ಯರೇ ನೀವು ಹೀಗೆ ಹೇಳುವುದು ಸರಿಯಲ್ಲ, ವಿಷ್ಣುವಿನೊಡನೆ ವೈರವು ನಮ್ಮನಾಶಕ್ಕೆ ಕಾರಣವಾಗುವುದು.

೩೪. ಮನುಷ್ಯರು ದಾನಧರ್ಮವೇ ಮೊದಲಾದ ಪುಣ್ಯಕಾರ್ಯಗಳಿಂದಲೂ, ಯಾಗಗಳಿಂದಲೂ, ವಿಷ್ಣುವನ್ನು ಪೂಜಿಸಿದರೆ ಸುಖವನ್ನು ಹೊಂದುವರು. ಆದ್ದರಿಂದ ವಿಷ್ಣುವಿನೊಡನೆ ವೈರವು ಉಚಿತವಲ್ಲ, ಎಂದನು.

೩೫. ಹಿರಣ್ಯಕಶಿಪುವು ಪುನಃ ಹೇಳುತ್ತಾನೆ:—ನಾನು ನೀನು ಹೇಳುವಂತೆ

**ಸ್ವಭಾವಂ ತು ಪರಿತ್ಯಜ್ಯ ಶತ್ರುಸೇವಾ ಪ್ರಚರ್ಯತೇ ॥ ೩೫ ॥**

**ಮರಣಾದಧಿಕಂ ತತ್ರ ಮಾನಯಂತಿ ಹಿ ಪಂಡಿತಾಃ ।**
**ವಿಷ್ಣೋಸ್ಸೇವಾ ನ ವೈಕಾರ್ಯಾ ಮಯಾ ಚಾನ್ಯೈಶ್ಚ ದಾನವೈಃ ॥ ೩೬ ॥**

**ತಮುವಾಚ ಮಹಾತ್ಮಾನಂ ಬಲಿಃ ಪಿತಾಮಹಂ ಪುನಃ ।**
**ಧರ್ಮಶಾಸ್ತ್ರೇಷು ಯದ್ದೃಷ್ಟಂ ಮುನಿಭಿಸ್ತತ್ತ್ವವೇದಿಭಿಃ ॥ ೩೭ ॥**

**ರಾಜನೀತಿಯುತಂ ಮಂತ್ರಂ ಶತ್ರೋಶ್ಚೈವ ಪ್ರಸಾಧನಂ ।**
**ಹೀನಮಾತ್ಮಾನಮಾಜ್ಞಾಯ ರಿಪುಂ ತು ಬಲಿನಂ ತಥಾ ॥ ೩೮ ॥**

**ತಸ್ಯ ಪಾರ್ಶ್ವಂ ಪ್ರಗತ್ವೈವ ಜಯಕಾಲಂ ಪ್ರತೀಕ್ಷಯೇತ್ ।**
**ದೀಪಚ್ಛಾಯಾಂ ಸಮಾಶ್ರಿತ್ಯ ತಮೋ ವರ್ತೇತ ವೈ ತಥಾ ॥ ೩೯ ॥**

---

ಹರಿಯ ಪೂಜೆಯನ್ನು ಮಾಡುವುದಿಲ್ಲ, ನನ್ನ ಸ್ವಭಾವವನ್ನು ಬಿಟ್ಟು ಶತ್ರುವಾದ ವಿಷ್ಣುವಿನ ಸೇವೆಯನ್ನು ಮಾಡಲೇ?

೩೬. ಪಂಡಿತರಾದವರು ತಮ್ಮ ಸ್ವಭಾವವನ್ನು ಭಯದಿಂದಲಾಗಲಿ, ಮೋಹದಿಂದಲಾಗಲಿ, ಬದಲಾಯಿಸುವುದಿಲ್ಲ. ಹಾಗೆ ಬದಲಾಯಿಸುವುದು ಮರಣಕ್ಕಿಂತಲೂ ಹೆಚ್ಚಿನ ಅವಮಾನವೆಂದು ತಿಳಿಯುವರು. ಆದುದರಿಂದ ನಾನಾಗಲೀ, ಇತರ ದಾನವರಾಗಲೀ, ನಮ್ಮ ಶತ್ರುವಾದ ವಿಷ್ಣುವಿನ ಆರಾಧನೆಯನ್ನು ಮಾಡಲೇಕೂಡದು.

೩೭. ತತ್ವವಿದರಾದ ಮುನಿಗಳಿಂದ ಧರ್ಮಶಾಸ್ತ್ರದಲ್ಲಿ ಹೇಳಿದ ರೀತಿಯನ್ನು ಅನುಸರಿಸಿ, ಬಲಿಯು ತಾತನಾದ ಹಿರಣ್ಯಕಶಿಪುವನ್ನು ಕುರಿತು ಹೇಳಿದನು.

೩೮-೩೯. ತಾನು ಬಲಹೀನನಾಗಿಯೂ, ಶತ್ರುವು ಬಲಿಷ್ಠನಾಗಿಯೂ, ಇದ್ದರೆ ಆಗ ಶತ್ರುವನ್ನು ಆಶ್ರಯಿಸಿ ಅವನನ್ನು ಸೇವಿಸುತ್ತಾ ಕಾಲನಿರೀಕ್ಷಣೆಯನ್ನು ಮಾಡುತ್ತಿರಬೇಕು. ಕತ್ತಲೆಯು ದೀಪದ ಬುಡದಲ್ಲೇ ಅದನ್ನಾಶ್ರಯಿಸಿ ಇರುವಂತೆ ಶತ್ರುವಿನ ಸಮೀಪದಲ್ಲಿಯೇ ಇದ್ದು ಅವನನ್ನು ಸೇವಿಸುತ್ತಾ ಜಯಕಾಲವು ಬರುವುದನ್ನು ನಿರೀಕ್ಷಿಸುತ್ತಿರಬೇಕು. ಇದು ರಾಜನೀತಿಯೆಂದು ಧರ್ಮಶಾಸ್ತ್ರವನ್ನು ತಿಳಿದವರು ಹೇಳುವರು.

ಸ್ನೇಹಂ ದಶಾಗತಂ ಪ್ರೇಕ್ಷ್ಯ ದೀಪಸ್ಯಾಪಿ ಮಹಾಬಲಂ ।
ಪ್ರಕಾಶಂ ಯಾತಿ ವೇಗೇನ ತನುಶ್ಚ ವರ್ಧತೇ ಪುನಃ ॥ ೪೦ ॥

ತಥಾ ಪ್ರಸಾಧಯೇಚ್ಛತ್ರುಂ ಸ್ನೇಹಂ ನಿರ್ದಿಶ್ಯ ತತ್ತ್ವತಃ ।
ಸ್ನೇಹಂ ಕೃತ್ವಾ ಸುರೈಸ್ಸಾರ್ಧಂ ಧರ್ಮಭಾವೈಸ್ಸುರದ್ವಿಷಃ ॥ ೪೧ ॥

ಪೂರ್ವಮುಕ್ತಂ ಸುಮಂತ್ರಂ ತು ಮುನಿನಾ ಕಶ್ಯಪೇನ ಹಿ ।
ತೇನ ಮಂತ್ರೇಣ ರಾಜೇಂದ್ರ ಕುರು ಕಾರ್ಯಂ ಸ್ವಮಾತ್ಮವಾನ್ ॥ ೪೨ ॥

ತಸ್ಯ ತದ್ವಚನಂ ಶ್ರುತ್ವಾ ಪ್ರಾಹ ದೈತ್ಯಃ ಪ್ರತಾಪವಾನ್ ।
ಪೌತ್ರ ನೈವಂ ಕರಿಷ್ಯೇಽಹಂ ಮಾನಭಂಗಂ ತಮಾತ್ಮನಃ ॥ ೪೩ ॥

ಅನ್ಯೇ ಚ ದಾನವಾಸ್ಸರ್ವೇ ತಮೂಚುರ್ಜ್ಞಾನಪಂಡಿತಂ ।
ಬಲಿನೋಕ್ತಂ ಚ ಯತ್ಪುಣ್ಯಂ ದೇವತಾನಾಂ ಪ್ರಿಯಂಕರಂ ॥ ೪೪ ॥

ಶಕ್ರಮಾನಕರಂ ಪ್ರೋಕ್ತಂ ದಾನವಾನಾಂ ಭಯಂಕರಂ ।
ಕರಿಷ್ಯಾಮೋ ವಯಂ ಸರ್ವೇ ತಪ ಏವ ಹ್ಯನುತ್ತಮಂ ॥ ೪೫ ॥

---

೪೦. ಬತ್ತಿಯಲ್ಲಿರುವ ದೀಪವು ಸ್ನೇಹದಿಂದ(ಎಣ್ಣೆಯಿಂದ) ಆರಿಹೋಗುವ ಕಾಲದಲ್ಲಿ ಹೆಚ್ಚಾಗಿ ಬೆಳಕು ಕಾಣುವುದು. ದೀಪವು ಆರಿದ ತಕ್ಷಣವೇ ಸುತ್ತಲೂ ಕತ್ತಲೆಯು ಹೆಚ್ಚುವುದು.

೪೧. ಹಾಗೆಯೇ ಮೈತ್ರಿಯನ್ನು ತೋರಿಸಿ ದೇವತೆಗಳೊಡನೆ ಕೂಡಿರೋಣ. ಶತ್ರುಗಳನ್ನು ಸ್ನೇಹಮಾಡಿಕೊಂಡು ಸಮಯನೋಡಿ ಅವರನ್ನು ಸಂಹರಿಸಬೇಕು.

೪೨. ಕಶ್ಯಪನೇ ಮೊದಲು ಈ ಆಲೋಚನೆಯನ್ನು ಹೇಳಿರುವನು. ಎಲೈ ರಾಜನೇ ಅದೇ ಉಪಾಯದಿಂದ ನಿನ್ನ ಕಾರ್ಯವನ್ನು ಸಾಧಿಸು, ಎಂದನು.

೪೩. ಬಲಿಯ ಆ ಮಾತನ್ನು ಕೇಳಿ ಹಿರಣ್ಯಕಶಿಪುವು ಎಲೈ ಮೊಮ್ಮಗನೇ, ನಿನ್ನ ಮಾತು ಬಹಳ ಅವಮಾನಕರವಾಗಿರುವುದು, ಅಂತಹ ಮಾತನ್ನು ನಡೆಸುವುದಿಲ್ಲ ಎಂದು ಹೇಳಿದನು.

೪೪-೪೫. ಆಗ ಮತ್ತೆ ಕೆಲವು ದಾನವರು ಜ್ಞಾನಿಯಾದ ಹಿರಣ್ಯಕಶಿಪುವನ್ನು ಕುರಿತು, ಬಲಿಯು ಪುಣ್ಯದಾಯಕವೆಂದು ಹೇಳಿದ ಮಾತು ದೇವತೆಗಳಿಗೂ, ಇಂದ್ರನಿಗೂ, ಪ್ರೀತಿಕರವಾದುದು. ದಾನವರಾದ ನಮಗೆ ಭಯಪ್ರದವಾದುದು. ಆದ್ದರಿಂದ ನಾವು ಶ್ರೇಷ್ಠವಾದ ತಪಸ್ಸನ್ನೇ ಮಾಡುತ್ತೇವೆ, ಎಂದರು.

ನಿರ್ಜಿತ್ಯ ತಪಸಾ ದೇವಾನ್ ಗ್ರಹೀಷ್ಯಾಮಸ್ಸ್ವಕಂ ಪದಂ ।
ಏವಮಾಮಂತ್ರ್ಯ ತೇ ಸರ್ವೇ ನಿರಾಕೃತ್ಯ ಬಲಿಂ ತದಾ ॥ ೪೬ ॥

ವಿಷ್ಣೋಸ್ಸಾರ್ಧಂ ಮಹಾನ್ವೈರಂ ಹೃದಿ ಕೃತ್ವಾ ಮಹಾಸುರಾಃ ।
ತಪಶ್ಚಕ್ರುಸ್ತತಸ್ಸರ್ವೇ ಗಿರಿದುರ್ಗೇಷು ಸಾನುಷು ॥ ೪೭ ॥

ಏವಂ ತೇ ದಾನವಾಸ್ಸರ್ವೇ ತ್ಯಕ್ತರಾಗಾಸ್ಸುನಿಶ್ಚಿತಾಃ ।
ಕಾಮಕ್ರೋಧವಿಹೀನಾಶ್ಚ ನಿರಾಹಾರಾ ಜಿತಕ್ಲಮಾಃ ॥ ೪೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ದೈತ್ಯತಪಶ್ಚರ್ಯಾ ಪ್ರವೃತ್ತಿರ್ನಾಮ ದಶಮೋಽಧ್ಯಾಯಃ



---

೪೬-೪೭, ತಪಸ್ಸಿನಿಂದ ದೇವತೆಗಳನ್ನು ಜಯಿಸಿ, ನಮ್ಮ ಸ್ಥಾನವನ್ನು ಆಕ್ರಮಿಸೋಣ, ಎಂದು ಅವರೆಲ್ಲರೂ ಆಲೋಚಿಸಿ ಬಲಿಯ ಮಾತನ್ನು ತಿರಸ್ಕರಿಸಿ, ಮನಸ್ಸಿನಲ್ಲಿ ವಿಷ್ಣುವಿನೊಡನೆ ವೈರವನ್ನು ಸಾಧಿಸಿ, ಪರ್ವತದ ತಪ್ಪಲುಗಳಲ್ಲಿ ಕೂತು, ತಪಸ್ಸನ್ನು ಮಾಡಿದರು.

೪೮. ಈರೀತಿ ಆ ದಾನವರು ಆಸೆಯನ್ನು ಬಿಟ್ಟು ಕಾಮಕ್ರೋಧವರ್ಜಿತರಾಗಿ ನಿರಾಹಾರಿಗಳೂ, ಕಷ್ಟಸಹಿಷ್ಣುಗಳೂ, ಆಗಿ ತಪಸ್ಸನ್ನು ಮಾಡುತ್ತಿದ್ದರು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ದೈತ್ಯರ ತಪಶ್ಚರಣೆಯೆಂಬ ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಮಹಾಪುರಾಣೇ ಪಾದ್ಮೇಭೂಮಿಖಂಡೇ
## ॥ ಏಕಾದಶೋಽಧ್ಯಾಯಃ ॥

॥ ಋಷಯ ಊಚುಃ ॥

ಸರ್ವಜ್ಞೇನ ತ್ವಯಾ ಪ್ರೋಕ್ತಂ ದೈತ್ಯದಾನವಸಂಗರಂ ।
ಇದಾನೀಂ ಶ್ರೋತುಮಿಚ್ಛಾಮಃ ಸುವ್ರತಸ್ಯ ಮಹಾತ್ಮನಃ ॥ ೧ ॥

ಕಸ್ಯ ಪುತ್ರೋ ಮಹಾಪ್ರಾಜ್ಞಃ ಕಸ್ಯ ಗೋತ್ರಸಮುದ್ಭವಃ ।
ಕಿಂ ತಪಸ್ತಸ್ಯ ವಿಪ್ರಸ್ಯ ಕಥಮಾರಾಧಿತೋ ಹರಿಃ ॥ ೨ ॥

॥ ಸೂತ ಉವಾಚ ॥

ಮಯಾ ಪ್ರಜ್ಞಾಪ್ರಭಾವೇನ ಪೂರ್ವಮೇವಂ ಯಥಾಶ್ರುತಂ ।
ತಥಾ ವಿಪ್ರಾಃ ಪ್ರವಕ್ಷ್ಯಾಮಿ ಸುವ್ರತಸ್ಯ ಮಹಾತ್ಮನಃ ॥ ೩ ॥

---

## ಹನ್ನೊಂದನೆಯ ಅಧ್ಯಾಯವು

೧. ಋಷಿಗಳು ಕೇಳುತ್ತಾರೆ:—ಸರ್ವಜ್ಞನಾದ ನೀನು ದೈತ್ಯದಾನವರ ಯುದ್ಧವನ್ನು ವರ್ಣಿಸಿದೆ, ಈಗ ಸುವ್ರತ ಎಂಬ ಮಹಾತ್ಮನ ಚರಿತ್ರೆಯನ್ನು ಕೇಳ ಬೇಕೆಂದು ಇಚ್ಛಿಸುತ್ತೇವೆ.

೨. ಆ ಸುವ್ರತನು ಯಾರ ಮಗನು? ಯಾವಗೋತ್ರದಲ್ಲಿ ಹುಟ್ಟಿದವನು? ಎಂತಹ ತಪಸ್ಸನ್ನು ಮಾಡಿದನು ? ಅವನು ವಿಷ್ಣುವನ್ನು ಹೇಗೆ ಆರಾಧಿಸಿದನು? ಇದೆಲ್ಲವನ್ನೂ ನಮಗೆ ಹೇಳು, ಎಂದು ಕೇಳಿದರು.

೩. ಸೂತನು ಹೇಳಿದನು:—ಎಲೈ ವಿಪ್ರರೇ ಕೇಳಿ, ಮಹಾತ್ಮನಾದ ಸುವ್ರತನ ಚರಿತ್ರೆಯನ್ನು ನಾನು ಹಿಂದೆ ಕೇಳಿದರೀತಿಯಲ್ಲಿಯೇ ಹೇಳುತ್ತೇನೆ.

ಚರಿತಂ ಪಾವನಂ ದಿವ್ಯಂ ವೈಷ್ಣವಂ ಶ್ರೇಯ ಆವಹಂ ।
ಭವತಾಮಗ್ರತಸ್ಸರ್ವಂ ವಿಷ್ಣೋಶ್ಚೈವ ಪ್ರಸಾದತಃ ॥ ४ ॥

ಪೂರ್ವಕಲ್ಪೇ ಮಹಾಭಾಗಾಃ ಸುಕ್ಷೇತ್ರೇ ಪಾಪನಾಶನೇ ।
ರೇವಾತೀರೇ ಸುಪುಣ್ಯೇ ಚ ತೀರ್ಥೇ ವಾಮನಸಂಜ್ಞಿತೆ ॥ ೫ ॥

ಕೌಶಿಕಸ್ಯ ಕುಲೇ ಜಾತಃ ಸೋಮಶರ್ಮಾ ದ್ವಿಜೋತ್ತಮಃ ।
ಸ ತು ಪುತ್ರವಿಹೀನಸ್ತು ಬಹುದುಃಖಸಮನ್ವಿತಃ ॥ ೬ ॥

ದಾರಿದ್ರ್ಯೇಣ ಸುದುಃಖೇನ ಸರ್ವದೈವ ಪ್ರಪೀಡಿತಃ ।
ಪುತ್ರೋಪಾಯಂ ಧನಸ್ಯಾಪಿ ದಿವಾ ರಾತ್ರೌ ಪ್ರಚಿಂತಯೇತ್ ॥ ೭ ॥

ಏಕದಾ ತು ಪ್ರಿಯಾ ತಸ್ಯ ಸುಮನಾ ನಾಮ ಸುವ್ರತಾ ।
ಭರ್ತಾರಂ ಚಿಂತಯೋಪೇತಮಧೋಮುಖಮಲಕ್ಷಯತ್ ॥ ೮ ॥

---

೪. ವಿಷ್ಣುವಿನ ಚರಿತ್ರೆಯು ಪವಿತ್ರಕರವಾದುದು. ಕೇಳುವವರ ಪಾಪಗಳನ್ನು ಪರಿಹರಿಸಿ, ಅವರಿಗೆ ಶ್ರೇಯಸ್ಸನ್ನುಂಟುಮಾಡುವುದು. ಅಂತಹ ವಿಷ್ಣುವಿನ ದಿವ್ಯ ಚರಿತ್ರೆಯನ್ನು ವಿಷ್ಣುವಿನ ಅನುಗ್ರಹದಿಂದಲೇ ನಿಮಗೆ ಹೇಳುತ್ತೇನೆ ಸಾವಧಾನವಾಗಿ ಕೇಳಿ.

೫. ಹಿಂದಿನಕಲ್ಪದಲ್ಲಿ ಪಾಪನಾಶಕವಾದ ರೇವಾನದೀತೀರದಲ್ಲಿರುವ ವಾಮನ ವೆಂಬ ಕ್ಷೇತ್ರದಲ್ಲಿ ಕೌಶಿಕಗೋತ್ರದಲ್ಲಿ ಹುಟ್ಟಿದ ಸೋಮಶರ್ಮ ಎಂಬ ಒಬ್ಬ ಬ್ರಾಹ್ಮ ಣೋತ್ತಮನಿದ್ದನು.

೬-೭. ಆ ಬ್ರಾಹ್ಮಣನಿಗೆ ಮಕ್ಕಳಿರಲಿಲ್ಲ. ಬಹಳ ದರಿದ್ರನಾಗಿದ್ದನು. ಆದ್ದರಿಂದ ಆತನು ಅತಿ ದುಃಖಗೊಂಡು ಪುತ್ರಪ್ರಾಪ್ತಿಗೂ, ದ್ರವ್ಯಾರ್ಜನೆಗೂ, ಏನು ಮಾಡಬೇಕೆಂದು ಯಾವಾಗಲೂ ಉಪಾಯವನ್ನು ಯೋಚಿಸುತ್ತಿದ್ದನು.

೮-೧೦. ಅವನಿಗೆ ಸುಮನಾ ಎಂಬ ಹೆಸರುಳ್ಳ ಹೆಂಡತಿಯಿದ್ದಳು. ಆಕೆಯು ಒಂದುಬಾರಿ ಅಧೋಮುಖನಾಗಿ, ದುಃಖಿಸುತ್ತಿರುವ ಗಂಡನನ್ನು ನೋಡಿ ಎಲೈ ಕಾಂತನೇ, ಅನೇಕ ದುಃಖಪರಂಪರೆಗಳಿಂದ ನಿನ್ನ ಮನಸ್ಸು ಬಹುವಾಗಿ ವ್ಯಾಕುಲ

**ಸಮಾಲೋಕ್ಯ ತದಾ ಕಾಂತಂ ತಮುವಾಚ ಯಶಸ್ವಿನೀ ।**
**ದುಃಖಜಾಲೈರನೇಕೈಸ್ತು ತವ ಚಿತ್ತಂ ಪ್ರಧರ್ಷಿತಂ ॥ ೯ ॥**

**ವ್ಯಾಮೋಹೇನ ಪ್ರಮೂಢೋಽಸಿ ತ್ಯಜ ಚಿಂತಾಂ ಮಹಾಮತೇ ।**
**ಮಮ ದುಃಖಂ ಸಮಾಚಕ್ಷ್ವ ಸ್ವಸ್ಥೋ ಭವ ಸುಖಂ ವ್ರಜ ॥ ೧೦ ॥**

**ನಾಸ್ತಿ ಚಿಂತಾಸಮಂ ದುಃಖಂ ಕಾಯಶೋಷಣಮೇವ ಹಿ ।**
**ಯಸ್ತ್ವಾಂ ಸಂತ್ಯಜ್ಯ ವರ್ತೇತ ಸ ಸುಖೇನ ಪ್ರಮೋದತೇ ॥ ೧೧ ॥**

**ಚಿಂತಾಯಾಃ ಕಾರಣಂ ವಿಪ್ರ ಕಥಯಸ್ವ ಮಮಾಗ್ರತಃ ।**
**ಪ್ರಿಯಾವಾಕ್ಯಂ ಸಮಾಕರ್ಣ್ಯ ಸೋಮಶರ್ಮಾಽಬ್ರವೀತ್ಪ್ರಿಯಾಂ ॥ ೧೨ ॥**

**॥ ಸೋಮಶರ್ಮೋವಾಚ ॥**

**ಇಚ್ಛಯಾ ಚಿಂತನಂ ಭದ್ರೇ ಚಿಂತಾ ದುಃಖಸ್ಯ ಕಾರಣಂ ।**
**ತತ್ಸರ್ವಂ ತು ಪ್ರವಕ್ಷ್ಯಾಮಿ ಶ್ರುತ್ವಾ ಚೈವಾವಧಾರ್ಯತಾಂ ॥ ೧೩ ॥**

---

ಗೊಂಡಿರುವುದು. ನೀನು ಬುದ್ಧಿಶಾಲಿಯಾಗಿದ್ದರೂ ಅತಿಶಯವಾದ ಮೋಹದಿಂದ ಯುಕ್ತಾಯುಕ್ತವಿಚಾರವಿಹೀನನಾಗಿರುವೆ. ನಿನ್ನ ದುಃಖಕಾರಣವನ್ನು ನನ್ನಲ್ಲಿ ಹೇಳಿ ನಿಶ್ಚಿಂತನಾಗಿರು.

೧೧. ದೇಹವನ್ನು ಶೋಷಿಸುವ ಚಿಂತೆಗೆ ಸಮವಾದ ದುಃಖವು ಮತ್ತೊಂದಿಲ್ಲ. ಯಾವನು ಚಿಂತೆಯನ್ನು ಬಿಡುವನೋ ಅವನು ಸುಖಿಯಾಗುವನು.

೧೨. ಎಲೈ ಬ್ರಾಹ್ಮಣನೇ, ನನಗೆ ನಿನ್ನ ಶೋಕಕಾರಣವನ್ನು ತಿಳಿಸು, ಈ ರೀತಿ ಹೇಳಿದ ಹೆಂಡತಿಯ ಮಾತನ್ನು ಕೇಳಿ ಸೋಮಶರ್ಮನು ಹೆಂಡತಿಗೆ ಹೇಳಿದನು.

೧೩. ಸೋಮಶರ್ಮನು ಹೇಳುತ್ತಾನೆ:—ಯಾವುದಾದರೂ ಒಂದು ವಿಷಯವನ್ನು ಯೋಚಿಸುವುದರಿಂದ ಚಿಂತೆಯು ಹುಟ್ಟುತ್ತದೆ. ಆ ಚಿಂತೆಯೇ ದುಃಖಕ್ಕೆ ಕಾರಣವು. ಅದನ್ನೆಲ್ಲಾ ವಿಶದವಾಗಿ ಹೇಳುತ್ತೇನೆ. ಅದನ್ನು ಕೇಳಿ ಮನಸ್ಸಿನಲ್ಲಿ ಆಲೋಚಿಸು.

ನ ಜಾನೇ ಕೇನ ಪಾಪೇನ ಧನಹೀನೋಽಸ್ಮಿ ಸುವ್ರತೇ ।
ತಥಾ ಪುತ್ರೈರ್ವಿಹೀನಶ್ಚ ಹ್ಯೇತದ್ದುಃಖಸ್ಯ ಕಾರಣಂ ॥ ೧೪ ॥

॥ ಸುಮನೋವಾಚ ॥

ಶ್ರೂಯತಾಮಭಿಧಾಸ್ಯಾಮಿ ಸರ್ವಸಂದೇಹನಾಶನಂ ।
ಸ್ವರೂಪಮುಪದೇಶಸ್ಯ ಸರ್ವವಿಜ್ಞಾನದರ್ಶನಂ ॥ ೧೫ ॥

ಲೋಭಃ ಪಾಪಸ್ಯ ಬೀಜಂ ಹಿ ಮೋಹೋ ಮೂಲಂ ಚ ತಸ್ಯ ಹಿ ।
ಅಸತ್ಯಂ ತಸ್ಯ ಸ್ಕಂಧೋ ವೈ ಮಾಯಾಶಾಖಾಸುವಿಸ್ತರಃ ॥ ೧೬ ॥

ದಂಭಕೌಟಿಲ್ಯಪತ್ರಾಣಿ ಕುಬುದ್ಧ್ಯಾ ಪುಷ್ಪಿತಸ್ಸದಾ ।
ನೃಶಂಸ್ಯಂ ತಸ್ಯ ಸೌಗಂಧಂ ಫಲಮಜ್ಞಾನಮೇವ ಚ ॥ ೧೭ ॥

ಛದ್ಮಪಾಷಂಡಚೌರ್ಯೇರ್ಷ್ಯಾಃ ಕ್ರೂರಾಃ ಕೂಟಾಶ್ಚ ಪಾಪಿನಃ ।
ಪಕ್ಷಿಣೋ ಮೋಹವೃಕ್ಷಸ್ಯ ಮಾಯಾಶಾಖಾಸಮಾಶ್ರಿತಾಃ ॥ ೧೮ ॥

---

೧೪. ಯಾವ ಪಾಪಮಾಡಿದ್ದರಿಂದ ನಾನು ದರಿದ್ರನಾಗಿರುವೆನೋ ಅದು ಗೊತ್ತಿಲ್ಲ. ಹಾಗೆಯೇ ಮಕ್ಕಳಿಲ್ಲದವನೂ ಆಗಿರುವೆನು. ಇದೇ ನನ್ನ ದುಃಖಕ್ಕೆ ಕಾರಣವು.

೧೫. ಸುಮನಳು ಹೇಳುತ್ತಾಳೆ—ಎಲೈ ಸ್ವಾಮಿಯೇ, ನಾನು ಹೇಳುವ ಉಪದೇಶವನ್ನು ಲಾಲಿಸು. ಅದು ಸಮಸ್ತ ಸಂಶಯಗಳನ್ನೂ ಪರಿಹರಿಸಿ ಜ್ಞಾನವನ್ನುಂಟು ಮಾಡುವುದು. ಅಂತಹ ಉಪದೇಶವನ್ನು ಹೇಳುತ್ತೇನೆ ಕೇಳು.

೧೬. ಪಾಪವೆಂಬ ಮರಕ್ಕೆ ಲೋಭವೆಂಬುದು ಬೀಜವು. ಮೋಹವೇ ಬೇರು. ಅಸತ್ಯವು ಅದರ ಶರೀರವು. ಮಾಯವೆಂಬುದು ಅದರ ಕೊಂಬೆಗಳು.

೧೭. ಮೋಸ, ಡಂಭ ಇವೇ ಮೊದಲಾದುವು ಆ ವೃಕ್ಷದ ಎಲೆಗಳು. ಆ ಮರವು ಕೆಟ್ಟಬುದ್ಧಿ ಎಂಬ ಹೂವಿನಿಂದ ಕೂಡಿರುವುದು. ಘಾತಕತನವೇ ಅದರ ವಾಸನೆ. ಅಜ್ಞಾನವೇ ಅದರ ಫಲವು.

೧೮. ನೆಪ, ನಾಸ್ತಿಕತೆ, ಕಳ್ಳತನ, ಹೊಟ್ಟೆಕಿಚ್ಚು, ಕ್ರೂರಿಗಳು, ಮೋಸ, ಪಾಪಿಗಳು ಎಂಬ ಪಕ್ಷಿಗಳು ಈ ಮೋಹವೆಂಬ ವೃಕ್ಷದ ಮಾಯೆ ಎಂಬ ಕೊಂಬೆಗಳಲ್ಲಿ ಆಶ್ರಯಮಾಡಿಕೊಂಡಿರುವುವು.

**ಅಜ್ಞಾನಂ ಯತ್ಫಲಂ ತಸ್ಯ ರಸೋ ಧರ್ಮಃ ಪ್ರಕೀರ್ತಿತಃ ।**
**ಭಾವೋದಕೇನ ಸಂವೃದ್ಧಿಸ್ತಸ್ಯಾಶ್ರದ್ಧಾ ಋತುಃ ಪ್ರಿಯ ॥ ೧೯ ॥**

**ಅಧರ್ಮಸ್ಸುರಸಸ್ತಸ್ಯ ಚೋತ್ಕಟ್ಯೈರ್ಮಧುರಾಯತೇ ।**
**ಯಾದೃಶೈಶ್ಚ ಫಲೈಶ್ಚೈವ ಸುಫಲೋ ಲೋಭಪಾದಪಃ ॥ ೨೦ ॥**

**ತಸ್ಯ ಛಾಯಾಂ ಸಮಾಶ್ರಿತ್ಯ ಯೋ ನರಃ ಪರಿತುಷ್ಯತೇ ।**
**ಫಲಾನಿ ತಸ್ಯ ಚಾಽಶ್ನಾತಿ ಸಪಕ್ವಾನಿ ದಿನೇ ದಿನೇ ॥ ೨೧ ॥**

**ಫಲಾನಾಂ ತು ರಸೇನಾಽಪಿ ಹ್ಯಧರ್ಮೇಣ ತು ಪಾಲಿತಃ ।**
**ಸ ಸಂತುಷ್ಟೋ ಭವೇನ್ಮರ್ತ್ಯಃ ಪತನಾಯಾಽಭಿಗಚ್ಛತಿ ॥ ೨೨ ॥**

**ತಸ್ಮಾಚ್ಚಿಂತಾಂ ಪರಿತ್ಯಜ್ಯ ಪುರ್ಮಾ ಲೋಭಂ ನ ಕಾರಯೇತ್ ।**
**ಧನಪುತ್ರಕಳತ್ರಾಣಾಂ ಚಿಂತಾಮೇವ ನ ಕಾರಯೇತ್ ॥ ೨೩ ॥**

**ಯೋ ಹಿ ವಿದ್ವಾನ್ಭವೇತ್ಕಾಂತ ಮೂರ್ಖಾಣಾಂ ಪಥಮೇತಿ ಹಿ ।**
**ಸುಭಾರ್ಯಾಮಿಹ ವಿಂದಾಮಿ ಕಥಂ ಪುತ್ರಾನಹಂ ಲಭೇ ॥ ೨೪ ॥**

---

೧೯. ಅಜ್ಞಾನವೆಂಬ ಫಲದಲ್ಲಿ ಅಧರ್ಮವೆಂಬ ರಸವು ಇರುವುದು. ನಾನಾ ವಿಷಯಗಳಲ್ಲಿ ಪ್ರವೃತ್ತವಾಗಿರುವ ಭಾವ ಎಂಬ ನೀರಿನಿಂದ ಮರವು ಬೆಳೆಯುತ್ತದೆ. ಪಾಪರೂಪವೃಕ್ಷಕ್ಕೆ ಅಶ್ರದ್ಧೆಯೆಂಬುದು (ಆಶೆ) ಋತುವು.

೨೦. ಅಧರ್ಮವು ಹೆಚ್ಚಾದಷ್ಟು ಮಧುರವಾಗುವುದು. ಆಗ ಲೋಭವೆಂಬ ವೃಕ್ಷವು ಫಲಭರಿತವಾಗುತ್ತದೆ.

೨೧. ಆ ವೃಕ್ಷದ ನೆರಳನ್ನು ಆಶ್ರಯಿಸಿ ಯಾವನು ಸಂತೋಷಗೊಳ್ಳುವನೋ ಅವನು ಅದರ ಸುಪಕ್ವವಾದ ಫಲಗಳನ್ನು ತಿನ್ನುತ್ತಾನೆ.

೨೨. ಆ ಫಲಗಳ ರಸದಿಂದಲೂ, ಅಧರ್ಮದಿಂದಲೂ ಪೋಷಿತನಾಗಿ ಸಂತೋಷಗೊಂಡ ಮಾನವನು ಮೋಹಪರವಶನಾಗಿ ಖಂಡಿತವಾಗಿಯೂ ನರಕಕ್ಕೆ ಬೀಳುವನು.

೨೩. ಆದ್ದರಿಂದ ಯೋಚನೆಯನ್ನು ಬಿಡು. ಪುರುಷನು ಆಶೆ ಪಡಬಾರದು. ದ್ರವ್ಯ, ಮಕ್ಕಳು, ಹೆಂಡತಿ ಇವುಗಳ ವಿಷಯದಲ್ಲಿ ಚಿಂತಿಸಬಾರದು.

೨೪. ಎಲೈ ಕಾಂತನೇ, ವಿದ್ವಾಂಸನಾದರೂ ಕೂಡ ಮೂರ್ಖನ ಮಾರ್ಗವನ್ನು ಆಶ್ರಯಿಸಿ ಒಳ್ಳೆಯ ಹೆಂಡತಿಯನ್ನು ಹೇಗೆ ಹೊಂದುವೆನು ? ಪುತ್ರಪ್ರಾಪ್ತಿಯಾಗುವಬಗೆಯೆಂತು ?

**ಏವಂ ಚಿಂತಯತೇ ನಿತ್ಯಂ ದಿವಾ ರಾತ್ರೌ ವಿಮೋಹಿತಃ ।**
**ಕ್ಷಣಮೇಕಂ ಪ್ರಪಶ್ಯೇತ ಚಿಂತಾಮಧ್ಯೇ ಮಹತ್ಸುಖಂ ॥ ೨೫ ॥**

**ಪುನಶ್ಚೈತನ್ಯಮಾಯಾತಿ ಮಹಾದುಃಖೇನ ಪೀಡ್ಯತೇ ।**
**ಚಿಂತಾಮೋಹೌ ಪರಿತ್ಯಜ್ಯ ಹ್ಯನುವರ್ತಸ್ವ ಚ ದ್ವಿಜ ।**
**ಸಂಸಾರೇ ನಾಸ್ತಿ ಸಂಬಂಧಃ ಕೇನ ಸಾರ್ಧಂ ಮಹಾಮತೇ ॥ ೨೬ ॥**

**ಮಿತ್ರಾಣಿ ಬಾಂಧವಾಃ ಪುತ್ರಾಃ ಪಿತೃಮಾತೃಸಭೃತ್ಯಕಾಃ ।**
**ಸಂಬಂಧಿನೋ ಭವಂತ್ಯೇತೇ ಕಲತ್ರಾಣಿ ತಥೈವ ಚ ॥ ೨೭ ॥**

**॥ ಸೋಮಶರ್ಮೋವಾಚ ॥**

**ಸಂಬಂಧಃ ಕೀದೃಶೋ ಭದ್ರೇ ಮಮ ವಿಸ್ತರತೋ ವದ ।**
**ಯೇನ ಸಂಬಂಧಿನಸ್ಸರ್ವೇ ಧನಪುತ್ರಾಪ್ತಬಾಂಧವಾಃ ॥ ೨೮ ॥**

---

೨೫. ಈರೀತಿ ಹಗಲೂ ರಾತ್ರಿಯೂ ಮೋಹವಶದಿಂದ ಯೋಚಿಸುತ್ತಾ ಇರುವನು. ಅವನು ಚಿಂತೆಯ ಮಧ್ಯದಲ್ಲಿ ಸಿಲುಕಿರುವುದರಿಂದ ಒಂದುಕ್ಷಣವಾದರೂ ಸುಖವನ್ನು ಹೊಂದುತ್ತಾನೆಯೇ ?

೨೬. ಎಲೈ ಬುದ್ಧಿಶಾಲಿಯಾದ ವಿಪ್ರನೇ, ಅವನು ತಿರುಗಿ ಚಿಂತೆಯ ಮಧ್ಯದಲ್ಲಿ ಚೈತನ್ಯವನ್ನು ಹೊಂದಿ ಅತಿ ದುಃಖದಿಂದ ಪೀಡಿಸಲ್ಪಡುತ್ತಾನೆ. ಆದ್ದರಿಂದ ಚಿಂತೆ, ಮೋಹ ಇವುಗಳನ್ನು ಬಿಟ್ಟು ಸೌಖ್ಯವಾಗಿರು. ಈ ಸಂಸಾರದಲ್ಲಿ ಯಾರಿಗೆ ಯಾರೂ ಸಂಬಂಧಿಗಳಲ್ಲ.

೨೭. ಸ್ನೇಹಿತರು, ಬಂಧುಗಳು, ಮಕ್ಕಳು, ತಂದೆ, ತಾಯಿ, ಆಳುಗಳು, ಪತ್ನಿ ಇವರೆಲ್ಲರೂ ಕಾರಣಾಂತರದಿಂದ ತಾತ್ಕಾಲಿಕವಾಗಿ ಸಂಬಂಧಿಗಳಾಗಿರುವಂತೆ ತೋರುವರು.

೨೮. ಸೋಮಶರ್ಮನು ಕೇಳಿದನು:—ಸಂಬಂಧವೆಂಬುದು ಎಂಥಾದ್ದು ? ಎಲೈ ಮಂಗಳಕರಳೇ, ನನಗೆ ಅದನ್ನು ವಿಸ್ತಾರವಾಗಿ ಹೇಳು, ಯಾವಕಾರಣದಿಂದ ಧನ, ಪುತ್ರರು, ಬಂಧುಗಳು, ಇಷ್ಟರು ಇವರು ಬಂಧುಗಳಾಗುತ್ತಾರೆ ? ಇದನ್ನು ನನಗೆ ವಿಸ್ತಾರವಾಗಿ ತಿಳಿಸು ಎಂದನು.

**ಸುಮನೋವಾಚ**

**ಋಣಸಂಬಂಧಿನಃ ಕೇಚಿತ್ಕೇಚಿನ್ನ್ಯಾಸಾಪಹಾರಕಾಃ ।**
**ಭೈದೈಶ್ಚತುರ್ಭಿರ್ಜಾಯಂತೇ ಪುತ್ರಮಿತ್ರಾಃ ಸ್ತ್ರಿಯಸ್ತಥಾ ॥ ೨೯ ॥**

**ಭಾರ್ಯಾ ಪಿತಾ ಚ ಮಾತಾ ಚ ಭೃತ್ಯಾಃ ಸ್ವಜನಬಾಂಧವಾಃ ।**
**ಸ್ವೇನ ಸ್ವೇನ ಹಿ ಜಾಯಂತೇ ಸಂಬಂಧೇನ ಮಹೀತಲೇ ॥ ೩೦ ॥**

**ನ್ಯಾಸಾಪಹಾರೋ ಭಾವೇನ ಯಸ್ಯ ಯೇನ ಕೃತಂ ಭುವಿ ।**
**ನ್ಯಾಸಸ್ವಾಮೀ ಭವೇತ್ಪುತ್ರೋ ಗುಣವಾನ್ ರೂಪವಾನ್ ಭುವಿ ॥ ೩೧ ॥**

**ಯೇನೈವಾಽಪಹೃತಂ ಹ್ಯೇತತ್ತಸ್ಯ ದೇಹೇ ನ ಸಂಶಯಃ ।**
**ನ್ಯಾಸಾಪಹರಣಾದ್ದುಃಖಂ ಸ ದತ್ವಾ ದಾರುಣಂ ಗತಃ ॥ ೩೨ ॥**

**ನ್ಯಾಸಸ್ವಾಮೀ ಸ ಪುತ್ರೋಽಭೂನ್ನ್ಯಾಸಾಪಹಾರಕಸ್ಯ ಚ ।**
**ಗುಣವಾನ್ ರೂಪವಾಂಶ್ಚೈವ ಸರ್ವಲಕ್ಷಣಸಂಯುತಃ ॥ ೩೩ ॥**

---

೨೯-೩೦. ಸುಮನಳು ಹೇಳಿದಳು:—ಸಂಬಂಧವು ನಾಲ್ಕು ವಿಧವಾಗಿರುವುದು. ಋಣಸಂಬಂಧಿಗಳು ಕೆಲವರು; ಕೆಲವರು ದ್ರವ್ಯಾದಿಗಳನ್ನು ಅಪಹರಿಸಿ ಅದನ್ನು ಮುಂದಿನ ಜನ್ಮದಲ್ಲಿ ತೀರಿಸಲೋಸುಗ ಪುತ್ರರಾಗಿ ಜನಿಸುವರು. ಇವರಿಗೆ ನ್ಯಾಸಾಪಹಾರಕರೆಂದು ಹೆಸರು. ಇದು ಎರಡನೆಯ ಸಂಬಂಧವು. ಮತ್ತೆ ಕೆಲವರು ಪುತ್ರ, ಮಿತ್ರ, ಭಾರ್ಯೆ, ತಂದೆ, ತಾಯಿ, ಭೃತ್ಯರು, ಸ್ವಜನರು, ಬಂಧುಗಳು ಎಂಬ ಸಂಬಂಧದಿಂದ ಜನಿಸುವರು. ಈ ವಿಧವಾದ ಸಂಬಂಧವು ಮೂರು ನಾಲ್ಕನೆಯ ಭೇದಗಳು. ಈ ರೀತಿ ಅನೇಕರು ನಾನಾವಿಧವಾದ ಸಂಬಂಧಗಳನ್ನು ಕಲ್ಪಿಸಿಕೊಂಡು ಭೂಮಿಯಲ್ಲಿ ಹುಟ್ಟುತ್ತಾರೆ.

೩೧. ಭೂಮಿಯಲ್ಲಿ ಯಾವನು ಒಬ್ಬ ಪುರುಷನ ಸ್ವತ್ತನ್ನು ಮನಃಪೂರ್ವಕವಾಗಿ ಅಪಹರಿಸುವನೋ ಆ ಸ್ವತ್ತನ್ನು ಕದ್ದವನಿಗೆ ಸ್ವತ್ತಿನ ಯಜಮಾನನು, ರೂಪವಂತನೂ ಗುಣವಂತನೂ ಆದ ಮಗನಾಗಿ ಹುಟ್ಟುತ್ತಾನೆ.

೩೨. ಯಾರಿಂದ ಸ್ವತ್ತು ಅಪಹರಿಸಲ್ಪಟ್ಟಿತೋ ಅವರಿಗೆ ಸ್ವತ್ತನ್ನು ಕಳೆದುಕೊಂಡವನು ಪುತ್ರನಾಗಿ ಜನಿಸಿ ಕ್ರೂರವಾದ ಯಾತನೆಯನ್ನು ಕೊಡುತ್ತಾನೆ.

೩೩. ವಸ್ತು ಕದ್ದವನಿಗೆ ಕಳಕೊಂಡವನು ಗುಣವಂತನಾಗಿಯೂ ಸರ್ವಲಕ್ಷಣಗಳಿಂದ ಕೂಡಿದ ರೂಪವಂತನಾಗಿಯೂ ಆದ ಮಗನಾಗಿ ಜನಿಸುತ್ತಾನೆ.

**ಭಕ್ತಿಂ ಚ ದರ್ಶಯೇತ್ತಸ್ಯ ಪುತ್ರೋ ಭೂತ್ವಾ ದಿನೇ ದಿನೇ ।**
**ಪ್ರಿಯವಾರ್ಕ್ ಮಧುರೋ ವಾಗ್ಮೀ ಬಹುಸ್ನೇಹಂ ವಿದರ್ಶಯನ್ ॥ ೩೪ ॥**

**ಸ್ವೀಯಂ ದ್ರವ್ಯಂ ಸಮುದ್ಧೃತ್ಯ ಪ್ರೀತಿಮುತ್ಪಾದ್ಯ ಚೋತ್ತಮಂ ।**
**ಯಥಾ ಯೇನ ಪ್ರದತ್ತಂ ಸ್ಯಾನ್ನ್ಯಾಸಸ್ಯ ಹರಣಾತ್ಪುರಾ ॥ ೩೫ ॥**

**ದುಃಖಮೇವ ಮಹಾಭಾಗ ದಾರುಣಂ ಪ್ರಾಣನಾಶನಂ ।**
**ತಾದೃಶಂ ತಸ್ಯ ಸೌಹೃದ್ಯಾತ್ಪುತ್ರೋ ಭೂತ್ವಾ ಮಹಾಗುಣೈಃ ॥ ೩೬ ॥**

**ಅಲ್ಪಾಯುಷಸ್ತಥಾ ಭೂತ್ವಾ ಮರಣಂ ಚೋಪಗಚ್ಛತಿ ।**
**ದುಃಖಂ ದತ್ವಾ ಪ್ರಯಾತ್ಯೇವ ಭೂತ್ವಾ ಭೂತ್ವಾ ಪುನಃ ಪುನಃ ॥ ೩೭ ॥**

**ಯದಾಹ ಪುತ್ರ ಪುತ್ರೇತಿ ಪ್ರಸಾದಂ ಹಿ ಕರೋತಿ ಸಃ ।**
**ತದಾ ಹಾಸ್ಯಂ ಕರೋತ್ಯೇವ ಕಸ್ಯ ಪುತ್ರೋ ಹಿ ಕಶ್ಚನ ॥ ೩೮ ॥**

---

೩೪. ಮಗನಾಗಿ ಹುಟ್ಟಿ ತಂದೆಗೆ ಪ್ರತಿನಿತ್ಯವೂ ಪ್ರಿಯವಾದ ಮತ್ತು ಇಂಪಾದ ಮಾತುಗಳನ್ನು ಆಡುತ್ತಾ ಬಹುವಿಶ್ವಾಸವನ್ನು ತೋರಿಸುತ್ತಾ ಅತಿ ಪ್ರೀತಿಪಾತ್ರನಾಗಿರುವನು.

೩೫. ಅವನಲ್ಲಿ ವಿಶ್ವಾಸವನ್ನು ತೋರ್ಪಡಿಸಿ ತಾನು ಪೂರ್ವದಲ್ಲಿ ಯಾವ ರೀತಿಯಾಗಿ ಭೂಮಿಕಾಣಿಗಳನ್ನು ಕಳಕೊಂಡನೋ ಅದೇ ರೀತಿ ಅವನಿಂದಲೂ ತೆಗೆದುಕೊಂಡುಹೋಗುತ್ತಾನೆ.

೩೬. ಎಲೈ ಮಹಾನುಭಾವನೇ, ಅಂಥ ದೊಡ್ಡಗುಣಗಳಿಂದ ಕೂಡಿ ಜನಿಸಿದ ಪುತ್ರನೇ ತಂದೆಯ ದುಃಖಕ್ಕೆ ಕಾರಣನಾಗುವನಲ್ಲದೆ ಕೆಲವು ಸಂದರ್ಭಗಳಲ್ಲಿ ತಂದೆಯ ಮರಣಕ್ಕೂ ಕಾರಣನಾಗುವುದುಂಟು.

೩೭. ಏಕೆಂದರೆ ಇಂತಹ ಮಗನು ಅಲ್ಪಾಯುಸ್ಸುಳ್ಳವನಾಗಿ ಬೇಗನೆ ತಂದೆಯ ಎದುರಿಗೆ ಮರಣವನ್ನು ಹೊಂದುತ್ತಾನೆ. ಆದುದರಿಂದ ತಂದೆಗೆ ಪುತ್ರಶೋಕವುಂಟಾಗುವುದು. ಹೀಗೆ ಪುನಃ ಪುನಃ ಹುಟ್ಟುತ್ತಾ ಸಾಯುತ್ತಾ ತಂದೆತಾಯಿಗಳಿಗೆ ದುಃಖವನ್ನೇ ಕೊಡುತ್ತಾನೆ.

೩೮. ಅಪ್ಪಾ ಮಗೂ, ಎಂದು ಮುಂತಾಗಿ ತಂದೆಯು ಪ್ರೀತಿಯನ್ನು ತೋರಿಸುವಾಗಲೆಲ್ಲಾ ಮಗನು ತಂದೆಯನ್ನು ನೋಡಿ ಯಾರಿಗೆ ಯಾರು ಮಗನು ? ಎಂದು ತನ್ನ ಮನಸ್ಸಿನಲ್ಲಿಯೇ ಹಾಸ್ಯಮಾಡುವನು.

ಅನೇನಾಪಹೃತಂ ನ್ಯಾಸಂ ಮದೀಯಂ ಪಾಪಚಾರಿಣಾ ।
ದ್ರವ್ಯಾಪಹರಣೇನಾಽಪಿ ಮಮ ಪ್ರಾಣಾ ಗತಾಃ ಕಿಲ ॥ ೩೯ ॥

ದುಃಖೇನ ಮಹತಾ ಚೈವ ಹ್ಯಸಹ್ಯೇನ ಚ ವೈ ಪುರಾ ।
ತಥಾ ದುಃಖಮಹಂ ದತ್ವಾ ದ್ರವ್ಯಮುದ್ಗೃಹ್ಯ ಉತ್ತಮಂ ॥ ೪೦ ॥

ಗಂತಾಽಸ್ಮಿ ಸುಭೃಶಂ ಚಾಽದ್ಯ ಕಸ್ಯಾಹಂ ಸುತ ಈದೃಶಃ ।
ನ ಚೈಷ ಮೇ ಪಿತಾ ಪುತ್ರಃ ಪೂರ್ವಮೇವ ನ ಕಸ್ಯಚಿತ್ ॥ ೪೧ ॥

ಪಿಶಾಚತ್ವಂ ಮಯಾ ದತ್ತಮಸ್ಯೈವೇತಿ ದುರಾತ್ಮನಃ ।
ಏವಮುಕ್ತ್ವಾ ಪ್ರಯಾತ್ಯೇವ ತಂ ಪ್ರಹಸ್ಯ ಪುನಃ ಪುನಃ ॥ ೪೨ ॥

ಪ್ರಯಾತ್ಯನೇನ ಮಾರ್ಗೇಣ ದುಃಖಂ ದತ್ವಾ ಸುದಾರುಣಂ ।
ಏವಂ ನ್ಯಾಸಂ ಸಮುದ್ಧರ್ತುಂ ಪುತ್ರಾಃ ಕಾಂತ ಭವಂತಿ ವೈ ॥ ೪೩ ॥

---

೩೯. ಹಿಂದೆ ಪಾಪಿಯಾದ ಇವನು ನನ್ನ ಕ್ಷೇತ್ರವನ್ನು ಕದ್ದಿರುವನು. ಕ್ಷೇತ್ರಾಪಹರಣದಿಂದ ನನ್ನ ಪ್ರಾಣವೂ ಹೋಯಿತು.

೪೦. ಪೂರ್ವದಲ್ಲಿ ತನಗೆ ಯಾವ ರೀತಿಯಾಗಿ ಸಹಿಸುವುದಕ್ಕೆ ಅಸಾಧ್ಯವಾದ ಹೆಚ್ಚಾದ ದುಃಖವನ್ನು ಕೊಟ್ಟಿದ್ದನೋ ಅಂಥ ದುಃಖವನ್ನು ಇವನಿಗೆ ಈಗ ಕೊಟ್ಟು ಹೆಚ್ಚಾದ ಹಣವನ್ನು ಕಿತ್ತುಕೊಂಡು ಹೊರಟುಹೋಗುತ್ತೇನೆ. ನಮ್ಮ ಸಂಬಂಧವು ಹೀಗಿರುವುದು. ಈರೀತಿ ಇರುವುದರಿಂದ ನಾನು ಯಾರಿಗೆ ಮಗನು?

೪೧. ನಾನು ಇವನಿಗೆ ಏನೂ ಆಗಬೇಕಾಗಿಲ್ಲ. ಇವನು ನನಗೆ ತಂದೆಯೂ ಅಲ್ಲ. ಹಿಂದೆಯೂ ಆಗಿರಲಿಲ್ಲ. ಈ ದುರಾತ್ಮನಿಗೆ ಪಿಶಾಚತ್ವವನ್ನು ಕೊಟ್ಟಿದ್ದೇನೆ.

೪೨. ಹೀಗೆಂದು ಹೇಳಿ ಪುನಃ ಪುನಃ ತಂದೆಯನ್ನು ಕುರಿತು ತನ್ನಲ್ಲೇ ಹಾಸ್ಯಮಾಡಿ ಹೊರಟೇ ಹೋಗುತ್ತಾನೆ. ಎಂದರೆ ಮೃತನಾಗಿ ತಂದೆಗೆ ಪುತ್ರಶೋಕ ವನ್ನುಂಟುಮಾಡುವನು.

೪೩. ತಂದೆಗೆ ಇರೀತಿ ಕ್ರೂರವಾದ ದುಃಖವನ್ನು ಕೊಟ್ಟು ಬಂದದಾರಿಯಿಂದ ಹೊರಟುಹೋಗುತ್ತಾನೆ. ಎಲೈ ಕಾಂತನೇ, ಈ ರೀತಿಯಾಗಿ ನಾವು ಕಿತ್ತುಕೊಂಡ ವಸ್ತುವನ್ನು ಹಿಂದಕ್ಕೆ ಪಡೆಯುವುದಕ್ಕೋಸ್ಕರ ನಮಗೆ ಮಕ್ಕಳು ಹುಟ್ಟುತ್ತಾರೆ.

**ಸಂಸಾರೇ ದುಃಖಬಹುಳಾ ದೃಶ್ಯಂತೇ ಯತ್ರ ತತ್ರ ಚ ।**
**ಋಣಸಂಬಂಧಿನಃ ಪುತ್ರಾನ್ ಪ್ರವಕ್ಷ್ಯಾಮಿ ತವಾಗ್ರತಃ** ॥ ೪೪ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ**
**ಸುಮನೋಪಾಖ್ಯಾನೇ ಏಕಾದಶೋಽಧ್ಯಾಯಃ**



---

೪೪. ಈ ಸಂಸಾರದಲ್ಲಿ ಬಹು ದುಃಖಗಳು ಅಲ್ಲಲ್ಲಿ ಹೀಗೆ ಕಂಡುಬರುತ್ತದೆ. ಇನ್ನು ಋಣ (ಸಾಲ) ಸಂಬಂಧವುಳ್ಳ ಪುತ್ರರ ವಿಷಯವನ್ನು ಹೇಳುತ್ತೇನೆ, ಕೇಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಮನೋಪಾಖ್ಯಾನವೆಂಬ
ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
## ॥ ದ್ವಾದಶೋಽಧ್ಯಾಯಃ ॥

**ಸುಮನೋವಾಚ**

**ಋಣಂ ಯಸ್ಯ ಗೃಹೀತ್ವಾ ಯಃ ಪ್ರಯಾತಿ ಮರಣಂ ಕಿಲ ।**
**ಅರ್ಥದಾತಾ ಸುತೋ ಭೂತ್ವಾ ಭ್ರಾತಾ ಚಾಥ ಪಿತಾ ಪ್ರಿಯಾ ॥ ೧ ॥**

**ಮಿತ್ರರೂಪೇಣ ವರ್ತೇತ ಹ್ಯತಿದುಷ್ಟಃ ಸದೈವ ಸಃ ।**
**ಗುಣಂ ನೈವ ಪ್ರಪಶ್ಯೇತ ಸ ಕ್ರೂರೋ ನಿಷ್ಠುರಾಕೃತಿಃ ॥ ೨ ॥**

**ಜಲ್ಪತೇ ನಿಷ್ಠುರಂ ವಾಕ್ಯಂ ಸದೈವ ಸ್ವಜನೇಷು ಚ ।**
**ಮಿಷ್ಟಂ ಮಿಷ್ಟಂ ಸಮಶ್ನಾತಿ ಭೋಗಾನ್ ಭುನಕ್ತಿ ನಿತ್ಯಶಃ ॥ ೩ ॥**

---

## ಹನ್ನೆರಡನೆಯ ಅಧ್ಯಾಯವು.

೧. ಸುಮನೆಯು ಹೇಳುತ್ತಾಳೆ:-ಯಾವನು ತನ್ನ ಋಣವನ್ನು (ಸಾಲವನ್ನು) ತೀರಿಸದೆ ಮರಣವನ್ನು ಹೊಂದುತ್ತಾನೋ, ಅವನಿಗೆ ಮುಂದಿನ ಜನ್ಮದಲ್ಲಿ ದುಡ್ಡು ಕೊಟ್ಟವನು ಮಗನಾಗಿ, ಅಥವಾ ಸೋದರನಾಗಿ ಹುಟ್ಟುವನು. ಅಥವಾ ತಂದೆ, ತಾಯಿ, ಹೆಂಡತಿಯೇ ಮೊದಲಾದ ರೂಪದಿಂದಲಾದರೂ ಜನಿಸುವನು.

೨-೩. ಹಾಗೆಯೇ ಮಿತ್ರರೂಪದಿಂದ ಜನಿಸುವುದೂ ಉಂಟು. ಈರೀತಿ ಜನಿಸಿದಾಗ ಆವನು ಯಾವಾಗಲೂ ಅತಿ ದುಷ್ಟನಾಗಿಯೂ, ಗುಣಹೀನನಾಗಿಯೂ ಕ್ರೂರಿಯಾಗಿಯೂ ಇರುವುದಲ್ಲದೆ ಯಾವಾಗಲೂ ಸ್ವಜನರಲ್ಲಿ ನಿಷ್ಠುರವಾದ ಮಾತುಗಳನ್ನು ಆಡುತ್ತಾನೆ. ನಿತ್ಯವೂ ಒಳ್ಳೆಒಳ್ಳೆಯ ಊಟಗಳನ್ನೇ ಮಾಡುತ್ತಾನೆ. ಒಳ್ಳೆಯ ಭೋಗಗಳನ್ನೇ ಅನುಭವಿಸುತ್ತಾನೆ.

ದ್ಯೂತಕರ್ಮರತೋ ನಿತ್ಯಂ ಚೌರಕರ್ಮಣಿ ಸಸ್ಪೃಹಃ ।
ಗೃಹದ್ರವ್ಯಂ ಬಲಾದ್ಭುಂಕ್ತೇ ವಾರ್ಯಮಾಣಃ ಸ ಕುಪ್ಯತಿ ॥ ೪ ॥

ಪಿತರಂ ಮಾತರಂ ಚೈವ ಕುತ್ಸತೇ ಚ ದಿನೇ ದಿನೇ ।
ದ್ರಾವಕಸ್ತ್ರಾಸಕಶ್ಚೈವ ಬಹುನಿಷ್ಠುರಜಲ್ಪಕಃ ॥ ೫ ॥

ಏವಂ ಭುಕ್ತ್ವಾಥ ತದ್ದ್ರವ್ಯಂ ಸುಖೇನ ಸಂಪ್ರತಿಷ್ಠತಿ ।
ಜಾತಕರ್ಮಾದಿಭಿರ್ಬಾಲ್ಯೈರ್ದ್ರವ್ಯಂ ಗೃಹ್ಣಾತಿ ದಾರುಣಃ
ಪುನರ್ವಿವಾಹಸಂಬಂಧಾನ್ನಾನಾಭೇದೈರನೇಕಧಾ ॥ ೬ ॥

ಏವಂ ಸಂಜಾಯತೇ ದ್ರವ್ಯಮೇವಮೇತದ್ದದಾತ್ಯಪಿ ।
ಗೃಹಕ್ಷೇತ್ರಾದಿಕಂ ಸರ್ವಂ ಮಮೈವ ಹಿ ನ ಸಂಶಯಃ ॥ ೭ ॥

ಪಿತರಂ ಮಾತರಂ ಚೈವ ಹಿನಸ್ತ್ಯೇವ ದಿನೇ ದಿನೇ ।
ಸುದಂಡೈರ್ಮುಸಲೈಶ್ಚೈವ ಸರ್ವಘಾತೈಸ್ತು ದಾರುಣೈಃ ॥ ೮ ॥

---

೪-೬. ಯಾವಾಗಲೂ ಜೂಜಾಡುವುದು, ಕಳ್ಳತನದಲ್ಲಿ ಆಸಕ್ತಿಯು, ಮನೆಯ ಹಣವನ್ನೇ ಬಲಾತ್ಕಾರದಿಂದ ದುಂದುವೆಚ್ಚಕ್ಕಾಗಿ ಅಪಹರಿಸುವುದು, ತಡೆದರೆ ಕೋಪ ಗೊಳ್ಳುವುದು, ತಾಯಿ ತಂದೆಗಳನ್ನು ಪ್ರತಿದಿನವೂ ತಿರಸ್ಕರಿಸಿ ಅವಮಾನಪಡಿಸುವುದು, ಜನರನ್ನು ತೊಂದರೆಪಡಿಸುವುದು, ಹೆದರಿಸುವುದು, ಬಹಳ ನಿಷ್ಠುರ ಮಾತನಾಡುವುದು ಮೊದಲಾದ ಕೆಟ್ಟ ನಡತೆಗಳಿಂದ ಹಿಂದಿನಜನ್ಮದಲ್ಲಿ ತನ್ನ ಸಾಲವನ್ನು ತೀರಿಸದೆ ಮೃತನಾಗಿ ಈ ಜನ್ಮದಲ್ಲಿ ತನಗೆ ತಂದೆಯಾಗಿರುವವನಿಗೆ ಮನೋವ್ಯಥೆಯನ್ನು ಉಂಟು ಮಾಡುತ್ತಾ ಅವನ ದ್ರವ್ಯವನ್ನು ನಾನಾವಿಧವಾಗಿ ವ್ಯಯಮಾಡಿಸಿ, ತಾನು ಸುಖ ವಾಗಿರುತ್ತಾನೆ. ಜಾತಕರ್ಮವೇ ಮೊದಲಾದವುಗಳಿಗೋಸ್ಕರ ಬಾಲ್ಯದಲ್ಲಿ ದುಡ್ಡನ್ನು ಖರ್ಚುಮಾಡಿಸುತ್ತಾನೆ. ಆಮೇಲೆ ಮದುವೆಯ ಸಂಬಂಧದಿಂದಲೂ, ನಾನಾರೀತಿ ಯಿಂದಲೂ ಹಣವನ್ನು ಅಪಹರಿಸುತ್ತಾನೆ.

೭. ಈರೀತಿಯಾಗಿ ಕೊನೆಗೆ ತಾನೇ ದುಡ್ಡನ್ನು ಸ್ವಾಧೀನಮಾಡಿಕೊಂಡು ತಾನೂ ಹಾಗೆಯೇ ಕೊಡುತ್ತಾನೆ. ಮನೆ, ಹೊಲ, ಗದ್ದೆಗಳೆಲ್ಲವೂ ತನ್ನದೆನ್ನುತ್ತಾನೆ.

೮. ತಾಯಿ ತಂದೆಗಳನ್ನು ದಿನದಿನವೂ ಹಿಂಸಿಸುತ್ತಾನೆ. ದೊಣ್ಣೆಗಳಿಂದಲೂ, ಒನಕೆಗಳಿಂದಲೂ, ಇನ್ನೂ ಕ್ರೂರವಾದ ಆಯುಧಗಳಿಂದಲೂ ಹೊಡೆಯುತ್ತಾನೆ.

ಮೃತೇ ತು ತಸ್ಮಿನ್ಪಿತರಿ ಮಾತರ್ಯೇವಾತಿನಿಷ್ಠುರಃ ।
ನಿಃಸ್ನೇಹೋ ನಿಷ್ಠುರಶ್ಚೈವ ಜಾಯತೇ ನಾತ್ರಸಂಶಯಃ ॥ ೯ ॥

ಶ್ರಾದ್ಧಕರ್ಮಾಣಿ ದಾನಾನಿ ನ ಕರೋತಿ ಕದೈವ ಸಃ ।
ಏವಂವಿಧಾಶ್ಚ ವೈ ಪುತ್ರಾಃ ಪ್ರಭವಂತಿ ಮಹೀತಲೇ ॥ ೧೦ ॥

ರಿಪುಂ ಪುತ್ರಂ ಪ್ರವಕ್ಷ್ಯಾಮಿ ತವಾಗ್ರೇ ದ್ವಿಜಪುಂಗವ ।
ಬಾಲ್ಯೇ ವಯಸಿ ಸಂಪ್ರಾಪ್ತೇ ರಿಪುತ್ವೇ ವರ್ತತೇ ಸದಾ ॥ ೧೧ ॥

ಪಿತರಂ ಮಾತರಂ ಚೈವ ಕ್ರೀಡಮಾನೋ ಹಿ ತಾಡಯೇತ್ ।
ತಾಡಯಿತ್ವಾ ಪ್ರಯಾತ್ಯೇವ ಪ್ರಹಸ್ಯೈವ ಪುನಃ ಪುನಃ ॥ ೧೨ ॥

ಪುನರಾಯಾತಿ ಸಂತ್ರಸ್ತಃ ಪಿತರಂ ಮಾತರಂ ಪ್ರತಿ ।
ಸಕ್ರೋಧೋ ವರ್ಧತೇ ನಿತ್ಯಂ ವೈರಕರ್ಮಣಿ ಸರ್ವದಾ ॥ ೧೩ ॥

ಪಿತರಂ ಮಾರಯಿತ್ವಾ ಚ ಮಾತರಂ ಚ ತತಃ ಪುನಃ ।
ಪ್ರಯಾತ್ಯೇವಂ ಸುದುಷ್ಟಾತ್ಮಾ ಪೂರ್ವವೈರಾನುಭಾವತಃ ॥ ೧೪ ॥

---

೯. ತಂದೆ ಸತ್ತರೆ ತಾಯಿಯ ಮೇಲೆಯೇ ತನ್ನ ಕಾಠಿಣ್ಯವನ್ನು ತೋರಿಸುತ್ತಾನೆ. ಸ್ನೇಹಹೀನನೂ, ನಿಷ್ಠುರನೂ ಆಗುತ್ತಾನೆ.

೧೦. ಶ್ರಾದ್ಧಕಾಲದಲ್ಲೂ ಕೂಡ ಪಿತೃಪ್ರೀತ್ಯರ್ಥವಾಗಿ ದಾನಗಳನ್ನು ಮಾಡುವುದೇಯಿಲ್ಲ. ಈರೀತಿಯಾದ ದುಷ್ಟಮಕ್ಕಳು ಹುಟ್ಟುತ್ತಾರೆ.

೧೧. ಎಲೈ ಬ್ರಾಹ್ಮಣನೇ, ಮಗನೇ ಒಂದುವಿಧದಲ್ಲಿ ಶತ್ರುವೆಂದು ಹೇಳುತ್ತೇನೆ. ಬಾಲ್ಯವಯಸ್ಸಿನಲ್ಲೂ ಶತ್ರುವಿನಂತೆ ನಡೆಯುತ್ತಾನೆ.

೧೨. ಆಟವಾಡುತ್ತಲೇ ತಾಯಿತಂದೆಗಳನ್ನು ಹೊಡೆಯುತ್ತಾನೆ. ಹೊಡೆದು ಹೊಡೆದು ನಗುತ್ತಾ ಹೊರಟುಹೋಗುತ್ತಾನೆ.

೧೩. ಹೆದರಿಕೊಂಡು ತಿರುಗಿ ತಾಯಿತಂದೆಗಳಹತ್ತಿರ ಬರುತ್ತಾನೆ. ವೈರ ಮಾಡಿಕೊಂಡು ಯಾವಾಗಲೂ ಕೋಪವಾಗಿಯೇ ಇರುತ್ತಾನೆ.

೧೪. ಆ ದುಷ್ಟಾತ್ಮನು ಹಿಂದಿನ ವೈರದಿಂದ ತಂದೆಯನ್ನು ಕೊಂದು, ತಾಯಿಯನ್ನೂ ಹಿಂಸಿಸಲು ಬರುತ್ತಾನೆ. ಇವೆಲ್ಲವೂ ದುಷ್ಟಪುತ್ರರ ಸ್ವಭಾವಗಳು.

**ಅಥಾತಃ ಸಂಪ್ರವಕ್ಷ್ಯಾಮಿ ಯಸ್ಮಾಲ್ಲಭ್ಯಂ ಭವೇತ್ಪ್ರಿಯಂ ।**
**ಮಾತರಂ ಚ ಪ್ರಿಯಂ ಕುರ್ಯಾದ್ಬಾಲ್ಯೇ ಲಾಲನಮಾನನೈಃ ॥ ೧೫ ॥**

**ವಯಃ ಪ್ರಾಪ್ಯ ಪ್ರಿಯಂ ಕುರ್ಯಾನ್ಮಾತಾಪಿತ್ರೋರನಂತರಂ ।**
**ಭಕ್ತ್ಯಾ ಸಂತೋಷಯೇನ್ನಿತ್ಯಂ ತಾವುಭೌ ಪರಿತೋಷಯೇತ್ ॥ ೧೬ ॥**

**ಸ್ನೇಹೇನ ವಚಸಾ ಚೈವ ಪ್ರಿಯಸಂಭಾಷಣೇನ ಚ ।**
**ಮೃತೇ ಗುರೌ ಸಮಾಜ್ಞಾಯ ಸ್ನೇಹೇನ ರುದತೇ ಪುನಃ ॥ ೧೭ ॥**

**ಶ್ರಾದ್ಧಕರ್ಮಾಣಿ ಸರ್ವಾಣಿ ಪಿಂಡದಾನಾದಿಕಾಂ ಕ್ರಿಯಾಂ ।**
**ಕರೋತ್ಯೇವ ಸುದುಃಖಾರ್ತಸ್ತೇಭ್ಯೋ ಯಾತ್ರಾಂ ಪ್ರಯಚ್ಛತಿ ॥ ೧೮ ॥**

**ಋಣತ್ರಯಾನ್ವಿತಃ ಸ್ನೇಹಾತ್ ಭುಂಜಾಪಯತಿ ನಿತ್ಯಶಃ ।**
**ಯಸ್ಮಾಲ್ಲಭ್ಯಂ ಭವೇತ್ಕಾಂತ ಪ್ರಯಚ್ಛತಿ ನ ಸಂಶಯಃ ॥ ೧೯ ॥**

---

೧೫. ಇನ್ನು ಮುಂದೆ ಎಂತಹ ಪುತ್ರನಿಂದ ಸುಖವು ಉಂಟಾಗುತ್ತದೆಂಬುದನ್ನು ಹೇಳುತ್ತೇನೆ. ಸುಪುತ್ರನಾದವನು ಬಾಲ್ಯದಲ್ಲಿಯೇ ಲಾಲನ ಪಾಲನಗಳಿಂದ ತಾಯಿಯನ್ನು ಪ್ರೀತಿವಂತಳನ್ನಾಗಿ ಮಾಡಿಕೊಳ್ಳಬೇಕು.

೧೬. ವಯಸ್ಸು ಬಂದಮೇಲೆ ತಾಯಿತಂದೆಗಳಿಗೆ ಒಳ್ಳೆಯದನ್ನು ಮಾಡಬೇಕು. ಭಕ್ತಿಯಿಂದ ಯಾವಾಗಲೂ ಅವರಿಬ್ಬರನ್ನೂ ಸಂತೋಷಪಡಿಸಬೇಕು. ಅಂತಹ ಪುತ್ರನು,

೧೭. ಸ್ನೇಹದಿಂದಲೂ, ಮಾತಿನಿಂದಲೂ, ಪ್ರಿಯಾಲಾಪಗಳಿಂದಲೂ ಇದ್ದು, ತಾಯಿತಂದೆಗಳು ಮೃತರಾಗಲು ಅವರಮೇಲಿನ ಸ್ನೇಹದಿಂದ ದುಃಖಿಸುತ್ತಾನೆ.

೧೮. ಶ್ರಾದ್ಧಕರ್ಮದಲ್ಲಿ ಪಿಂಡದಾನಾದಿ ಕ್ರಿಯೆಗಳನ್ನು ಮಾಡುತ್ತಾನೆ. ಅವರಿಗಾಗಿ ಬಹುದುಃಖಪಡುತ್ತಾನೆ. ಅವರಿಗೋಸ್ಕರ ಯಾತ್ರೆಗಳನ್ನು ಮಾಡುತ್ತಾನೆ.

೧೯. ದೇವ, ಋಷಿ, ಪಿತೃ, ಎಂಬ ಋಣತ್ರಯಕ್ಕೆ ಬದ್ಧನಾಗಿ ನಿತ್ಯವೂ, ಭೋಜನಾದಿಗಳಿಂದ ಅವರನ್ನು ತೃಪ್ತಿಪಡಿಸುತ್ತಾನೆ. ಅವನಿಗೆ ಯಾವುದರಿಂದ ಸುಖವು ಉಂಟಾಗುತ್ತದೆಯೋ ಅದೆಲ್ಲವನ್ನೂ ಮಾಡುತ್ತಾನೆ.

**ಪುತ್ರೋ ಭೂತ್ವಾ ಮಹಾಪ್ರಾಜ್ಞ ಅನೇನ ವಿಧಿನಾ ಕಿಲ ।**
**ಉದಾಸೀನಂ ಪ್ರವಕ್ಷ್ಯಾಮಿ ತವಾಗ್ರೇ ಪ್ರಿಯ ಸಾಂಪ್ರತಂ ॥ ೨೦ ॥**

**ಉದಾಸೀನೇನ ಭಾವೇನ ಸದೈವ ಪರಿವರ್ತತೇ ।**
**ದದಾತಿ ನೈವ ಗೃಹ್ಣಾತಿ ನ ಚ ಕುಪ್ಯತಿ ತುಷ್ಯತಿ ॥ ೨೧ ॥**

**ನೋ ವಾ ದದಾತಿ ಸಂತ್ಯಜ್ಯ ಹ್ಯುದಾಸೀನೋ ದ್ವಿಜೋತ್ತಮ ।**
**ತವಾಗ್ರೇ ಕಥಿತಂ ಸರ್ವಂ ಪುತ್ರಾಣಾಂ ಗತಿರೀದೃಶೀ ॥ ೨೨ ॥**

**ಯಥಾ ಪುತ್ರಾಸ್ತಥಾ ಭಾರ್ಯಾ ಪಿತಾ ಮಾತಾಽಥ ಬಾಂಧವಾಃ ।**
**ಭೃತ್ಯಾಶ್ಚಾನ್ಯೇ ಸಮಾಖ್ಯಾತಾಃ ಪಶವಸ್ತುರಗಾಸ್ತಥಾ ॥ ೨೩ ॥**

**ಗಜಾ ಮಹಿಷ್ಯೋ ದಾಸಾಶ್ಚ ಋಣಸಂಬಂಧಿನಸ್ತ್ವಮೀ ।**
**ಗೃಹೀತಂ ನ ಋಣಂ ತೇನ ಆವಾಭ್ಯಾಂ ತು ನ ಕಸ್ಯಚಿತ್ ॥ ೨೪ ॥**

**ನ್ಯಾಸಶ್ಚೈವ ನ ಕಸ್ಯಾಪಿ ಹೃತೋ ವೈ ಪೂರ್ವಜನ್ಮನಿ ।**
**ಧಾರಯಾವೋ ನ ಕಸ್ಯಾಪಿ ಋಣಂ ಕಾಂತ ಶೃಣುಷ್ವ ಹಿ ॥ ೨೫ ॥**

**ನ ವೈರಮಸ್ತಿ ಕೇನಾಪಿ ಪೂರ್ವಜನ್ಮನಿ ವೈ ಕೃತಂ ।**
**ಆವಾಭ್ಯಾಂ ಹಿ ನ ವಿಪ್ರೇಂದ್ರ ಗೃಹೀತಂ ಕಸ್ಯಚಿತ್ಪತೇ ॥ ೨೬ ॥**

೨೦-೨೨. ಮಗನಾಗಿ ಈ ವಿಧಿಯಿಂದ ಎಲ್ಲವನ್ನೂ ಮಾಡುತ್ತಾನೆ. ಇನ್ನು ಮುಂದೆ ಉದಾಸೀನನಾದ ಮಗನ ವಿಷಯವನ್ನು ಹೇಳುತ್ತೇನೆ ಅಂತಹ ಪುತ್ರನು ಯಾವಾಗಲೂ ಉದಾಸೀನನಾಗಿರುತ್ತಾನೆ. ಕೊಡುವುದೂಇಲ್ಲ, ತೆಗೆದುಕೊಳ್ಳುವುದೂ ಇಲ್ಲ; ಕೋಪಗೊಳ್ಳುವುದೂಇಲ್ಲ, ಸಂತೋಷಪಡುವುದೂಇಲ್ಲ, ಯಾವುದೂ ಇಲ್ಲದೆ ಉದಾಸೀನನಾಗಿರುತ್ತಾನೆ ಈರೀತಿ ಮಕ್ಕಳಸ್ಥಿತಿ ಇರುವುದು ಇವೆಲ್ಲವನ್ನೂ ಹೇಳಿದ್ದೇನೆ.

೨೩-೨೪. ಈರೀತಿ ಪುತ್ರ, ಹೆಂಡತಿ, ತಂದೆ, ತಾಯಿ, ಬಾಂಧವರು, ಭೃತ್ಯರು, ಪಶುಗಳು, ಆನೆಗಳು, ಎಮ್ಮೆಗಳೂ, ದಾಸರೂ, ಇವರೆಲ್ಲರೂ, ಋಣಸಂಬಂಧಿಗಳು. ನಾವುಗಳು ಯಾರ ಋಣವನ್ನೂ ತಿಂದಿಲ್ಲ. ನಮ್ಮ ಋಣವನ್ನೂ ಯಾರೂ,ತಿಂದಿಲ್ಲ.

೨೫. ಯಾವನ ಋಣವನ್ನೂ ಅಪಹರಿಸಿಲ್ಲ, ಯಾವನಿಗೂ ಕೊಡಬೇಕಾಗಿಲ್ಲ,

೨೬. ಯಾರೊಡನೆಯೂ ನಾವು ವೈರಮಾಡಿಕೊಂಡಿಲ್ಲ. ಪೂರ್ವಜನ್ಮದಲ್ಲೂ, ಮಾಡಿಕೊಂಡಿಲ್ಲ. ನಾವಿಬ್ಬರೂ ಯಾರೊಬ್ಬರ ಸ್ವತ್ತನ್ನೂ ತೆಗೆದುಕೊಂಡಿಲ್ಲ.

ಏವಂ ಜ್ಞಾತ್ವಾ ಶಮಂ ಗಚ್ಛ ತ್ಯಜ ಚಿಂತಾಮನರ್ಥಿಕಾಂ ।
ಕಸ್ಯ ಪುತ್ರಾಃ ಪ್ರಿಯಾ ಭಾರ್ಯಾಃ ಕಸ್ಯ ಸ್ವಜನಬಾಂಧವಾಃ ॥ ೨೭ ॥

ಹೃತಂ ನ ಚೈವ ಕಸ್ಯಾಪಿ ನೈವ ದತ್ತಂ ತ್ವಯಾ ಪುನಃ ।
ಕಥಂ ಹಿ ಧನಮಾಯಾತಿ ವಿಸ್ಮಯಂ ವ್ರಜ ಮಾ ಧವ ॥ ೨೮ ॥

ಪ್ರಾಪ್ತವ್ಯಮೇವ ಯಸ್ಯೈವ ಭವೇದ್ದ್ರವ್ಯಂ ದ್ವಿಜೋತ್ತಮ ।
ಅನಾಯಾಸೇನ ಹಸ್ತೇನ ತಸ್ಯೈವ ಪರಿಜಾಯತೇ ॥ ೨೯ ॥

ಯತ್ನೇನ ಮಹತಾ ಚೈತದ್ದ್ರವ್ಯಂ ರಕ್ಷತಿ ಮಾನವಃ ।
ವ್ರಜಮಾನೇ ವ್ರಜತ್ಯೇವ ತಂ ವಿನಾ ಹಿ ನ ತಿಷ್ಠತಿ ॥ ೩೦ ॥

ಏವಂ ಜ್ಞಾತ್ವಾ ಶಮಂ ಗಚ್ಛ ಜಹಿ ಚಿಂತಾಮನರ್ಥಿಕಾಂ ।
ಮಹಾಮೋಹೇನ ಸಂಮೂಢಾ ಮಾನವಾಃ ಪಾಪಚೇತಸಃ ॥ ೩೧ ॥

---

೨೭. ಅನರ್ಥವಾದ ಚಿಂತೆಯನ್ನು ಬಿಡು. ಮಕ್ಕಳಾರು ? ಹೆಂಡತಿ, ಸ್ವಜನ ಬಾಂಧವರು ಯಾರು ? ಯಾರಿಗೆ ಯಾರು ? ಹೀಗೆ ತಿಳಿದು ಶಮವನ್ನು (ಮನಶ್ಶಾಂತಿಯನ್ನು)ಹೊಂದು.

೨೮. ಪೂರ್ವಜನ್ಮದಲ್ಲಿ ಯಾವನ ಧನವನ್ನೂ ಕದಿಯಲಿಲ್ಲ. ಯಾರಿಗೂ ಧನವನ್ನೂ ಕೊಡಲಿಲ್ಲ. ನಮಗೆ ಧನವು ಹೇಗೆ ಬರುತ್ತದೆ? ಈ ವಿಷಯದಲ್ಲಿ ಆಶ್ಚರ್ಯಪಡಬೇಕಾದ ಕಾರಣವಿಲ್ಲ.

೨೯. ಯಾವನಿಗೆ ದುಡ್ಡು ಲಭ್ಯವೋ ಅವನಿಗೆ ಧನವು ಲಭಿಸುತ್ತವೆ. ಅನಾಯಾಸವಾಗಿ ಅವನ ಕೈಯಿಗೇ ಹಣವು ಬರುತ್ತದೆ.

೩೦. ಮನುಷ್ಯನು ಬಹು ಪ್ರಯತ್ನದಿಂದ ಹಣವನ್ನು ಸಂಪಾದಿಸಿ ಅದನ್ನು ಕಾಪಾಡುತ್ತಾನೆ. ದ್ರವ್ಯವು ಸಿಕ್ಕುವ ಯೋಗವಿದ್ದರೆ ಸಿಕ್ಕಿಯೇ ಸಿಕ್ಕುತ್ತದೆ. ಇಲ್ಲದಿದ್ದರೆ ಇಲ್ಲವೇ ಇಲ್ಲ.

೩೧. ಈರೀತಿ ತಿಳಿದು ಶಮವನ್ನು ಹೊಂದು. ಅನರ್ಥಕಾರಿಯಾದ ಚಿಂತೆಯನ್ನು ಬಿಡು. ಮನುಷ್ಯರು ಪಾಪಬುದ್ಧಿಯುಳ್ಳವರು, ಮಹಾ ಮೋಹದಿಂದ ಯುಕ್ತಾಯುಕ್ತ ವಿವೇಚನೆಯಿಲ್ಲದವರು.

ಇದಂ ಗೃಹಮಯಂ ಪುತ್ರ ಇಮಾ ನಾರ್ಯೋ ಮಮೈವ ಹಿ ।
ಅನೃತಂ ದೃಶ್ಯತೇಕಾಂತ ಸಂಸಾರಸ್ಯ ಹಿ ಬಂಧನಂ ॥ ೩೨ ॥

ಏವಂ ಸಂಬೋಧಿತೋ ದೇವ್ಯಾ ಭಾರ್ಯಯಾ ಪ್ರಿಯಯಾ ತದಾ ।
ಪುನಃ ಪ್ರಾಹ ಪ್ರಿಯಾಂ ಭಾರ್ಯಾಂ ಸುಹಿತಾಂ ಜ್ಞಾನವಾದಿನೀಂ ॥ ೩೩ ॥

॥ ಸೋಮಶರ್ಮೋವಾಚ ॥

ಸತ್ಯಮುಕ್ತಂ ತ್ವಯಾ ಭದ್ರೇ ಸರ್ವಸಂದೇಹನಾಶನಂ ।
ತಥಾಽಪಿ ವಂಶಮಿಚ್ಛಂತಿ ಸಾಧವಃ ಸತ್ಯಪಂಡಿತಾಃ ॥ ೩೪ ॥

ಯಥಾ ಪುತ್ರಸ್ಯ ಮೇ ಚಿಂತಾ ಧನಸ್ಯ ಚ ತಥಾ ಪ್ರಿಯೇ ।
ಯೇನ ಕೇನಾಪ್ಯುಪಾಯೇನ ಪುತ್ರಮುತ್ಪಾದಯಾಮ್ಯಹಂ ॥ ೩೫ ॥

॥ ಸುಮನೋವಾಚ ॥

ಪುತ್ರೇಣ ಲೋಕಾನ್ ಜಯತಿ ಪುತ್ರಸ್ತಾರಯತೇ ಕುಲಂ ।
ಸತ್ಪುತ್ರೇಣ ಮಹಾಭಾಗ ಪಿತಾ ಮಾತಾ ಚ ಜಂತವಃ ॥ ೩೬ ॥

---

೩೨. ಈ ಮನೆಯು ನನ್ನದು, ಈ ಹೆಂಡತಿಯು, ಈ ಹೆಂಗಸರು, ನನ್ನವರು ಎಂದು ತೋರುವುದೆಲ್ಲಾ ಸತ್ಯವಲ್ಲ. ಕೇವಲ ಭ್ರಾಂತಿಯು. ಇದೇ ಸಂಸಾರಬಂಧನದ ಮೂಲವು.

೩೩. ಪ್ರೀತಿಯುಕ್ತಳಾದ ಹೆಂದತಿಯು ಈರೀತಿಯಾಗಿ ಉಪದೇಶಿಸಲು, ಆ ಜ್ಞಾನವಾದಿನಿಯನ್ನು ಕುರಿತು ಸೋಮಶರ್ಮನು ಹೀಗೆ ಹೇಳಿದನು.

೩೪. ಸೋಮಶರ್ಮನು ಹೇಳುತ್ತಾನೆ:—ನೀನು ಹೇಳಿದ ಯುಕ್ತಿಯುಕ್ತವಾದ ವಿಷಯಗಳೆಲ್ಲವನ್ನೂ ಕೇಳಿದ್ದರಿಂದ ನನ್ನ ಸಂಶಯವು ನಾಶವಾಯಿತು. ಆದಾಗ್ಯೂ ಸಾಧುಗಳಾದ ಪಂಡಿತರು ತಮ್ಮ ವಂಶಾಭಿವೃದ್ಧಿಯನ್ನಪೇಕ್ಷಿಸುತ್ತಾರೆ.

೩೫. ನನಗೆ ಮಗನ ವಿಷಯದಲ್ಲಿರುವಂತೆಯೇ ಧನದ ವಿಷಯದಲ್ಲಿಯೂ, ಯೋಚನೆ ಇದೆ. ಹೇಗಾದರೂಮಾಡಿ ಮಗನನ್ನು ಪಡೆಯಲೇಬೇಕು.

೩೬. ಸುಮನಳು ಹೇಳುತ್ತಾಳೆ:—ಒಳ್ಳೆಯ ಮಗನಿಂದ ಲೋಕಗಳನ್ನು ಜಯಿಸುತ್ತಾನೆ. ಮಗನು ಕುಲವನ್ನು ಉದ್ಧಾರಮಾಡುತ್ತಾನೆ. ಸತ್ಪುತ್ರನಿಂದ ತಾಯಿ ತಂದೆಗಳು ಪ್ರಾಣಿವರ್ಗಕ್ಕೆ ಸೇರಿದವರೆನಿಸಿಕೊಳ್ಳುತ್ತಾರೆ.

**ಏಕಃ ಪುತ್ರೋ ವರಂ ವಿದ್ವಾನ್ ಬಹುಭಿರ್ನಿರ್ಗುಣೈಸ್ತು ಕಿಂ ।**
**ಏಕಸ್ತಾರಯತೆ ವಂಶಮನ್ಯೇ ಸಂತಾಪಕಾರಕಾಃ ॥ ೩೭ ॥**

**ಪೂರ್ವಮೇವ ಮಯಾ ಪ್ರೋಕ್ತಮನ್ಯೇ ಸಂಬಂಧಗಾಮಿನಃ ।**
**ಪುಣ್ಯೇನ ಪ್ರಾಪ್ಯತೇ ಪುತ್ರಃ ಪುಣ್ಯೇನ ಪ್ರಾಪ್ಯತೇ ಕುಲಂ ॥ ೩೮ ॥**

**ಸುಗರ್ಭಃ ಪ್ರಾಪ್ಯತೇ ಪುಣ್ಯೈಸ್ತಸ್ಮಾತ್ಪುಣ್ಯಂ ಸಮಾಚರ ।**
**ಜಾತಸ್ಯ ಮೃತ್ಯುರೇವಾಸ್ತಿ ಜನ್ಮ ಎವ ಮೃತಸ್ಯ ಚ ॥ ೩೯ ॥**

**ಸುಜನ್ಮ ಪ್ರಾಪ್ಯತೇ ಪುಣ್ಯೈರ್ಮರಣಂ ತು ತಥೈವ ಚ ।**
**ಸುಖಾನಾಂ ನಿಚಯಃ ಕಾಂತ ಭುಜ್ಯತೇ ಪುಣ್ಯಕರ್ಮಭಿಃ ॥ ೪೦ ॥**

**॥ ಸೋಮಶರ್ಮೋವಾಚ ॥**

**ಪುಣ್ಯಸ್ಯಾಽಚರಣಂ ಬ್ರೂಹಿ ತಥಾ ಜನ್ಮಾನ್ಯಪಿ ಪ್ರಿಯೇ ।**
**ಸುಪುಣ್ಯಃ ಕೀದೃಶೋ ಭದ್ರೇ ವದ ಪುಣ್ಯಸ್ಯ ಲಕ್ಷಣಂ ॥ ೪೧ ॥**

---

೩೭. ಯೋಗ್ಯನಾದ ಒಬ್ಬ ಮಗನಿದ್ದರೆ ಸಾಕು. ಗುಣಹೀನರಾದ ಬಹಳ ಮಂದಿಯಿಂದೇನು ಪ್ರಯೋಜನ? ವಂಶವನ್ನು ಉದ್ಧಾರಮಾಡಲು ಒಬ್ಬ ಪುತ್ರನೇ ಸಾಕು. ಮಿಕ್ಕವರು ದುಃಖವನ್ನು ಮಾತ್ರ ಕೊಡುತ್ತಾರೆ.

೩೮. ಮಿಕ್ಕವರೆಲ್ಲರೂ ಋಣಾದಿ ಸಂಬಂಧದಿಂದ ಪುತ್ರಭಾವವನ್ನು ಹೊಂದಿದವರೆಂದು ಮೊದಲೇ ಹೇಳಿದ್ದೇನೆ. ಪುಣ್ಯದಿಂದ ಒಳ್ಳೆಯಮಗನು ಹುಟ್ಟುತ್ತಾನೆ. ಪುಣ್ಯದಿಂದಲೇ ಸತ್ಕುಲವು ಸಿಕ್ಕುತ್ತದೆ.

೩೯. ಪುಣ್ಯದಿಂದ ಉತ್ತಮವಾದ ಗರ್ಭವು ಹುಟ್ಟುತ್ತದೆ. ಆದ್ದರಿಂದ ಪುಣ್ಯಮಾಡು. ಹುಟ್ಟಿದವನಿಗೆ ಸಾವೂ, ಸತ್ತವನಿಗೆ ಜನ್ಮವೂ, ಉಂಟು. ಇದು ನಿಶ್ಚಯವು.

೪೦. ಒಳ್ಳೆಯ ಜನ್ಮವೂ, ಸುಖಮರಣವೂ, ಪುಣ್ಯದಿಂದ ಮಾತ್ರ ಉಂಟಾಗುತ್ತದೆ. ಸುಖಾನುಭವವೂ, ಪುಣ್ಯದಿಂದಲೇ ಪ್ರಾಪ್ತವಾಗುವುದು.

೪೧. ಸೋಮಶರ್ಮನು ಹೇಳುತ್ತಾನೆ:—ಎಲೌ ಮಂಗಳಾಂಗಿ, ಪುಣ್ಯಾಚರಣೆಯ ವಿಷಯವನ್ನೂ, ಬೇರೆ ಜನ್ಮಗಳನ್ನೂ, ಕೂಡ ಹೇಳು. ಸುಪುಣ್ಯವೆಂಬುದು ಎಂಥಾದ್ದು? ಪುಣ್ಯದ ಲಕ್ಷಣಗಳೇನು? ಅದನ್ನು ಹೇಳು ಎಂದನು.

॥ ಸುಮನೋವಾಚ ॥

ಆದೌ ಪುಣ್ಯಂ ಪ್ರವಕ್ಷ್ಯಾಮಿ ಯಥಾ ಪೂರ್ವಂ ಶ್ರುತಂ ಮಯಾ ।
ಪುರುಷೋ ವಾಽಥ ವಾ ನಾರೀ ಯಥಾ ನಿತ್ಯಂ ಚ ವರ್ತತೇ ॥ ೪೨ ॥

ಯಥಾ ಪುಣ್ಯೈಃ ಸಮಾಪ್ನೋತಿ ಕೀರ್ತಿಂ ಪುತ್ರಾನ್ಪ್ರಿಯಾಂ ಧನಂ ।
ಪುಣ್ಯಸ್ಯ ಲಕ್ಷಣಂ ಕಾಂತ ಸರ್ವಮೇವ ವದಾಮ್ಯಹಂ ॥ ೪೩ ॥

ಬ್ರಹ್ಮಚರ್ಯೇಣ ತಪಸಾ ಮುಖಪಂಚಕವರ್ತನೈಃ ।
ದಾನೇನ ನಿಯಮೈಶ್ಚಾಪಿ ಕ್ಷಮಾಶೌಚೇನ ವಲ್ಲಭ ॥ ೪೪ ॥

ಅಹಿಂಸಯಾ ಸುಶಕ್ತ್ಯಾ ಚ ಹ್ಯಸ್ತೇಯೇನಾಪಿ ವರ್ತನೈಃ ।
ಏತೈರ್ದಶಭಿರಂಗೈಸ್ತು ಧರ್ಮಮೇವ ಪ್ರಪೂರಯೇತ್ ॥ ೪೫ ॥

ಸಂಪೂರ್ಣೋ ಜಾಯತೇ ಧರ್ಮೋ ಗ್ರಾಸೈರ್ಭೋಗೋ ಯಥೋದರೇ ।
ಧರ್ಮಂ ಸೃಜತಿ ಧರ್ಮಾತ್ಮಾ ತ್ರಿವಿಧೇನೈವ ಕರ್ಮಣಾ ॥ ೪೬ ॥

ತಸ್ಯ ಧರ್ಮಃ ಪ್ರಸನ್ನಾತ್ಮಾ ಪುಣ್ಯಮೇವಂ ತು ಪ್ರಾಪಯೇತ್ ।
ಯಂ ಯಂ ಚಿಂತಯತೇ ಪ್ರಾಜ್ಞಸ್ತಂ ತಂ ಪ್ರಾಪ್ನೋತಿ ದುರ್ಲಭಂ ॥೪೭॥

---

೪೨-೪೩. ಸುಮನಳು ಹೇಳುತ್ತಾಳೆ:—ನಾನು ಹಿಂದೆ ಕೇಳಿದ ರೀತಿಯಲ್ಲಿ ಮೊದಲು ಪುಣ್ಯವಿಷಯವನ್ನು ಹೇಳುತ್ತೇನೆ. ಹೆಂಗಸಾಗಲಿ, ಗಂಡಸಾಗಲಿ, ನಿತ್ಯವೂ ಹೇಗಿರಬೇಕೆಂಬುದನ್ನೂ, ಯಾವ ಪುಣ್ಯದಿಂದ ಪುತ್ರ, ಕೀರ್ತಿ, ಪ್ರಿಯೆ, ಧನಗಳನ್ನು ಹೊಂದಬಹುದೋ, ಅಂಥಾ ಪುಣ್ಯದ ಲಕ್ಷಣಗಳನ್ನೂ ಹೇಳುತ್ತೇನೆ, ಕೇಳು.

೪೪-೪೫. ಬ್ರಹ್ಮಚರ್ಯ, ತಪಸ್ಸು, ಪಂಚಯಜ್ಞಗಳು, ದಾನನಿಯಮಾದಿಗಳು, ಕ್ಷಮಾಶೌಚಗಳು, ಅಹಿಂಸೆ, ಶಕ್ತಿ, ಅಸ್ತೇಯ, ಎಂಬ ಈರೀತಿಯಾದ ಹತ್ತು ಒಗೆಯ ಅಂಗಗಳಿಂದ ಧರ್ಮವನ್ನು ಮಾಡಿದರೆ ಧರ್ಮವು ಪೂರ್ತಿಯಾಗುತ್ತದೆ.

೪೬. ಈರೀತಿ ಮಾಡಿದರೆ ಅನೇಕ ತುತ್ತುಗಳಿಂದ ಹೊಟ್ಟೆತುಂಬುವಂತೆ ಧರ್ಮವು ಸಂಪೂರ್ಣವಾಗುತ್ತದೆ. ಧರ್ಮಾತ್ಮನಾದವನು ಕಾಯಾ, ವಾಚಾ, ಮನಸಾ ಈ ಮೂರು ಬಗೆಯಿಂದಲೇ ಧರ್ಮವನ್ನು ಸಂಗ್ರಹಿಸುತ್ತಾನೆ.

೪೭. ಅವನಿಗೆ ಧರ್ಮವು ಪ್ರಸನ್ನವಾಗಿ ಪುಣ್ಯವನ್ನು ಕೊಡುತ್ತದೆ. ಆ ಪುಣ್ಯವು, ಮನುಷ್ಯನು ಯಾವುದನ್ನು ಅಪೇಕ್ಷಿಸುತ್ತಾನೋ, ಅದೆಲ್ಲವನ್ನೂ ಕೊಡುತ್ತದೆ.

॥ ಸೋಮಶರ್ಮೋವಾಚ ॥

ಕೀದೃಶೀ ಧರ್ಮಮೂರ್ತಿಃ ಸ್ಯಾತ್ಕಾನ್ಯಂಗಾನಿ ಚ ಭಾಮಿನಿ ।
ಪ್ರೀತ್ಯಾ ಕಥಯ ಮೇ ಕಾಂತೇ ಶ್ರೋತುಂ ಶ್ರದ್ಧಾ ಪ್ರವರ್ತತೇ ॥ ೪೮ ॥

॥ ಸುಮನೋವಾಚ ॥

ಲೋಕೇ ಧರ್ಮಸ್ಯ ವೈ ಮೂರ್ತಿಃ ಕೈರ್ದೃಷ್ಟಾ ನ ದ್ವಿಜೋತ್ತಮ ।
ಅದೃಶ್ಯವತ್ಸ್ವಾ ಸತ್ಯಾತ್ಮಾ ನ ದೃಷ್ಟೋ ದೇವದಾನವೈಃ ॥ ೪೯ ॥

ಅತ್ರಿವಂಶಸಮುತ್ಪನ್ನೋ ಯೋಽನಸೂಯಾತ್ಮಜೋ ದ್ವಿಜ ।
ತೇನ ದೃಷ್ಟಃ ಸ ವೈ ಧರ್ಮೋ ದತ್ತಾತ್ರೇಯೇಣ ವೈ ಸದಾ ॥ ೫೦ ॥

ದ್ವಾವೇತೌ ತು ಮಹಾತ್ಮಾನೌ ಕುರ್ವಾಣಾ ತಪ ಉತ್ತಮಂ ।
ಧರ್ಮೇಣ ವರ್ತಮಾನೌ ತೌ ತಪಸಾ ಚ ಬಲೇನ ಚ ॥ ೫೧ ॥

ಇಂದ್ರಾಧಿಕೇನ ರೂಪೇಣ ಪ್ರಶಸ್ತೇನ ಭವಿಷ್ಯತಃ ।
ದಶವರ್ಷಸಹಸ್ರಂ ತು ತಾವತ್ಕಾಲಂ ತಪೋಽರ್ಜಿತಂ ॥ ೫೨ ॥

---

೪೮. ಸೋಮಶರ್ಮನು ಹೇಳುತ್ತಾನೆ:—ಧರ್ಮಮೂರ್ತಿಯ ಸ್ವರೂಪವೆಂಥಾದ್ದು ? ಅದರ ಅಂಗಗಳೇನು ? ದಯನಿಟ್ಟು ನನಗೆ ಹೇಳು ಕೇಳಬೇಕೆಂಬ ಶ್ರದ್ಧೆಯಿದೆ.

೪೯. ಸುಮನೆಯು ಹೇಳುತ್ತಾಳೆ:—ಲೋಕದಲ್ಲಿ ಧರ್ಮದ ಮೂರ್ತಿಯನ್ನೆಲ್ಲರೂ ಬಲ್ಲರು. ಆದರೆ ಅದರ ಸ್ವರೂಪವನ್ನು ತಿಳಿಯುವುದು ಕಷ್ಟ. ಅಂತಹ ಧರ್ಮದ ಸತ್ಯಸ್ವರೂಪವನ್ನು, ದೇವದಾನವರೂ ಕೂಡ ಕೆಲವುವೇಳೆ ತಿಳಿಯಲಾರರು.

೫೦. ಅತ್ರಿವಂಶದಲ್ಲಿ ಹುಟ್ಟಿದ ಅನುಸೂಯೆಯ ಮಗನಾದ ದತ್ತಾತ್ರೇಯನು ಆ ಧರ್ಮದ ಸ್ವರೂಪವನ್ನು ಚೆನ್ನಾಗಿ ತಿಳಿದಿರುವನು.

೫೧-೫೨. ಅತ್ರಿಯ ಮಕ್ಕಳಾದ ದುರ್ವಾಸ, ದತ್ತಾತ್ರೇಯರು ತಮ್ಮ ಸಾಮರ್ಥ್ಯದಿಂದಲೂ, ಶಕ್ತಿಯಿಂದಲೂ ಉಗ್ರವಾದ ತಪಸ್ಸನ್ನು ಹತ್ತುಸಾವಿರ ವರ್ಷಗಳವರಿಗೂ ಮಾಡುತ್ತಿದ್ದರು. ಆ ಕಾಲದಲ್ಲಿ ಇವರು ಇಂದ್ರನಿಗಿಂತ ಹೆಚ್ಚಾದ ರೂಪದಿಂದ ಕೂಡಿದವರಾಗಿದ್ದರು.

ವಾಯುಭಕ್ಷೌ ನಿರಾಹಾರೌ ಸಂಜಾತೌ ಶುಭದರ್ಶನೌ ।
ದಶವರ್ಷಸಹಸ್ರಂ ತು ತಾವತ್ಕಾಲಂ ತಪೋಽರ್ಜಿತಂ ॥ ೫೩ ॥

ಸುಸಾಧ್ಯಮಾನಯೋಶ್ಚೈವ ತತ್ರ ಧರ್ಮಃ ಪ್ರದೃಶ್ಯತೇ।
ಪಂಚಾಗ್ನಿಃ ಸಾಧ್ಯತೇ ದ್ವಾಭ್ಯಾಂ ತಾವತ್ಕಾಲಂ ದ್ವಿಜೋತ್ತಮ ॥ ೫೪ ॥

ತ್ರಿಕಾಲಂ ಸಂಸ್ಥಿತೌ ತಾವನ್ನಿರಾಹಾರವ್ರತಂ ತಥಾ ।
ಜಲಮಧ್ಯೇ ಸ್ಥಿತೌ ತಾವದ್ದತ್ತಾತ್ರೇಯೋ ಯತಿಸ್ತಥಾ ॥ ೫೫ ॥

ದುರ್ವಾಸಾಸ್ತು ಮುನಿಶ್ರೇಷ್ಠಸ್ತಪಸಾ ಚೈವ ಕರ್ಷಿತಃ ।
ಧರ್ಮಂ ಪ್ರತಿ ಸ ಧರ್ಮಾತ್ಮಾ ಚುಕ್ರೋಧ ಮುನಿಪುಂಗವಃ ॥ ೫೬ ॥

ಕ್ರುದ್ಧೇ ಸತಿ ಮಹಾಭಾಗ ತಸ್ಮಿನ್ಮುನಿವರೇ ತದಾ ।
ಅಥ ಧರ್ಮಃ ಸಮಾಯಾತಃ ಸ್ವರೂಪೇಣ ದ್ವಿಜೋತ್ತಮ ॥ ೫೭ ॥

ಬ್ರಹ್ಮಚರ್ಯಾದಿಭಿರ್ಯುಕ್ತಸ್ತಪೋಭಿಶ್ಚ ಸ ಬುದ್ಧಿಮಾನ್ ।
ಸತ್ಯಂ ಬ್ರಾಹ್ಮಣರೂಪೇಣ ಬ್ರಹ್ಮಚರ್ಯಂ ತಥೈವ ಚ ॥ ೫೮ ॥

---

೫೩. ಆಹಾರವಿಲ್ಲದೆ ವಾಯುವನ್ನು ಮಾತ್ರ ಭಕ್ಷಿಸುತ್ತ ಪುನಃ ಹತ್ತುಸಾವಿರ ವರ್ಷಗಳವರೆಗೂ ತಪಸ್ಸನ್ನು ಮಾಡಿದರು.

೫೪. ಇಬ್ಬರೂ ಪಂಚಾಗ್ನಿಗಳ ಮಧ್ಯದಲ್ಲಿ ಧರ್ಮವು ತಮಗೆ ಪ್ರತ್ಯಕ್ಷವಾಗುವರೆಗೂ ತಪಸ್ಸನ್ನು ಮಾಡಿದರು.

೫೫. ತ್ರಿಕಾಲದಲ್ಲೂ ನಿರಾಹಾರವ್ರತದಿಂದ ಅವರ ಶರೀರವು ಬಹು ಕೃಶವಾಗಿದ್ದಿತು. ದತ್ತಾತ್ರೇಯನು ನೀರಿನ ಮಧ್ಯದಲ್ಲಿ ನಿಂತು ತಪಸ್ಸುಮಾಡಲು ಉಪಕ್ರಮಿಸಿದನು.

೫೬. ದುರ್ವಾಸನು ತಪಸ್ಸಿನಿಂದ ಬಹು ಕ್ಲೇಶಪಟ್ಟವನಾಗಿ ಧರ್ಮವು ಪ್ರತ್ಯಕ್ಷವಾಗದಿರಲು ಅದರ ಮೇಲೆ ಕೋಪಗೊಂಡನು.

೫೭-೫೮. ಆ ಮುನಿವರನು ಕೋಪಗೊಳ್ಳಲು ನಿಜರೂಪವನ್ನು ಧರಿಸಿ ಧರ್ಮದೇವತೆಯೇ ಅಲ್ಲಿಗೆ ಬಂದನು. ಅವನ ಜತೆಯಲ್ಲಿ ಬ್ರಹ್ಮಚರ್ಯ, ತಪಸ್ಸು ಇವುಗಳು ಮೂರ್ತಿಮತ್ತಾಗಿ ಅಲ್ಲಿಗೆ ಬಂದವು.

ತಪಸ್ತು ದ್ವಿಜವರ್ಯೋಽಸ್ತಿ ದಮಃ ಪ್ರಾಜ್ಞೋ ದ್ವಿಜೋತ್ತಮಃ ।
ನಿಯಮಸ್ತು ಮಹಾಪ್ರಾಜ್ಞೋ ದಾನಮೇವ ತಥೈವ ಚ ॥ ೫೯ ॥

ಅಗ್ನಿಹೋತ್ರಿಸ್ವರೂಪೇಣ ಹ್ಯಾತ್ರೇಯಂ ಹಿ ಸಮಾಗತಃ ।
ಕ್ಷಮಾ ಶಾಂತಿಸ್ತಥಾ ಲಜ್ಜಾ ಚಾಹಿಂಸಾ ಚ ಹ್ಯಕಲ್ಪನಾ ॥ ೬೦ ॥

ಏತಾಃ ಸರ್ವಾಃ ಸಮಾಯಾತಾ ಸ್ತ್ರೀರೂಪಾಸ್ತು ದ್ವಿಜೋತ್ತಮ ।
ಬುದ್ಧಿಃ ಪ್ರಜ್ಞಾ ದಯಾ ಶ್ರದ್ಧಾ ಮೇಧಾಸತ್ಕೃತಿಶಾಂತಯಃ ॥ ೬೧ ॥

ಪಂಚಾಗ್ನಯಸ್ತಥಾ ಪುಣ್ಯಾಃ ಸಾಂಗಾ ವೇದಾಸ್ತು ತೇ ತದಾ ।
ಸ್ವಸ್ವರೂಪಧರಾಶ್ಚೈತೇ ಸರ್ವೇ ಸಿದ್ಧಿಂ ಸಮಾಗತಾಃ ॥ ೬೨ ॥

ಅಗ್ನ್ಯಾಧಾನಾದಯಃ ಪುಣ್ಯಾ ಅಶ್ವಮೇಧಾದಯಸ್ತಥಾ ।
ರೂಪಲಾವಣ್ಯಸಂಯುಕ್ತಾಃ ಸರ್ವಾಭರಣಭೂಷಿತಾಃ ॥ ೬೩ ॥

ದಿವ್ಯಮಾಲಾಂಬರಧರಾ ದಿವ್ಯಗಂಧಾನುಲೇಪನಾಃ ।
ಕಿರೀಟಕುಂಡಲೋಪೇತಾ ದಿವ್ಯಾಭರಣಭೂಷಿತಾಃ ॥
ದೀಪ್ತಿಮಂತಃ ಸ್ವರೂಪಾಸ್ತೇ ತೇಜೋಜ್ವಾಲಾಭಿರಾವೃತಾಃ ॥ ೬೪ ॥

---

೫೯-೬೧. ಆ ಧರ್ಮದ ಜೊತೆಯಲ್ಲಿ, ಸತ್ಯ, ಬ್ರಹ್ಮಚರ್ಯ, ತಪಸ್ಸು, ದಮ, ನಿಯಮ, ದಾನ ಅಗ್ನಿಹೋತ್ರ ಇವುಗಳು ಬ್ರಾಹ್ಮಣವೇಷವನ್ನು ಧರಿಸಿಯೂ, ಕ್ಷಮಾ, ಶಾಂತಿ, ಲಜ್ಜೆ, ಅಹಿಂಸೆ, ಅಕಲ್ಪನೆ, ಬುದ್ಧಿ, ಪ್ರಜ್ಞೆ, ದಯೆ, ಶ್ರದ್ಧೆ, ಮೇಧೆ, ಸತ್ಕೃತಿ, ಶಾನ್ತಿ ಇವೆಲ್ಲವೂ ಸ್ತ್ರೀರೂಪವನ್ನು ಧರಿಸಿಯೂ ಅಲ್ಲಿಗೆ ಬಂದವು.

೬೨-೬೪. ಇವುಗಳಲ್ಲದೆ ಪಂಚಾಗ್ನಿಗಳು, ಪುಣ್ಯ, ವೇದಗಳು, ವೇದಾಂಗಗಳು ಇವುಗಳೂ ಅಗ್ನ್ಯಾಧಾನಗಳೂ, ಅಶ್ವಮೇಧಗಳೇ ಮೊದಲಾದ ಯಜ್ಞಗಳೂ ಸಹ ತಮ್ಮ ತಮ್ಮ ರೂಪಗಳನ್ನು ಧರಿಸಿ ಸರ್ವಾಭರಣಭೂಷಿತರಾಗಿ ದಿವ್ಯವಾದ ಮಾಲೆಯನ್ನು ಹಾಕಿಕೊಂಡು, ದಿವ್ಯಗಂಧವನ್ನು ಲೇಪನಮಾಡಿಕೊಂಡು, ಕಿರೀಟಕುಂಡಲಗಳನ್ನು ಧರಿಸಿ ಕಾಂತಿಯುಕ್ತರಾಗಿ ಅಲ್ಲಿಗೆ ಬಂದರು.

ಏವಂ ಧರ್ಮಃ ಸಮಾಯಾತಃ ಪರಿವಾರಸಮನ್ವಿತಃ ।
ಯತ್ರ ತಿಷ್ಠತಿ ದುರ್ವಾಸಾಃ ಕ್ರೋಧನಃ ಕಾಲವತ್ತಥಾ ॥ ೬೫ ॥

ಧರ್ಮ ಉವಾಚ

ಕಸ್ಮಾತ್ಕ್ರೋಪಃ ಕೃತೋ ವಿಪ್ರ ಭವಾಂಸ್ತಪಃಸಮನ್ವಿತಃ ।
ಕ್ರೋಧೋ ಹಿ ನಾಶಯೇಚ್ಛ್ರೇಯಸ್ತಪ ಏವ ನ ಸಂಶಯಃ ॥ ೬೬ ॥
ಸರ್ವನಾಶಕರಂ ತಸ್ಮಾತ್ಕ್ರೋಧಂ ತಪಸಿ ವರ್ಜಯೇತ್ ।
ಸ್ವಸ್ಥೋ ಭವ ದ್ವಿಜಶ್ರೇಷ್ಠ ಉತ್ಕೃಷ್ಟಂ ತಪಸಃ ಫಲಂ ॥ ೬೭ ॥

ದುರ್ವಾಸಾ ಉವಾಚ

ಭವಾನ್ ಕೋ ಹಿ ಸಮಾಯಾತ ಏತೈರ್ದ್ವಿಜವರೈಃ ಸಹ ।
ಏತಾ ನಾರ್ಯಃ ಪ್ರತಿಷ್ಠಂತಿ ಸುರೂಪಾಃ ಸಮಲಂಕೃತಾಃ ॥ ೬೮ ॥
ಕಥಯಸ್ವ ಮಮಾಗ್ರೇ ತ್ವಂ ವಿಸ್ತರೇಣ ಮಹಾಮತೇ ॥

ಧರ್ಮ ಉವಾಚ

ಅಯಂ ಬ್ರಾಹ್ಮಣರೂಪೇಣ ಸರ್ವತೇಜಃಸಮನ್ವಿತಃ
ದಂಡಹಸ್ತಃ ಸುಪ್ರಸನ್ನಃ ಕಮಂಡಲುಧರಸ್ತಥಾ ॥ ೬೯ ॥

---

೬೫. ಯಮನಂತೆ ಮಹಾಕೋಪಿಷ್ಠನಾದ ದುರ್ವಾಸನು ಇರುವ ಜಾಗಕ್ಕೆ ಈರೀತಿ ತನ್ನ ಪರಿವಾರಗಳಿಂದಕೂಡಿದ ಧರ್ಮನು ಬಂದು,

೬೬. ಧರ್ಮನು ಹೇಳಿದನು:—ತಪಸ್ವಿಯಾದ ನೀನು ಕೋಪವನ್ನೇಕೆ ಮಾಡಿದೆ? ಕೋಪವು ಶ್ರೇಯಸ್ಸನ್ನೂ, ತಪಸ್ಸನ್ನೂ ನಾಶಮಾಡುತ್ತದೆ.

೬೭. ಕೋಪವು ಸರ್ವನಾಶಕರವಾದುದು, ಆದ್ದರಿಂದ ಕೋಪವನ್ನು ತಪಸ್ವಿಗಳು ಬಿಡಬೇಕು. ನೀನು ನಿಶ್ಚಿಂತನಾಗಿರು. ನೀನು ಮಾಡಿದ ತಪಸ್ಸಿನ ಫಲವು ಸಮೀಪಿಸಿದೆ.

೬೮. ದುರ್ವಾಸನು ಹೇಳುತ್ತಾನೆ:—ಈ ಬ್ರಾಹ್ಮಣನೊಡನೆ ಬಂದಿರುವ ನೀನು ಯಾರು? ನಿನ್ನ ಜೊತೆಯಲ್ಲಿ ಅಲಂಕೃತರಾದ ಈ ಹೆಂಗಸರೂ ಇರುವರಲ್ಲ, ಇವರಾರು? ಎಲೈ ಮಹಾಮತಿಯೇ ಇವೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು ಎಂದನು.

೬೯. ಧರ್ಮನು ಹೇಳುತ್ತಾನೆ:—ಬ್ರಾಹ್ಮಣರೂಪವನ್ನು ಧರಿಸಿ ಸರ್ವತೇಜಸ್ಸಿನಿಂದಲೂ ಕೂಡಿ ಬ್ರಹ್ಮಚರ್ಯನು ಇಲ್ಲಿಗೆ ಬಂದಿರುವನು. ಇವನು ಕೈಲಿ ದಂಡವನ್ನು ಹಿಡಿದು, ಕಮಂಡಲವನ್ನು ಧರಿಸಿ ನಿನ್ನೆದುರಿಗೆ ಬಂದು ನಿಂತಿರುವನು. ಈತನನ್ನು ನೋಡು.

ತವಾಗ್ರೇ ಬ್ರಹ್ಮಚರ್ಯಾಖ್ಯಃ ಸೋಽಯಂ ಪಶ್ಯ ಸಮಾಗತಃ ।
ಅನ್ಯಂ ಪಶ್ಯ ತ್ವಮೇವಂ ಚ ದೀಪ್ತಿಮಂತಂ ದ್ವಿಜೋತ್ತಮಂ ॥ ೭೦ ॥

ಕಪಿಲಂ ಪಿಂಗಲಾಕ್ಷಂ ಚ ಸತ್ಯಮೇನಂ ದ್ವಿಜೋತ್ತಮ ।
ತಾದೃಶಂ ಪಶ್ಯ ಧರ್ಮಾತ್ಮನ್ ವೈಶ್ವದೇವಸಮಪ್ರಭಂ ॥ ೭೧ ॥

ಯತ್ತಪೋ ಹಿ ತ್ವಯಾ ವಿಪ್ರ ಸರ್ವದೈವ ಸಮಾಶ್ರಿತಂ ।
ಏನಂ ಪಶ್ಯ ಮಹಾಭಾಗ ತವ ಪಾರ್ಶ್ವಂ ಸಮಾಗತಂ ॥ ೭೨ ॥

ಪ್ರಸನ್ನವಾಕ್ ದೀಪ್ತಿಯುಕ್ತಃ ಸರ್ವಜೀವದಯಾಪರಃ ।
ದಮ ಏವ ತಥಾಽಽಯಾತೋ ಯಃ ಪೋಷಯತಿ ಸರ್ವದಾ ॥ ೭೩ ॥

ಜಟಿಲಃ ಕರ್ಕಶಃ ಪಿಂಗೋ ಹ್ಯತಿತೀವ್ರೋ ಮಹಾಪ್ರಭುಃ ।
ನಾಶಕೋ ಹಿ ಸ ಪಾಪಾನಾಂ ಖಡ್ಗಹಸ್ತೋ ದ್ವಿಜೋತ್ತಮಃ ॥ ೭೪ ॥

ದಮ ಏಷ ಸಮಾಯಾತಃ ಪಶ್ಯ ಪಶ್ಯ ದ್ವಿಜೋತ್ತಮಃ ।
ಅಭಿಶಾಂತೋ ಮಹಾಪುಣ್ಯೋ ನಿತ್ಯಕ್ರಿಯಾಸಮನ್ವಿತಃ ॥ ೭೫ ॥

---

೭೦. ತೇಜೋವಂತನಾಗಿ ಕಪಿಲಬಣ್ಣ, ಹೊಂಬಣ್ಣದ ಕಣ್ಣುಗಳುಳ್ಳ ಇವನೇ ಸತ್ಯನು,

೭೧. ಯಾವನನ್ನು ಉದ್ದೇಶಿಸಿ ಸರ್ವಕಾಲದಲ್ಲೂ ನೀನು ತಪಸ್ಸುಮಾಡು ತ್ತಿದ್ದೀಯೋ ಆ ಸತ್ಯನು ಇಲ್ಲಿಯೇ ಬಂದಿದ್ದಾನೆ. ನೋಡು.

೭೨-೭೪. ಮಹಾತೇಜಸ್ವಿಯಾದ ದಮನೂ ಇಲ್ಲಿಯೇ ಇರುವನು. ಇವನು ಸೌಮ್ಯವಾದ ಮಾತನ್ನಾಡುತ್ತಾ ಸರ್ವಪ್ರಾಣಿಗಳಲ್ಲಿಯೂ ದಯವನ್ನು ತೋರುತ್ತಿರು ವನು ಮತ್ತು ಇವನಿಗೆ ತಲೆಯಲ್ಲಿ ಜಟೆಯೂ, ಕೃಶವಾದ ಶರೀರವೂ ಇರುವುದು. ಹೊಂಬಣ್ಣದ ಶರೀರಕಾಂತಿಯಿಂದ ಬೆಳಗುತ್ತಾ ಜನರ ಪಾಪಗಳನ್ನು ನಾಶಮಾಡಲು ಕೈಯಲ್ಲಿ ಖಡ್ಗವನ್ನು ಧರಿಸಿರುವನು.

೭೫. ಇನ್ನು ಇಲ್ಲಿರುವ ನಿಯಮನು ಶಾಂತವಾಗಿಯೂ, ಪುಣ್ಯಶಾಲಿ ಯಾಗಿಯೂ, ನಿತ್ಯಕರ್ಮಗಳಿಂದ ಕೂಡಿಯೂ ಇರುವನು.

ನಿಯಮಸ್ತು ಸಮಾಯಾತಸ್ತವ ಪಾರ್ಶ್ವೇ ದ್ವಿಜೋತ್ತಮಃ ।
ಅತಿಶುಕ್ಲೋ ಮಹಾದೀಪ್ತಃ ಶುದ್ಧಸ್ಫಟಿಕಸನ್ನಿಭಃ ॥ ೭೬ ॥

ಪಯಃಕಮಂಡಲುಕರೋ ದಂತಕಾಷ್ಠಧರೋ ದ್ವಿಜಃ ।
ಶೌಚ ಏಷ ಸಮಾಯಾತೋ ಭವತಃ ಸಂನಿಧಾವಿಹ ॥ ೭೭ ॥

ಅತಿಸಾಧ್ವೀ ಮಹಾಭಾಗಾ ಸತ್ಯಭೂಷಣಭೂಷಿತಾ ।
ಸರ್ವಾಭರಣಶೋಭಾಂಗೀ ಶುಶ್ರೂಷೇಯಂ ಸಮಾಗತಾ ॥ ೭೮ ॥

ಅತಿಧೀರಾ ಪ್ರಸನ್ನಾಂಗೀ ಗೌರೀ ಪ್ರಹಸಿತಾನನಾ ।
ಪದ್ಮಹಸ್ತಾ ಇಯಂ ಧಾತ್ರೀ ಪದ್ಮನೇತ್ರಾ ಸುಪದ್ಮಿನೀ ॥ ೭೯ ॥

ದಿವ್ಯೈರಾಭರಣೈರ್ಯುಕ್ತಾ ಕ್ಷಮಾ ಪ್ರಾಪ್ತಾ ದ್ವಿಜೋತ್ತಮ ।
ಅತಿಶಾಂತಾ ಸುಪ್ರತಿಷ್ಠಾ ಬಹುಮಂಗಳಸಂಯುತಾಃ ॥ ೮೦ ॥

ದಿವ್ಯರತ್ನಕೃತಾಶೋಭಾ ದಿವ್ಯಾಭರಣಭೂಷಿತಾ ।
ತವ ಶಾಂತಿರ್ಮಹಾಪ್ರಾಜ್ಞ ಜ್ಞಾನರೂಪಾ ಸಮಾಗತಾ ॥ ೮೧ ॥

---

೭೬-೭೭. ಶೌಚನಿಗೆ ಬಹುಬೆಳ್ಳಗಿರುವ, ಸ್ಫಟಿಕದಂತೆ ಶುಭ್ರವಾದ ಶರೀರ ಕಾಂತಿ ಇರುವುದು. ಕೈಯಲ್ಲಿ ಹಾಲಿನ ಕಮಂಡಲುವನ್ನೂ, ದಂತಕಾಷ್ಠ (ಹಲ್ಲುಜ್ಜುವ ಕಡ್ಡಿ) ವನ್ನೂ ಹಿಡಿದಿರುವನು.

೭೮. ಶುಶ್ರೂಷೆಯು ಅತಿಸಾಧ್ವಿಯು, ಸತ್ಯಭೂಷಣಳು, ಸರ್ವಾಭರಣಗಳನ್ನು ಧರಿಸಿ ಇಲ್ಲಿಗೆ ಬಂದಿರುವಳು.

೭೯. ಕ್ಷಮೆಯು ಅತಿಧೀರಳು, ಪ್ರಸನ್ನಳು, ಗೌರಬಣ್ಣವುಳ್ಳವಳು. ನಗುತ್ತಿರುವಳು, ಪದ್ಮಹಸ್ತಳು. ದಿವ್ಯಾಭರಣಗಳಿಂದ ಕೂಡಿ ಶೋಭಿಸುತ್ತಿರುವಳು.

೮೦-೮೧. ಶಾಂತಿಯಾದರೋ ಅತಿಶಾಂತೆಯು, ಪ್ರತಿಷ್ಠಳು, ಬಹುಮಂಗಳೆಯು, ದಿವ್ಯರತ್ನಾಭರಣವುಳ್ಳವಳು ಮತ್ತು ಜ್ಞಾನವುಳ್ಳವಳು.

ಪರೋಪಕಾರಕರಣಾ ಬಹುಸತ್ಯಸಮಾಕುಲಾ ।
ಮಿತಭಾಷಾ ಸದೈವಾಸೌ ಪ್ರಜ್ಞೇಯಂ ತೇ ಸಮಾಗತಾ ॥ ೮೨ ॥

ಪ್ರಸನ್ನಾ ಸಾ ಕ್ಷಮಾಯುಕ್ತಾ ಸರ್ವಾಭರಣಭೂಷಣಾ ।
ಪದ್ಮಾಸನಾ ಸುರೂಪಾ ಸಾ ಶ್ಯಾಮವರ್ಣಾ ಯಶಸ್ವಿನೀ ॥ ೮೩ ॥

ಅಹಿಂಸೇಯಂ ಮಹಾಭಾಗ ಭವಂತಂ ತು ಸಮಾಗತಾ ।
ತಪ್ತಕಾಂಚನವರ್ಣಾಂಗೀ ರಕ್ತಾಂಬರವಿಲಾಸಿನೀ ॥ ೮೪ ॥

ಸುಪ್ರಸನ್ನಾ ಸುಮಂತ್ರಾ ಚ ಯತ್ರ ತತ್ರ ನ ಪಶ್ಯತಿ ।
ಜ್ಞಾನಭಾವಸಮಾಕ್ರಾಂತಾ ಪುಣ್ಯಹಸ್ತಾ ತಪಸ್ವಿನೀ ॥ ೮೫ ॥

ಮುಕ್ತಾಭರಣಶೋಭಾಢ್ಯಾ ನಿರ್ಮಲಾ ಚಾರುಹಾಸಿನೀ ।
ಬಹುಬುದ್ಧಿಸಮಾಕ್ರಾಂತಾ ಬಹುಜ್ಞಾನಸಮಾಕುಲಾ ॥ ೮೬ ॥

ಸುಭೋಗಾ ಸಕ್ತರೂಪಾ ಸಾ ಸುಸ್ಥಿತಾ ಚಾರುಮಂಗಳಾ ।
ಸರ್ವಾವಧ್ಯಾನಸಂಯುಕ್ತಾ ಲೋಕಮಾತಾ ಯಶಸ್ವಿನೀ ॥ ೮೭ ॥

ಸರ್ವಾಭರಣಶೋಭಾಢ್ಯಾ ಪೀನಶ್ರೋಣಿಪಯೋಧರಾ ।
ಗೌರವರ್ಣಾ ಸಮಾಯಾತಾ ನೀಲವಸ್ತ್ರವಿಭೂಷಣಾ ॥ ೮೮ ॥

---

೮೨. ಪ್ರಜ್ಞೆಯು ಪರೋಪಕಾರಿಣಿಯು, ಸತ್ಯವತಿಯು, ಮಿತಭಾಷಿಣಿಯು, ಪ್ರಾಜ್ಞಳು.

೮೩. ಪ್ರಸನ್ನಳಾಗಿಯೂ, ಕ್ಷಮಾವಂತೆಯೂ, ಆಭರಣಗಳುಳ್ಳವಳೂ, ಪದ್ಮಾಸನಳೂ, ಶ್ಯಾಮವರ್ಣೆಯೂ, ಯಶಸ್ವಿನಿಯೂ ಆದ ಅಹಿಂಸೆಯು ಬಂದಿದ್ದಾಳೆ.

೮೪-೮೬. ಚಿನ್ನದಂತೆ ಬಣ್ಣವುಳ್ಳ, ಕೆಂಪುಬಟ್ಟೆಯುನ್ನುಟ್ಟ, ಪ್ರಸನ್ನಳೂ ಸುಮಂತ್ರಳೂ ಆದ ಶ್ರದ್ಧೆಯು ಮುತ್ತಿನಾಭರಣಗಳನ್ನು ಧರಿಸಿ ಮಂದಹಾಸದಿಂದ ಶೋಭಿಸುತ್ತಾ ಇಲ್ಲಿಗೆ ಬಂದಿರುವಳು.

೮೭-೮೮. ಬಹುಬುದ್ಧಿವಂತಳೂ, ಜ್ಞಾನಿಯೂ, ಸುಭೋಗಳೂ, ಕೆಂಪು ರೂಪವುಳ್ಳವಳೂ, ಮನೋಹರಳಾದವಳೂ, ಧ್ಯಾನದಿಂದ ಕೂಡಿರುವವಳೂ, ಲೋಕಮಾತೆಯೂ, ಎಲ್ಲಾ ಆಭರಣಗಳುಳ್ಳವಳೂ, ಗೌರಬಣ್ಣವುಳ್ಳವಳೂ, ನೀಲವಸ್ತ್ರ ಹೊದ್ದಿರುವವಳೂ ಆದ ಈ ಮೇಧೆಯು ಇಗೋ ಬಂದಿದ್ದಾಳೆ.

ಇಯಂ ಮೇಧಾ ಮಹಾಪ್ರಾಜ್ಞ ತವೈವ ಪರಿಸಂಸ್ಥಿತಾ ।
ಹಂಸಚಂದ್ರಪ್ರತೀಕಾಶಾ ಮುಕ್ತಾಹಾರವಿಲಂಬಿನೀ ॥ ೮೯ ॥

ಸರ್ವಾಭರಣಸಂಭೂಷಾ ಸುಪ್ರಸನ್ನಾ ಮನಸ್ವಿನೀ ।
ಶ್ವೇತವಸ್ತ್ರೇಣ ಸಂವೀತಾ ಶತಪತ್ರಂ ಕರೇ ಕೃತಂ ॥ ೯೦ ॥

ಪುಸ್ತಕಾಕ್ಷಂ ಕರೇ ಯಸ್ಯಾ ರಾಜಮಾನಂ ಸದೈವ ಹಿ ।
ಏಷಾ ಪ್ರಜ್ಞಾ ಮಹಾಭಾಗಾ ಭಾಗ್ಯವಂತಂ ಸಮಾಗತಾ ॥ ೯೧ ॥

ಲಾಕ್ಷಾರಸಸಮಾವರ್ಣಾ ಸುಪ್ರಸನ್ನಾ ಸದೈವ ಹಿ ।
ಪೀತಪುಷ್ಪಕೃತಾಮಾಲಾ ಹಾರಕೇಯೂರಭೂಷಣಾ ॥ ೯೨ ॥

ಮುದ್ರಿಕಾಕಂಕಣೋಪೇತಾ ರತ್ನಕುಂಡಲಮಂಡಿತಾ ।
ಪೀತೇನ ವಾಸಸಾ ದೇವೀ ಸದೈವ ಪರಿರಾಜತೇ ॥ ೯೩ ॥

ತ್ರೈಲೋಕ್ಯಸ್ಯೋಪಕಾರಾಯ ಪೋಷಣಾಯಾದ್ವಿತೀಯಕಾ ।
ಯಸ್ಯಾಃ ಶೀಲಂ ದ್ವಿಜಶ್ರೇಷ್ಠ ಸದೈವ ಪರಿಕೀರ್ತಿತಂ ॥ ೯೪ ॥

ಸೇಯಂ ದಯಾ ಸುಸಂಪ್ರಾಪ್ತಾ ತವ ಪಾರ್ಶ್ವಂ ದ್ವಿಜೋತ್ತಮ ।
ಇಯಂ ವೃದ್ಧಾ ಮಹಾಪ್ರಾಜ್ಞಾ ಭಾವಭಾರ್ಯಾ ತಪಸ್ವಿನೀ ॥ ೯೫ ॥

ಮಮ ಮಾತಾ ದ್ವಿಜಶ್ರೇಷ್ಠ ಧರ್ಮೋಽಹಂ ತವ ಸುವ್ರತ ।
ಇತಿ ಜ್ಞಾತ್ವಾ ಸಮಂ ಗಚ್ಛ ಮಾಮೇವಂ ಪರಿಪಾಲಯ ॥ ೯೬ ॥

---

೮೯-೯೧. ಹಂಸಚಂದ್ರಗಳಂತಿರುವ, ಮುತ್ತಿನಹಾರವನ್ನು ಧರಿಸಿ ಆಭರಣಗಳಿಂದ ಅಲಂಕೃತಳಾಗಿ, ಬಿಳೀಬಟ್ಟೆಯನ್ನುಟ್ಟು ಕಮಲವನ್ನೂ, ಪುಸ್ತಕವನ್ನೂ ಅಕ್ಷಮಾಲೆಯನ್ನೂ, ಕೈಯಲ್ಲಿ ಹಿಡಿದು ಪ್ರಜ್ಞೆಯು ಬಂದಿದ್ದಾಳೆ, ನೋಡು.

೯೨-೯೬. ಲಾಕ್ಷಾರಸದ ಬಣ್ಣವುಳ್ಳವಳೂ, ಯಾವಾಗಲೂ ಸುಪ್ರಸನ್ನಳೂ ಬಿಳೀಹೂಮಾಲೆ, ಆಭರಣ, ಬಿಳೀಬಟ್ಟೆ ಇವುಗಳನ್ನು ಧರಿಸಿ ಮೂರುಲೋಕಕ್ಕೂ ಉಪಕಾರಿಣಿಯಾದ ಶೀಲವತಿಯಾದ ದಯೆಯು ಬಂದಿದ್ದಾಳೆ. ಈ ದಯೆಯು ವೃದ್ಧಳು. ಭಾವದ ಹೆಂಡತಿಯು, ತಪಸ್ವಿನಿಯು. ಇವಳೇ ನನ್ನ ತಾಯಿಯು. ನಾನು ಇವಳ ಪುತ್ರನಾದ ಧರ್ಮನು. ಇದೆಲ್ಲವನ್ನೂ ತಿಳಿದು ನಮ್ಮ ಸಮೀಪಕ್ಕೆ ಬಂದು ನಮ್ಮನ್ನು ಕಾಪಾಡು.

॥ ದುರ್ವಾಸಾ ಉವಾಚ ॥
ಯದಿ ಧರ್ಮಃ ಸಮಾಯಾತೋ ಮತ್ಸಮೀಪಂ ತು ಸಾಂಪ್ರತಂ ॥ ೯೭ ॥

ಏತನ್ಮೇ ಕಾರಣಂ ಬ್ರೂಹಿ ಕಿಂ ತೇ ಧರ್ಮ ಕರೋಮ್ಯಹಂ ।
॥ ಧರ್ಮ ಉವಾಚ ॥
ಕಸ್ಮಾತ್ ಕ್ರುದ್ಧೋಽಸಿ ವಿಪ್ರೇಂದ್ರ ಕಿಮೇತೈರ್ವಿಪ್ರಿಯಂ ಕೃತಂ ।
ತನ್ಮೇ ತ್ವಂ ಕಾರಣಂ ಬ್ರೂಹಿ ದುರ್ವಾಸೋ ಯದಿ ಮನ್ಯಸೇ ॥ ೯೮ ॥

॥ ದುರ್ವಾಸಾ ಉವಾಚ ॥
ಯೇನಾಹಂ ಕುಪಿತೋ ದೇವ ತದಿದಂ ಕಾರಣಂ ಶೃಣು ।
ದಮಶೌಚೈಃ ಸುಸಂಕ್ಲೇಶೈಃ ಶೋಧಿತಂ ಕಾಯಮಾತ್ಮನಃ ॥ ೯೯ ॥

ಲಕ್ಷವರ್ಷಪ್ರಮಾಣಂ ವೈ ತಪಶ್ಚರ್ಯಾ ಮಯಾ ಕೃತಾ ।
ಏವಂ ಪಶ್ಯಾಮಿ ಮಾಮೇವ ನ ದಯಾ ತೇ ಪ್ರವರ್ತತೇ ॥ ೧೦೦ ॥

ತಸ್ಮಾತ್ ಕ್ರುದ್ಧೋಽಸ್ಮಿ ತೇಽದ್ಯೈವ ಶಾಪತ್ರಯಂ ದದಾಮ್ಯಹಂ ।
ಏವಂ ಜ್ಞಾತ್ವಾ ತದಾ ಧರ್ಮಸ್ತಮುವಾಚ ಮಹಾಮತಿಃ ॥ ೧೦೧ ॥

---

೯೭. ದುರ್ವಾಸನು ಹೇಳುತ್ತಾನೆ :—ಈಗ ಧರ್ಮನಾದ ನೀನು ನನ್ನ ಬಳಿಗೆ ಬಂದ ಕಾರಣವೇನು ? ನಿನಗೆ ನನ್ನಿಂದೇನಾಗಬೇಕು ? ಎಂದು ಕೇಳಿದನು.

೯೮. ಧರ್ಮನು ಹೇಳುತ್ತಾನೆ ;—ಎಲೈ ವಿಪ್ರಶ್ರೇಷ್ಠನೇ ? ಏಕೆ ಕೋಪ ಗೊಂಡಿದ್ದೀಯೆ ? ಇವರೇನು ತಪ್ಪು ಮಾಡಿದರು ? ನೀನು ತಿಳಿದಿದ್ದರೆ ಅದರ ಕಾರಣವನ್ನು ತಿಳಿಸು ಎಂದನು.

೯೯-೧೦೧. ದುರ್ವಾಸನು ಹೇಳುತ್ತಾನೆ :—ತಪಸ್ಸುಮಾಡುವಾಗ ದಮ ಶೌಚ ಇವುಗಳಿಂದ ನನ್ನ ಶರೀರವು ಬಹು ಕೃಶವಾಗಿದೆ. ಈರೀತಿ ಲಕ್ಷವರ್ಷಗಳ ವರೆಗೂ ತಪಸ್ಸನ್ನು ಮಾಡಿದೆನು. ಆದರೂ ನಿನಗೆ ದಯೆ ಬರಲಿಲ್ಲವಲ್ಲ ? ಆದ್ದ ರಿಂದ ಕೋಪಬಂದಿದೆ. ಮೂರು ಶಾಪಗಳನ್ನು ಕೊಡುತ್ತೇನೆ ಎನ್ನಲು, ಧರ್ಮನು ಹೇಳಿದನು.

॥ ಧರ್ಮ ಉವಾಚ ॥

**ಮಯಿ ನಷ್ಟೇ ಮಹಾಪ್ರಾಜ್ಞ ಲೋಕೋ ನಾಶಂ ಸಮೇಷ್ಯತಿ ।**
**ದುಃಖಮೂಲಮಹಂ ತಾತ ನಿಕರ್ಷಾಮಿ ಭೃಶಂ ದ್ವಿಜ ॥ ೧೦೨ ॥**

**ಸೌಖ್ಯಂ ಪಶ್ಚಾದಹಂ ದದ್ಮಿ ಯದಿ ಸತ್ಯಂ ನ ಮುಂಚತಿ ।**
**ಉಪಾಯೋಽಯಂ ಸುಖಮೂಲಸ್ಯ ಪುಣ್ಯಂ ದುಃಖೇನ ಲಭ್ಯತೇ ॥ ೧೦೩ ॥**

**ಪುಣ್ಯಮೇವಂ ಪ್ರಕುರ್ವಾಣಃ ಪ್ರಾಣೀ ಪ್ರಾಣಾನ್ವಿಮುಂಚತಿ ।**
**ಮಹತ್ಸೌಖ್ಯಂ ದದಾಮೀಹ ಪರತ್ರ ಚ ನ ಸಂಶಯಃ ॥ ೧೦೪ ॥**

॥ ದುರ್ವಾಸಾ ಉವಾಚ ॥

**ಸುಖಂ ಯೇನಾಪ್ಯತೇ ತೇನ ಪರಂ ದುಃಖಂ ಪ್ರಪದ್ಯತೇ ।**
**ತತ್ತು ಮರ್ತ್ಯಃ ಪರಿತ್ಯಜ್ಯ ಹ್ಯನ್ಯೇನಾಪಿ ಭುನಕ್ತಿ ಚ ॥ ೧೦೫ ॥**

**ತಚ್ಛ್ರೇಯೋ ನೈವ ಪಶ್ಯಾಮಿ ತ್ವನ್ಯಾಯಂ ಹಿ ಕೃತಂ ತವ ।**
**ಯೇನ ಕಾಯೇನ ಕ್ರಿಯತೇ ಭುಜ್ಯತೇ ತೇನ ತತ್ಸುಖಂ ॥ ೧೦೬ ॥**

---

೧೦೨. ನಾನು ನಾಶವಾದರೆ ಲೋಕವೇ ನಾಶವಾಗುತ್ತದೆ. ನನ್ನನ್ನು ತಿರಸ್ಕರಿಸುವವರಿಗೆ ನಾನೇ ದುಃಖಮೂಲವು.

೧೦೩. ಆದರೆ ಸತ್ಯವನ್ನು ಬಿಡದಿದ್ದರೆ ಆಮೇಲೆ ಸೌಖ್ಯವನ್ನು ಕೊಡುತ್ತೇನೆ. ಸುಖಕ್ಕೆ ಇದೇ ಉಪಾಯವು. ಪುಣ್ಯವು ಕಷ್ಟದಿಂದ ಲಭಿಸಬೇಕಷ್ಟೆ.

೧೦೪. ಈ ರೀತಿ ಪುಣ್ಯವನ್ನು ಮಾಡುತ್ತಿದ್ದಾಗ ಪ್ರಾಣಿಯು ಪ್ರಾಣಬಿಟ್ಟರೆ ಮಹತ್ತಾದ ಸೌಖ್ಯವನ್ನು ಕೊಡುತ್ತೇನೆ. ಸಂಶಯವಿಲ್ಲ, ಎನ್ನಲು,

೧೦೫. ದುರ್ವಾಸನು ಮತ್ತೆ ಹೇಳುತ್ತಾನೆ:—ಸುಖವನ್ನು ಹೊಂದಬೇಕಾದವನು ಕಷ್ಟಪಡಬೇಕು. ಅದನ್ನು ಬಿಟ್ಟು ಮನುಜನಿಗೆ ಸುಖಪಡಲು ಬೇರೆ ಮಾರ್ಗವಿಲ್ಲ.

೧೦೬. ಆದರೆ ಈಗ ಆ ರೀತಿಯಾದ ವ್ಯವಸ್ಥೆಯು ನನಗೆ ಕಂಡುಬರುವುದಿಲ್ಲ. ನೀನು ಅನ್ಯಾಯ ಮಾಡುತ್ತಿರುವೆ. ಕಷ್ಟಪಟ್ಟದೇಹಕ್ಕೆ ಸುಖವನ್ನು ಕೊಡದೆ ಮತ್ತೊಂದಕ್ಕೆ ಸುಖಕೊಡುತ್ತೀಯೆ.

**ಅನ್ಯೇನ ಕ್ರಿಯತೇ ಕ್ಲೇಶಮನ್ಯೇನಾಪಿ ಪ್ರಭುಜ್ಯತೆ ।**
**ತತ್ಸುಖಂ ಕೋ ವಿಜಾನಾತಿ ಚಾನ್ಯಾಯಂ ಧರ್ಮಮೇವ ವಾ ॥ ೧೦೭ ॥**

**ಅನ್ಯೇನ ಕ್ರಿಯತೇ ಕ್ಲೇಶಮನ್ಯೇನಾಪಿ ಸುಖಂ ಪುನಃ ।**
**ಭುನಕ್ತಿ ಪುರುಷೋ ಧರ್ಮಂ ತತ್ಸರ್ವಂ ಶ್ರೇಯಸಾ ಯುತಂ ॥ ೧೦೮ ॥**

**ಪುಣ್ಯಂ ಚೈವ ಹ್ಯನೇನಾಪಿ ಹ್ಯಸೇನ ಫಲಮಶ್ನುತೇ ।**
**ಪ್ರಿಯಂ ಕೃತ್ವಾ ಪುನಃ ಪುಣ್ಯಮನೇನ ಪರಿಭುಜ್ಯತೇ ॥ ೧೦೯ ॥**

**ತತ್ಸರ್ವಂ ಹಿ ಸುಖಂ ಪ್ರೋಕ್ತಂ ಯತ್ತಥಾ ಯಸ್ಯ ಲಕ್ಷಣಂ ।**
**ಧರ್ಮಶಾಸ್ತ್ರೋದಿತಂ ಚೈವ ಕೃತಂ ಸರ್ವತ್ರ ನಾನ್ಯಥಾ ॥ ೧೧೦ ॥**

**ಯೇನ ಕಾಯೇನ ಕುರ್ವಂತಿ ತೇನ ದುಃಖಂ ಸಹಂತಿ ತೇ ।**
**ಪರತ್ರ ತೇನ ಭುಂಜಂತಿ ಹ್ಯನೇನಾಪಿ ತಥೈವ ವಾ ।**
**ಇತಿ ಜ್ಞಾತ್ವಾ ಸ ಧರ್ಮಾತ್ಮಾ ಭರ್ವಾ ಸಮವಲೋಕಯೇತ್ ॥ ೧೧೧ ॥**

---

೧೦೭. ಒಬ್ಬನು ಕ್ಲೇಶಪಟ್ಟರೆ ಮತ್ತೊಬ್ಬನು ಸುಖವನ್ನು ಅನುಭವಿಸುತ್ತಾನೆ. ಈ ವಿಧವಾದ ಧರ್ಮದ ನಡವಳಿಕೆಯು ಅನ್ಯಾಯವಲ್ಲವೇ ?

೧೦೮. ಅದೇರೀತಿ ಅನ್ಯದೇಹವು ಕ್ಲೇಶಪಡುವುದು. ಮತ್ತೊಂದು ಸುಖ ಪಡುವುದು. ಈ ರೀತಿ ಮನುಷ್ಯನು ಧರ್ಮವನ್ನು ಅನುಭವಿಸುತ್ತಾನೆ.

೧೦೯. ಪುಣ್ಯವನ್ನು ಮಾಡಿದವನೇ ಅದರ ಫಲವಾದ ಸೌಖ್ಯವನ್ನು ಅನುಭವಿಸಬೇಕು. ಪುನಃ ಪುಣ್ಯವನ್ನೇ ಮಾಡಿ ಸುಖವನ್ನು ಅನುಭವಿಸಬೇಕು. ಇದೇ ಶಾಸ್ತ್ರವಿಹಿತವಾದ ಧರ್ಮವು.

೧೧೦. ಸುಖಕ್ಕೆ ಯಾವ ಲಕ್ಷಣಗಳನ್ನು ಹಿರಿಯರು ಹೇಳಿದ್ದಾರೋ ಧರ್ಮ ಶಾಸ್ತ್ರದಲ್ಲಿ ಯಾವ ಲಕ್ಷಣಗಳಿವೆಯೋ, ಅಂಥವೆಲ್ಲವನ್ನೂ ನಾನು ಆಚರಿಸಿದ್ದೇನೆ.

೧೧೧. ಯಾವ ಶರೀರದಿಂದ ಪುಣ್ಯ ಮಾಡುತ್ತಾರೋ ಆ ಶರೀರದಿಂದಲೇ ಕಷ್ಟವನ್ನೂ ಸಹಿಸುತ್ತಾರೆ. ಪರದಲ್ಲಿ ಅವನೇ ಅನುಭವಿಸುತ್ತಾನೆ, ಅಥವಾ ಮತ್ತೊಂದರಿಂದ ಅನುಭವಿಸುತ್ತಾನೆ ಧರ್ಮಾತ್ಮನಾದ ನೀನು ಇದನ್ನು ತಿಳಿಯಬೇಕು.

**ಯಥಾ ಚೌರಾ ಮಹಾಪಾಪಾಃ ಸ್ವಕಾಯೇನ ಸಹಂತಿ ತೇ ।**
**ದುಃಖಂ ಚ ದಾರುಣಂ ತೀವ್ರಂ ತಥಾ ಸುಖಂ ಕಥಂ ನಹಿ ॥ ೧೧೨ ॥**

**॥ ಧರ್ಮ ಉವಾಚ ॥**

**ಯೇನ ಕಾಯೇನ ಯೇ ಪಾಪಾ ಆಚರಂತಿ ಹಿ ಪಾತಕಂ ।**
**ತೇನ ಪೀಡಾಂ ಸಹಂತ್ಯೇವ ಪಾತಕಸ್ಯ ಹಿ ತತ್ಫಲಂ ॥ ೧೧೩ ॥**

**ದಂಡಮೇಕಂ ಪರಂ ದೃಷ್ಟಂ ಧರ್ಮಶಾಸ್ತ್ರೇಷು ಪಂಡಿತೈಃ ।**
**ತಂ ಧರ್ಮಪೂರ್ವಕಂ ವಿದ್ಧಿ ಹ್ಯೇತೈರ್ನ್ಯಾಯ್ಯೈಸ್ತ್ವಮೇವ ಹಿ ॥ ೧೧೪ ॥**

**॥ ದುರ್ವಾಸಾ ಉವಾಚ ॥**

**ಏವಂ ನ್ಯಾಯಂ ನ ಮನ್ಯೇಽಹಂ ತಥೈವ ಶೃಣು ಧರ್ಮರಾಟ್ ।**
**ಶಾಪತ್ರಯಂ ಪ್ರದಾಸ್ಯಾಮಿ ಕ್ರುದ್ಧೋಽಹಂ ತವ ನಾನ್ಯಥಾ ॥ ೧೧೫ ॥**

**॥ ಧರ್ಮ ಉವಾಚ ॥**

**ಯದಾ ಕ್ರುದ್ಧೋ ಮಹಾಪ್ರಾಜ್ಞ ಮಾಮೇವ ಹಿ ಕ್ಷಮಸ್ವ ಚ ।**
**ನೈವ ಕ್ಷಮಸಿ ವಿಪ್ರೇಂದ್ರ ದಾಸೀಪುತ್ರಂ ಹಿ ಮಾಂ ಕುರು ॥ ೧೧೬ ॥**

---

೧೧೨. ಕಳ್ಳರು ಈ ದೇಹದಲ್ಲಿ ಪಾಪಮಾಡಿದವರ ಈ ದೇಹದಲ್ಲಿಯೇ ಕಷ್ಟವನ್ನು ಅನುಭವಿಸುತ್ತಾರೆ. ಅದರಂತೆಯೇ ಪುಣ್ಯಮಾಡಿದವರೂ ಈ ದೇಹದಲ್ಲಿಯೇ ಸೌಖ್ಯವನ್ನು ಏಕೆ ಅನುಭವಿಸುವುದಿಲ್ಲ? ಇದು ಅನ್ಯಾಯವಲ್ಲವೆ?

೧೧೩. ಧರ್ಮನು ಹೇಳುತ್ತಾನೆ:—ಯಾರು ಯಾವ ದೇಹದಿಂದ ಪಾಪಮಾಡುತ್ತಾರೋ, ಅದೇದೇಹದಿಂದ ಆ ಪಾತಕದ ಫಲವಾದ ಪಾಪವನ್ನೂ ಅನುಭವಿಸುತ್ತಾರೆ

೧೧೪. ಪಂಡಿತರಿಂದ ಧರ್ಮಶಾಸ್ತ್ರದಲ್ಲಿ ಹೇಳಿರುವಂತೆ ಆ ದಂಡವನ್ನು ಧರ್ಮಪೂರ್ವಕವಾದುದೆಂದು ತಿಳಿ. ಈ ಧರ್ಮಾಧರ್ಮವು ನ್ಯಾಯವಾದವು ಅವನ್ನೇ ನೀನು ಆಮೇಲೆ ಅನುಭವಿಸುವುದು.

೧೧೫. ದುರ್ವಾಸನು ಹೇಳುತ್ತಾನೆ:—ಈ ನ್ಯಾಯವು ನನಗೆ ಸಂಬಂಧವುದಿಲ್ಲ. ಆದುದರಿಂದ ನನಗೆ ಕೋಪ ಬಂದಿದೆ. ಮೂರು ಶಾಪಗಳನ್ನು ನಿನಗೆ ಕೊಟ್ಟೇ ಕೊಡುತ್ತೇನೆ ಬೇರೆ ರೀತಿಯೇ ಇಲ್ಲ ಎಂದನು.

೧೧೬. ಧರ್ಮನು ಹೇಳುತ್ತಾನೆ:—ಪ್ರಾಜ್ಞನೇ ನೀನು ಅಷ್ಟು ಕೋಪಗೊಂಡಿದ್ದರೆ ಕ್ಷಮಿಸು. ಕ್ಷಮಿಸದಿದ್ದರೆ ನನ್ನನ್ನು ದಾಸಿಯ ಉದರದಲ್ಲಿ ಹುಟ್ಟುವಂತೆ ಶಾಪ ಕೊಡು.

ರಾಜಾನಂ ತು ನ ಕರ್ತವ್ಯಂ ಚಾಂಡಾಲಂ ಚ ಮಹಾಮುನೇ ।
ಪ್ರಸಾದಸುಮುಖೋ ವಿಪ್ರ ಪ್ರಣತಸ್ಯ ಸದೈವ ಹಿ ॥ ೧೧೭ ॥

॥ ದುರ್ವಾಸಾ ಉವಾಚ ॥

ರಾಜಾ ಭವ ತ್ವಂ ಧರ್ಮಾದ್ಯ ದಾಸೀಪುತ್ರಶ್ಚ ನಾನ್ಯಥಾ ।
ಗಚ್ಛ ಚಾಂಡಾಲಯೋನಿಂ ಚ ಧರ್ಮ ತ್ವಂ ಸ್ವೇಚ್ಛಯಾ ವ್ರಜ ॥ ೧೧೮ ॥

ಏವಂ ಶಾಪತ್ರಯಂ ದತ್ವಾ ಗತೋಽಸೌ ದ್ವಿಜಸತ್ತಮಃ ।
ಅನೇನಾಪಿ ಪ್ರಸಂಗೇನ ದೃಷ್ಟೋ ಧರ್ಮಃ ಪುರಾ ಕಿಲ ॥ ೧೧೯ ॥

॥ ಸೋಮಶರ್ಮೋವಾಚ ॥

ಧರ್ಮಸ್ತು ಕೀದೃಶೋ ಜಾತಸ್ತೇನ ಶಪ್ತೋ ಮಹಾತ್ಮನಾ ।
ತದ್ಯೋಗಂ ತಸ್ಯ ಮೇ ಬ್ರೂಹಿ ಯದಿ ಜಾನಾಸಿ ಭಾಮಿನಿ ॥ ೧೨೦ ॥

॥ ಸುಮನೋವಾಚ ॥

ಭರತಾನಾಂ ಕುಲೇ ಜಾತೋ ಧರ್ಮೋ ಭೂತ್ವಾ ಯುಧಿಷ್ಠಿರಃ ।
ವಿದುರೋ ದಾಸಿಪುತ್ರಸ್ತು ಅನ್ಯಚ್ಚೈವ ವದಾಮ್ಯಹಂ ॥ ೧೨೧ ॥

---

೧೧೭ ರಾಜನನ್ನಾಗಿಯಾಗಲೀ, ಚಂಡಾಲನನ್ನಾಗಿಯಾಗಲೀ, ಮಾಡಬೇಡ ನಿನ್ನನ್ನು ನಮಸ್ಕರಿಸುತ್ತೇನೆ. ನನ್ನಲ್ಲಿ ಅನುಗ್ರಹಮಾಡು ಎಂದು ಪ್ರಾರ್ಥಿಸಿದನು.

೧೧೮-೧೧೯. ದುರ್ವಾಸನು ಹೇಳುತ್ತಾನೆ:—ಎಲೈ ಧರ್ಮನೇ, ನೀನು ರಾಜನೂ ಆಗು ದಾಸೀಪುತ್ರನೂ, ಆಗು ಮತ್ತು ಚಂಡಾಲಯೋನಿಯನ್ನೂ ಹೊಂದು. ನಿನ್ನ ಇಷ್ಟಬಂದಕಡೆ ಹೋಗು, ಎಂದು ಮೂರು ಶಾಪಗಳನ್ನು ಕೊಟ್ಟು ಆ ಬ್ರಾಹ್ಮಣನು ಹೊರಟುಹೋದನು. ಈರೀತಿ ಧರ್ಮನಿಗೆ ಪೂರ್ವದಲ್ಲಿ ಶಾಪವು ಬಂದಿರುವುದು.

೧೨೦ ಸೋಮಶರ್ಮನು ಹೇಳುತ್ತಾನೆ:— ಆ ಮಹಾತ್ಮನಿಂದ ಶಪಿಸಲ್ಪಟ್ಟ ಧರ್ಮನು ಮುಂದೆ ಎಂಥವನಾಗಿ ಹುಟ್ಟಿದನು? ನಿನಗೆ ಗೊತ್ತಿದ್ದರೆ ಆ ವಿವರವನ್ನು ನನಗೆ ಹೇಳು ಎನ್ನಲು,

೧೨೧. ಸುಮನಳು ಹೇಳಿದಳು:—ಭರತವಂಶದಲ್ಲಿ ಆ ಧರ್ಮನು ಧರ್ಮರಾಜನಾಗಿ ಹುಟ್ಟಿದನು. ಅಲ್ಲೇ ದಾಸೀಪುತ್ರನಾದ ವಿದುರನಾಗಿಯೂ ಹುಟ್ಟಿದನು.

**ಯದಾ ರಾಜಾ ಹರಿಶ್ಚಂದ್ರೋ ವಿಶ್ವಾಮಿತ್ರೇಣ ಕರ್ಷಿತಃ ।**
**ತದಾ ಚಾಂಡಾಲತಾಂ ಪ್ರಾಪ್ತಃ ಸ ಹಿ ಧರ್ಮೋ ಮಹಾಮತಿಃ ।**
**ದುರ್ವಾಸಸೋ ಹಿ ಶಾಪಾದ್ವೈ ಸತ್ಯಮುಕ್ತಂ ತವಾಗ್ರತಃ ॥ ೧೨೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ**
**ಸೋಮಶರ್ಮಸುಮನಾಸಂವಾದೇ**
**ದ್ವಾದಶೋಽಧ್ಯಾಯಃ**



---

೧೨೨. ಇದಲ್ಲದೆ, ಹರಿಶ್ಚಂದ್ರನು ವಿಶ್ವಾಮಿತ್ರನಿಂದ ತಿರಸ್ಕರಿಸಲ್ಪಟ್ಟಾಗ ಆ ಧರ್ಮನು ಚಂಡಾಲನಾಗಿ ಹುಟ್ಟಿದನು. ದುರ್ವಾಸನ ಶಾಪದಿಂದ ಧರ್ಮನು ಈರೀತಿ ಮೂರುಬಗೆಯಾದುದನ್ನು ವಿವರಿಸಿದ್ದೇನೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸೋಮಶರ್ಮಾ-ಸುಮನಾ-ಸಂವಾದದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
## ॥ ತ್ರಯೋದಶೋಽಧ್ಯಾಯಃ ॥

---

॥ ಸೋಮಶರ್ಮೋವಾಚ ॥

ಲಕ್ಷಣಂ ಬ್ರಹ್ಮಚರ್ಯಸ್ಯ ತನ್ಮೇ ವಿಸ್ತರತೋ ವದ
ಕೀದೃಶಂ ಬ್ರಹ್ಮಚರ್ಯಂ ಚ ಯದಿ ಜಾನಾಸಿ ಭಾಮಿನಿ ॥ ೧ ॥

॥ ಸುಮನೋವಾಚ ॥

ನಿತ್ಯಂ ಸತ್ಯೇ ರತಿರ್ಯಸ್ಯ ಪುಣ್ಯಾತ್ಮಾ ಸುಷ್ಮತಾಂ ವ್ರಜೇತ್ ।
ಋತೌ ಪ್ರಾಪ್ತೇ ವ್ರಜೇನ್ನಾರೀಂ ಸ್ವೀಯಾಂ ದೋಷವಿವರ್ಜಿತಃ ॥ ೨ ॥

ಸ್ವಕುಲಸ್ಯ ಸದಾಚಾರಂ ಕದಾ ನೈವ ವಿಮುಂಚತಿ ।
ಏತತ್ತೇ ಹಿ ಸಮಾಖ್ಯಾತಂ ಗೃಹಸ್ಥಸ್ಯ ದ್ವಿಜೋತ್ತಮ ॥ ೩ ॥

---

### ಹದಿಮೂರನೇ ಅಧ್ಯಾಯವು

೧. ಸೋಮಶರ್ಮನು ಹೇಳುತ್ತಾನೆ:—ಎಲೌ ಭಾಮಿನಿ, ಬ್ರಹ್ಮಚರ್ಯದ ಸ್ವಭಾವವೇನು? ಅದರ ಲಕ್ಷಣಗಳು ನಿನಗೆ ತಿಳಿದಿದ್ದರೆ ಅವುಗಳನ್ನು ನನಗೆ ವಿಸ್ತಾರವಾಗಿ ವಿವರಿಸು.

೨. ಸುಮನಳು ಹೇಳುತ್ತಾಳೆ:– ಧರ್ಮದಲ್ಲಿ ಆಸಕ್ತನಾದವನು ಋತುಸ್ನಾನಾನಂತರ ಶಾಸ್ತ್ರೋಕ್ತವಾದ ದಿನಗಳಲ್ಲಿಮಾತ್ರ ತನ್ನ ಹೆಂಡತಿಯಲ್ಲಿ ರಮಿಸಬೇಕು. ಇದರಿಂದ ಅವನು ದೋಷರಹಿತನಾಗುವನು.

೩. ತನ್ನ ಕುಲದ ಆಚಾರವನ್ನು ಬಿಡಲೇ ಬಾರದು. ಇದೇ ಗೃಹಸ್ಥನು ಅಚರಿಸಬೇಕಾದ ಬ್ರಹ್ಮಚರ್ಯವು.

ಬ್ರಹ್ಮಚರ್ಯಂ ಮಯಾ ಪ್ರೋಕ್ತಂ ಗೃಹಿಣಾಂ ಮುಕ್ತಿದಂ ಕಿಲ ।
ಯತೀನಾಂ ತು ಪ್ರವಕ್ಷ್ಯಾಮಿ ತನ್ಮೇ ನಿಗದತಃ ಶೃಣು ॥ ೪ ॥

ದಮಸತ್ಯಸಮಾಯುಕ್ತಃ ಪಾಪಾದ್ಭೀತಸ್ತು ಸರ್ವದಾ ।
ಭಾರ್ಯಾಸಂಗಂ ವರ್ಜಯಿತ್ವಾ ಧ್ಯಾನಜ್ಞಾನಪ್ರತಿಷ್ಠಿತಃ ॥ ೫ ॥

ಯತೀನಾಂ ಬ್ರಹ್ಮಚರ್ಯಂ ಚ ಸಮಾಖ್ಯಾತಂ ತವಾಗ್ರತಃ ।
ವಾನಪ್ರಸ್ಥಸ್ಯ ವಕ್ಷ್ಯಾಮಿ ತನ್ಮೇ ನಿಗದತಃ ಶೃಣು ॥ ೬ ॥

ಆಚಾರೇಣ ಪ್ರವರ್ತೇತ ಕಾಮಕ್ರೋಧವಿವರ್ಜಿತಃ ।
ಪ್ರಾಣಿನಾಮುಪಕಾರಾಯ ಸಂಸ್ಥಿತ ಉಂಛವೃತ್ತಿರ್ನಾ ॥ ೭ ॥

ವನಸ್ಥಸ್ಯ ಸಮಾಖ್ಯಾತಂ ಸತ್ಯಮೇವ ವದಾಮ್ಯಹಂ ।
ಪರದ್ರವ್ಯೇಷು ಲೋಲತ್ವಾತ್ಪರಸ್ತ್ರೀಷು ತಥೈವ ಚ ॥ ೮ ॥

---

೪. ಗೃಹಸ್ಥರು ಆಚರಿಸಬೇಕಾದ ಬ್ರಹ್ಮಚರ್ಯವ ನಿಯಮವನ್ನು ಹೇಳಿದ್ದಾಯಿತು. ಇದು ಮುಕ್ತಿಯನ್ನು ಕೊಡುವುದು. ಇನ್ನು ಯತಿಗಳ ಬ್ರಹ್ಮಚರ್ಯವನ್ನು ಹೇಳುತ್ತೇನೆ ಕೇಳು.

೫. ದಮ, ಸತ್ಯಗಳಿಂದಕೂಡಿ ಯಾವಾಗಲೂ ಪಾಪದಿಂದ ಭೀತನಾಗಿ ಹೆಂಗಸರ ಸಂಗವನ್ನು ಬಿಟ್ಟು, ಧ್ಯಾನಜ್ಞಾನಗಳಿಂದ ಯುಕ್ತನಾಗಿರಬೇಕು. ಇದೇ ಯತಿಗಳು ಆಚರಿಸುವ ಬ್ರಹ್ಮಚರ್ಯವು.

೬-೭. ವಾನಪ್ರಸ್ಥನ ಬ್ರಹ್ಮಚರ್ಯನಿಯಮವನ್ನು ಹೇಳುತ್ತೇನೆ ಕೇಳು. ಯಾವಾಗಲೂ ಆಚಾರದಿಂದಿರಬೇಕು, ಕಾಮಕ್ರೋಧಗಳನ್ನು ಬಿಡಬೇಕು, ಪ್ರಾಣಿಗಳಿಗೆ ಉಪಕಾರ ಮಾಡಬೇಕು, ಭಿಕ್ಷೆ ಬೇಡಬೇಕು, ಇವೇ ವಾನಪ್ರಸ್ಥನ ಬ್ರಹ್ಮಚರ್ಯವು. ಇನ್ನು ಸತ್ಯಸ್ವರೂಪವನ್ನು ಹೇಳುತ್ತೇನೆ ಕೇಳು.

೮. ಪರಸ್ತ್ರೀ, ಪರದ್ರವ್ಯಗಳಲ್ಲಿ ಯಾರ ಬುದ್ಧಿಯು ಹೋಗುವುದಿಲ್ಲವೋ ಅವನ ಬುದ್ಧಿಯು ಸತ್ಯಸಹಿತವಾದುದೆಂದು ಪ್ರಸಿದ್ಧವು.

ದೃಷ್ಟ್ವಾ ಮತಿರ್ನ ಯಸ್ಯ ಸ್ಯಾತ್ಸ ಸತ್ಯಃ ಪರಿಕೀರ್ತಿತಃ ।
ದಾನಮೇವ ಪ್ರವಕ್ಷ್ಯಾಮಿ ಯೇನ ಜೀವಂತಿ ಮಾನವಾಃ ॥ ೯ ॥

ಆತ್ಮಸೌಖ್ಯಂ ಪ್ರತೀಚ್ಛೇದ್ಯಃ ಸ ಗಚ್ಛೇತ್ಪರಮಂ ಪದಂ ।
ಅನ್ನಸ್ಯಾಪಿ ಮಹಾದಾನಂ ಸುಖಸ್ಯ ಮಧುರಸ್ಯ ಚ ॥ ೧೦ ॥

ಗ್ರಾಸಮಾತ್ರಂ ತಥಾ ದೇಯಂ ಕ್ಷುಧಾರ್ತಾಯ ನ ಸಂಶಯಃ ।
ದತ್ತೇ ಸತಿ ಮಹತ್ಪುಣ್ಯಮಮೃತಂ ಸೋಽಶ್ನುತೇ ಸ್ಸದಾ ॥ ೧೧ ॥

ದಿನೇ ದಿನೇ ಪ್ರದಾತವ್ಯಂ ಯಥಾ ವಿಭವವಿಸ್ತರಂ ।
ವಚನಂ ಚ ತೃಣಂ ಶಯ್ಯಾಂ ಗೃಹಚ್ಛಾಯಾಂ ಸುಶೀತಲಾಂ ॥ ೧೨ ॥

ಭೂಮಿಮಪಸ್ತಥಾ ಚಾನ್ನಂ ಪ್ರಿಯವಾಕ್ಯಮನುತ್ತಮಂ ।
ಆಸನಂ ವಸನಂ ಪಾದ್ಯಂ ಕೌಟಿಲ್ಯೇನ ವಿವರ್ಜಿತಃ ॥ ೧೩ ॥

ಆತ್ಮನೋ ಜೀವನಾರ್ಥಾಯ ನಿತ್ಯಮೇವಂ ಕರೋತಿ ಯಃ ।
ದೇವಾನ್ ಪಿತೄನ್ ಸಮಭ್ಯರ್ಚ್ಯ ಏವಂ ದಾನಂ ದದಾತಿ ಯಃ ।
ಇತ್ಯೇವಂ ಮೋದತೇಽಸೌ ವೈ ಪರತ್ರೇಹ ತಥೈವ ಚ ॥ ೧೪ ॥

---

೯. ದಾನಕ್ರಮವನ್ನೂ ಹೇಳುತ್ತೇನೆ. ಮನುಷ್ಯರು ಯಾವುದರಿಂದ ಜೀವಿಸುತ್ತಾರೋ, ಆತ್ಮಸೌಖ್ಯವು ಯಾವುದರಿಂದ ಲಭಿಸುವುದೋ, ಅಂತಹ ಕಾರ್ಯಕ್ಕೆ ದಾನವೆಂದು ಹೆಸರು. ದಾನವನ್ನು ಮಾಡುವವನು ಪರಮಪದವನ್ನು ಹೊಂದುತ್ತಾನೆ.

೧೦-೧೧. ಸುಖವಾಗಿಯೂ, ಮಧುರವಾಗಿಯೂ, ಇರುವ ಅನ್ನವನ್ನು ಹಸಿವುವುಳ್ಳವನಿಗೆ ಒಂದುತುತ್ತು ಕೊಟ್ಟರೂ ಮಹತ್ಪುಣ್ಯ ಬರುತ್ತದೆ. ಅವನು ಮರಣರಹಿತವಾದ ಮೋಕ್ಷಪದವನ್ನು ಅನುಭವಿಸುತ್ತಾನೆ.

೧೨-೧೪. ಪ್ರತಿದಿನದಲ್ಲಿಯೂ ಈ ಮುಂದೆ ಹೇಳುವುದನ್ನು ತನ್ನ ಯೋಗ್ಯತೆಗನುಸಾರವಾಗಿ ದಾನಮಾಡಬೇಕು. ಒಳ್ಳೆಯಮಾತು, ಹುಲ್ಲು, ಹಾಸಿಗೆ, ಮನೆ, ಒಳ್ಳೇ ನೆರಳು, ಭೂಮಿ, ನೀರು, ಅನ್ನ, ಪ್ರಿಯವಾದಮಾತು, ಆಸನ, ಬಟ್ಟೆ, ಪಾದ್ಯ, ಇವನ್ನು ಕಪಟವಿಲ್ಲದೆ ದಾನಮಾಡಬೇಕು. ತನ್ನ ಸದ್ಗತಿಗೋಸ್ಕರ ಯಾವನು ಈರೀತಿ ದಾನಮಾಡುತ್ತಾನೋ, ಮತ್ತು ದೇವತು, ಪಿತೃಗಳು, ಇವರನ್ನು ಪೂಜಿಸಿ, ಯಾವನು ದಾನ ಮಾಡುತ್ತಾನೋ, ಅವನು ಇಹಪರಲೋಕಗಳಲ್ಲಿ ಸುಖಿಸುತ್ತಾನೆ.

**ಅವಂಧ್ಯಂ ದಿವಸಂ ಯೋ ವೈ ದಾನಾಧ್ಯಯನಕರ್ಮಭಿಃ ।**
**ಪ್ರಕುರ್ಯಾನ್ಮಾನುಷೋ ಭೂತ್ವಾ ಸ ದೇವೋ ನಾತ್ರ ಸಂಶಯಃ ॥ ೧೫ ॥**

**ನಿಯಮಂ ಚ ಪ್ರವಕ್ಷ್ಯಾಮಿ ಧರ್ಮಸಾಧನಮುತ್ತಮಂ ।**
**ದೇವಾನಾಂ ಬ್ರಾಹ್ಮಣಾನಾಂ ಚ ಪೂಜಾಸ್ವಭಿರತೋಽಥ ಯಃ ॥ ೧೬ ॥**

**ನಿತ್ಯಂ ನಿಯಮಸಂಯುಕ್ತೋ ದಾನವ್ರತೇಷು ಸುವ್ರತ ।**
**ಉಪಕಾರೇಷು ಸರ್ವೇಷು ನಿಯಮಶ್ಚ ಪ್ರಕೀರ್ತಿತಃ ॥ ೧೭ ॥**

**ಕ್ಷಮಾರೂಪಂ ಪ್ರವಕ್ಷ್ಯಾಮಿ ಶ್ರೂಯತಾಂ ದ್ವಿಜಸತ್ತಮ ।**
**ಪರಾಕ್ರೋಶಂ ಹಿ ಸಂಶ್ರುತ್ಯ ತಾಡಿತೇ ಸತಿ ಕೇನಚಿತ್ ॥ ೧೮ ॥**

**ಕ್ರೋಧಂ ಚೈವ ನ ಗಚ್ಛೇಚ್ಚ ತಾಡಿತೋಽಪಿ ನ ತಾಡಯೇತ್ ।**
**ಸಹಿಷ್ಣುಃ ಸ್ಯಾತ್ಸ ಧರ್ಮಾತ್ಮಾ ನ ಹಿ ರಾಗಂ ಪ್ರಯಾತಿ ಚ ॥ ೧೯ ॥**

**ಸಮಶ್ನಾತಿ ಪರಂ ಸೌಖ್ಯಮಿಹ ಚಾಮುತ್ರ ತೇನ ಚ ।**
**ಏವಂ ಕ್ಷಮಾ ಸಮಾಖ್ಯಾತಾ ಶೌಚಮೇವಂ ವದಾಮ್ಯಹಂ ॥ ೨೦ ॥**

---

೧೫. ದಾನ, ಅಧ್ಯಯನಗಳಿಂದ ದಿವಸವನ್ನು ಸದ್ವಿನಿಯೋಗಮಾಡಿದವನು ದೇವತೆಗೆ ಸಮಾನನು. ಇದರಲ್ಲಿ ಸಂಶಯವಿಲ್ಲ.

೧೬. ದೇವಬ್ರಾಹ್ಮಣರುಗಳ ಪೂಜೆಯ ವಿಷಯದಲ್ಲಿ ಶ್ರದ್ಧಾಭಕ್ತಿಯುಳ್ಳವನು ಆಚರಿಸಬೇಕಾದ ನಿಯಮಗಳನ್ನು ಹೇಳುತ್ತೇನೆ.

೧೭. ನಿತ್ಯವೂ ನಿಯಮದಿಂದ ದಾನ, ವ್ರತ ಮೊದಲಾದ ಉಪಕಾರಕಾರ್ಯಗಳಲ್ಲಿ ಮಾಡಬೇಕಾದ ನಿಯಮಗಳು ಲೋಕಪ್ರಸಿದ್ಧವಾಗಿವೆಯಷ್ಟೆ?

೧೮-೧೯. ಈಗ ಕ್ಷಮೆಯ ಸ್ವರೂಪವನ್ನು ಹೇಳುತ್ತೇನೆ ಕೇಳು. ಪರರು ಕೋಪದಿಂದ ಹೊಡೆದರೂ ತಾನು ಪ್ರತಿಯಾಗಿ ಹೊಡೆಯಕೂಡದು. ಕೋಪವನ್ನೂ, ಮಾಡಬಾರದು. ತಾನು ಹೊಡಸಿಕೊಂಡರೂ ಹೊಡೆಯಬಾರದು. ಅವನೇ ಸಹಿಷ್ಣುವು ಅವನಿಗೆ ಕಾಮಕ್ರೋಧಗಳಿಲ್ಲ.

೨೦. ಅವನು ಇಹಪರಗಳಲ್ಲಿಯೂ ಸೌಖ್ಯವನ್ನು ಹೊಂದುತ್ತಾನೆ. ಇದೇ ಕ್ಷಮೆಯ ಸ್ವರೂಪವು. ಇನ್ನು ಶೌಚಧರ್ಮವನ್ನು ಹೇಳುತ್ತೇನೆ ಕೇಳು.

**ಸ ಬಾಹ್ಯಾಭ್ಯಂತರೇ ಯೋ ವೈ ಶುದ್ಧೋ ರಾಗವಿವರ್ಜಿತಃ ।**
**ಸ್ನಾನಾಚಮನಕೈಶ್ಚೈವ ವ್ಯವಹಾರೇಣ ವರ್ತತೇ ॥ ೨೧ ॥**

**ಶೌಚಮೇವಂ ಸಮಾಖ್ಯಾತಮಹಿಂಸಾಂ ತು ವದಾಮ್ಯಹಂ ।**
**ತೃಣಮೇವ ಹ್ಯಕಾರ್ಯಾದ್ವೈ ಛೇತ್ತವ್ಯಂ ನ ವಿಜಾನತಾ ॥ ೨೨ ॥**

**ಅಹಿಂಸ್ರಃ ಸಂಯತೋ ಭೂಯಾದ್ಯಥಾಽತ್ಮನಿ ತಥಾ ಪರೇ ।**
**ಶಾಂತಿಮೇವಂ ಪ್ರವಕ್ಷ್ಯಾಮಿ ಶಾಂತ್ಯಾ ಸುಖಂ ಸಮಶ್ನುತೇ । ॥ ೨೩ ॥**

**ಶಾಂತಿರೇಷಾ ಪ್ರಕರ್ತವ್ಯಾ ಖೇದಂ ನೈವ ಪರಿವ್ರಜೇತ್ ।**
**ಭೂತ ವೈರಂ ವಿಸೃಜ್ಯೈವ ಮನಸಾ ನ ಪ್ರಕಾಶಯೇತ್ ॥ ೨೪ ॥**

**ಏವಂ ಶಾಂತಿಃ ಸಮಾಖ್ಯಾತಾಽಪ್ಯಸ್ತೇಯಂ ಚ ವದಾಮ್ಯಹಂ ।**
**ಪರಸ್ವಂ ನೈವ ಹರ್ತವ್ಯಂ ಪರಯೋಷಾ ತಥೈವ ಚ ॥ ೨೫ ॥**

---

೨೧. ದುರಾಶೆಯನ್ನೂ, ಕಾಮಕ್ರೋಧಗಳನ್ನೂ, ಬಿಟ್ಟು ಸ್ನಾನಾದಿಗಳಿಂದ ಒಳಗೂ, ಹೊರಗೂ ಶುದ್ಧನಾಗಿ ಲೋಕವ್ಯವಹಾರದಲ್ಲಿಯೂ, ಸತ್ಯವಂತನಾಗಿದ್ದರೆ ಅವನ ನಡತೆಗೆ ಶೌಚವೆಂದು ಹೆಸರು. ಅಹಿಂಸೆಯ ಸ್ವರೂಪವನ್ನು ಹೇಳುವೆನು.

೨೨. ತಿಳುವಳಿಕೆಯಿರಲಿ, ಇಲ್ಲದಿರಲಿ ಕಾರಣವಿಲ್ಲದೆ ಹುಲ್ಲನ್ನು ಕೂಡ ಕತ್ತರಿಸಬಾರದು, ಯಾವ ಪ್ರಾಣಿಗೂ ಹಿಂಸಕನಾಗದೆ ಜಿತೇಂದ್ರಿಯನಾಗಿರಬೇಕು. ತನ್ನಂತೆ ಎಲ್ಲರನ್ನೂ ತಿಳಿಯಬೇಕು.

೨೩-೨೪. ಶಾಂತಿಯಸ್ವರೂಪವನ್ನು ವಿವರಿಸುತ್ತೇನೆ. ಶಾಂತಿಯಿಂದ ಸುಖವುಂಟು. ಶಾಂತಿಯುಳ್ಳವನು ಖೇದವನ್ನು ಹೊಂದುವುದೇ ಇಲ್ಲ. ಮನಸ್ಸಿನಿಂದಲೂ ಸಹ ಪ್ರಾಣಿಗಳಿಗೆ ವೈರವನ್ನೂ, ಅಪಕಾರವನ್ನೂ ಎಣಿಸಬಾರದು. ಹೊರಗೂ ಅದರಂತೆಯೇ ವರ್ತಿಸಬೇಕು. ಇದೇ ಶಾಂತಿ. ಇನ್ನು ಅಸ್ತೇಯಸ್ವರೂಪವನ್ನು ಹೇಳುತ್ತೇನೆ.

೨೫. ಪರರ ಸ್ವತ್ತನ್ನು ಕದಿಯಲೇಬಾರದು. ಪರರ ಹೆಂಡತಿಯರಲ್ಲಿ ರಮಿಸಬಾರದು. ತ್ರಿಕರಣಗಳಿಂದಲೂ ಕೂಡ ಆ ಯೋಚನೆಯನ್ನು ಮಾಡಬಾರದು.

ವಚನೈರ್ಮನೋಭಿಃ ಕಾಯೈಶ್ಚ ನ ಪ್ರಮೇಯಂ ಪ್ರಕಾಶಯೇತ್ ।
ದಮಮೇವಂ ಪ್ರವಕ್ಷ್ಯಾಮಿ ತವಾಗ್ರೇ ಚ ದ್ವಿಜೋತ್ತಮ ॥ ೨೬ ॥

ದಮನಾದಿಂದ್ರಿಯಾಣಾಂ ವೈ ಮನಸಾ ನಿತ್ಯಂ ಪ್ರಕಾಶಯೇತ್ ।
ಔದ್ಧತ್ಯಂ ನಾಶಯೇತ್ತೇಷಾಂ ಸ ಚೈತನ್ಯೋ ಭವೇತ್ಸದಾ ॥ ೨೭ ॥

ಶುಶ್ರೂಷಾಂ ಹಿ ಪ್ರವಕ್ಷ್ಯಾಮಿ ಧರ್ಮಶಾಸ್ತ್ರೇಷು ಯಾದೃಶೀ ।
ಪೂರ್ವಾಚಾರ್ಯೈರ್ಯಥಾ ಪ್ರೋಕ್ತಾ ತಥಾಽಹಂ ಪ್ರವದಾಮ್ಯಹಂ

ವಾಚಾ ದೇಹೇನ ಮನಸಾ ಗುರುಕಾರ್ಯಂ ಪ್ರಸಾಧಯೇತ್ ।
ಜಾಯತೇಽನುಗ್ರಹೋ ಯತ್ರ ಶುಶ್ರೂಷಾ ಸಾ ನಿಗದ್ಯತೇ ॥ ೨೯ ॥

ಸಾಂಗೋ ಧರ್ಮಃ ಸಮಾಖ್ಯಾತಸ್ತವಾಗ್ರೇ ದ್ವಿಜಸತ್ತಮ ।
ಅನ್ಯಚ್ಚ ತೇ ಪ್ರವಕ್ಷ್ಯಾಮಿ ಶ್ರೋತುಮಿಚ್ಛಸಿ ಯತ್ಸತೇ ॥ ೩೦ ॥

ಈದೃಶೇ ಚಾಪಿ ಧರ್ಮೇ ತು ವರ್ತತೇ ಯೋ ನರಃ ಸದಾ ।
ಸಂಸಾರೇ ತಸ್ಯ ಸಂಭೂತಿಃ ಪುನರೇವಂ ನ ಜಾಯತೇ ॥ ೩೧ ॥

ಸ್ವರ್ಗಂ ಗಚ್ಛತಿ ಧರ್ಮೇಣ ಸತ್ಯಂ ಸತ್ಯಂ ವದಾಮ್ಯಹಂ ।
ಏವಂ ಜ್ಞಾತ್ವಾ ಮಹಾಪ್ರಾಜ್ಞ ಧರ್ಮಮೇವಂ ಪ್ರಜಸ್ವ ಹಿ ॥ ೩೨ ॥

---

೨೬-೨೭. ದಮದ ಸ್ವರೂಪವನ್ನು ಹೇಳುತ್ತೇನೆ. ಇಂದ್ರಿಯಗಳ ನಿಗ್ರಹದಿಂದ ಔದ್ಧತ್ಯವನ್ನು ಮನಸ್ಸಿನಿಂದಲೂ ಪ್ರಕಾಶಿಸಬಾರದು. ಜಾಗರೂಕತೆಯಿಂದಿರಬೇಕು.

೨೮-೨೯. ಧರ್ಮಶಾಸ್ತ್ರದಲ್ಲಿರುವಂತೆಯೂ, ಪೂರ್ವಾಚಾರ್ಯರು ಹೇಳಿರುವಂತೆಯೂ ಶುಶ್ರೂಷೆಯ ವಿಷಯವನ್ನು ಹೇಳುತ್ತೇನೆ. ಮನೋವಾಕ್ಕಾಯಗಳಿಂದ ಶ್ರದ್ಧಾಪೂರ್ವಕವಾಗಿ ಗುರುಕಾರ್ಯವನ್ನು ಮಾಡಬೇಕು. ಅದರಿಂದ ಗುರುವಿನ ಅನುಗ್ರಹವುಂಟಾಗುತ್ತದೆ. ಅದೇ ಶುಶ್ರೂಷೆಯು.

೩೦. ಸಾಂಗವಾದ ಧರ್ಮವನ್ನು ಹೇಳಿದೆನು. ಇನ್ನೇನನ್ನು ಕೇಳಬೇಕಾದರೂ ಕೇಳು. ಹೇಳುತ್ತೇನೆ.

೩೧-೩೨. ಈ ರೀತಿಯಾದ ಧರ್ಮದ ಆಚರಣೆಯಲ್ಲಿದ್ದರೆ ಅವನು ಪುನಃ ಜನ್ಮವನ್ನು ಪಡೆಯುವುದಿಲ್ಲ. ಅಂಥವನು ಸ್ವರ್ಗವನ್ನು ಹೊಂದುತ್ತಾನೆ. ಸತ್ಯವಾಗಿಯೂ ಹೇಳುತ್ತೇನೆ. ಇದನ್ನು ತಿಳಿದು ಧರ್ಮವನ್ನಾಚರಿಸು.

**ಸರ್ವಂ ಹಿ ಪ್ರಾಪ್ಯತೇ ಕಾಂತ ಯದಸಾಧ್ಯಂ ಮಹೀತಲೇ ।**
**ಧರ್ಮಪ್ರಸಾದತಸ್ತಸ್ಮಾತ್ಕುರು ವಾಕ್ಯಂ ಮಮೈವ ಹಿ ॥ ೩೩ ॥**

**ಭಾರ್ಯಾಯಾಸ್ತು ವಚಃ ಶ್ರುತ್ವಾ ಸೋಮಶರ್ಮಾ ಸು ಬುದ್ಧಿಮಾನ್ ।**
**ಪುನಃ ಪ್ರೋವಾಚ ತಾಂ ಭಾರ್ಯಾಂ ಸುಮನಾಂ ಧರ್ಮವಾದಿನೀಂ ॥೩೪॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ**
**ಸುಮನೋಪಾಖ್ಯಾನೇ ತ್ರಯೋದಶೋಽಧ್ಯಾಯಃ**



---

೩೩. ಹೀಗೆ ಮಾಡಿದರೆ ಧರ್ಮದ ಪ್ರಸಾದದಿಂದ ಲೋಕದಲ್ಲಿ ಅಸಾಧ್ಯವಾದವುಗಳೆಲ್ಲಾ ದೊರೆಯುತ್ತವೆ. ಇದನ್ನು ಕೇಳಿ ನನ್ನ ಮಾತಿನಂತೆ ಮಾಡು.

೩೪. ಸೋಮಶರ್ಮನು ಹೆಂಡತಿಯ ಮಾತನ್ನು ಕೇಳಿ ಸಂತೋಷಪಟ್ಟು ಆಕೆಯನ್ನು ಕುರಿತು ಪುನಃ ಹೇಳತೊಡಗಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಮನೋಪಾಖ್ಯಾನದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ॥ ಚತುರ್ದಶೋಽಧ್ಯಾಯಃ ॥

ಸೋಮಶರ್ಮೋವಾಚ

ಏವಂ ವಿಧಂ ಮಹಾಪುಣ್ಯಂ ಧರ್ಮಾಖ್ಯಾನಮನುತ್ತಮಂ ।
ಕಥಂ ಜಾನಾಸಿ ಭದ್ರಂ ತೇ ಕಸ್ಮಾಚ್ಚೈವ ಶ್ರುತಂ ತ್ವಯಾ ॥ ೧ ॥

ಸುಮನೋವಾಚ

ಭಾರ್ಗವಾನಾಂ ಕುಲೇ ಜಾತಃ ಪಿತಾ ಮಮ ಮಹಾಮತೇ ।
ಚ್ಯವನೋ ನಾಮ ವಿಖ್ಯಾತಃ ಸರ್ವಜ್ಞಾನವಿಶಾರದಃ ॥ ೨ ॥

ತಸ್ಯಾಹಮಭವಂ ಕನ್ಯಾ ಪ್ರಾಣಾದಪಿ ಚ ವಲ್ಲಭಾ ।
ಯತ್ರ ಯತ್ರ ವ್ರಜತ್ಯೇಷ ತೀರ್ಥಾರಾಮೇಷು ಸುವ್ರತ ॥ ೩ ॥

ಸಭಾಸು ಚ ಮುನೀನಾಂ ತು ದೇವತಾಯತನೇಷು ಚ ।
ತೇನ ಸಾರ್ಧಂ ವ್ರಜಾಮ್ಯೇಕಾ ಕ್ರೀಡಮಾನಾ ಸದೈವ ಹಿ ॥ ೪ ॥

---

### ಹದಿನಾಲ್ಕನೆಯ ಅಧ್ಯಾಯ.

೧. ಸೋಮಶರ್ಮನು ಹೇಳುತ್ತಾನೆ:—ಈರೀತಿಯಾಗಿ ನೀನು ಹೇಳಿದ ಮಹಾ ಪುಣ್ಯಪ್ರದವಾದ ಧರ್ಮರಹಸ್ಯಗಳನ್ನು ನೀನು ನನಗೆ ಹೇಳಿದೆಯಷ್ಟೆ? ಹೇಗೆ ಅದನ್ನು ತಿಳಿದುಕೊಂಡೆ?

೨. ಸುಮನಳು ಹೇಳುತ್ತಾಳೆ:—ಭಾರ್ಗವವಂಶದಲ್ಲಿ ಹುಟ್ಟಿದ ಚ್ಯವನನೆಂಬು ವನಿಗೆ ನಾನು ಮಗಳು. ಅವನು ಪ್ರಸಿದ್ಧನಾದ ವಿದ್ವಾಂಸನು ಮತ್ತು ಸರ್ವಜ್ಞನು. ನನ್ನನ್ನು ಪ್ರಾಣಗಳಿಗಿಂತ ಹೆಚ್ಚೆಂದು ತಿಳಿದಿದ್ದನು.

೩-೪. ಈ ನಮ್ಮ ತಂದೆಯು, ತೀರ್ಥಗಳು, ತೋಟಗಳು, ಸಭೆಗಳು, ದೇವಸ್ಥಾನಗಳು ಮೊದಲಾದ ಸ್ಥಳಗಳಿಗೆ ಹೋಗುವಾಗ ನಾನೂ ಅವನ ಜೊತೆ ಯಲ್ಲಿಯೇ ಹೋಗುತ್ತಿದ್ದೆನು.

ಕೌಶಿಕಾನ್ವಯಸಂಭೂತೋ ವೇದಶರ್ಮಾ ಮಹಾಮತಿಃ ।
ಪಿತುರ್ಮಮ ಸಖಾ ಶೀಘ್ರಮಟಮಾನಃ ಸಮಾಗತಃ ॥ ೫ ॥

ದುಃಖೇನ ಮಹತಾಽವಿಷ್ಟಶ್ಚಿಂತಯಾನೋ ಮುಹುರ್ಮುಹುಃ ।
ತಮಾಗತಂ ಮಹಾತ್ಮಾನಮುವಾಚ ಚ ಪಿತಾ ಮಮ ॥ ೬ ॥

ಭವಂತಂ ದುಃಖಸಂತಪ್ತಮಿತಿ ಜಾನಾಮಿ ಸುವ್ರತ ।
ಕಸ್ಮಾದ್ದುಃಖೀ ಭವಾನ್ ಜಾತಸ್ತನ್ಮೇ ತ್ವಂ ಕಾರಣಂ ವದ ॥ ೭ ॥

ಏವಂ ವಾಕ್ಯಂ ತತಃ ಶ್ರುತ್ವಾ ಚ್ಯವನಸ್ಯ ಮಹಾತ್ಮನಃ ।
ತಮುವಾಚ ಮಹಾತ್ಮಾನಂ ಪಿತರಂ ಮಮ ಸುವ್ರತಃ ॥ ೮ ॥

ವೇದಶರ್ಮಾ ಮಹಾಪ್ರಾಜ್ಞಃ ಸರ್ವಂ ದುಃಖಸ್ಯ ಕಾರಣಂ ।
ಮಮ ಭಾರ್ಯಾ ಮಹಾಸಾಧ್ವೀ ಪತಿವ್ರತಪರಾಯಣಾ ॥ ೯ ॥

ಅಪುತ್ರಾ ಸಾ ಹಿ ಸಂಜಾತಾ ಮಮ ವಂಶೋ ನ ವಿದ್ಯತೇ ।
ಏತತ್ತೇ ಕಾರಣಂ ಪ್ರೋಕ್ತಂ ಪೃಚ್ಛಸೆ ತ್ವಂ ತು ಯಚ್ಚ ಮಾಂ ॥ ೧೦ ॥

---

೫. ಕೌಶಿಕವಂಶದಲ್ಲಿ ಹುಟ್ಟಿದ ವೇದಶರ್ಮನೆಂಬ ವಿದ್ವಾಂಸನು ನಮ್ಮ ತಂದೆಗೆ ಸ್ನೇಹಿತನು. ಅವನು ಅಲ್ಲಲ್ಲಿ ಸುತ್ತಾಡುತ್ತಾ ಒಂದುಸಾರಿ ನಮ್ಮ ಮನೆಗೆ ಬಂದನು.

೬-೭. ಅವನು ಬಹು ದುಃಖದಿಂದ ಪದೇಪದೇ ಯೋಚಿಸುತ್ತಲಿರುವಂತೆ ಕಂಡುಬಂದುದನ್ನು ನೋಡಿ ನಮ್ಮ ತಂದೆಯು ಆ ಮಹಾತ್ಮನನ್ನು ಕುರಿತು ನೀನು ದುಃಖದಿಂದ ತಪ್ತನಾಗಿರುವಂತೆ ತೋರುತ್ತದೆ. ಏತಕ್ಕೋಸ್ಕರ ನಿನಗೆ ಈ ದುಃಖ ಬಂದಿದೆ. ? ಕಾರಣವೇನು ? ಎಂದನು.

೮-೧೦. ನನ್ನ ತಂದೆಯಾದ ಚ್ಯವನನ ಈ ಮಾತನ್ನು ಕೇಳಿ ವೇದಶರ್ಮನು ತನ್ನ ಆ ದುಃಖಕ್ಕೆ ಕಾರಣವನ್ನು ಈರೀತಿ ಹೇಳಿದನು — ನನ್ನ ಹೆಂಡತಿಯು ಸಾಧ್ವಿಯು, ಪತಿವ್ರತೆಯು, ಆದರೆ ಆಕೆಗೆ ಪುತ್ರಸಂತಾನವಿಲ್ಲದೆ ಅಪುತ್ರವತಿಯಾಗಿ ರುವಳು. ನನಗೆ ವಂಶಾಭಿವೃದ್ಧಿಮಾಡಲು ಪುತ್ರನಿಲ್ಲ. ನೀನು ಕೇಳಿದೆಯಲ್ಲ, ಇದೇ ನನ್ನ ದುಃಖಕ್ಕೆ ಕಾರಣವು ಎಂದನು.

ಏತಸ್ಮಿನ್ನಂತರೇ ಪ್ರಾಪ್ತೇ ಕಶ್ಚಿತ್ಸಿದ್ಧಃ ಸಮಾಗತಃ ।
ಮಮ ಪಿತ್ರಾ ತಥಾ ತೇನ ಹ್ಯುತ್ಥಾಯ ವೇದಶರ್ಮಣಾ ॥ ೧೧ ॥

ದ್ವಾಭ್ಯಾಮೇವಾಪ್ಯಸೌ ಸಿದ್ಧಃ ಪೂಜಿತೋ ಭಕ್ತಿಪೂರ್ವಕಂ ।
ಉಪಚಾರೈಸ್ತು ಭೋಜ್ಯಾದ್ಯೈರ್ವಚನೈರ್ಮಧುರಾಕ್ಷರೈಃ ॥ ೧೨ ॥

ದ್ವಾಭ್ಯಾಮಂತರ್ಗತಂ ಪೃಷ್ಟಂ ಪೂರ್ವೋಕ್ತಂ ಚ ಯಥಾ ತ್ವಯಾ ।
ಉಭೌ ತೌ ಪ್ರಾಹ ಧರ್ಮಾತ್ಮಾ ಸಸುಖಂ ಪಿತರಂ ಮಮ ॥ ೧೩ ॥

ಧರ್ಮಸ್ಯ ಕಾರಣಂ ಸರ್ವಂ ಮಯೋಕ್ತಂ ತೇ ಯಥಾ ಕಿಲ ॥ ೧೪ ॥

ಧರ್ಮೇಣ ಪ್ರಾಪ್ಯತೇ ಪುತ್ರೋ ಧನಂ ಧಾನ್ಯಂ ತಥಾ ಸ್ತ್ರಿಯಃ ।
ತತಸ್ತೇನ ಕೃತಂ ಧರ್ಮಂ ಸಂಪೂರ್ಣಂ ವೇದಶರ್ಮಣಾ ॥ ೧೫ ॥

ತಸ್ಮಾದ್ಧರ್ಮಾತ್ಸುಸಂಜಾತಂ ಮಹತ್ಸೌಖ್ಯಂ ಸುಪುತ್ರಕಂ ।
ತೇನ ಸಂಗಪ್ರಸಂಗೇನ ಮಮ್ಯೈಷ ಮತಿನಿಶ್ಚಯಃ ॥ ೧೬ ॥

---

೧೧. ಇಷ್ಟರೊಳಗೆ ಒಬ್ಬ ಸಿದ್ಧನು ಅಲ್ಲಿಗೆ ಬಂದನು. ನಮ್ಮ ತಂದೆಯೂ, ಆತನೂ ಇಬ್ಬರೂ ಎದ್ದು ಭಕ್ತಿಯಿಂದ ಅವನನ್ನು ಸತ್ಕರಿಸಿದರು.

೧೨-೧೪. ಊಟ ಉಪಚಾರಗಳಿಂದಲೂ, ಒಳ್ಳೆಯ ಮಾತುಗಳಿಂದಲೂ ಆ ಮಹಾತ್ಮನನ್ನು ಸತ್ಕರಿಸಿ, ನಾನು ಹಿಂದೆ ಹೇಳಿದಂತೆ ಇಬ್ಬರೂ ತಮ್ಮ ಮನಸ್ಸಿನಲ್ಲಿರುವುದನ್ನೂ, ನಾನು ಹಿಂದೆ ಹೇಳಿದಂತೆ ವೇದಶರ್ಮನಿಗೆ ಪುತ್ರನಿಲ್ಲದ್ದರಿಂದ ಅವನಿಗೆ ಉಂಟಾಗಿರುವ ದುಃಖಕಾರಣವನ್ನೂ ಆ ಮಹಾತ್ಮನಿಗೆ ಹೇಳಿದರು.

೧೫. ಧರ್ಮದಿಂದ ಪುತ್ರ, ಧನ, ಧಾನ್ಯ, ಸ್ತ್ರೀಯರು, ಲಭಿಸುತ್ತಾರೆಂದು ಆ ಮಹಾತ್ಮನು ಹೇಳಲು, ವೇದಶರ್ಮನು ಸಂಪೂರ್ಣವಾದ ಧರ್ಮವನ್ನು ಮಾಡಿದನು.

೧೬. ಆದ್ದರಿಂದ ಸೌಖ್ಯದಾಯಕನಾದ ಮಗನು ಆತನಿಗೆ ಹುಟ್ಟಿದನು. ಅವರ ಸಮೀಪದಲ್ಲಿದ್ದುದರಿಂದ ನನಗೂ ಈ ಬುದ್ಧಿ ಬಂದಿದೆ.

ಯಥಾ ಕಾಂತ ತವ ಪ್ರೋಕ್ತಂ ಮಯ್ಯೈವ ಪರಮಂ ಶುಭಂ ।
ತಸ್ಮಾಚ್ಛ್ರುತಂ ಮಹಾಸಿದ್ಧಾತ್ಸರ್ವಸಂದೇಹನಾಶನಂ ॥
ವಿಪ್ರಧರ್ಮಂ ಸಮಾಶ್ರಿತ್ಯ ಹ್ಯನುವರ್ತಸ್ವ ಸರ್ವದಾ ॥ ೧೭ ॥

ಸೋಮಶರ್ಮೋವಾಚ

ಧರ್ಮೇಣ ಕೀದೃಶೋ ಮೃತ್ಯುರ್ಜನ್ಮ ಚೈವ ವದಸ್ವ ಮೇ ।
ಉಭಯೋರ್ಲಕ್ಷಣಂ ಕಾಂತೇ ತತ್ಸರ್ವಂ ಹಿ ಯಥಾಗಮಂ ॥ ೧೮ ॥

ಸುಮನೋವಾಚ

ಸತ್ಯಶೌಚಕ್ಷಮಾಶಾಂತಿತೀರ್ಥಪುಣ್ಯಾದಿಕೈಸ್ತಥಾ ।
ಧರ್ಮಶ್ಚ ಪಾಲಿತೋ ಯೇನ ತಸ್ಯ ಮೃತ್ಯುಂ ವದಾಮ್ಯಹಂ ॥ ೧೯ ॥

ರೋಗೋ ನ ಜಾಯತೇ ತಸ್ಯ ನ ಚ ಪೀಡಾ ಕಲೇವರೇ ।
ನ ಶ್ರಮೋ ನ ಚ ವೈ ಗ್ಲಾನಿರ್ನ ಚ ಸ್ವೇದೋ ಭ್ರಮಸ್ತಥಾ ॥ ೨೦ ॥

---

೧೭. ಎಲೈ ಕಾಂತನೇ, ನಾನು ಮೊದಲು ನಿನಗೆ ಹೇಳಿದಂತೆ, ಆ ಸಿದ್ಧನ ದೆಶೆಯಿಂದ ಸರ್ವಸಂದೇಹನಾಶಕವಾದ ಆ ವಿಷಯಗಳೆಲ್ಲವನ್ನೂ ಕೇಳಿ ತಿಳಿದಿರುವೆನು. ಆದುದರಿಂದ ಎಲೈ ವಿಪ್ರನೇ, ಧರ್ಮವನ್ನು ಆಶ್ರಯಿಸಿ ಅನುವರ್ತಿಸು.

೧೮. ಸೋಮಶರ್ಮನು ಹೇಳುತ್ತಾನೆ:—ಧರ್ಮದಿಂದ ಎಂಥಾ ಮರಣ, ಜನ್ಮಗಳು ಯಾವರೀತಿ ಉಂಟಾಗುತ್ತವೆ? ಈ ಜನ್ಮ ಮರಣಗಳ ಲಕ್ಷಣಗಳು ಎಂಥವು ಎಂಬುದನ್ನು ಶಾಸ್ತ್ರೋಕ್ತವಾಗಿ ಹೇಳು ಎನ್ನಲು,

೧೯. ಸುಮನಳು ಹೇಳುತ್ತಾಳೆ:—ಸತ್ಯ, ಶೌಚ, ಕ್ಷಮಾ, ಶಾಂತಿ, ತೀರ್ಥ, ಪುಣ್ಯಗಳಿಂದ ಯಾವನು ಧರ್ಮವನ್ನು ಪಾಲಿಸುತ್ತಾದೋ ಅವನಿಗೆ ಬರುವ ಮೃತ್ಯುವನ್ನು ಹೇಳುತ್ತೇನೆ ಕೇಳು.

೨೦-೨೧. ಅವನ ದೇಹದಲ್ಲಿ ರೋಗ ಹುಟ್ಟುವುದಿಲ್ಲ, ದೇಹದಲ್ಲಿ ಪೀಡೆಯಾಗುವುದಿಲ್ಲ, ಶ್ರಮ, ಬಾಡಿರುವುದು, ಭ್ರಮಗಳು ಮೊದಲಾದುವು ಉಂಟಾಗುವುದಿಲ್ಲ.

ದಿವ್ಯರೂಪಧರಾ ಭೂತ್ವಾ ಗಂಧರ್ವಾ ಬ್ರಾಹ್ಮಣಾಸ್ತಥಾ ।
ವೇದಪಾಠಸಮಾಯುಕ್ತಾ ಗೀತಜ್ಞಾನವಿಶಾರದಾಃ ॥ ೨೦ ॥

ತಸ್ಯ ಪಾರ್ಶ್ವೇ ಸಮಾಯಾಂತಿ ಸ್ತುತಿಂ ಕುರ್ವಂತಿ ಚಾಟುಲಾಂ ।
ಸ್ವಸ್ಥಃ ಸುಖಾಸನೇ ಯುಕ್ತೋ ದೇವಪೂಜಾಗತಃ ಕಿಲ ॥ ೨೨ ॥

ತೀರ್ಥಂ ಚ ಲಭತೇ ಪ್ರಾಜ್ಞಃ ಸ್ನಾನಾರ್ಥಂ ಧರ್ಮತತ್ಪರಃ ।
ಅಗ್ನ್ಯಾಗಾರೇ ಗವಾಂ ಸ್ಥಾನೇ ದೇವತಾಯತನೇಷು ಚ ॥ ೨೩ ॥

ಆರಾಮೇ ಚ ತಡಾಗೇ ವಾ ಯತ್ರಾಶ್ವತ್ಥೋ ವಟಸ್ತಥಾ ।
ಬ್ರಹ್ಮವೃಕ್ಷಂ ಸಮಾಶ್ರಿತ್ಯ ಶ್ರೀವೃಕ್ಷಂ ವಾ ತಥಾ ಪುನಃ ॥ ೨೪ ॥

ಅಶ್ವಸ್ಥಾನಂ ಸಮಾಶ್ರಿತ್ಯ ಗಜಸ್ಥಾನಗತೋ ನರಃ ।
ಅಶೋಕಂ ಚೂತವೃಕ್ಷಂ ಚ ಸಮಾಶ್ರಿತ್ಯ ಯಥಾ ಸ್ಥಿತಃ ॥ ೨೫ ॥

ಸಂನಿಧೌ ಬ್ರಾಹ್ಮಣಾನಾಂ ಚ ರಾಜವೇಶ್ಮಗತೋಽಥವಾ ।
ರಣಭೂಮಿಂ ಸಮಾಶ್ರಿತ್ಯ ಪೂರ್ವಂ ಯತ್ರ ಮೃತೋ ಭವೇತ್ ॥ ೨೬ ॥

ಮೃತ್ಯುಸ್ಥಾನಾನಿ ಪುಣ್ಯಾನಿ ಕೇವಲಂ ಧರ್ಮಕಾರಣಂ ।
ಗೋಗೃಹಂ ತು ಸುಸಂಪ್ರಾಪ್ಯ ತಥಾ ಚಾಮರಕಂಟಕಂ ॥ ೨೭ ॥

---

ಅವನ ಮರಣಕಾಲದಲ್ಲಿ ಗಂಧರ್ವರು, ಬ್ರಾಹ್ಮಣರು, ವೇದಪಾಠ ಮಾಡುತ್ತಾ, ಸಂಗೀತ ಹಾಡುತ್ತ ಅವನ ಪಕ್ಕದಲ್ಲಿ ಮನೋಹರವಾದ ಸ್ತೋತ್ರವನ್ನು ಮಾಡುತ್ತಾರೆ.

೨೨-೨೬. ಸುಖವಾಗಿದ್ದು, ದೇವರಪೂಜೆ ಮಾಡುವಾಗ, ತೀರ್ಥವನ್ನು ತೆಗೆದುಕೊಂಡು, ಅಗ್ನಿಹೋತ್ರದ ಮನೆ, ಗೋವಿನ ಕೊಟ್ಟಿಗೆ, ದೇವಸ್ಥಾನ, ತೋಟ, ಕೆರೆ, ಅಶ್ವತ್ಥ ಅಥವಾ ಆಲದಮರವಿರುವ ಜಾಗ, ತುಳಸಿ ಬಿಲ್ವಗಳು ಇರುವ ಸ್ಥಳ, ಕುದುರೆಯ ಲಾಯ, ಗಜಶಾಲೆ, ಆಶೋಕ ಮಾವು ಮೊದಲಾದ ವೃಕ್ಷಗಳ ಸಮೀಪ, ಬ್ರಾಹ್ಮಣರ ಸನ್ನಿಧಿ, ಅರಮನೆ, ರಣಭೂಮಿ ಮೊದಲಾದ ಪವಿತ್ರಸ್ಥಳಗಳಲ್ಲಿ ಅವನಿಗೆ ಮರಣವುಂಟಾಗುವುದು.

೨೭-೨೯. ಮೇಲೆಹೇಳಿದ ಪುಣ್ಯಸ್ಥಾನಗಳು ಧರ್ಮಕಾರಣಗಳು. ಧರ್ಮಿಷ್ಠ

ಶುದ್ಧಧರ್ಮಕರೋ ನಿತ್ಯಂ ಧರ್ಮಾತ್ಮಾ ಧರ್ಮವತ್ಸಲಃ ।
ಏವಂ ಸ್ಥಾನಂ ಸಮಾಪ್ನೋತಿ ಯದಾ ಮೃತ್ಯುಂ ಸಮಾಶ್ರಿತಃ ॥ ೨೮ ॥

ಮಾತರಂ ಪಶ್ಯತೇ ಪುಣ್ಯಾಂ ಪಿತರಂ ಚ ನರೋತ್ತಮಂ ।
ಭ್ರಾತರಂ ಶ್ರೇಯಸಾ ಯುಕ್ತಮನ್ಯಂ ಸ್ವಜನಬಾಂಧವಂ ॥ ೨೯ ॥

ಬಂದೀಜನೈಸ್ತಥಾ ಪುಣ್ಯೈಃ ಸ್ತೂಯಮಾನಃ ಪುನಃ ಪುನಃ ।
ಪಾಪಿಷ್ಠಂ ನೈವ ಪಶ್ಯೇತ ನಾನ್ಯಂ ಶೂದ್ರಾದಿಕಂ ಪುನಃ ॥ ೩೦ ॥

ಗೀತಂ ಗಾಯಂತಿ ಗಂಧರ್ವಾಃ ಸ್ತುವಂತಿ ಸ್ತಾವಕಾಃ ಸ್ತವೈಃ ।
ಮಂತ್ರಪಾಠೈಸ್ತಥಾ ವಿಪ್ರಾ ಮಾತಾ ಸ್ನೇಹೇನ ಪೂಜಯೇತ್ ॥ ೩೧ ॥

ಪಿತಾ ಸ್ವಜನವರ್ಗಶ್ಚ ಧರ್ಮಾತ್ಮಾನಂ ಮಹಾಮತಿಂ ।
ಏವಂ ಮೃತ್ಯುಃ ಸಮಾಖ್ಯಾತಃ ಪುಣ್ಯಸ್ಥಾನೇಷು ವೈ ಪ್ರಭೋ ॥ ೩೨ ॥

---

ನಿಗೆ ಮೃತ್ಯುಬಂದಾಗ ದನದ ಕೊಟ್ಟಿಗೆಯನ್ನಾಗಲಿ, ತೀರ್ಥಕ್ಷೇತ್ರಗಳನ್ನಾಗಲಿ ಹೊಂದಿ ಮೃತನಾಗುತ್ತಾನೆ.

೨೯. ಹೀಗೆ ಸಾಯಲು ಅನುವಾದವನು ಪುಣ್ಯರೂಪಿಣಿಯಾದ ತನ್ನ ತಾಯಿಯನ್ನೂ, ತಂದೆಯನ್ನೂ, ಸಹೋದರರನ್ನೂ, ಸ್ವಜನ ಬಂಧುಗಳನ್ನೂ ಮರಣಕಾಲದಲ್ಲಿ ನೋಡುವ ಯೋಗವನ್ನು ಹೊಂದುತ್ತಾನೆ.

೩೦. ಆತನನ್ನು ವಂದಿಗಳು ಹೊಗಳುತ್ತಾರೆ, ಶೂದ್ರಾದಿಗಳಾದ ಪಾಪಿಷ್ಠರು ಅವನ ದೃಷ್ಟಿಗೆ ಗೋಚರವಾಗುವುದಿಲ್ಲ.

೩೧. ಗಂಧರ್ವರು, ಸ್ತುತಿಪಾಠಕರು ಸ್ತೋತ್ರಮಾಡುತ್ತಿರುತ್ತಾರೆ, ಬ್ರಾಹ್ಮಣರು ವೇದ ಹೇಳುತ್ತಿರುತ್ತಾರೆ, ತಾಯಿಯು ಸ್ನೇಹದಿಂದ ಮಾತನಾಡಿಸುತ್ತಾಳೆ.

೩೨. ತಂದೆಯೂ, ಸ್ವಜನರೂ, ಆತನನ್ನು ಗೌರವಿಸುತ್ತಾರೆ. ಈರೀತಿಯಾಗಿ ಪುಣ್ಯವಂತನಿಗೆ ಪುಣ್ಯಸ್ಥಾನಗಳಲ್ಲಿ ಮೃತ್ಯು ಬರುತ್ತದೆ.

ಪ್ರತ್ಯಕ್ಷಾನ್ ಪಶ್ಯತೇ ದೂತಾನ್ ಹಾಸ್ಯಸ್ನೇಹಸಮನ್ವಿತಾನ್ ।
ನ ಚ ಸ್ವಪ್ನೇನ ಮೋಹೇನ ಕ್ಲೇಶಯುಕ್ತೇನ ನೈವ ಚ ॥ ೩೩ ॥

ಧರ್ಮರಾಜೋ ಮಹಾಪ್ರಾಜ್ಞೋ ಭವಂತಂ ತು ಸಮಾಹ್ವಯೇತ್ ।
ಏಹ್ಯೇಹಿ ತ್ವಂ ಮಹಾಭಾಗ ಯತ್ರ ಧರ್ಮಃ ಸ ತಿಷ್ಠತಿ ॥ ೩೪ ॥

ತಸ್ಯ ನೋ ಮೋಹಸಂಪ್ರಾಪ್ತಿರ್ನ ಗ್ಲಾನಿಃ ಸ್ಮೃತಿವಿಭ್ರಮಃ ।
ಜಾಯತೇ ನಾತ್ರ ಸಂದೇಹಃ ಪ್ರಸನ್ನಾತ್ಮಾ ಭವಿಷ್ಯತಿ ॥ ೩೫ ॥

ಜ್ಞಾನವಿಜ್ಞಾನಸಂಪನ್ನಃ ಸ್ಮರೇದೇವಂ ಜನಾರ್ದನಂ ।
ತೈಃ ಸಾರ್ಧಂ ತು ಪ್ರಯಾತ್ಯೇವಂ ಸಂತುಷ್ಟೋ ಹೃಷ್ಟಮಾನಸಃ ॥ ೩೬ ॥

ಏಕತ್ವಂ ಜಾಯತೇ ತಸ್ಯ ತ್ಯಜತಃ ಸ್ವಂ ಕಲೇವರಂ ।
ದಶಮದ್ವಾರಮಾಶ್ರಿತ್ಯ ಹ್ಯಾತ್ಮಾ ತಸ್ಯ ಸ ಗಚ್ಛತಿ ॥ ೩೭ ॥

---

೩೩. ಮರಣಾನಂತರ ಸ್ನೇಹದಿಂದಲೂ, ಹಾಸ್ಯದಿಂದಲೂ ಮಾತನಾಡಿ ಕರದೊಯ್ಯುವ ದೂತರು ಅದನ ದೃಷ್ಟಿಗೆ ಗೋಚರಿಸುತ್ತಾರೆ. ಸ್ವಪ್ನ, ಮೋಹ ಮೊದಲಾದ ಯಾವ ಕ್ಲೇಶಗಳೂ ಅವನಿಗಿರುವುದಿಲ್ಲ.

೩೪. ಮಹಾ ಪ್ರಾಜ್ಞನಾದ ಧರ್ಮರಾಜನು ನಿನ್ನನ್ನು ನೋಡಲು ಕರೆಯು ತ್ತಾನೆ. ಆವನಿರುವ ಜಾಗಕ್ಕೆ ಬಾರಪ್ಪ, ಎಂದು ಪರಲೋಕದ ದೂತರು ಕರೆಯುತ್ತಾರೆ.

೩೫. ಆವನಿಗೆ ಅಜ್ಞಾನವಾಗಲಿ, ದುಃಖವಾಗಲಿ, ವಿಸ್ಮೃತಿಯಾಗಲಿ ಉಂಟಾ ಗುವುದಿಲ್ಲ. ಶುದ್ಧನಾಗಿರುತ್ತಾನೆ.

೩೬. ಜ್ಞಾನ ವಿಜ್ಞಾನಗಳಿಂದಕೂಡಿ ಜನಾರ್ದನನನ್ನು ಸ್ಮರಿಸುತ್ತಿರುತ್ತಾನೆ. ಆ ದೂತರೊಡನೆ ಮಾತನಾಡುತ್ತಾ ಸಂತೋಷದಿಂದ ಅವರೊಡನೆ ಹೋಗುತ್ತಾನೆ.

೩೭. ದೇಹವನ್ನು ಬಿಡುವ ಈತನಿಗೆ ಎಲ್ಲವೂ ಒಂದಾಗಿಯೇ ಕಾಣುತ್ತದೆ. ನವದ್ವಾರಗಳನ್ನು ಬಿಟ್ಟು ಹತ್ತನೆಯದಾದ ಬ್ರಹ್ಮರಂಧ್ರದಿಂದ ಪ್ರಾಣ ಹೋಗುತ್ತದೆ.

ಶಿಬಿಕಾತಸ್ಯ ಚಾಽಽಯಾತಿ ಹಂಸಯಾನಂ ಮನೋಹರಂ ।
ವಿಮಾನೈರೇವ ಸಂಯಾತಿ ಹರೇರ್ಧಾಮ ಹ್ಯನುತ್ತಮಂ ॥ ೩೮ ॥

ಛತ್ರೇಣ ಧ್ರಿಯಮಾಣೇನ ಚಾಮರೈರ್ವ್ಯಜನೈಸ್ತಥಾ ।
ವೀಜ್ಯಮಾನಃ ಸ ಧರ್ಮಾತ್ಮಾ ಪುಣ್ಯೈರೇವ ಸಮಂತತಃ ॥ ೩೯ ॥

ಗೀಯಮಾನಸ್ತು ಧರ್ಮಾತ್ಮಾ ಸ್ತೂಯಮಾನಶ್ಚ ಪಂಡಿತೈಃ ।
ವಂದಿಭಿಶ್ಚಾರಣೈರ್ದಿವ್ಯೈರ್ಬ್ರಾಹ್ಮಣೈರ್ವೇದಪಾರಗೈಃ ॥ ೪೦ ॥

ಸಾಧುಭಿಃ ಸ್ತೂಯಮಾನಸ್ತು ಸರ್ವಸೌಖ್ಯಸಮನ್ವಿತಃ ।
ಯಥಾ ದಾನಪ್ರಭಾವೇನ ಫಲಮಾಪ್ನೋತಿ ತತ್ರ ಸಃ ॥ ೪೧ ॥

ಆರಾಮವಾಟಿಕಾಮಧ್ಯೇ ಸ ಪ್ರಯಾತಿ ಸುಖೇನ ವೈ ।
ಅಪ್ಸರೋಭಿಃ ಸಮಾಕೀರ್ಣೋ ದಿವ್ಯಾಭಿರ್ಮಂಗಲೈರ್ಯುತಃ ॥ ೪೨ ॥

ದೇವೈಃ ಪ್ರಸ್ತೂಯಮಾನಸ್ತು ಧರ್ಮರಾಜಂ ಪ್ರಪಶ್ಯತಿ ।
ದೇವಾಶ್ಚ ಧರ್ಮಸಂಯುಕ್ತಾ ಜಗ್ಮುಃ ಸಂಮುಖಮೇವ ತಂ ॥ ೪೩ ॥

---

೩೮. ಪರಲೋಕಕ್ಕೆ ಹೋಗಲು ಹಂಸಯಾನದಿಂದ ಕೂಡಿದ ಮೇನವು ಅವನಿಗೆ ಬರುತ್ತದೆ. ಅಂತಹ ವಿಮಾನದಲ್ಲಿ ಕುಳಿತು ವಿಷ್ಣುಲೋಕವನ್ನು ಹೊಂದುತ್ತಾನೆ.

೩೯. ಅವನು ಮಾಡಿದ ಪುಣ್ಯದಿಂದ ಅವನಿಗೆ ದೂತರು ಛತ್ರಿಯನ್ನು ಹಿಡಿಯುತ್ತಾರೆ. ಚಾಮರವನ್ನು ಬೀಸುತ್ತಾರೆ.

೪೦-೪೧. ಗೀತವನ್ನೂ ಸ್ತೋತ್ರವನ್ನೂ ಕೇಳುತ್ತ, ಸಾಧುಗಳಿಂದ ಹೊಗಳಿಸಿಕೊಳ್ಳುತ್ತಾ, ಸರ್ವಸೌಖ್ಯದಿಂದ ಹೋಗುತ್ತಾನೆ. ಹೀಗೆ ದಾನಪ್ರಭಾವವನ್ನು ಅನುಭವಿಸುತ್ತಾನೆ.

೪೨-೪೩. ತೋಟಗಳು, ಉದ್ಯಾನಗಳು, ಇವುಗಳ ಮಧ್ಯದಲ್ಲಿ ಇವನು ಪ್ರಯಾಣಮಾಡುತ್ತಿರುವಾಗ ಅಪ್ಸರಸ್ತ್ರೀಯರು ಇವನನ್ನು ಓಲೈಸುವರು. ಮಂಗಳ ವಾದ್ಯಗಳು ಭೋರ್ಗರೆಯುವವು. ದೇವತೆಗಳು ಹೊಗಳುವರು. ಈರೀತಿ ಮಹಾ ವೈಭವದಿಂದ ಧರ್ಮರಾಜನನ್ನು ನೋಡಲು ಹೋಗುತ್ತಾನೆ. ದೇವತೆಗಳೂ, ಧರ್ಮಿಷ್ಠರೂ ಅಲ್ಲಿ ಅವನನ್ನು ಎದುರುಗೊಳ್ಳುತ್ತಾರೆ.

ಏಹ್ಯೇಹಿ ವೈ ಮಹಾಭಾಗ ಭುಂಕ್ಷ್ವ ಭೋಗಾನ್ ಮನೋನುಗಾನ್ ।
ಏವಂ ಸ ಪಶ್ಯತೇ ಧರ್ಮಂ ಸೌಮ್ಯರೂಪಂ ಮಹಾಮತಿಂ ॥ ೪೪ ॥

ಸ್ವಸ್ಯ ಪುಣ್ಯಸ್ಯ ಭಾವೇನ ಭುಂಜತೇ ಸ್ವರ್ಗಮೇವ ಸಃ ।
ಭೋಗಕ್ಷಯಾತ್ಸ ಧರ್ಮಾತ್ಮಾ ಪುನರ್ಜನ್ಮ ಪ್ರಯಾತಿ ವೈ ॥ ೪೫ ॥

ನಿಜಧರ್ಮಪ್ರಸಾದಾತ್ಸ ಕುಲಂ ಪುಣ್ಯಂ ಪ್ರಯಾತಿ ವೈ ।
ಬ್ರಾಹ್ಮಣಸ್ಯ ತು ಪುಣ್ಯಸ್ಯ ಕ್ಷತ್ರಿಯಸ್ಯ ತಥೈವ ಚ ॥ ೪೬ ॥

ಧನಾಢ್ಯಸ್ಯ ಸುಪುಣ್ಯಸ್ಯ ವೈಶ್ಯಸ್ಯೈವ ಮಹಾಮತೇ ।
ಧರ್ಮೇಣ ಮೋದತೇ ತತ್ರ ಪುನಃ ಪುಣ್ಯಂ ಕರೋತಿ ಸಃ ॥ ೪೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ಸುಮನೋಪಾಖ್ಯಾನೇ ಚತುರ್ದಶೋಽಧ್ಯಾಯಃ

---

೪೪. ಪುಣ್ಯಾತ್ಮನೇ ಇಲ್ಲಿಗೆ ಬಾ, ಮಹಾ ಭೋಗಗಳನ್ನು ಅನುಭವಿಸು, ಎಂದು ಉಪಚಾರಗಳನ್ನು ಹೇಳುತ್ತಾ ಧರ್ಮರಾಜನು ಸೌಮ್ಯರೂಪದಿಂದ ಆತನನ್ನು ನೋಡುತ್ತಾನೆ.

೪೫. ಹೀಗೆ ತನ್ನ ಪುಣ್ಯಪ್ರಭಾವದಿಂದ ಸ್ವರ್ಗವನ್ನು ಅನುಭವಿಸುತ್ತಾನೆ. ಪುಣ್ಯವು ತೀರಲು ಭೋಗಗಳ ನಾಶಾನಂತರದಲ್ಲಿ ಪುನಃ ಜನ್ಮ ತಾಳುತ್ತಾನೆ.

೪೬-೪೭. ಇದಲ್ಲದೆ ತನ್ನ ಪುಣ್ಯದಿಂದ ಮತ್ತೆ ಉತ್ತಮಕುಲದಲ್ಲಿಯೇ ಹುಟ್ಟುತ್ತಾನೆ. ಧನಾಢ್ಯರಾದ ಬ್ರಹ್ಮ, ಕ್ಷತ್ರಿಯ, ವೈಶ್ಯರಮನೆಯಲ್ಲಿ ಹುಟ್ಟಿ ಮತ್ತೆಯೂ ಪುಣ್ಯವನ್ನು ಮಾಡುತ್ತಾನೆ.

ಇಲ್ಲಿಗೆ ಪದ್ಮ ಮಹಾಪುರಾಣದ ಭೂಮಿಖಂಡದಲ್ಲಿ ಸುಮನೋಪಾಖ್ಯಾನದಲ್ಲಿ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

—0—

ಶ್ರೀ

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
## ॥ ಪಂಚದಶೋಽಧ್ಯಾಯಃ ॥

॥ ಸೋಮಶರ್ಮೋವಾಚ ॥

ಪಾಪಿನಾಂ ಮರಣಂ ಭದ್ರೇ ಕೀದೃಶೈರ್ಲಕ್ಷಣೈರ್ಯುತಂ ।
ತನ್ಮೇ ತ್ವಂ ವಿಸ್ತರಾದ್ಬ್ರೂಹಿ ಯದಿ ಜಾನಾಸಿ ಭಾಮಿನಿ ॥ ೧ ॥

॥ ಸುಮನೋವಾಚ ॥

ಶ್ರೂಯತಾಮಭಿಧ್ಯಾಸ್ಯಾಮಿ ತಸ್ಮಾತ್ಸಿದ್ಧಾಚ್ಛ್ರುತಂ ಮಯಾ ।

ಪಾಪಿನಾಂ ಮರಣೇ ಕಾಂತ ಯಾದೃಶಂ ಲಿಂಗಮೇವ ಚ ॥
ಮಹಾಪಾತಕಿನಾಂ ಚೈವ ಸ್ಥಾನಂ ಚೇಷ್ಟಾಂ ವದಾಮ್ಯಹಂ ॥ ೨ ॥

ವಿಣ್ಮೂತ್ರಾಮೇಧ್ಯಸಂಯುಕ್ತಾಂ ಭೂಮಿಂ ಪಾಪಿಸಮನ್ವಿತಾಂ।
ಸ ತಾಂ ಪ್ರಾಪ್ಯ ಸುದುಷ್ಟಾತ್ಮಾ ಪ್ರಾಣಾನ್ ದುಃಖೇನ ಮುಂಚತಿ ॥ ೩ ॥

---

### ಹದಿನೈದನೆಯ ಅಧ್ಯಾಯವು.

೧. ಸೋಮಶರ್ಮನು ಹೇಳುತ್ತಾನೆ:—ಎಲೌ ಮಂಗಳಾಂಗಿ, ಪುಣ್ಯಾತ್ಮರು ಮೃತರಾಗಿ ಉತ್ತಮಲೋಕವನ್ನು ಹೊಂದುವ ರೀತಿಯನ್ನು ಹೇಳಿದೆಯಷ್ಟೆ? ಈಗ ಪಾಪಿಗಳು ಹೇಗೆ ಮರಣವನ್ನು ಹೊಂದುವರು? ಅವರ ಮರಣದ ಲಕ್ಷಣವೇನು? ಎಂಬುದನ್ನು ನನಗೆ ವಿಸ್ತಾರವಾಗಿ ಹೇಳು.

೨. ಸುಮನಳು ಹೇಳುತ್ತಾಳೆ:—ಆ ಸಿದ್ಧನಿಂದ ನಾನು ಕೇಳಿರುವುದನ್ನು ಹೇಳುತ್ತೇನೆ. ಪಾಪಿಗಳ ಮರಣದ ಚಿನ್ಹೆಗಳನ್ನೂ, ಮಹಾಪಾತಕಿಗಳ ಚೇಷ್ಟೆಗಳನ್ನೂ ಹೇಳುತ್ತೇನೆ, ಕೇಳು.

೩. ಪಾಪಿಷ್ಠನು ಮಲಮೂತ್ರಗಳಿಂದ ಅಪರಿಶುದ್ಧವಾದ ಪಾಪಭೂಮಿಯಲ್ಲಿ ದುಃಖದಿಂದ ಪ್ರಾಣಬಿಡುತ್ತಾನೆ.

**ಚಾಂಡಾಲಭೂಮಿಮಾಸಾದ್ಯ ಮರಣಂ ಯಾತಿ ದುಃಖಿತಃ ।**
**ಗರ್ದಭೈರಾವೃತಾಂ ಭೂಮಿಂ ವೇಶ್ಯಾಗೇಹಂ ಸಮಾಶ್ರಿತಃ　॥ ೪ ॥**

**ಚರ್ಮಕಾರಗೃಹಂ ಗತ್ವಾ ನಿಧನಾಯೋಪಗಚ್ಛತಿ ।**
**ಅಸ್ಥಿಚರ್ಮನಖೈಃ ಪೂರ್ಣಾಮಾಶ್ರಿತಾಂ ಪಾಪಕಿಲ್ಬಿಷೈಃ　॥ ೫ ॥**

**ತಾಂ ಪ್ರಾಪ್ಯ ಚೈವ ದುಷ್ಟಾತ್ಮಾ ಮೃತ್ಯುಂ ಯಾತಿ ಸ ನಿಶ್ಚಿತಂ ।**
**ಅನ್ಯಾಂ ಪಾಪಸಮಾಚಾರಾಂ ಪ್ರಾಪ್ಯ ಮೃತ್ಯುಂ ಸ ಗಚ್ಛತಿ　॥ ೬ ॥**

**ಅಥ ಚೇಷ್ಟಾಂ ಪ್ರವಕ್ಷ್ಯಾಮಿ ದೂತಾನಂ ತು ತಮಿಚ್ಛತಾಂ ।**
**ಭೈರವಾನ್ದಾರುಣಾನ್ ಘೋರಾನತಿಕೃಷ್ಣಾನ್ಮಹೋದರಾನ್　॥ ೭ ॥**

**ಪಿಂಗಾಕ್ಷಾನ್ಪೀತನೀಲಾಂಶ್ಚ ಹ್ಯತಿಶ್ವೇತಾನ್ಮಹೋದರಾನ್ ।**
**ಅತ್ಯುಚ್ಚಾನ್ವಿಕರಾಳಾಂಶ್ಚ ಶುಷ್ಕಮಾಂಸತ್ವಚೋಪಮಾನ್　॥ ೮ ॥**

**ರೌದ್ರದಂತಾನ್ಕರಾಳಾಸ್ಯಾನ್ ಸಿಂಹಾಸ್ಯಾನ್ಸರ್ಪಹಸ್ತಕಾನ್ ।**
**ಸ ತಾನ್ ದೃಷ್ಟ್ವಾ ಪ್ರಕಂಪೇತ ಸ್ವಿದ್ಯತೇ ಚ ಮುಹುರ್ಮುಹುಃ　॥ ೯ ॥**

---

೪-೬. ಚಂಡಾಲರಿರುವ ಜಾಗ, ಕತ್ತೆಗಳಿರುವ ಜಾಗ, ವೇಶ್ಯೆಯರಿರುವ ಮನೆ, ಮೋಚಿಯ ಮನೆ, ಮೂಳೆ, ಚರ್ಮ, ಕೂದಲುಗಳಿಂದ ಅಪರಿಶುದ್ಧವಾದ ಜಾಗ, ಅಥವಾ ಇತರವಿಧವಾದ ಪಾಪಕರ್ಮಗಳಿಂದ ಕೂಡಿದ ಸ್ಥಳ, ಇಂತಹ ಸ್ಥಳಗಳಲ್ಲಿ ಪಾಪಿಷ್ಠನು ಮರಣವನ್ನೈದುವನು.

೭-೯. ಅವನು ಮರಣಕಾಲದಲ್ಲಿ ಕಾಣುವ ದೂತರ ಲಕ್ಷಣವನ್ನು ಹೇಳುತ್ತೇನೆ ಕೇಳು—ಅವರು ಭಯಂಕರರು, ಕ್ರೂರರು, ಕಪ್ಪಾದವರು, ದಪ್ಪನಾದ ಹೊಟ್ಟೆ, ಎತ್ತರವಾದ ಆಕೃತಿ ಇವುಗಳಿಂದ ಕೂಡಿರುವರು. ನೋಡುವುದಕ್ಕೆ ಅಸಹ್ಯರಾದವರು ಮಾಂಸಚರ್ಮಗಳಿಲ್ಲದೆ ಒಣಗಿಕೊಂಡಿರುವ ಶರೀರವುಳ್ಳವರು, ಹಲ್ಲು ವಕ್ರವಾಗಿರುವವರು, ಸಿಂಹಮುಖರು, ಕೈಯಲ್ಲಿ ಸರ್ಪವನ್ನು ಹಿಡಿದಿರುವವರು, ಇಂತಹ ಭಯಂಕರಾಕಾರರಾದ ದೂತರನ್ನು ನೋಡಿ ಆ ಪಾಪಿಷ್ಠನು ಪದೇಪದೇ ಹೆದರುತ್ತಾನೆ.

ಖಿದ್ಯಮಾನಸ್ಯ ಯಾ ಚೇಷ್ಟಾ ತಾಮೇವಂ ಪ್ರವದಾಮ್ಯಹಂ ।
ಪರದ್ರವ್ಯಾಪಹರಣಂ ಪರಭಾರ್ಯಾವಿಡಂಬನಂ ॥ ೧೦ ॥

ಋಣಂ ಪರಸ್ಯ ಪೂರ್ವಂ ಚ ಗೃಹೀತಂ ಯತ್ತು ಪಾಪಿಭಿಃ ।
ಪರತೋ ನ ಪ್ರದತ್ತಂ ಹಿ ಲೋಭಸ್ವಾದೇನ ಮೋಹಿತೈಃ ॥ ೧೧ ॥

ಅನ್ಯಮೇವ ಮಹಾಪಾಪಂ ಕುಪ್ರತಿಗ್ರಹಮೇವ ಚ ।
ಕಂಠಮಾಯಾಂತಿ ತೇ ಸರ್ವೇ ಮ್ರಿಯಮಾಣಸ್ಯ ತಸ್ಯ ಚ ॥ ೧೨ ॥

ಯಾನಿ ಕಾನಿ ಚ ಪಾಪಾನಿ ಪೂರ್ವಮೇವ ಕೃತಾನಿ ಚ ।
ಆಯಾಂತಿ ಕಂಠಮೂಲಂ ತೇ ಮಹಾಪಾಪಸ್ಯ ನಾನ್ಯಥಾ ॥ ೧೩ ॥

ದುಃಖಮುತ್ಪಾದಯಂತ್ಯೇತೆ ಕಫಬಂಧೇನ ದಾರುಣಂ ।
ಪೀಡಾಭಿರ್ದಾರುಣಾಭಿಶ್ಚ ಕಂಠೇ ಘುರುಘುರಾಯತೇ ॥ ೧೪ ॥

ರೋದತೇ ಕಂಪತೇಽತ್ಯರ್ಥಂ ಮಾತರಂ ಪಿತರಂ ಪುನಃ ।
ಸ್ಮರತೇ ಭ್ರಾತರಸ್ತತ್ರ ಭಾರ್ಯಾಂ ಪುತ್ರಾನ್ಪುನಃ ಪುನಃ ॥ ೧೫ ॥

ಪುನರ್ವಿಸ್ಮರಣಂ ಯಾತಿ ಮಹಾಪಾಪೇನ ಮೋಹಿತಃ ।
ತಸ್ಯ ಪ್ರಾಣಾ ನ ಗಚ್ಛಂತಿ ಬಹುಪೀಡಾಸಮಾಕುಲಾಃ ॥ ೧೬ ॥

---

೧೦-೧೨. ಪಾಪಕರ್ಮವನ್ನು ಮಾಡುವವನು ಅನುಭವಿಸುವ ದುಃಖಗಳನ್ನು ಹೇಳುತ್ತೇನೆ, ಕೇಳು—ಪರದ್ರವ್ಯಾಪಹರಣ, ಪರರ ಹೆಂಡತಿಯಲ್ಲಿ ಆಸಕ್ತಿ, ಸಾಲ ತೆಗೆದುಕೊಂಡ ದುಡ್ಡನ್ನು ಪುನಃ ಕೊಡದಿರುವುದು, ಅಯೋಗ್ಯರಿಂದ ದಾನ ತೆಗೆದು ಕೊಳ್ಳುವುದು ಇವೇ ಮೊದಲಾದ ಪಾಪಕೃತ್ಯಗಳನ್ನು ಮಾಡಿದವರಿಗೆ ಸಾಯುವಾಗ ಈ ಪಾಪವೆಲ್ಲವೂ ಕುತ್ತಿಗೆಯನ್ನು ಹಿಡಿಯುತ್ತವೆ.

೧೩-೧೬. ಇನ್ನೂ ಮತ್ತಾವ ಪಾಪಗಳುಂಟೋ ಅವೆಲ್ಲವೂ ಕುತ್ತಿಗೆಯಲ್ಲಿ ಬಂದು ಸೇರುತ್ತವೆ. ಈ ಪಾಪಗಳು ಕಫದ ಕಟ್ಟುವಿಕೆಯಿಂದ ತೊಂದರೆ ಮಾಡುತ್ತ ಕುತ್ತಿಗೆಯಲ್ಲಿ ಘುರುಘುರು ಎನ್ನುತ್ತವೆ. ಈ ಕ್ಲೇಶವನ್ನು ತಾಳಲಾರದೆ ಅಳುತ್ತಾನೆ, ನಡಗುತ್ತಾನೆ. ತಾಯಿತಂದೆಗಳು, ಅಣ್ಣತಮ್ಮಂದಿರು, ಹೆಂಡತಿ, ಮಕ್ಕಳನ್ನು ಪದೇ ಪದೇ ಸ್ಮರಿಸುತ್ತಾನೆ. ಮಹಾ ಪಾಪದಿಂದ ಮೋಹಿತನಾಗಿ ಪುನಃ ಮೂರ್ಛೆಹೋಗುತ್ತಾನೆ. ಬಹು ಕಷ್ಟಪಡುತ್ತಿದ್ದರೂ ಅವನ ಪ್ರಾಣಗಳು ಸುಲಭವಾಗಿ ಹೋಗುವುದಿಲ್ಲ.

ಏಜತೇ ತಾಮ್ಯತೇ ಚೈವ ಮೂರ್ಛತೇ ಚ ಪುನಃ ಪುನಃ ।
ಏವಂ ಪೀಡಾಶತಾಯುಕ್ತೋ ದುಃಖಂ ಭುಂಕ್ತೇಽತಿಮೋಹಿತಃ ॥ ೧೭ ॥

ತಸ್ಯ ಪ್ರಾಣಾಃ ಸುದುಃಖೇನ ಮಹಾಕಷ್ಟೈಃ ಪ್ರಚಾಲಿತಾಃ ।
ಭಯಂ ಘೋರಂ ಸಮಾಶ್ರಿತ್ಯ ಶೃಣು ಕಾಂತ ಪ್ರಯಾಂತಿ ತೇ ॥ ೧೮ ॥

ಏವಂ ಪ್ರಾಣೀ ಸದಾ ಮುಗ್ಧೋ ಲೋಭಮೋಹಸಮನ್ವಿತಃ ।
ನೀಯತೇ ಯಮದೂತೈಸ್ತು ತಸ್ಯ ದುಃಖಂ ವದಾಮ್ಯಹಂ ॥ ೧೯ ॥

ಅಂಗಾರಸಂಚಯೇ ಮಾರ್ಗೇ ಕೃಷ್ಯಮಾಣೋ ಹಿ ನೀಯತೇ ।
ದಹ್ಯಮಾನಸ್ಸುದುಷ್ಟಾತ್ಮಾ ಚೇಷ್ಟಮಾನಃ ಪುನಃ ಪುನಃ ॥ ೨೦ ॥

ಯತ್ರಾತಪೋ ಮಹಾತೀವ್ರೋ ದ್ವಾದಶಾದಿತ್ಯತಾಪಿತಃ ।
ನೀಯತೇ ತೇನ ಮಾರ್ಗೇಣ ಸಂತಪ್ತಃ ಸೂರ್ಯರಶ್ಮಿಭಿಃ ॥ ೨೧ ॥

ಪರ್ವತೇಷ್ವೇವ ದುರ್ಗೇಷು ಛಾಯಾಹೀನೇಷು ದುರ್ಮತಿಃ ।
ನೀಯತೇ ತೇನ ಮಾರ್ಗೇಣ ಕ್ಷುಧಾ ತೃಷ್ಣಾ ಪ್ರಪೀಡಿತಃ ॥ ೨೨ ॥

---

೧೭. ಶಕ್ತಿಯಿರುವಂತೆ ತೋರಿದರೂ ಬಹು ಆಯಾಸಪಡುತ್ತಾನೆ. ಪದೇಪದೇ ಮೂರ್ಛೆಹೊಂದುತ್ತಾನೆ. ಹೀಗೆ ನಾನಾಪೀಡೆಗಳಿಂದ ದುಃಖವನ್ನು ಅನುಭವಿಸುತ್ತಾನೆ

೧೮. ಅವನ ಪ್ರಾಣಗಳು ದುಃಖದಿಂದಲೂ, ಕಷ್ಟದಿಂದಲೂ ಬೇರ್ಪಡಿಸಲ್ಪಟ್ಟು ಭಯಂಕರವಾದ ರೀತಿಯಿಂದ ಅವನ ಶರೀರವನ್ನು ಬಿಟ್ಟು ಹೋಗುತ್ತವೆ.

೧೯. ಈರೀತಿ ಲೋಭ ಮೋಹಗಳಿಂದ ಕೂಡಿ ಮೋಹಗೊಂಡವನಾಗಿ ಯಮದೂತರಿಂದ ಒಯ್ಯಲ್ಪಡುತ್ತಾನೆ. ಅವನು ಅನುಭವಿಸುವ ದುಃಖವನ್ನು ಹೇಳುತ್ತೇನೆ, ಕೇಳು.

೨೦. ಅವನು ಒಯ್ಯಲ್ಪಡುವ ಮಾರ್ಗದಲ್ಲಿ ಬೆಂಕಿಯ ಜ್ವಾಲೆಗಳು ಉರಿಯುತ್ತಿರುವುವು. ಆ ಜ್ವಾಲೆಗಳ ತಾಪದಿಂದ ಅವನ ಶರೀರವು ಬೆಂದು ಒದ್ದಾಡುವನು. ಇಂತಹ ಮಾರ್ಗದಲ್ಲಿ ಅವನನ್ನು ಯಮದೂತರು ಒಯ್ಯುತ್ತಾರೆ.

೨೧- ೨೨. ಮತ್ತು ಆ ಮಾರ್ಗದಲ್ಲಿ ಹನ್ನೆರಡುಜನ ಸೂರ್ಯರು ಏಕಕಾಲದಲ್ಲಿ ಪ್ರಬಲವಾಗಿ ಉಂಟುಮಾಡುವ ಬಿಸಿಲಿರುವ ಜಾಗದಲ್ಲಿ ಸೂರ್ಯರಶ್ಮಿಯಿಂದ ಪೀಡಿಸಲ್ಪಟ್ಟು ಕಲ್ಲು, ಮುಳ್ಳುಗಳಿಂದಕೂಡಿ ನೆರಳು, ನೀರುಇಲ್ಲದಿರುವ ಪರ್ವತಮಾರ್ಗದಲ್ಲಿ ಹಸಿವು ಬಾಯಾರಿಕೆಗಳಿಂದ ಬಳಲಿಸಿಕೊಂಡು ಅವನನ್ನು ಒಯ್ಯುತ್ತಾರೆ.

ಸ ದೂತೈರ್ಹನ್ಯಮಾನಸ್ತು ಗದಾದಂಡೈಃ ಪರಶ್ವಧೈಃ ।
ಕಶಾಭಿಸ್ತಾಡ್ಯಮಾನಸ್ತು ನಿಂದ್ಯಮಾನಸ್ತು ದೂತಕೈಃ ॥ ೨೩ ॥

ತತಶ್ಶೀತಮಯೇ ಮಾರ್ಗೇ ವಾಯುನಾ ಸೇವ್ಯತೇ ಪುನಃ ।
ತೇನ ಶೀತೇನ ಸಂದುಃಖೀ ಭೂತ್ವಾ ಯಾಂತಿ ನ ಸಂಶಯಃ ॥ ೨೪ ॥

ಆಕೃಷ್ಯಮಾಣೋ ದೂತೈಸ್ತು ನಾನಾದುರ್ಗೇಷು ನೀಯತೇ ।
ಏವಂ ಪಾಪೀ ಸ ದುಷ್ಟಾತ್ಮಾ ದೇವಬ್ರಾಹ್ಮಣನಿಂದಕಃ ।
ಸರ್ವಪಾಪಸಮಾಯುಕ್ತೋ ನೀಯತೇ ಯಮಕಿಂಕರೈಃ ॥ ೨೫ ॥

ಯಮಂ ಪಶ್ಯತಿ ದುಷ್ಟಾತ್ಮಾ ಕೃಷ್ಣಾಂಜನಚಯೋಪಮಂ ।
ತಮುಗ್ರಂ ದಾರುಣಂ ಭೀಮಂ ಯಮದೂತೈಸ್ಸಮಾವೃತಂ ॥ ೨೬ ॥

ಸರ್ವವ್ಯಾಧಿಸಮಾಕೀರ್ಣಂ ಚಿತ್ರಗುಪ್ತಸಮನ್ವಿತಂ ।
ಆರೂಢಂ ಮಹಿಷಂ ದೇವಂ ಧರ್ಮರಾಜಂ ದ್ವಿಜೋತ್ತಮ ॥ ೨೭ ॥

ದಂಷ್ಟ್ರಾಕರಾಳಮತ್ಯುಗ್ರಂ ತಸ್ಯಾಸ್ಯಂ ಕಾಲಸನ್ನಿಭಂ ।
ಪೀತವಾಸಂ ಮಹಾಹಸ್ತಂ ರಕ್ತಗಂಧಾನುಲೇಪನಂ ॥ ೨೮ ॥

---

೨೩. ಮಾರ್ಗಮಧ್ಯದಲ್ಲಿ ಗದೆ, ದೊಣ್ಣೆ, ಕೊಡಲಿ, ಚಾವಟಿಗಳಿಂದ ಆಗಾಗ ಹೊಡೆಯುತ್ತಲೂ, ಬಯ್ಯುತ್ತಲೂ, ದೂತರು ಇವನನ್ನು ಒಯ್ಯುತ್ತಾರೆ.

೨೪. ಅನಂತರ ಅತಿ ಶೈತ್ಯದಿಂದಕೂಡಿದ ದಾರಿಯಲ್ಲಿ ಕರೆದೊಯ್ಯುತ್ತಾರೆ. ಶೀತದಿಂದ ಶರೀರವು ಕೊರೆದುಹೋಗುವಂತೆ ಗಾಳಿಯು ತಣ್ಣಗೆ ಬೀಸುತ್ತಿರುತ್ತದೆ. ಹೀಗೆ ಶೀತದಿಂದ ದುಃಖಹೊಂದಿರುವ ಇವನನ್ನು ಕಷ್ಟವಾದ ಮಾರ್ಗದಲ್ಲಿ ದೂತರು ಎಳೆದುಕೊಂಡು ಹೋಗುತ್ತಾರೆ.

೨೫. ದೇವಬ್ರಾಹ್ಮಣನಿಂದಕನಾದ ಈ ಪಾಪಿಯನ್ನು ಯಮಕಿಂಕರರು ಈ ರೀತಿ ನಾನಾವಿಧವಾದ ಹಿಂಸೆಗಳಿಗೆ ಗುರಿಮಾಡಿ ಯಮಾಲಯಕ್ಕೆ ಎಳೆದೊಯ್ಯುತ್ತಾರೆ.

೨೬-೨೯. ಅಲ್ಲಿ ಆ ಪಾಪಿಯು ಯಮನನ್ನು ನೋಡುವನು. ಆ ಯಮನಾದರೋ ಕಪ್ಪಗಿರುವ ಶರೀರದಿಂದ ಬಹು ಭಯಂಕರನಾಗಿ ಕಾಣುತ್ತಿರುವನು. ಕೋಣನ ಮೇಲೆ ಕುಳಿತಿರುವನು. ಅವನ ಸುತ್ತಲೂ ಅವನಂತೆಯೇ ಭಯಂಕರರಾದ ಯಮದೂತರೂ, ಶರೀರವನ್ನು ಧರಿಸಿ ನಿಂತಿರುವ ಅನೇಕ ವ್ಯಾಧಿಗಳೂ, ಚಿತ್ರಗುಪ್ತರೂ,

**ರಕ್ತಮಾಲ್ಯಕೃತಾಭೂಷಂ ಗದಾಹಸ್ತಂ ಭಯಂಕರಂ ।**
**ಏವಂ ವಿಧಂ ಮಹಾಕಾಯಂ ಯಮಂ ಪಶ್ಯತಿ ದುರ್ಮತಿಃ ॥ ೨೯ ॥**

**ತಂ ದೃಷ್ಟ್ವಾ ಸಮನುಪ್ರಾಪ್ತಂ ಸರ್ವಧರ್ಮಬಹಿಷ್ಕೃತಂ ।**
**ಯಮಃ ಪಶ್ಯತಿ ತಂ ದುಷ್ಟಂ ಪಾಪಿಷ್ಠಂ ಧರ್ಮಸಂಕಟಂ ॥ ೩೦ ॥**

**ಶೋಚಯೇತ್ತಂ ಮಹಾದುಃಖೈಃ ಪೀಡಾಭಿರ್ದಾರುಣಾಯುಧೈಃ ।**
**ಯಾವದ್ಯುಗಸಹಸ್ರಂ ತು ತಾವತ್ಕಾಲಂ ಪ್ರಪಚ್ಯತೇ ॥ ೩೧ ॥**

**ಯಾತನಾಸು ಚ ನಾನಾಸು ಪಚ್ಯತೇ ಚ ಪುನಃ ಪುನಃ ।**
**ನಾರಕೀಂ ಯಾತಿ ವೈ ಯೋನಿಂ ಕ್ರಿಮಿಕೀಟೇಷು ಪಾಪಕೃತ್ ॥ ೩೨ ॥**

**ಅಮೇಧ್ಯೇ ಪಚ್ಯತೇ ನಿತ್ಯಂ ಹಾಹಾಭೂತೋ ವಿಚೇತನಃ ।**
**ಮರಣಂ ಚ ಸ ಪಾಪಾತ್ಮಾ ಏವಂ ಯಾತಿ ಸುನಿಶ್ಚಿತಂ ॥ ೩೩ ॥**

---

ನಿಂತಿರುವರು. ಆ ಯಮನು ಕೆಂಪುಬಟ್ಟೆಯನ್ನುಟ್ಟು ಕೆಂಪು ಗಂಧವನ್ನು ಲೇಪನಮಾಡಿಕೊಂಡು ಕೈಯಲ್ಲಿ ಗದೆಯನ್ನು ಹಿಡಿದಿರುವನು. ಅವನಿಗೆ ಭಯಂಕರವಾದ ಕೋರೆ ಹಲ್ಲುಗಳೂ, ಕ್ರೂರವಾದ ಮುಖವೂ, ದೊಡ್ಡ ಶರೀರವೂ ಇರುವುವು. ಇಂತಹ ಭಯಂಕರಾಕಾರನಾದ ಯಮನನ್ನು ಆ ಪಾಪಿಯು ನೋಡುವನು.

೩೦. ಆಗ ಧರ್ಮಬಾಹಿರನಾದ ಈ ಪಾಪಿಯನ್ನು ಯಮನು ನೋಡುತ್ತಾನೆ.

೩೧. ಆ ಯಮನು ನಾನಾಬಗೆಯಾದ ಪೀಡೆಯನ್ನುಂಟುಮಾಡುವ ಆಯುಧಗಳಿಂದ ಇವನಿಗೆ ದುಃಖವನ್ನು ಕೊಡುತ್ತಾ, ಸಹಸ್ರಯುಗಗಳವರೆಗೂ ನರಕದಲ್ಲಿ ಹಾಕುತ್ತಾನೆ.

೩೨. ಆ ನರಕಗಳಲ್ಲಿ ನಾನಾಬಗೆಯಾದ ಯಾತನೆಗಳನ್ನು ಅನುಭವಿಸಿ ಕಡೆಗೆ ಪಾಪಯೋನಿಯಲ್ಲಿ ಕ್ರಿಮಿಕೀಟಗಳಲ್ಲಿ ಹುಟ್ಟುತ್ತಾನೆ.

೩೩. ನಿತ್ಯವೂ ಅಮೇಧ್ಯದಲ್ಲಿ ಬಿದ್ದು ಒದ್ದಾಡುತ್ತಾನೆ. ಪಾಪಾತ್ಮನು ಅನುಭವಿಸುವ ಮರಣವು ಈರೀತಿಯಾಗಿರುವುದು.

ಏವಂ ಪಾಪಸ್ಯ ತಂ ಭೋಗಂ ಭುಂಕ್ತೇ ಚೈವ ಸ ದುರ್ಗತಿಃ ।
ಪುನರ್ಜನ್ಮ ಪ್ರವಕ್ಷ್ಯಾಮಿ ಯಾಸು ಯೋನಿಷು ಜಾಯತೇ ॥ ೩೪ ॥

ಶ್ವಾನಯೊನಿಂ ತು ಸಂಪ್ರಾಪ್ಯ ಭುಂಕ್ತೇ ವೈ ಪಾಪಕಂ ಪುನಃ ।
ವ್ಯಾಘ್ರೋ ಭವತಿ ದುಷ್ಟಾತ್ಮಾ ರಾಸಭತ್ವಂ ವ್ರಜೇತ್ಪುನಃ ॥ ೩೫ ॥

ಮಾರ್ಜಾರಶೂಕರೀಂ ಯೋನಿಂ ಸರ್ಪಯೋನಿಂ ತಥೈವ ಚ ।
ನಾನಾಭೇಧಾಸು ಸರ್ವಾಸು ಸ ಗಚ್ಛತಿ ಪುನಃ ಪುನಃ ॥ ೩೬ ॥

ಪಾಪಪಕ್ಷಿಷು ಸಂಯಾತಿ ಸರ್ವಾಸು ಚ ಮಹತ್ಸು ಚ ।
ಚಾಂಡಾಲಭಿಲ್ಲಯೋನಿಂ ಚ ಪುಲಿಂದೀಂ ಯಾತಿ ವೈ ತಥಾ ॥ ೩೭ ॥

ಏತತ್ತೇ ಸರ್ವಮಾಖ್ಯಾತಂ ಪಾಪಿನಾಂ ಜನ್ಮ ಚೈವ ಹಿ ।
ಮರಣೇ ಶೃಣು ಕಾಂತ ತ್ವಂ ಚೇಷ್ಟಾಂ ತೇಷಾಂ ಸುದಾರುಣಾಂ ॥ ೩೮ ॥

ಪಾಪಪುಣ್ಯಸಮಾಚಾರಸ್ತವಾಗ್ರೇ ಕಥಿತೋ ಮಯಾ ।
ಅನ್ಯಚ್ಚೈವ ಪ್ರವಕ್ಷ್ಯಾಮಿ ಯದ್ಯತ್ಪೃಚ್ಛಸಿ ಸುವ್ರತ ॥ ೩೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ಸುಮನೋಪಾಖ್ಯಾನೇ ಪಂಚದಶೋಽಧ್ಯಾಯಃ

---

೩೪. ಹೀಗೆ ಪಾಪಿಯು ಅನೇಕ ಪಾಪಭೋಗಗಳನ್ನು ಅನುಭವಿಸಿ, ಕಡೆಗೆ ಯಾವಯೋನಿಯಲ್ಲಿ ಹುಟ್ಟುತ್ತಾನೆಂಬುದನ್ನು ಹೇಳುತ್ತೇನೆ ಕೇಳು.

೩೫-೩೭. ನಾಯಿ, ಹುಲಿ, ಬೆಕ್ಕು, ಹಂದಿ, ಹಾವು, ಮೊದಲಾದ ದುಷ್ಟ ಜಂತುಗಳ ಯೋನಿಗಳಲ್ಲಿ ಪದೇಪದೇ ಹುಟ್ಟುತ್ತಿರುತ್ತಾನೆ. ಮತ್ತು ಕಾಗೆಯೇ ಮೊದಲಾದ ಪಾಪಪಕ್ಷಿಗಳಲ್ಲೂ, ಚಂಡಾಲ, ಬೇಡರು, ಬೆಸ್ತರುಗಳಲ್ಲೂ, ಹುಟ್ಟುತ್ತಾನೆ.

೩೮. ಪಾಪಿಗಳ ಮರಣದ ವಿಷಯದಲ್ಲಿ ಉಂಟಾಗುವ ಚೇಷ್ಟೆಗಳನ್ನೂ, ಅವರು ಜನ್ಮವೆತ್ತುವ ಯೋನಿಗಳನ್ನೂ ಹೇಳಿದ್ದೇನೆ.

೩೯. ಪಾಪಪುಣ್ಯಗಳಿಂದ ಕೂಡಿದವನು ಅನುಭವಿಸುವುದನ್ನು ಹೇಳದ್ದಾಯಿತು. ಮತ್ತೇನನ್ನು ಕೇಳಬೇಕೆಂದಿರುವೆಯೋ ಕೇಳು, ಅದನ್ನೂ ಹೇಳುತ್ತೇನೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದ ಸುಮನೋಪಾಖ್ಯಾನದಲ್ಲಿ
ಹದಿನೈದನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
## ॥ ಷೋಡಶೋಽಧ್ಯಾಯಃ ॥

**ಸೋಮಶರ್ಮೋವಾಚ**

**ಸರ್ವಂ ದೇವಿ ತ್ವಯಾ ಖ್ಯಾತಂ ಧರ್ಮಸಂಸ್ಥಾನಮುತ್ತಮಂ ।**
**ಕಥಂ ಪುತ್ರಮಹಂ ವಿಂದ್ಯಾಂ ಸರ್ವಜ್ಞಂ ಗುಣಸಂಯುತಂ ॥ ೧ ॥**

**ವದ ತ್ವಂ ಮೇ ಮಹಾಭಾಗೇ ಯದಿ ಜಾನಾಸಿ ಸುವ್ರತೇ ।**
**ದಾನಧರ್ಮಾದಿಕಂ ಭದ್ರೇ ಪರತ್ರೇಹ ನ ಸಂಶಯಃ ॥ ೨ ॥**

**ಸುಮನೋವಾಚ**

**ವಸಿಷ್ಠಂ ಗಚ್ಛ ಧರ್ಮಜ್ಞಂ ತಂ ಪ್ರಾರ್ಥಯ ಮಹಾಮುನಿಂ ।**
**ತಸ್ಮಾತ್ಪ್ರಾಪ್ಸ್ಯಸಿ ವೈ ಪುತ್ರಂ ಧರ್ಮಜ್ಞಂ ಧರ್ಮವತ್ಸಲಂ ॥ ೩ ॥**

---

## ಹದಿನಾರನೆಯ ಅಧ್ಯಾಯವು

೧. ಸೋಮಶರ್ಮನು ಹೇಳುತ್ತಾನೆ:—ಎಲೈ ದೇವಿಯೇ, ನೀನು ಎಲ್ಲವನ್ನೂ ಹೇಳಿದೆ. ಧರ್ಮವೂ ವಿಶದವಾಯಿತು ಸರ್ವಜ್ಞನೂ, ಸರ್ವಗುಣಸಂಪನ್ನನೂ, ಆದ ಮಗನನ್ನು ಪಡೆಯುವ ಬಗೆ ಹೇಗೆ, ಎಂಬುದನ್ನು ಹೇಳು.

೨. ಇಹಲೋಕದಲ್ಲೂ, ಪರಲೋಕದಲ್ಲೂ, ಶ್ರೇಯಸ್ಸನ್ನುಂಟುಮಾಡುವ ದಾನಧರ್ಮಗಳಾವವು? ನೀನು ತಿಳಿದಿದ್ದರೆ ಹೇಳು ಎನ್ನಲು,

೩. ಸುಮನಳು ಹೇಳುತ್ತಾಳೆ:–ವಸಿಷ್ಠಮಹರ್ಷಿಯ ಬಳಿಗೆ ಹೋಗು. ಅವನು ಧರ್ಮವನ್ನು ತಿಳಿದಿರುವನು. ಅವನೇ ನಿನಗೆ ಬೇಕಾದ ಧರ್ಮವನ್ನು ಹೇಳಿ ಮಗನನ್ನು ಪಡೆಯುವ ಉಪಾಯವನ್ನು ತಿಳಿಸುವನು ಎಂದಳು.

## ಸೂತ ಉವಾಚ

ಏವಮುಕ್ತೇ ತತೋ ವಾಕ್ಯೇ ಸೋಮಶರ್ಮಾ ದ್ವಿಜೋತ್ತಮಃ ।
ಏವಂ ಕರಿಷ್ಯೇ ಕಲ್ಯಾಣಿ ತವ ವಾಕ್ಯಂ ನ ಸಂಶಯಃ ॥ ೪ ॥

ಏವಮುಕ್ತ್ವಾ ಜಗಾಮಾsಸೌ ಸೋಮಶರ್ಮಾ ದ್ವಿಜೋತ್ತಮಃ ।
ವಸಿಷ್ಠಂ ಸರ್ವವೇತ್ತಾರಂ ದೀಪ್ಯಮಾನಂ ತಪಶ್ಚರಂ ॥ ೫ ॥

ಗಂಗಾತೀರೇ ಸ್ಥಿತಂ ಪುಣ್ಯಮಾಶ್ರಮಸ್ಥಂ ದ್ವಿಜೋತ್ತಮಂ ।
ತೇಜೋಜ್ವಾಲಾಸಮಾಕೀರ್ಣಂ ದ್ವಿತೀಯಮಿವಭಾಸ್ಕರಂ ॥ ೬ ॥

ರಾಜಮಾನಂ ಮಹಾತ್ಮಾನಂ ಬ್ರಹ್ಮಣ್ಯಂ ಚ ದ್ವಿಜೋತ್ತಮಂ ।
ಭಕ್ತ್ಯಾ ನನಾಮ ವಿಪ್ರೇಂದ್ರಂ ದಂಡವತ್ತಂ ಪುನಃ ಪುನಃ ॥ ೭ ॥

ತಮುವಾಚ ಮಹಾತೇಜಾ ಬ್ರಹ್ಮಸೂನುರಕಲ್ಮಷಃ ।
ಉಪಾವಿಶಾಸನೇ ಪುಣ್ಯೇ ಸುಖೇನ ಸುಮಹಾಮತೇ ॥ ೮ ॥

ಏಮುಕ್ತ್ವಾ ಸ ಯೋಗೀಂದ್ರಃ ಪುನಃ ಪ್ರಾಹ ತಪೋಧನಂ ।
ಗೃಹಪುತ್ರೇಷು ತೇ ವತ್ಸ ದಾರಭೃತ್ಯೇಷು ಸರ್ವದಾ ॥ ೯ ॥

---

೪. ಸೂತನು ಹೇಳುತ್ತಾನೆ:—ಈಕೆಯು ಹಾಗೆ ಹೇಳಲು, ಸೋಮಶರ್ಮನು ಹಾಗೆಯೇಮಾಡುತ್ತೇನೆಂದು ಹೇಳಿ ಅಲ್ಲಿಂದ ಹೊರಟು,

೫-೭. ಗಂಗಾನದಿಯ ದಡದಲ್ಲಿ ಪುಣ್ಯಾಶ್ರಮವನ್ನು ಮಾಡಿಕೊಂಡು ತಪಸ್ಸನ್ನಾಚರಿಸುತ್ತಲಿದ್ದ ವಸಿಷ್ಠಮಹರ್ಷಿಯ ಸಮೀಪಕ್ಕೆ ಹೋದನು, ಆ ವಸಿಷ್ಠನು ಸರ್ವಧರ್ಮವನ್ನೂ ತಿಳಿದವನು. ಬ್ರಹ್ಮವರ್ಚಸ್ಸಿನಿಂದ ಎರಡನೆಯ ಸೂರ್ಯನಂತೆ ಬೆಳಗುತ್ತ ಬ್ರಹ್ಮಧ್ಯಾನದಲ್ಲಿ ನಿರತನಾಗಿದ್ದನು, ಇಂತಹ ಬ್ರಾಹ್ಮಣಶ್ರೇಷ್ಠನಾದ ವಸಿಷ್ಠಮುನಿಯನ್ನು ಕಂಡು ಅವನ ಪಾದಗಳಿಗೆ ಭಕ್ತಿಯಿಂದ ಮತ್ತೆಮತ್ತೆ ನಮಸ್ಕರಿಸಿದನು.

೮. ಆಗ ಬ್ರಹ್ಮಪುತ್ರನಾದ ವಸಿಷ್ಠನು ಆ ಸೋಮಶರ್ಮನನ್ನು ಉತ್ತಮವಾದ ಆಸನದಲ್ಲಿ ಕುಳಿತುಕೊಳ್ಳುವಂತೆ ಹೇಳಿದನು.

೯-೧೧. ಸುಖಾಸೀನನಾಗಿ ಕುಳಿತಮೇಲೆ ಯೋಗಿಶ್ರೇಷ್ಠನಾದ ವಸಿಷ್ಠಮುನಿಯು ಅವನನ್ನು ಕುರಿತು ಮನೆ, ಮಕ್ಕಳು, ಹೆಂಡಿತಿ, ಆಳು, ಧರ್ಮ, ಅಗ್ನಿಗಳವಿಷಯದಲ್ಲಿ ಕ್ಷೇಮಸಮಾಚಾರವನ್ನು ಕೇಳಿದನು. ಮತ್ತು ನೀನು ರೋಗಾದಿಗಳಿಲ್ಲದೇ

ಕ್ಷೇಮಮಸ್ತಿ ಮಹಾಭಾಗ ಪುಣ್ಯಕರ್ಮಸು ಚಾಗ್ನಿಷು ।
ನಿರಾಮಯೋಽಸಿ ಚಾಂಗೇಷು ಧರ್ಮಂ ಪಾಲಯಸೇ ಸದಾ ॥ ೧೦ ॥

ಕಿಂ ಕರೋಮಿ ಪ್ರಿಯಂ ಕಾಮಂ ಸುಪ್ರಿಯಂ ತೇ ದ್ವಿಜೋತ್ತಮ ।
ಏವಂ ಸಂಭಾಷ್ಯ ತಂ ವಿಪ್ರಂ ವಿರರಾಮ ಸ ಕುಂಭಜಃ ॥ ೧೧ ॥

ಏವಮುಕ್ತೋ ಮಹಾಪ್ರಾಜ್ಞಃ ಸೋಮಶರ್ಮಾ ಮುನಿಸ್ತದಾ ।
ತಮುವಾಚ ಮಹಾತ್ಮಾನಂ ವಸಿಷ್ಠಂ ತಪತಾಂ ವರಂ ॥ ೧೨ ॥

॥ ಸೋಮಶರ್ಮೋವಾಚ ॥

ಭಗವನ್ ಶ್ರೂಯತಾಂ ವಾಕ್ಯಂ ಸುಪ್ರಸನ್ನೇನ ಚೇತಸಾ ।
ಯದಿ ಮೇ ಸುಪ್ರಿಯಂ ಕಾರ್ಯಂ ತ್ವಯೈವ ಮುನಿಪುಂಗವ ॥ ೧೩ ॥

ಮಮ ಪ್ರಶ್ನಾರ್ಥಸಂದೇಹಂ ವಿಚ್ಛೇದಯ ದ್ವಿಜೋತ್ತಮ ।
ದಾರಿದ್ರ್ಯಂ ಕೇನ ಪಾಪೇನ ಪುತ್ರಸೌಖ್ಯಂ ಕಥಂ ನ ಹಿ ।
ಏತಂ ಮೇ ಸಂಶಯಂ ತಾತ ಕಸ್ಮಾತ್ಪ್ರಸಾದ್ವದಸ್ವ ಮೇ ॥ ೧೪ ॥

ಮಹಾಪಾಪೇನ ಸಂಮುಗ್ಧಃ ಪ್ರಿಯಯಾ ಬೋಧಿತೋ ದ್ವಿಜ ।
ತಥಾಹಂ ಪ್ರೇಷಿತಸ್ತಾತ ತವ ಪಾರ್ಶ್ವಂ ಮಹಾಮತೇ ॥ ೧೫ ॥

---

ಧರ್ಮವನ್ನು ಪಾಲಿಸುತ್ತಿದ್ದೀಯಾ ಎಂದು ಕುಶಲಪ್ರಶ್ನೆಯನ್ನು ಮಾಡಿ, ಅಪ್ಪ ನಿನಗೆ ಇಷ್ಟವಾದುದೇನು? ನನ್ನಿಂದ ಆಗಬೇಕಾದ ಕಾರ್ಯವೇನಾದರೂ ಇದೆಯೇ? ಎಂದು ಮಾತನಾಡಿಸಿದನು

೧೨. ಇದನ್ನು ಕೇಳಿದ ಸೋಮಶರ್ಮನು ತಪಸ್ವಿಯಾದ ವಸಿಷ್ಠನನ್ನ ಕುರಿತು ಹೇಳಿದನು.

೧೩. ಸೋಮಶರ್ಮನು ಹೇಳಿದನು:—ಸ್ವಾಮಿ ಪ್ರಸನ್ನವಾದ ಮನಸ್ಸಿನಿಂದ ನಾನುಹೇಳುವುದನ್ನು ಕೇಳಿ, ನನಗೆ ಪ್ರಿಯವನ್ನು ಮಾಡಬೇಕೆಂದಿದ್ದರೆ ನನ್ನ ಪ್ರಶ್ನಾರ್ಥದಲ್ಲಿರುವ ಸಂದೇಹವನ್ನು ಹೋಗಲಾಡಿಸಿ,

೧೪. ನನಗೆ ದಾರಿದ್ರ್ಯವು ಯಾವಪಾಪದಿಂದ ಬಂದಿದೆ? ಮಕ್ಕಳೇಕೆ ಆಗಲಿಲ್ಲ? ಇವೆಲ್ಲವೂ ಯಾವ ಪಾಪದ ಫಲ? ದಯವಿಟ್ಟು ಹೇಳಿ.

೧೫. ಮಹಾ ಪಾಪದಿಂದ ಜ್ಞಾನಶೂನ್ಯನಾಗಿ ಪ್ರಿಯೆಯಿಂದ ಎಚ್ಚರಿಸಲ್ಪಟ್ಟು ನನ್ನ ಪ್ರಿಯಭಾರ್ಯೆಯು ನನಗೆ ಹಿತೋಪದೇಶವನ್ನು ಮಾಡಿ, ನನ್ನನ್ನು ತಮ್ಮಲ್ಲಿಗೆ ಕಳುಹಿಸಿರುವಳು.

ತತ್ಸರ್ವಂ ತ್ವಂ ಸಮಾಚಕ್ಷ್ವ ಸರ್ವಸಂದೇಹನಾಶನಂ ।
ಮುಕ್ತಿದಾತಾ ಭವಸ್ವ ತ್ವಂ ಮಮ ಸಂಸಾರಬಂಧನಾತ್ ॥ ೧೬ ॥

ವಸಿಷ್ಠ ಉವಾಚ

ಪುತ್ರಾ ಮಿತ್ರಾಣ್ಯಥ ಭ್ರಾತಾ ಭಾರ್ಯಾ ಸ್ವಜನಬಾಂಧವಾಃ ।
ಪಂಚ ಭೇದಾಸ್ತು ಸಂಬಂಧಾತ್ ಪುರುಷಸ್ಯ ಭವಂತಿ ಹಿ ॥ ೧೭ ॥

ತದ್ವೈ ಸುಮನಯಾ ಪ್ರೋಕ್ತಂ ಪೂರ್ವಮೇವ ತವಾಗ್ರತಃ ।
ಋಣಸಂಬಂಧಿನಸ್ಸರ್ವೇ ತೇ ಕುಪುತ್ರಾ ದ್ವಿಜೋತ್ತಮ ॥ ೧೮ ॥

ಪುತ್ರಸ್ಯ ಲಕ್ಷಣಂ ಪುಣ್ಯಂ ತವಾಗ್ರೇ ಪ್ರವದಾಮ್ಯಹಂ ।
ಪುಣ್ಯಪ್ರಸಕ್ತೋ ಯಸ್ಯಾತ್ಮಾ ಸತ್ಯಧರ್ಮರತಸ್ಸದಾ ॥ ೧೯ ॥

ಬುದ್ಧಿಮಾನ್ ಜ್ಞಾನಸಂಪನ್ನಸ್ತಪಸ್ವೀ ವಾಗ್ವಿದಾಂ ವರಃ ।
ಸರ್ವಕರ್ಮಸುಧೀರ್ಧೀರೋ ವೇದಾಧ್ಯಯನತತ್ಪರಃ ॥ ೨೦ ॥

ಸರ್ವಶಾಸ್ತ್ರಪ್ರವಕ್ತಾ ಚ ದೇವಬ್ರಾಹ್ಮಣಪೂಜಕಃ ।
ಯಾಜಕಸ್ಸರ್ವಯಜ್ಞಾನಾಂ ಧ್ಯಾನೀ ತ್ಯಾಗೀ ಪ್ರಿಯಂವದಃ ॥ ೨೧ ॥

---

೧೬. ಆದುದರಿಂದ ನನ್ನ ಸರ್ವಸಂದೇಹವನ್ನೂ ನಾಶಮಾಡಿ, ಸಂಸಾರ ಬಂಧನದಿಂದ ಮುಕ್ತನನ್ನಾಗಿ ಮಾಡುವ ಮಾರ್ಗವನ್ನು ತೋರಿಸಿ, ನನಗೆ ಮುಕ್ತಿದಾತನಾಗು ಎಂದು ಪ್ರಾರ್ಥಿಸಿದನು.

೧೭. ವಸಿಷ್ಠನು ಹೇಳುತ್ತಾನೆ:—ಎಲೈ ದ್ವಿಜವರ್ಯನೇ ಕೇಳು, ಪುತ್ರ, ಮಿತ್ರ, ಸೋದರ, ಹೆಂಡತಿ, ಸ್ವಜನ ಬಾಂಧವರು, ಎಂದು ಪುರುಷನಿಗೆ ಐದುಬಗೆಯ ಸಂಬಂಧಗಳೂ ಉಂಟು.

೧೮. ಸುಮನೆಯು ನಿನಗೆ ಮೊದಲೇ ಎಲ್ಲವನ್ನೂ ಹೇಳಿದ್ದಾಳೆ, ಇವರೆಲ್ಲರೂ ಋಣಸಂಬಂಧಿಗಳು ಮತ್ತು ಅಯೋಗ್ಯಪುತ್ರರು. ಇನ್ನು ಸತ್ಪುತ್ರನ ಲಕ್ಷಣವನ್ನು ಹೇಳುತ್ತೇನೆ ಕೇಳು.

೧೯-೨೩. ಪುಣ್ಯದಲ್ಲಿಯೂ, ಧರ್ಮದಲ್ಲಿಯೂ ಆಸಕ್ತನಾದವನು, ಬುದ್ಧಿಜ್ಞಾನಗಳಿಂದ ಕೂಡಿದವನು ತಪಸ್ವಿಯು, ವಾಗ್ಮಿಯು, ಎಲ್ಲಾ ಕೆಲಸದಲ್ಲೂ ಬುದ್ಧಿವಂತನು, ವೇದಾಧ್ಯಯನ ಸಂಪನ್ನನು, ಸರ್ವಶಾಸ್ತ್ರವನ್ನೂ ತಿಳಿದು ಹೇಳುವವನು, ದೇವಬ್ರಾ

**ವಿಷ್ಣುಧ್ಯಾನಪರೋ ನಿತ್ಯಂ ಶಾಂತೋ ದಾಂತೋ ಜಪೀ ಸದಾ ।**
**ಪಿತೃಭಕ್ತಿಪರೋ ನಿತ್ಯಂ ಸರ್ವಸ್ವಜನವತ್ಸಲಃ ॥ ೨೨ ॥**

**ಕುಲಸ್ಯ ತಾರಕೋ ವಿದ್ವಾನ್ ಕುಲಸ್ಯ ಪರಿತೋಷಕಃ ।**
**ಏವಂ ಗುಣೈಸ್ಸುಸಂಯುಕ್ತಃ ಸುಪುತ್ರಸ್ಸುಖದಾಯಕಃ ॥ ೨೩ ॥**

**ಅನ್ಯೇ ಸಂಬಂಧಸಂಯುಕ್ತಾಃ ಶೋಕಸಂತಾಪದಾಯಕಾಃ ।**
**ಏತಾದೃಶೇನ ಕಿಂ ಕಾರ್ಯಂ ಫಲಹೀನೇನ ತೇನ ಚ ॥ ೨೪ ॥**

**ಆಯಾಂತಿ ಯಾಂತಿ ತೇ ಸರ್ವೇ ತಾಪಂ ದತ್ವಾ ಸುದಾರುಣಂ ।**
**ಪುತ್ರರೂಪೇಣ ತೇ ಸರ್ವೇ ಸಂಸಾರೇ ದುಃಖದಾಯಕಾಃ ॥ ೨೫ ॥**

**ಪೂರ್ವಜನ್ಮಕೃತಂ ಕರ್ಮ ಯತ್ತ್ವಯಾ ಪರಿಪಾಲಿತಂ ।**
**ತಚ್ಚ ಸರ್ವಂ ಪ್ರವಕ್ಷ್ಯಾಮಿ ಶ್ರೂಯತಾಮುದ್ಭುತಂ ಪುನಃ ॥ ೨೬ ॥**

**ವಸಿಷ್ಠ ಉವಾಚ**

**ಭವಾನ್ ಶೂದ್ರೋ ಮಹಾಪ್ರಾಜ್ಞ ಪೂರ್ವಜನ್ಮನಿ ನಾನ್ಯಥಾ ।**

---

ಹ್ಮಣಪೂಜಕನು, ಯಜ್ಞಮಾಡಿಸುವವನು, ಧ್ಯಾನ ತ್ಯಾಗಗಳುಳ್ಳವನು, ಪ್ರಿಯವಾದಿ, ವಿಷ್ಣುಧ್ಯಾನಪರನು, ಶಾಂತ, ದಾಂತ, ತ್ಯಾಗವುಳ್ಳವನು, ಪಿತೃಭಕ್ತಿ, ತನ್ನ ಜನರಲ್ಲಿ ಪ್ರೀತಿ, ಇವುಗಳುಳ್ಳವನು, ಕುಲತಾರಕನು, ವಿದ್ಯಾವಂತನು, ಕುಲವನ್ನು ಕಾಪಾಡುವವನು, ಈರೀತಿಯಾದವನು ಸುಖದಾಯಕನಾದ ಸತ್ಪುತ್ರನೆನಿಸುವನು.

೨೪. ಮಿಕ್ಕವರು ಶರೀರಸಂಬಂಧಮಾತ್ರದಿಂದ ಪುತ್ರನೆನಿಸಿಕೊಂಡು ದುಃಖವನ್ನುಮಾತ್ರ ಕೊಡತಕ್ಕವರು. ಫಲವಿಲ್ಲದ ಅಂತಹ ದುಷ್ಟಪುತ್ರರಿಂದ ಉಪಯೋಗವೇನು?

೨೫. ಅಂತಹ ದುಷ್ಟಪುತ್ರರು ಅನೇಕರು ಹುಟ್ಟುತ್ತಾರೆ ಮೃತರಾಗುತ್ತಾರೆ ಬಹು ಕ್ಲೇಶವನ್ನುಂಟುಮಾಡುತ್ತಾರೆ ಪುತ್ರರೂಪದಿಂದ ಅವರೆಲ್ಲರೂ ಸಂಸಾರದಲ್ಲಿ ದುಃಖದಾಯಕರಾಗುತ್ತಾರೆ,

೨೬. ಇನ್ನು ಪೂರ್ವಜನ್ಮದಲ್ಲಿ ನೀನು ಮಾಡಿ ಅನುಭವಿಸಿದ ಕರ್ಮಗಳೆಲ್ಲವನ್ನೂ ಹೇಳುತ್ತೇನೆ ಕೇಳು.

ಕೃಷಿಕರ್ತಾ ಜ್ಞಾನಹೀನೋ ಮಹಾಲೋಭೇನ ಸಂಯುತಃ ॥ ೨೭ ॥

ಏಕಭಾರ್ಯೋಽನ್ಯವಿದ್ವೇಷೀ ಬಹುಪುತ್ರೋ ಹ್ಯದತ್ತವಾನ್ ।
ಧರ್ಮಂ ನೈವ ಪ್ರಜಾನಾಸಿ ಸತ್ಯಂ ನೈವ ಪರಿಶ್ರುತಂ ॥ ೨೮ ॥

ದಾನಂ ನೈವ ತ್ವಯಾ ದತ್ತಂ ಶಾಸ್ತ್ರಂ ನೈವ ಪರಿಶ್ರುತಂ ।
ಕೃತಾ ಚೈವ ತ್ವಯಾ ತೀರ್ಥೇ ನೈವ ಯಾತ್ರಾ ಮಹಾಮತೇ ॥ ೨೯ ॥

ಏಕಂ ಕೃತಂ ತ್ವಯಾ ವಿಪ್ರ ಕೃಷಿಮಾರ್ಗಂ ಪುನಃ ಪುನಃ ।
ಪಶೂನಾಂ ಪಾಲನಂ ಪೂರ್ವಂ ಗವಾಂ ಚೈವ ದ್ವಿಜೋತ್ತಮ ॥ ೩೦ ॥

ಮಹಿಷೀಣಾಂ ಚ ಹ್ಯಶ್ವಾನಾಂ ಪಾಲನಂ ಚ ಪುನಃ ಪುನಃ ।
ಏವಂ ಪೂರ್ವಂ ಕೃತಂ ಕರ್ಮ ತ್ವಯಾ ವೈ ದ್ವಿಜಸತ್ತಮ ॥ ೩೧ ॥

ವಿಪುಲಂ ತು ಧನಂ ತದ್ವಲ್ಲೋಭೇನ ಪರಿಸಂಚಿತಂ ।
ತೇನ ದ್ರವ್ಯೇಣ ಪುಣ್ಯಂ ಚ ನ ಕೃತಂ ತು ತ್ವಯಾ ಕದಾ ॥ ೩೨ ॥

---

೨೭. ವಸಿಷ್ಠನು ಹೇಳುತ್ತಾನೆ:—ನೀನು ಪೂರ್ವಜನ್ಮದಲ್ಲಿ ಶೂದ್ರನಾಗಿದ್ದೆ. ವ್ಯವಸಾಯಗಾರನಾಗಿದ್ದು ಜ್ಞಾನವಿಲ್ಲದೆ ಬಹು ಲೋಭಿಯಾಗಿಯೂ ಇದ್ದೆ.

೨೮-೨೯. ನಿನಗೆ ಒಬ್ಬಳು ಪತ್ನಿಮಾತ್ರ ಇದ್ದಳು. ಮಿಕ್ಕವರನ್ನು ಕಣ್ಣಿನಿಂದಲೂ ನೋಡುತ್ತಿರಲಿಲ್ಲ. ಬಹಳ ಮಕ್ಕಳಿದ್ದರು. ದಾನಧರ್ಮಗಳನ್ನು ಮಾಡುತ್ತಿರಲಿಲ್ಲ. ಧರ್ಮವನ್ನಾಗಲಿ, ಸತ್ಯವನ್ನಾಗಲಿ ನೀನು ಕಂಡವನೇ ಅಲ್ಲ. ದಾನಮಾಡಿದವನೂ ಅಲ್ಲ. ಶಾಸ್ತ್ರ ಓದಿದವನೂ ಅಲ್ಲ. ತೀರ್ಥಯಾತ್ರೆಯಂತೂ ಇಲ್ಲವೇ ಇಲ್ಲ.

೩೦. ಕೃಷಿಮಾರ್ಗದಲ್ಲಿದ್ದ ನೀನು ಒಂದು ಒಳ್ಳೆಯಕೆಲಸವನ್ನುಮಾತ್ರ ಮಾಡಿದೆ. ಪಶುಪಾಲನೆ, ಗೋಸೇವೆಗಳನ್ನು ಮಾತ್ರ ಆಗಾಗ ಮಾಡುತ್ತಲಿದ್ದೆ.

೩೧-೩೨. ಎಮ್ಮೆ, ಕುದುರೆ ಇವುಗಳ ಪಾಲನೆಯನ್ನು ಮಾಡಿ ಲೋಭಿತನದಿಂದ ಬೇಕಾದಷ್ಟು ದುಡ್ಡನ್ನು ಕೂಡಿಹಾಕಿದೆ. ಆದರೆ ಆ ಹಣದಿಂದ ಧರ್ಮಕಾರ್ಯವನ್ನು ಮಾಡಿ ಪುಣ್ಯವನ್ನು ಮಾತ್ರ ಸಂಪಾದಿಸಲಿಲ್ಲ.

ಪಾತ್ರೇ ದಾನಂ ನ ದತ್ತಂ ತು ದೃಷ್ಟ್ವಾ ದುರ್ಬಲಮೇವ ಚ ।
ಕೃಪಾಂ ಕೃತ್ವಾ ನ ದತ್ತಂ ತು ಭವತಾ ಧನಮೇವ ಹಿ ॥ ೩೩ ॥

ಗೋಮಹಿಷ್ಯಾದಿಕಂ ಸರ್ವಂ ಪಶೂನಾಂ ಸಂಚಿತಂ ತ್ವಯಾ ।
ವಿಕ್ರಯಿತ್ವಾ ಧನಂ ವಿಪ್ರ ಸಂಚಿತಂ ವಿಪುಲಂ ತ್ವಯಾ ॥ ೩೪ ॥

ತಕ್ರಂ ಘೃತಂ ತಥಾ ಕ್ಷೀರಂ ವಿಕ್ರಯಿತ್ವಾ ತತೋ ದಧಿ ।
ದುಷ್ಕಾಮಂ ಚಿಂತಿತಂ ವಿಪ್ರ ಮೋಹಿತೋ ವಿಷ್ಣುಮಾಯಯಾ ॥ ೩೫ ॥

ಕೃತೇ ಮಹಾರ್ಘಮೇವಾತ್ರ ಹ್ಯನ್ನಂ ಬ್ರಾಹ್ಮಣಸತ್ತಮ ।
ನಿರ್ದಯೇನ ತ್ವಯಾ ದಾನಂ ನ ದತ್ತಂ ತು ಕದಾ ಕಿಲ ॥ ೩೬ ॥

ದೇವಾನಾಂ ಪೂಜನಂ ವಿಪ್ರ ಭವತಾ ನ ಕೃತಂ ಕದಾ ।
ಪ್ರಾಪ್ಯ ಪರ್ವಾಣಿ ವಿಪ್ರೇಭ್ಯೋ ದ್ರವ್ಯಂ ನೈವ ಸಮರ್ಪಿತಂ ॥ ೩೭ ॥

ಶ್ರಾದ್ಧಕಾಲಂ ತು ಸಂಪ್ರಾಪ್ಯ ಶುದ್ಧಯಾ ನ ಕೃತಂ ತ್ವಯಾ ।
ಭಾರ್ಯಾ ವದತಿ ತೇ ಸಾಧ್ವೀ ದಿನಂ ಚೈತತ್ಸಮಾಗತಂ ॥ ೩೮ ॥

---

೩೩-೩೫. ಸತ್ಪಾತ್ರರಿಗೂ, ದುರ್ಬಲರಿಗೂ ದಾನಮಾಡಲಿಲ್ಲ. ಕೃಪೆಯಿಂದಲಂತೂ ಕೊಟ್ಟವನೇ ಅಲ್ಲ. ಹಸು, ಎಮ್ಮೆ ಮುಂತಾದುವನ್ನು ಮಾರಿ ದುಡ್ಡನ್ನು ಸಂಪಾದಿಸಿದೆ. ಹಾಲು, ಮೊಸರು, ತುಪ್ಪ, ಬೆಣ್ಣೆ, ಮಜ್ಜಿಗೆಗಳನ್ನು ಮಾರಿ ಸಂಪಾದಿಸಿದೆ. ವಿಷ್ಣುಮಾಯೆಯಿಂದ ಮೋಹಿತನಾಗಿ ಯಾವಾಗಲೂ ಕೆಟ್ಟದ್ದನ್ನೇ ಚಿಂತಿಸುತ್ತಿದ್ದೆ.

೩೬-೩೭. ಕೃತಯುಗದಲ್ಲಿ ಅನ್ನದಾನವೇ ಅತ್ಯುತ್ತಮವಾದದ್ದು. ನಿನಗೆ ಸ್ವಲ್ಪವೂ ದಯಾಳುವೆಂಬುವೇ ಇಲ್ಲದ್ದರಿಂದ ಆ ದಾನವನ್ನು ಮಾಡಿದವನೇ ಅಲ್ಲ. ದೇವಪೂಜೆಯನ್ನೂ ಮಾಡಲಿಲ್ಲ. ಪರ್ವಕಾಲಗಳಲ್ಲಿ ಬ್ರಾಹ್ಮಣರಿಗೆ ದಾನಮಾಡಲೇ ಇಲ್ಲ.

೩೮. ಶ್ರಾದ್ಧಕಾಲಬಂದಾಗ್ಗೆ ಶ್ರದ್ಧೆಯಿಂದೇನನ್ನೂ ಕೊಟ್ಟವನಲ್ಲ. ಸಾಧ್ವಿಯಾದ ನಿನ್ನ ಹೆಂಡತಿಯು ಮನೆಗೆ ಬಂದವರನ್ನೂ ಪರ್ವಕಾಲಗಳನ್ನೂ ಹೇಳುತ್ತಿದ್ದಳು.

ಶ್ವಶುರಶ್ರಾದ್ಧಕಾಲಶ್ಚ ಶ್ವಶ್ರ್ವಾಶ್ಚೈವ ಮಹಾಮತೇ ।
ಶ್ರುತ್ವಾ ತ್ವಂ ತದ್ವಚಸ್ತಸ್ಯಾ ಗೃಹಂ ತಕ್ತ್ವಾ ಪಲಾಯಸೇ ॥ ೩೯ ॥

ಧರ್ಮಮಾರ್ಗಂ ನ ದೃಷ್ಟಂ ತೇ ಶ್ರುತಂ ನೈವ ಕದಾ ತ್ವಯಾ ।
ಲೋಭೋ ಮಾತಾ ಪಿತಾ ಭ್ರಾತಾ ಲೋಭಸ್ಸ್ವಜನಬಾಂಧವಾಃ ॥ ೪೦ ॥

ಪಾಲಿತಂ ಲೋಭಮೇವೈಕಂ ತ್ಯಕ್ತ್ವಾ ಧರ್ಮಂ ಸದೈವ ಹಿ ।
ತಸ್ಮಾದ್ದುಃಖೀ ಭವಾನ್ ಜಾತೋ ದಾರಿದ್ರ್ಯೇಣಾತಿಪೀಡಿತಃ ॥ ೪೧ ॥

ದಿನೇ ದಿನೇ ಮಹಾತೃಷ್ಣಾ ಹೃದಯೇ ತೇ ಪ್ರಪದ್ಯತೇ ।
ಯದಾ ಯದಾ ಗೃಹೇ ದ್ರವ್ಯಂ ವೃದ್ಧಿಮಾಯಾತಿ ತೇ ಸದಾ ॥ ೪೨ ॥

ತೃಷ್ಣಯಾ ದಹ್ಯಮಾನಸ್ತು ತಥಾ ತ್ವಂ ವಹ್ನಿರೂಪಯಾ ।
ರಾತ್ರೌ ವಾ ಸುಪ್ರಸುಪ್ತಸ್ತು ನಿಶ್ಚಿತೋ ಹಿ ಪ್ರಚಿಂತಸಿ ॥ ೪೩ ॥

ದಿನಂ ಪ್ರಾಪ್ಯ ಮಹಾನೋಹ್ಯೈವ್ಯಾಕುಲಿತೋಽಸಿ ಸದೈವ ಹಿ ।
ಸಹಸ್ರಂ ಲಕ್ಷಕಂ ಕೋಟಿಃ ಕದಾ ಹ್ಯರ್ಬುದಮೇವ ಚ ॥ ೪೪ ॥

---

೩೯. ಮಾವ ಬಂದಿದ್ದಾರೆ. ಅತ್ತೆ ಬಂದಿದ್ದಾರೆ. ಇಂದು ಶ್ರಾದ್ಧದ ದಿನವೆಂದು ಹೇಳಿದರೆ ಕೇಳಿದಕೂಡಲೇ ಮನೆಯನ್ನು ಬಿಟ್ಟು ಹೊರಟುಹೋಗುತ್ತಿದ್ದೆ.

೪೦-೪೧. ಧರ್ಮಮಾರ್ಗವನ್ನು ನೀನು ಕಂಡವನೇ ಅಲ್ಲ. ಕೇಳಿದವನೂ ಅಲ್ಲ. ನಿನಗೆ ಲೋಭವೇ ತಾಯಿ, ತಂದೆ, ಸೋದರ, ಬಂಧುಗಳೆಲ್ಲವೂ ಆಗಿತ್ತು. ಧರ್ಮವನ್ನು ಬಿಟ್ಟು ಲೋಭವನ್ನೇ ಪಾಲಿಸುತ್ತಿದ್ದೆ. ಆದ್ದರಿಂದ ಈಗ ದರಿದ್ರನಾಗಿ ದುಃಖಿಯಾಗಿದ್ದೀಯೆ.

೪೨. ದಿನದಿನಕ್ಕೂ ನಿನ್ನ ಹೃದಯದಲ್ಲಿ ಮಹತ್ತಾದ ತೃಷೆ ಹುಟ್ಟುತ್ತದೆ. ಮನೆಯಲ್ಲಿ ದುಡ್ಡು ಹೆಚ್ಚಿದಂತೆಲ್ಲಾ ಆಸೆ ಹೆಚ್ಚುತ್ತದೆ.

೪೩. ಬೆಂಕಿಯಂತೆ ದಹಿಸುವ ಆ ಚಿಂತೆಯಿಂದ ನೀನು ಪರಿತಪಿಸುತ್ತಾ ರಾತ್ರಿಯಲ್ಲೂ ನಿದ್ರೆಯಲ್ಲೂ ಯೋಚನಾಪರನಾಗಿಯೇ ಇರುತ್ತಿದೆ.

೪೪-೪೬. ಬೆಳಗಾಯಿತೆಂದರೆ ನಿನಗೆ ಹಣದ ಚಿಂತೆಯೇ ಚಿಂತೆ. ಈಗ ಇರುವ ಒಂದು ಸಹಸ್ರದ್ರವ್ಯವು ಯಾವಾಗ ಒಂದುಲಕ್ಷ ಆಗುತ್ತದೆ? ಲಕ್ಷ, ಯಾವಾಗ ಕೋಟಿ

**ಭವಿಷ್ಯತಿ ಕದಾ ಖರ್ವೋ ನಿಖರ್ವಶ್ಚಾಥ ಮೇ ಗೃಹೇ ।**
**ಏವಂ ಸಹಸ್ರಂ ಲಕ್ಷಂ ಚ ಕೋಟಿರರ್ಬುದಮೇವ ಚ ॥ ೪೫ ॥**

**ಖರ್ವೋ ನಿಖರ್ವಸ್ಸಂಜಾತಸ್ತೃಷ್ಣಾ ನೈವ ಪ್ರಗಚ್ಛತಿ ।**
**ತವ ಕಾಯಂ ಪರಿತ್ಯಜ್ಯ ವೃದ್ಧಿಮಾಯಾತಿ ಸರ್ವದಾ ॥ ೪೬ ॥**

**ನೈವ ದತ್ತಂ ಹುತಂ ಚಾಪಿ ಪ್ರಭುಕ್ತಂ ನೈವ ಚ ತ್ವಯಾ ।**
**ಖನಿತಂ ಭೂಮಿಮಧ್ಯೇ ತು ಕ್ಷಿಪ್ತಂ ಪುತ್ರಾ ನ ಜಾನತೇ ॥ ೪೭ ॥**

**ಅನ್ಯಮೇವಮುಪಾಯಂ ತು ದ್ರವ್ಯಾಗಮನಕಾರಣಾತ್ ।**
**ಕುರುಷೇ ಸರ್ವದಾ ವಿಪ್ರ ಲೋಕಾನ್ ಪೃಚ್ಛಸಿ ಬುದ್ಧಿಮಾನ್ ॥ ೪೮ ॥**

**ಖನಿತ್ರಂ ಮಜ್ಜನಂ ವಾದಂ ಧಾತುವಾದಮತಃ ಪರಂ ।**
**ಪೃಚ್ಛಮಾನೋ ಭ್ರಮಸ್ಯೇಕಸ್ತೃಷ್ಣಯಾ ಪರಿಮೋಹಿತಃ ॥ ೪೯ ॥**

---

ಯಾಗುತ್ತೆ? ಕೋಟಿಯು ಯಾವಾಗ ಅರ್ಬುದವಾಗುತ್ತವೆ? ಅದು ಯಾವಾಗ ಖರ್ವವಾಗುತ್ತದೆ? ಖರ್ವ ನಿಖರ್ವವಾಗಿ ಯಾವಾಗ ಆಗುತ್ತದೆ? ಎಂದು ಈರೀತಿ ಯೋಚಿಸುತ್ತಾ ಇರುವೆ. ನಿನ್ನ ಅಪೇಕ್ಷೆ ನೆರವೇರಿದರೂ ನಿನಗೆ ಪುನಃ ಆಸೆಮಾತ್ರ ಹೋಗಲಿಲ್ಲ. ಆ ಆಸೆಯು ನಿನ್ನ ದೇಹವನ್ನು ಬಿಟ್ಟು ನಿತ್ಯವೂ ವೃದ್ಧಿಯಾಗುತ್ತಲೇ ಇತ್ತು.

೪೭. ಕೂಡಿ ಹಾಕಿದ ನಿನ್ನ ದ್ರವ್ಯವನ್ನು ದಾನಮಾಡಲಿಲ್ಲ. ಹೋಮ ಮಾಡಲಿಲ್ಲ. ಅನುಭವಿಸಲೂ ಇಲ್ಲ. ಮಕ್ಕಳೂ ತಿಳಿಯದಂತೆ ಭೂಮಿಯಲ್ಲಿ ಹಳ್ಳ ತೋಡಿ ಹೂತಿದ್ದೆ. ಹಾಗೆ ಹಾಕಿದ್ದನ್ನು ಮಕ್ಕಳು ಕಾಣರು.

೪೮. ಹಣ ಸಂಪಾದಿಸುವ ಹೊಸಹೊಸ ಉಪಾಯಗಳನ್ನು ಯೋಚಿಸುತ್ತಲೇ ಇದ್ದೆ. ಜನರನ್ನು ಕೇಳುತ್ತಲೂ ಇದ್ದೆ.

೪೯. ಹೂಳುವುದು, ಮುಳುಗಿಸುವುದು, ಚಿನ್ನವೇ ಮೊದಲಾದ ರೂಪಗಳನ್ನು ಮಾಡುವುದು. ಇವೆಲ್ಲವನ್ನೂ ಹೇಗೆ ಮಾಡಬೇಕೆಂದು ಜನರನ್ನು ಏಕಾಂತವಾಗಿ ಆಸೆಯಿಂದ ಕೇಳುತ್ತಿದ್ದೆ.

ಸ್ಪರ್ಶಂ ಚಿಂತಯಸೇ ನಿತ್ಯಂ ಕಲ್ಪಾನ್ ಸಿದ್ಧಿಪ್ರದಾಯಕಾನ್ ।
ಪ್ರವೇಶಂ ವಿವರಾಣಾಂ ತು ಚಿಂತಮಾನಃ ಪ್ರಗಚ್ಛಸಿ ॥ ೫೦ ॥

ತೃಷ್ಣಾನಲೇನ ದುಃಖೇನ ಸುಖಂ ನೈವ ಪ್ರಗಚ್ಛಸಿ ।
ತೃಷ್ಣಾನಲೇನ ಸಂದೀಪ್ತೋ ಹಾಹಾಭೂತೋ ವಿಚೇತನಃ ॥ ೫೧ ॥

ಏವಂ ಮುಗ್ಧೋಽಸಿ ವಿಪ್ರೇಂದ್ರ ಗತಸ್ತ್ವಂ ಕಾಲವಶ್ಯತಾಂ ।
ದಾರಾಪುತ್ರೇಷು ತದ್ದ್ರವ್ಯಂ ಪೃಚ್ಛಮಾನೇಷು ವೈ ತ್ವಯಾ । ॥ ೫೨ ॥

ಕಥಿತಂ ನೈವ ದತ್ತಂ ಚ ಪ್ರಾಣಾನ್ ತ್ಯಕ್ತ್ವಾ ಗತೋ ಯಮಂ ।
ಏವಂ ಸರ್ವಂ ಮಯಾ ಖ್ಯಾತಂ ವೃತ್ತಾಂತಂ ತವ ಪೂರ್ವಕಂ ॥ ೫೩ ॥

ಅನೇನ ಕರ್ಮಣಾ ವಿಪ್ರ ನಿರ್ಧನೋಽಸಿ ದರಿದ್ರವಾನ್ ।
ಸಂಸಾರೇ ಯಸ್ಯ ಸತ್ಪುತ್ರಾ ಭಕ್ತಿಮಂತಃ ಸದೈವ ಹಿ ॥ ೫೪ ॥

ಸುಶೀಲಾ ಜ್ಞಾನಸಂಪನ್ನಾಃ ಸತ್ಯಧರ್ಮರತಾಸ್ಸದಾ ।
ಸಂಭವಂತಿ ಗೃಹೇ ತಸ್ಯ ಯಸ್ಯ ವಿಷ್ಣುಃ ಪ್ರಸೀದತಿ ॥ ೫೫ ॥

---

೫೦. ನಿತ್ಯವೂ ಆ ಹಣವನ್ನು ಮುಟ್ಟಬೇಕೆನ್ನುತ್ತಿ. ಅಲ್ಲದೆ ರಸವನ್ನು ತಗುಲಿಸಿದರೆ ಚಿನ್ನ ಮೊದಲಾದುವಾಗುತ್ತವೆ ಎಂಬ ಕಲ್ಪಗಳನ್ನು ಯೋಚಿಸುತ್ತಿರುವಿ. ನೀನು ಹಣವಿಟ್ಟಿರುವ ಜಾಗದಲ್ಲಿ ಸಂದಿದ್ದು ಹೊರಗೆ ಎಲ್ಲಿಬರುವುದೋ ಎಂಬ ಯೋಚನೆಯನ್ನು ಮಾಡುತ್ತಿದ್ದೆ. ಈರೀತಿಯಾಗಿರುತ್ತಿದ್ದೆ.

೫೧-೫೩. ಆಸೆಯೆಂಬ ಬೆಂಕಿಯು ಉಂಟುಮಾಡುವ ದುಃಖದಿಂದ ಸುಖವನ್ನೇ ಪೊಂದಲಿಲ್ಲ. ಈರೀತಿ ಆಸೆಯೆಂಬ ಬೆಂಕಿಯಿಂದ ದಗ್ಧನಾಗಿ ಜ್ಞಾನಶೂನ್ಯನಾದೆ. ಯಾವಾಗಲೂ ನಿನಗೆ ವಿವೇಕಜ್ಞಾನವು ಬರಲಿಲ್ಲ. ಹೆಂಡತಿ ಮಕ್ಕಳು ಕೇಳಿದರೂ ಕೂಡ ನೀನೂ ಕೊಡಲೂ ಇಲ್ಲ. ದ್ರವ್ಯವಿರುವ ಸ್ಥಳವನ್ನು ಅವರಿಗೆ ಹೇಳಲೂ ಇಲ್ಲ. ಹಾಗೆಯೇ ಪ್ರಾಣವನ್ನು ಬಿಟ್ಟು ಯಮಮಂದಿರವನ್ನು ಸೇರಿದೆ. ಇದೇ ನಿನ್ನ ಪೂರ್ವಜನ್ಮದ ವೃತ್ತಾಂತವು ಇದನ್ನೆಲ್ಲಾ ಹೇಳಿದ್ದೇನೆ.

೫೪-೫೫. ಇಂತಹ ಕರ್ಮಾಚರಣೆಯಿಂದ ಈ ಜನ್ಮದಲ್ಲಿ ದುಡ್ಡಿಲ್ಲದೆ ದರಿದ್ರನಾಗಿದ್ದೀಯೇ. ಸಂಸಾರದಲ್ಲಿ ಯಾವನಿಗೆ ಭಕ್ತಿವಂತರೂ ಸುಶೀಲರೂ ಜ್ಞಾನಿಗಳೂ ಸತ್ಯಧರ್ಮಗಳಲ್ಲಿ ಆಸಕ್ತರೂ ಆದ ಮಕ್ಕಳು ಹುಟ್ಟುತ್ತಾರೋ ಅವನ ಮನೆಯಲ್ಲಿ ವಿಷ್ಣುವು ಸರ್ವದಾ ಸನ್ನಿಹಿತನಾಗಿರುತ್ತಾನೆ. ಅವನಿಗೆ ವಿಷ್ಣುವು ಪ್ರಸನ್ನನಾಗುತ್ತಾನೆ.

ಧನಂ ಧಾನ್ಯಂ ಕಳತ್ರಂ ತು ಪುತ್ರಪೌತ್ರಮನಂತಕಂ ।
ಸ ಭುಂಕ್ತೇ ಮರ್ತ್ಯಲೋಕೇಽಪಿ ಯಸ್ಯ ವಿಷ್ಣುಃ ಪ್ರಸನ್ನವಾನ್ ॥ ೫೬ ॥

ವಿನಾ ವಿಷ್ಣೋಃ ಪ್ರಸಾದೇನ ದಾರಾನ್ಪುತ್ರಾನ್ನ ಚಾಪ್ನುಯಾತ್ ।
ಸುಜನ್ಮ ಚ ಕುಲಂ ವಿಪ್ರ ತದ್ವಿಷ್ಣೋಃ ಪರಮಂ ಪದಂ ॥ ೫೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ಸುಮನೋಪಾಖ್ಯಾನೇ ಷೋಡಶೋಽಧ್ಯಾಯಃ



---

೫೬. ವಿಷ್ಣುವು ಪ್ರಸನ್ನನಾದರೆ ಅವನಿಗೆ ಧನ, ಧಾನ್ಯ, ಹೆಂಡತಿ, ಪುತ್ರ ಪೌತ್ರರು ಉಂಟಾಗಿ ಈ ಲೋಕದಲ್ಲಿ ಅನಂತಸೌಖ್ಯವನ್ನು ಅನುಭವಿಸುತ್ತಾನೆ.

೫೭. ವಿಷ್ಣುವಿನ ಅನುಗ್ರಹವಿಲ್ಲದಿದ್ದರೆ ಹೆಂಡರುಮಕ್ಕಳುಗಳನ್ನು ಹೊಂದಲಾಗುವುದಿಲ್ಲ. ಎಲೈ ಬ್ರಾಹ್ಮಣನೇ, ಉತ್ತಮವಾದ ಕುಲವೂ ಅದರಲ್ಲಿ ಜನ್ಮವೂ ಲಭಿಸಿದರೆ ಅದೇ ವಿಷ್ಣುವಿನ ಪರಮಪದವು ಎಂದರೆ ಅದನ್ನು ಹೊಂದಲು ಸುಲಭವಾದ ಮಾರ್ಗವು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಮನೋಪಾಖ್ಯಾನದಲ್ಲಿ
ಹದಿನಾರನೆಯ ಅಧ್ಯಾಯವು ಮುಗಿದುದು.



ಶ್ರೀ

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
## ॥ ಸಪ್ತದಶೋಽಧ್ಯಾಯಃ ॥

॥ ಸೋಮಶರ್ಮೋವಾಚ ॥

**ಪೂರ್ವಜನ್ಮಕೃತಂ ಕರ್ಮ ತ್ವಯಾ ಖ್ಯಾತಂ ಚ ಮೇ ಮುನೇ ।**
**ಶೂದ್ರತ್ವೇನ ಚ ವಿಪ್ರೇಂದ್ರ ಮಯೇತತ್ಪರಿವರ್ಜಿತಂ ॥ ೧ ॥**

**ವಿಪ್ರತ್ವಂ ಹಿ ಮಯಾ ಪ್ರಾಪ್ತಂ ಕಥಂ ಚ ದ್ವಿಜಸತ್ತಮ ।**
**ತತ್ಸರ್ವಂ ಕಾರಣಂ ಬ್ರೂಹಿ ಜ್ಞಾನವಿಜ್ಞಾನಪಂಡಿತ ॥ ೨ ॥**

॥ ವಸಿಷ್ಠ ಉವಾಚ ॥

**ಯತ್ತ್ವಯಾ ಚೇಷ್ಟಿತಂ ಪೂರ್ವಂ ಕರ್ಮಧರ್ಮಾಶ್ರಿತಂ ದ್ವಿಜ ।**
**ತದಹಂ ಸಂಪ್ರವಕ್ಷ್ಯಾಮಿ ಶ್ರೂಯತಾಂ ಯದಿ ಮನ್ಯಸೇ ॥ ೩ ॥**

---

### ಹದಿನೇಳನೆಯ ಅಧ್ಯಾಯ.

೧. ಸೋಮಶರ್ಮನು ಹೇಳುತ್ತಾನೆ:—ಎಲೈ ಮುನಿಯೇ, ಇದುವರಿವಿಗೂ ನೀನು ನನ್ನ ಪೂರ್ವಜನ್ಮದ ಕರ್ಮವನ್ನು ಹೇಳಿದೆಯಷ್ಟೆ? ಶೂದ್ರಜನ್ಮವಾದುದರಿಂದ ನನ್ನ ಸ್ವಧರ್ಮವನ್ನು ಬಿಟ್ಟುಬಿಟ್ಟಿದ್ದೆನು.

೨. ಬಳಿಕ ನಾನು ಬ್ರಾಹ್ಮಣನಾಗಿ ಹೇಗೆ ಹುಟ್ಟಿದೆನು? ಜ್ಞಾನಿಯಾದ ಎಲೈ ಋಷಿಯೇ, ಆದೆಲ್ಲಕ್ಕೂ ಕಾರಣವನ್ನು ಹೇಳು ಎನ್ನಲು,

೩. ವಸಿಷ್ಠನು ಹೇಳಿದನು:—ಧರ್ಮದಿಂದ ಸಹಿತವಾದ ಪುಣ್ಯಕರ್ಮವನ್ನು ಆ ಜನ್ಮದಲ್ಲಿ ಸ್ವಲ್ಪವಟ್ಟಿಗೆ ಆಚರಿಸಿದ್ದುಂಟು. ಅದನ್ನು ಹೇಳುತ್ತೇನೆ ಕೇಳು.

**ಬ್ರಾಹ್ಮಣಃ ಕಶ್ಚಿದನಘಃ ಸದಾಚಾರಸ್ಸುಪಂಡಿತಃ ।**
**ವಿಷ್ಣುಭಕ್ತಸ್ತು ಧರ್ಮಾತ್ಮಾ ನಿತ್ಯಂ ಧರ್ಮಪರಾಯಣಃ ॥ ೪ ॥**

**ಯಾತ್ರಾವ್ಯಾಜೇನ ತೀರ್ಥಾನಾಂ ಭ್ರಮತ್ಯೇಕಸ್ಸ ಮೇದಿನೀಂ ।**
**ಅಟಮಾನಸ್ಸಮಾಯಾತಸ್ತವ ಗೇಹಂ ಮಹಾಮುನಿಃ ॥ ೫ ॥**

**ಯಾಚಿತಂ ಸ್ಥಾನಮೇಕಂ ವೈ ವಾಸಾರ್ಥಂ ದ್ವಿಜಸತ್ತಮ ।**
**ಅದ್ಯ ಧನ್ಯೋಽಸ್ಮ್ಯಹಂ ಪುಣ್ಯಮದ್ಯ ತೀರ್ಥಮಹಂ ಗತಃ ॥ ೬ ॥**

**ಅದ್ಯ ತೀರ್ಥಫಲಂ ಪ್ರಾಪ್ತಂ ತವಾದ್ಯ ಬುಧದರ್ಶನಾತ್ ।**
**ಗವಾಂ ಸ್ಥಾನಂ ವರಂ ಪುಣ್ಯಂ ತತ್ರ ವಾಸಂ ಪ್ರದರ್ಶಿತಂ ॥ ೭ ॥**

**ಅಂಗಸಂವಾಹನಂ ಕೃತ್ವಾ ಪಾದೌ ಚೈವ ಸುಮರ್ದಿತೌ ।**
**ಕ್ಷಾಳಿತೌ ಚ ಪುನಸ್ತೋಯೈಃ ಸ್ನಾತಃಪಾದೋದಕೇನ ಹಿ ॥ ೮ ॥**

**ಸದ್ಯೋಘೃತಂ ದಧಿ ಕ್ಷೀರಂ ತಕ್ರಮನ್ನಂ ಪ್ರದತ್ತವಾನ್ ।**
**ಸ ತಸ್ಮೈ ಬ್ರಾಹ್ಮಣಾಯೈವ ಭವಾನಿತ್ಥಂ ಮಹಾಮತೇ ॥ ೯ ॥**

---

೪-೫. ಸದಾಚಾರಿಯೂ ಪಂಡಿತನೂ ವಿಷ್ಣುಭಕ್ತನೂ ಆದ ಒಬ್ಬಬ್ರಾಹ್ಮಣನು ಯಾತ್ರೆಯ ನೆವದಿಂದ ಒಬ್ಬನೇ ಸುತ್ತುತ್ತಾ ನಿನ್ನ ಮನೆಗೆ ಬಂದನು. ವಾಸಕ್ಕೊಂದು ಸ್ಥಳ ಜಾಗವನ್ನು ಕೊಡೆಂದು ನಿನ್ನನ್ನು ಕೇಳಿದನು.

೬-೭. ಈಗ ಧನ್ಯನಾದೆನು. ನಾನು ತೀರ್ಥಯಾತ್ರೆ ಮಾಡಿದಂತಾಯಿತು. ತೀರ್ಥದ ಫಲವೂ ಬಂದಿತು. ನಿನ್ನ ದರ್ಶನವು ಇಷ್ಟನ್ನು ಉಂಟುಮಾಡಿತೆಂದು ಆ ಬ್ರಾಹ್ಮಣನಿಗೆ ಉಪಚಾರ ಹೇಳಿ ಹಸುವಿನ ಕೊಟ್ಟಿಗೆಯಲ್ಲಿ ವಾಸಕ್ಕೆ ಜಾಗವನ್ನು ತೋರಿಸಿದೆ.

೮-೯. ಅವನ ಕೈಕಾಲುಗಳನ್ನು ಅಮುಕಿ ಕಾಲನ್ನು ತೊಳೆದು ಆ ಪಾದೋದಕದಿಂದ ನೀನು ಸ್ನಾನಮಾಡಿದೆ. ಆದಿನ ತಾನೇ ಮಾಡಿದ ತುಪ್ಪ, ಮೊಸರು, ಹಾಲು, ಮಜ್ಜಿಗೆಗಳನ್ನು ಕೊಟ್ಟೆ. ಈರೀತಿ ಅವನನ್ನು ಶಿಶ್ರೂಷಿಸಿದೆ.

ಏವಂ ಸಂತೋಷಿತೋ ವಿಪ್ರಸ್ತ್ವಯ್ಯೈವ ಸಹ ಭಾರ್ಯಯಾ ।
ಪುಣ್ಯಸಾರ್ಧಂ ಮಹಾಭಾಗೋ ವೈಷ್ಣವೋ ಜ್ಞಾನಪಂಡಿತಃ ॥ ೧೦ ॥

ಅಥ ಪ್ರಭಾತೇ ಸಂಪ್ರಾಪ್ತೇ ದಿನೇ ಪುಣ್ಯೇ ಶುಭಾವಹೇ ।
ಆಷಾಢಸ್ಯ ತು ಶುದ್ಧಸ್ಯ ದ್ವಾದಶೀ ಪಾಪನಾಶಿನೀ ॥ ೧೧ ॥

ತಸ್ಮಿನ್ದಿನೇ ಸುಸಂಪ್ರಾಪ್ತಾ ಸರ್ವಪಾತಕನಾಶಿನೀ ।
ಯಸ್ಯಾಂ ದೇವೋ ಹೃಷೀಕೇಶೋ ಯೋಗನಿದ್ರಾಂ ಪ್ರಗಚ್ಛತಿ ॥ ೧೨ ॥

ತಾಂ ಪ್ರಾಪ್ಯ ಚ ತತೋ ಲೋಕಾಸ್ತ್ಯಜುರ್ಬುದ್ಧಿಪಂಡಿತಾಃ ।
ಗೃಹಸ್ಯ ಸರ್ವಕರ್ಮಾಣಿ ವಿಷ್ಣುಧ್ಯಾನರತಾ ದ್ವಿಜ ॥ ೧೩ ॥

ಉತ್ಸವಂ ಪರಮಂ ಚಕ್ರುರ್ಗೀತಮಂಗಳವಾದನೈಃ ।
ಸ್ತವನಂ ಬ್ರಾಹ್ಮಣಾಸ್ಸರ್ವೇ ಸೂಕ್ತೈಃಸ್ತೋತ್ರೈಸ್ಸುಮಂಗಳೈಃ ।೧೪॥

ಏವಂ ಮಹೋತ್ಸವಂ ಪ್ರಾಪ್ಯ ಸ ಚ ಬ್ರಾಹ್ಮಣಸತ್ತಮಃ ।
ತಸ್ಮಿನ್ದಿನೇ ಸ್ಥಿತಸ್ತತ್ರ ಸಂಪ್ರಾಪ್ತಂ ಹರಿವಾಸರಂ ॥ ೧೫ ॥

ಏಕಾದಶ್ಯಾಸ್ತು ಮಾಹಾತ್ಮ್ಯಂ ಪಠಿತಂ ಬ್ರಾಹ್ಮಣೇನ ವೈ ।
ಭಾರ್ಯಾಪುತ್ರೈಸ್ತ್ವಯಾ ಸಾರ್ಧಂ ಶ್ರುತಂ ಧರ್ಮಮನುತ್ತಮಂ ॥ ೧೬ ॥

---

೧೦. ನೀನೂ ನಿನ್ನ ಹೆಂಡತಿಯೂ ಹೀಗೆ ಆತನನ್ನು ಸೇವಿಸಿದಿರಿ. ಅದರಿಂದ ಜ್ಞಾನಪಂಡಿತನಾದ ವೈಷ್ಣವನು ಒಂದುದಿನ ಆಚರಿಸಿದ ಪುಣ್ಯದಲ್ಲಿ ಅರ್ಧಭಾಗವು ನಿನಗೆ ಬಂತು.

೧೧-೧೨. ಬೆಳಗಾದಮೇಲೆ ಆಷಾಢ ಶುದ್ಧ ದ್ವಾದಶೀ ಪ್ರಾಪ್ತವಾಯಿತು. ಅದು ಪುಣ್ಯದಿನ; ಪಾಪನಾಶಕವಾದ ದಿನ. ಆದಿನ ವಿಷ್ಣುವು ಯೋಗನಿದ್ರೆಯನ್ನು ಹೊಂದುವಂಥ ಪುಣ್ಯದಿನ.

೧೩-೧೪. ಆದಿನ ಬಂದರೆ ಜನರು ಮನೆಯ ಕೆಲಸಕಾರ್ಯಗಳನ್ನು ಬಿಟ್ಟು ವಿಷ್ಣು ಧ್ಯಾನದಲ್ಲಿ ಆಸಕ್ತರಾಗಬೇಕು. ಬ್ರಾಹ್ಮಣರು ಸೂಕ್ತಸ್ತೋತ್ರಮಂಗಳಗಳಿಂದಲೂ ವಾದ್ಯಗಳಿಂದಲೂ ಉತ್ಸವವನ್ನು ಮಾಡುತ್ತಾರೆ.

೧೫-೧೬. ಇಂತಹ ಮಹೋತ್ಸವದ ದಿವಸ ಆ ಬ್ರಾಹ್ಮಣನು ಅಲ್ಲಿದ್ದನು. ಏಕಾದಶಿಯ ದಿನವಾದುದರಿಂದ ಏಕಾದಶಿಯ ಮಾಹಾತ್ಮ್ಯವನ್ನು ಬ್ರಾಹ್ಮಣನು ಓದಿದನು. ಹೆಂಡತಿಮಕ್ಕಳೊಡನೆ ನೀನು ಆ ಧರ್ಮವನ್ನು ಕೇಳಿದೆ.

ಶ್ರುತೇ ತಸ್ಮಿನ್ ಮಹಾಪುಣ್ಯೇ ಭಾರ್ಯಾಪುತ್ರೈಸ್ತು ಪ್ರೇರಿತಃ ।
ಸಂಸರ್ಗಾದಸ್ಯ ವಿಪ್ರಸ್ಯ ವ್ರತಮೇತತ್ಸಮಾಚರ ॥ ೧೭ ॥

ತದಾಕರ್ಣ್ಯ ಮಹದ್ವಾಕ್ಯಂ ಸರ್ವಪುಣ್ಯಪ್ರದಾಯಕಂ ।
ವ್ರತಮೇತತ್ಕರಿಷ್ಯಾಮಿ ಇತಿ ನಿಶ್ಚಿತಮಾನಸಃ ॥ ೧೮ ॥

ಭಾರ್ಯಾಪುತ್ರೈಸ್ಸಮಂ ಗತ್ವಾ ಹ್ಯುಷಃಸ್ನಾನಂ ಕೃತಂ ತ್ವಯಾ ।
ಹೃಷ್ಟೇನ ಮನಸಾ ವಿಪ್ರ ಪೂಜಿತೋ ಮಧುಸೂದನಃ ॥ ೧೯ ॥

ಸರ್ವೋಪಹಾರೈಃ ಪುಣ್ಯೈಶ್ಚ ಗಂಧಪುಷ್ಪಾದಿಭಿಸ್ತಥಾ ।
ರಾತ್ರೌ ಜಾಗರಣಂ ಕೃತ್ವಾ ನೃತ್ಯಗೀತಾದಿಭಿಸ್ತಥಾ ॥ ೨೦ ॥

ಬ್ರಾಹ್ಮಣಸ್ಯ ಪ್ರಸಂಗೇನ ನದ್ಯಾಸ್ಸ್ನಾನಂ ಕೃತಂ ಪುನಃ ।
ಪೂಜಿತೋ ದೇವದೇವೇಶಃ ಪುಷ್ಪಧೂಪಾದಿಮಂಗಳೈಃ ॥ ೨೧ ॥

ಭಕ್ತ್ಯಾ ಪ್ರಣಮ್ಯ ಗೋವಿಂದಂ ಸ್ನಾಪಯಿತ್ವಾ ಪುನಃ ಪುನಃ ।
ನಿರ್ವಾಣದಾಂಬು ದತ್ತಂ ತೇ ಬ್ರಾಹ್ಮಣೇನ ಮಹಾತ್ಮನಾ ॥ ೨೨ ॥

---

೧೭. ಪುಣ್ಯಪ್ರದವಾದ ಅದನ್ನು ಕೇಳುತ್ತಲೂ ಹೆಂಡತಿಮಕ್ಕಳಿಂದ ಪ್ರೇರಿತನಾಗಿಯೂ, ಈ ಬ್ರಾಹ್ಮಣನ ಸಂಸರ್ಗದಿಂದಲೂ ಆ ವ್ರತವನ್ನು ಮಾಡಬೇಕೆಂಬ ಬುದ್ಧಿ ಬಂದಿತು.

೧೮. ಪುಣ್ಯಪ್ರದವಾದ ಈ ಮಾತನ್ನು ಕೇಳಿ, ಈ ವ್ರತವನ್ನು ಮಾಡುತ್ತೇನೆ ಎಂದು ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡೆ.

೧೯. ಹೆಂಡತಿ, ಮಕ್ಕಳೊಡನೆ ಹೋಗಿ ಉಷಃಕಾಲದಲ್ಲಿ ಸ್ನಾನಮಾಡಿದೆ. ಸಂತೋಷದಿಂದ ವಿಷ್ಣುಪೂಜೆಯನ್ನು ಮಾಡಿದೆ.

೨೦. ಸಕಲವಾದ ನೈವೇದ್ಯ ಹೂ, ಗಂಧ ಮುಂತಾದವುಗಳಿಂದ ಪೂಜಿಸಿ, ನೃತ್ಯಗೀತಾದಿಗಳನ್ನು ಮಾಡಿ, ರಾತ್ರಿ ಜಾಗರಣವನ್ನೂ ಮಾಡಿದೆ.

೨೧. ಬ್ರಾಹ್ಮಣನ ಜೊತೆಯಲ್ಲಿ ಮತ್ತೆ ಸ್ನಾನಮಾಡಿದೆ. ಪುಷ್ಪಾದಿಗಳಿಂದ ಮತ್ತೆ ವಿಷ್ಣುವನ್ನು ಪೂಜಿಸಿದೆ.

೨೨. ಗೋವಿಂದನನ್ನು ಸ್ನಾನಮಾಡಿಸಿ, ನಮಸ್ಕರಿಸಿದ ಬಳಿಕ ಬ್ರಾಹ್ಮಣನು ನಿನಗೆ ತೀರ್ಥವನ್ನು ಕೊಟ್ಟನು.

ಭಕ್ತ್ಯಾ ಪ್ರಣಮ್ಯ ತಂ ವಿಪ್ರಂ ದತ್ತ್ವಾ ತಸ್ಮೈ ಸುದಕ್ಷಿಣಾ ।
ಕೃತ್ವಾ ಚ ಪಾರಣಂ ವಿಪ್ರ ಪುತ್ರೈರ್ಭಾರ್ಯಾದಿಭಿಸ್ಸಮಂ ॥ ೨೩ ॥

ತೋಷಿತೋ ಭಕ್ತಿಪೂರ್ವೇಣ ಸದ್ಭಾವೇನ ತ್ವಯೈವ ಸಃ ।
ಏವಂ ವ್ರತಂ ಸಮಾಚೀರ್ಣಂ ತ್ವಯೈವ ದ್ವಿಜಸತ್ತಮಃ ॥ ೨೪ ॥

ಸಂಗತ್ಯಾ ಬ್ರಾಹ್ಮಣಸ್ಯೈವ ವಿಷ್ಣೋಶ್ಚೈವ ಪ್ರಸಾದತಃ ।
ಭವಾನ್ ಬ್ರಾಹ್ಮಣತಾಂ ಪ್ರಾಪ್ತಃ ಸತ್ಯಧರ್ಮಸಮನ್ವಿತಃ ॥ ೨೫ ॥

ತೇನ ವ್ರತಪ್ರಭಾವೇನ ತ್ವಯಾ ಪ್ರಾಪ್ತಂ ಮಹತ್ಫಲಂ ।
ಭೂಸುರತ್ವಂ ಮಹಾಭಾಗ ಸತ್ಯಧರ್ಮಸಮನ್ವಿತಂ ॥ ೨೬ ॥

ತಸ್ಮೈ ತು ಬ್ರಾಹ್ಮಣಾಯೈವ ವೈಷ್ಣವಾಯ ಮಹಾತ್ಮನೇ ।
ಶ್ರದ್ಧಯಾ ಸತ್ಯಭಾವೇನ ದತ್ತಮನ್ನಂ ಸುಸಂಸ್ಕೃತಂ ॥ ೨೭ ॥

ತೇನ ದಾನಪ್ರಭಾವೇನ ಮೃಷ್ಟಾನ್ನಮುಪತಿಷ್ಠತಿ ।
ಮಹಾಮುಗ್ಧೈಃ ಪ್ರಮುಗ್ಧೋಽಸಿ ತೃಷ್ಣಯಾ ವ್ಯಥಿತಂ ಮನಃ ॥ ೨೮ ॥

---

೨೩-೨೪. ಭಕ್ತಿಯಿಂದ ಆ ಬ್ರಾಹ್ಮಣನಿಗೆ ನಮಸ್ಕರಿಸಿ ದಕ್ಷಿಣೆಯನ್ನು ಕೊಟ್ಟೆ. ಹೆಂಡತಿ, ಮಕ್ಕಳೊಡನೆ ಪಾರಣೆಯನ್ನು ಮಾಡಿಕೊಂಡು ಭಕ್ತಿಯಿಂದಲೂ, ಸದ್ಭಾವದಿಂದಲೂ, ಆ ಬಾಹ್ಮಣನನ್ನು ಸಂತೋಷಪಡಿಸಿದೆ. ಹೀಗೆ ನಿನ್ನೊಡನೆ ಆ ಬ್ರಾಹ್ಮಣನು ವ್ರತವನ್ನು ಮಾಡಿದನು.

೨೫. ಬ್ರಾಹ್ಮಣನ ಸಹವಾಸದಿಂದಲೂ, ವಿಷ್ಣುವಿನ ಪ್ರಸಾದದಿಂದಲೂ, ಈಗ ಸತ್ಯ, ಧರ್ಮಗಳಿಂದ ಕೂಡಿದ ಬ್ರಾಹ್ಮಣನಾಗಿ ಹುಟ್ಟಿದ್ದೀಯೆ.

೨೬. ಆ ವ್ರತದ ಪ್ರಭಾವದಿಂದ ಮಹಾಫಲವನ್ನು ಹೊಂದಿದೆ. ಆದುದರಿಂದ ಈ ಜನ್ಮದಲ್ಲಿ ಯೋಗ್ಯನಾದ ಬ್ರಾಹ್ಮಣನಾಗಿ ಹುಟ್ಟಿರುವೆ.

೨೭. ಆ ಮಹಾತ್ಮನಾದ ವೈಷ್ಣವನಿಗೆ ಶ್ರದ್ಧೆಯಿಂದ ಭೋಜನಾರ್ಥವಾಗಿ ಒಳ್ಳೆಯದಾದ ಅನ್ನವನ್ನು ಕೊಟ್ಟೆ.

೨೮. ಆ ದಾನದ ಪ್ರಭಾವದಿಂದ ನಿನಗೆ ಒಳ್ಳೆಯ ಮೃಷ್ಟಾನ್ನದ ಭೋಜನಗಳೇ ಸಿಕ್ಕುತ್ತಿರುತ್ತವೆ. ಆದರೆ ಜ್ಞಾನವಿಲ್ಲದ್ದರಿಂದ ಮೂಢನಾಗಿದ್ದೀಯೆ. ಆಸೆಯಿಂದ ಮನಸ್ಸು ವ್ಯಥೆಗೊಂಡಿದೆ.

ಪೂರ್ವಜನ್ಮನಿ ತೇ ವಿಪ್ರ ಹ್ಯರ್ಥಮೇವ ಪ್ರಸಂಚಿತಂ ।
ನ ದತ್ತಂ ಬ್ರಾಹ್ಮಣೇಭ್ಯೋ ಹಿ ದಿನೇಷ್ವನ್ಯೇಷು ವೈ ತ್ವಯಾ　　॥ ೨೯ ॥

ದಾರಪುತ್ರೇಷು ಲೋಭೇನ ಮ್ರಿಯಮಾಣೇನ ವೈ ತದಾ ।
ತಸ್ಯ ಪಾಪಸ್ಯ ಭಾವೇನ ದಾರಿದ್ರ್ಯಂ ತ್ವಾಮುಪಾವಿಶತ್　　॥ ೩೦ ॥

ಪುತ್ರಲೋಭಂ ಪರಿತ್ಯಜ್ಯ ಸ್ನೇಹಂ ತ್ಯಕ್ತ್ವಾ ಸುದೂರತಃ ।
ಅಪುತ್ರರ್ವಾ ಭವಾರ್ ಜಾತಃ ತಸ್ಯ ಪಾಪಸ್ಯ ವೈ ಫಲಂ　　॥ ೩೧ ॥

ಸುಪುತ್ರಂ ಚ ಕುಲಂ ವಿಪ್ರ ಧನಂ ಧಾನ್ಯಂ ಧರಾ ಸ್ತ್ರಿಯಃ ।
ಸುಜನ್ಮ ಮರಣಂ ಚೈವ ಸುಭೋಗಾಸ್ಸುಖಮೇವ ಚ　　॥ ೩೨ ॥

ರಾಜ್ಯಂ ಸ್ವರ್ಗಶ್ಚ ಮೋಕ್ಷಶ್ಚ ಯದ್ಯದ್ದುರ್ಲಭಮೇವ ಚ ।
ಪ್ರಸಾದಾತ್ತಸ್ಯ ದೇವಸ್ಯ ವಿಷ್ಣೋಶ್ಚೈವ ಮಹಾತ್ಮನಃ　　॥ ೩೩ ॥

ತಸ್ಮಾದಾರಾಧ್ಯ ಗೋವಿಂದಂ ನಾರಾಯಣಮತಃಪರಂ ।
ಪ್ರಾಪ್ಸ್ಯಸಿ ತ್ವಂ ಪರಂ ಸ್ಥಾನಂ ತದ್ವಿಷ್ಣೋಃ ಪರಮಂ ಪದಂ　　॥ ೩೪ ॥

---

೨೯. ಎಲೈ ಬ್ರಾಹ್ಮಣನೇ, ನೀನು ಪೂರ್ವಜನ್ಮದಲ್ಲಿ ಹಣವನ್ನೇ ಶೇಖರಿಸಿದೆ. ಬ್ರಾಹ್ಮಣರಿಗಾಗಲಿ, ಬಡವರಿಗಾಗಲಿ, ಕೊಡಲಿಲ್ಲ.

೩೦. ಲೋಭದಿಂದ ಸಾಯುವಾಗಲೂ ಕೂಡ ಹೆಂಡತಿ, ಮಕ್ಕಳಿಗೆ ಅದರ ವಿಷಯವನ್ನು ತಿಳಿಸದೇ ಹೋದೆ. ಆ ಪಾಪದಿಂದಲೇ ಈಗ ನಿನಗೆ ದಾರಿದ್ರ್ಯ ಬಂದಿದೆ.

೩೧. ಮಕ್ಕಳಲ್ಲಿ ಆಸೆಯನ್ನೂ, ಸ್ನೇಹವನ್ನೂ, ಬಿಟ್ಟು, ಅವರನ್ನು ಸರಿಯಾಗಿ ಪಾಲಿಸದೆ ಇದ್ದ ಪಾಪದಿಂದ ಅಪುತ್ರವಂತನಾದೆ.

೩೨-೩೩. ಸುಪುತ್ರ, ಕುಲ, ಧನ, ಧಾನ್ಯ, ಭೂಮಿ, ಸ್ತ್ರೀ, ಸುಜನ್ಮ, ಮರಣ, ಭೋಗ, ಸುಖ, ರಾಜ್ಯ, ಸ್ವರ್ಗ, ಮೋಕ್ಷ, ಇನ್ನೂ ಅನೇಕವಾದ ಹೊಂದಲಸಾಧ್ಯವಾದವು, ಆ ವಿಷ್ಣುವಿನ ಪ್ರಸಾದದಿಂದ ಮಾತ್ರ ಸಿಕ್ಕುತ್ತವೆ.

೩೪. ಆದ್ದರಿಂದ ಆ ಪರಾತ್ಪರನಾದ ಗೋವಿಂದನನ್ನು ಆರಾಧಿಸು. ಅದರಿಂದ ವೈಕುಂಠವೆಂಬ ವಿಷ್ಣುವಿನ ಪರಮೋತ್ಕೃಷ್ಟಸ್ಥಾನವನ್ನು ಹೊಂದುತ್ತಿ.

ಸುಪುತ್ರತ್ವಂ ಧನಂ ಧಾನ್ಯಂ ಸುಭೋಗಾ ಸುಖಮೇವ ಚ ।
ಪೂರ್ವಜನ್ಮಕೃತಂ ಕರ್ಮ ಯತ್ತ್ವಯಾ ಪರಿಚೇಷ್ಟಿತಂ ॥ ೩೫ ॥

ತನ್ಮಯಾ ಕಥಿತಂ ಸರ್ವಂ ತವಾಗ್ರೇ ಪರಿನಿಶ್ಚಿತಂ ।
ಏವಂ ಜ್ಞಾತ್ವಾ ಮಹಾಭಾಗ ನಾರಾಯಣಪರೋ ಭವ ॥ ೩೬ ॥

ಬ್ರಹ್ಮಾತ್ಮಜೇನಾಪಿ ಮಹಾನುಭಾವಃ
ಸ ವಿಪ್ರವರ್ಯಃ ಪರಿಬೋಧಿತೋ ಹಿ
ಹರ್ಷೇಣ ಯುಕ್ತಃ ಸುಮಹಾನುಭಾವೋ
ಭಕ್ತ್ಯಾ ವಸಿಷ್ಠಂ ಪ್ರಣಿಪತ್ಯ ತತ್ರ ॥ ೩೭ ॥

ಆಮಂತ್ರ್ಯ ವಿಪ್ರಂ ಸ ಜಗಾಮ ಗೇಹಂ
ತಾಂ ಪ್ರಾಹ ಭಾರ್ಯಾಂ ಸುಮನಾಂ ಪ್ರಹರ್ಷಿತಃ ।
ಸರ್ವಂ ಹಿ ವೃತ್ತಂ ಮಮ ಪೂರ್ವಚೇಷ್ಟಿತಂ
ತೇನೈವ ವಿಪ್ರೇಣ ತವ ಪ್ರಸಾದಾತ್ ॥ ೩೮ ॥

ಭದ್ರೇ ವಸಿಷ್ಠೇನ ವಿಕಾಶನೀತ
ಮದ್ಯೈವ ಮೋಹಂ ಪರಿಹೃತ್ಯ ದೂರಾತ್ ।

---

೩೫-೩೬. ಒಳ್ಳೆಯ ಮಕ್ಕಳನ್ನು ಪಡೆಯುವ ಯೋಗ, ಧನ, ಧಾನ್ಯ, ಭೋಗ ಸುಖ, ಇವುಗಳನ್ನೂ, ಪೂರ್ವಜನ್ಮದಲ್ಲಿ ನೀನು ಮಾಡಿದ ಕರ್ಮವನ್ನೂ, ನಿನಗೆ ಹೇಳಿ ಆಯಿತು. ಇದನ್ನು ತಿಳಿದು ನಾರಾಯಣನಲ್ಲಿ ಮನಸ್ಸಿಡುಎಂದನು.

೩೭. ವಸಿಷ್ಠನಿಂದ ಹೀಗೆ ಎಚ್ಚರಿಸಲ್ಪಟ್ಟು, ಆ ಬ್ರಾಹ್ಮಣನು ಹರ್ಷಯುಕ್ತನಾಗಿ ವಸಿಷ್ಠನಿಗೆ ನಮಸ್ಕರಿಸಿ, ಹೋಗಿಬರುವೆನೆಂದು ಅವನಿಗೆ ಹೇಳಿ, ತನ್ನ ಮನೆಗೆ ಹೋದನು.

೩೮. ಹೆಂಡತಿಯನ್ನು ಕುರಿತು ಸಂತೋಷದಿಂದ ನಿನ್ನ ಅನುಗ್ರಹದಿಂದಲೇ ಆತನು ನನ್ನ ಪೂರ್ವವೃತ್ತಾಂತವೆಲ್ಲವನ್ನೂ ಹೇಳಿದನು.

೩೯. ಓ ಮಂಗಳಾಂಗಿ, ವಸಿಷ್ಠನು ಹೇಳಿದುದನ್ನು ಕೇಳಿ, ಈಗಲೇ ಮೋಹವನ್ನು ಬಿಟ್ಟು, ವಿಷ್ಣುವನ್ನು ಪೂಜಿಸುತ್ತೇನೆ. ಪರಮಪದವಾದ ಮೋಕ್ಷವನ್ನು ಹೊಂದುತ್ತೇನೆ, ಎಂದನು.

ಆರಾಧಯಿಷ್ಯೇ ಮಧುಸೂದನಂ ತಂ
ಯಾಸ್ಯಾಮಿ ಮೋಕ್ಷಂ ಪರಮಂ ಪದಂ ತತ್ ॥ ೩೯ ॥

ಆಕರ್ಣ್ಯ ವಾಕ್ಯಂ ಪರಮಂ ಮಹಾರ್ಥಂ
ಸುಮಂಗಲಂ ಮಂಗಲದಾಯಕಂ ಹಿ ।
ಹರ್ಷೇಣ ಯುಕ್ತಾ ತಮುವಾಚ ಕಾಂತಂ
ಪುಣ್ಯೋಽಸಿ ವಿಪ್ರೇಂದ್ರ ವಿಬೋಧಿತೋಽಸಿ ॥ ೪೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ಸುಮನೋಪಾಖ್ಯಾನೇ ಸಪ್ತದಶೋಽಧ್ಯಾಯಃ



---

೪೦. ಪರಮಾರ್ಥವುಳ್ಳ ಆತನು ಹೇಳಿದುದನ್ನು ಅವನ ಪತ್ನಿಯು ಕೇಳಿ, ಹರ್ಷದಿಂದ ಅವನನ್ನು ಕುರಿತು ಪುಣ್ಯವಂತನೇ, ಆ ಮಹಾತ್ಮನ ಉಪದೇಶದಿಂದ ಕರ್ತವ್ಯ ಕರ್ಮದಲ್ಲಿ ಎಚ್ಚರಗೊಂಡಿರುವೆ. ನೀನೇ ಧನ್ಯನು, ಎಂದು ಹೇಳಿದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದ ಸುಮನೋಪಾಖ್ಯಾನದಲ್ಲಿ
ಹದಿನೇಳನೆಯ ಅಧ್ಯಾಯವು ಮುಗಿದುದು



ಶ್ರೀ

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ॥ ಅಷ್ಟಾದಶೋಽಧ್ಯಾಯಃ ॥

**ಸೂತ ಉವಾಚ**

**ಸೋಮಶರ್ಮಾ ಮಹಾಪ್ರಾಜ್ಞಃ ಸುಮನಯಾ ಸಹ ಸತ್ತಮಃ ।**
**ಕಪಿಲಾಸಂಗಮೇ ಪುಣ್ಯೇ ರೇವಾತೀರೇ ಸುಪುಣ್ಯದೇ ॥ ೧ ॥**

**ಸ್ನಾತ್ವಾ ತತ್ರ ಸ ಮೇಧಾವೀ ತರ್ಪಯಿತ್ವಾ ಸುರಾನ್ ಪಿತೄನ್ ।**
**ತಪಸ್ತೇಪೇ ಸುಶಾಂತಾತ್ಮಾ ಜಪನ್ನಾರಾಯಣಂ ಶಿವಂ ॥ ೨ ॥**

**ದ್ವಾದಶಾಕ್ಷರಮಂತ್ರೇಣ ಧ್ಯಾನಯುಕ್ತೋ ಮಹಾಮನಾಃ ।**
**ತಸ್ಯೈವ ದೇವದೇವಸ್ಯ ವಾಸುದೇವಸ್ಯ ಸುವ್ರತಃ ॥ ೩ ॥**

**ಆಸನೇ ಶಯನೇ ಯಾನೇ ಸ್ವಪ್ನೇ ಪಶ್ಯತಿ ಕೇಶವಂ ।**
**ಸ ದೈವನಿಶ್ಚಿತೋ ಭೂತ್ವಾ ಕಾಮಕ್ರೋಧವಿವರ್ಜಿತಃ ॥ ೪ ॥**

---

### ಹದಿನೆಂಟನೆಯ ಅಧ್ಯಾಯವು.

೧-೨. ಸೂತನು ಹೇಳುತ್ತಾನೆ:—ಬಳಿಕ ಪ್ರಾಜ್ಞನಾದ ಸೋಮಶರ್ಮನು ಸುಮನೆಯೊಡನೆ ರೇವಾ, ಕಪಿಲಾನದಿಗಳ ಸಂಗಮಕ್ಕೆ ಹೋಗಿ, ರೇವಾನದಿಯ ದಡದಲ್ಲಿ ಸ್ನಾನಮಾಡಿ, ದೇವಪಿತೃಗಳಿಗೆ ತರ್ಪಣವನ್ನು ಕೊಟ್ಟು, ಶಾಂತಾತ್ಮನಾಗಿ ಮಂಗಳಕರನಾದ ನಾರಾಯಣನನ್ನು ಧ್ಯಾನಿಸುತ್ತಾ ತಪಸ್ಸುಮಾಡಲು ಪ್ರಾರಂಭಿಸಿದನು.

೩-೪. ಓಂ ನಮೋ ಭಗವತೇ ವಾಸುದೇವಾಯ ಎಂಬ ದ್ವಾದಶಾಕ್ಷರೀ ಮಂತ್ರವನ್ನು ಜಪಿಸುತ್ತಾ, ಕಾಮಕ್ರೋಧಗಳನ್ನು ಬಿಟ್ಟು, ತಪಸ್ಸುಮಾಡುತ್ತಾ ಕುಳಿತಿರುವಾಗಲೂ, ಮಲಗಿರುವಾಗಲೂ, ಸಂಚಾರಕಾಲದಲ್ಲಿಯೂ, ಮತ್ತು ಸ್ವಪ್ನವೇ ಮೊದಲಾದ ಎಲ್ಲಾ ಅವಸ್ಥೆಗಳಲ್ಲೂ, ಕೇಶವನನ್ನೇ ಧ್ಯಾನಿಸುತ್ತಿದ್ದನು.

ಸಾ ಚ ಸಾಧ್ವೀ ಮಹಾಭಾಗಾ ಪತಿವ್ರತಪರಾಯಣಾ ।
ಸುಮನಾ ಕಾಂತಮೇವಾಪಿ ಶುಶ್ರೂಷತಿ ತಪೋನ್ವಿತಂ ॥ ೫ ॥

ಧ್ಯಾಯಮಾನಸ್ಯ ತಸ್ಯಾಪಿ ವಿಘ್ನೈಸ್ಸಂದರ್ಶಿತಂ ಭಯಂ ।
ಸರ್ಪಾ ವಿಷೋಲ್ಬಣಾಃ ಕೃಷ್ಣಾಸ್ತತ್ರ ಯಾಂತಿ ಮಹಾತ್ಮನಃ ॥ ೬ ॥

ಪಾರ್ಶ್ವತಸ್ತಪ್ಯಮಾನಸ್ಯ ತಸ್ಯ ತೇ ಸೋಮಶರ್ಮಣಃ ।
ಸಿಂಹವ್ಯಾಘ್ರಗಜಾ ದೃಷ್ಟ್ವಾ ಭಯಮೇವ ಪ್ರಚಕ್ರಿರೇ ॥ ೭ ॥

ವೇತಾಳಾ ರಾಕ್ಷಸಾ ಭೂತ್ವಾ ಕೂಶ್ಮಾಂಡಾಃ ಪ್ರೇತಭೈರವಾಃ ।
ಭಯಂ ಪ್ರದರ್ಶಯಂತ್ಯೇತೇ ದಾರುಣಾಃ ಪ್ರಾಣಿನಾಮಲಂ ॥ ೮ ॥

ನಾನಾವಿಧಾ ಮಹಾಭೀಮಾಃ ಸಿಂಹಾಸ್ತತ್ರ ಸಮಾಗತಾಃ ।
ದಂಷ್ಟ್ರಾಕರಾಳವಕ್ತ್ರಾಶ್ಚ ಜಗರ್ಜುಶ್ಚಾತಿಭೈರವಂ ॥ ೯ ॥

ವಿಷ್ಣೋರ್ಧ್ಯಾನಾತ್ಸ ಧರ್ಮಾತ್ಮಾ ನ ಚಚಾಲ ಮಹಾಮತಿಃ ।
ಮಹಾವಿಘ್ನೈಃ ಸ ಸಂಮೂಢ್ಯೈರ್ವ್ಯಾಪಿತೋ ಮುನಿಪುಂಗವ ॥ ೧೦ ॥

---

೫. ಪತಿವ್ರತೆಯಾದ ಆ ಸಾಧ್ವಿಯು ಪತಿಯಲ್ಲೇ ಆಸಕ್ತಳಾಗಿ ತಪೋನಿಷ್ಠನಾದ ಆತನನ್ನು ಸೇವಿಸುತ್ತಿದ್ದಳು.

೬-೭. ಧ್ಯಾನಮಾಡುತ್ತಿರುವ ಆತನಿಗೆ ಅನೇಕ ವಿಘ್ನಗಳು ಬಂದೊದಗುತ್ತಿತ್ತು. ವಿಷದಿಂದ ಕೂಡಿದ ಕೃಷ್ಣಸರ್ಪಗಳು, ಸಿಂಹ, ಹುಲಿ, ಆನೆಗಳು, ಕಾಣಿಸಿಕೊಂಡು ಭಯವನ್ನುಂಟುಮಾಡಿದವು.

೮. ಬೇತಾಳಗಳು, ರಾಕ್ಷಸರು, ಕೂಷ್ಮಾಂಡರು, ಭೈರವರು, ಬಂದು ಕ್ರೂರವಾಗಿ ಭಯವನ್ನು ತೋರಿಸುತ್ತಿದ್ದರು.

೯. ಭಯಂಕರವಾದ ಸಿಂಹಗಳು ಕೋರೆಹಲ್ಲುಗಳನ್ನು ತೋರಿಸುತ್ತಾ ಅವನ ಸಮೀಪದಲ್ಲಿ ಭಯಂಕರವಾಗಿ ಕೂಗುತ್ತಿದ್ದವು.

೧೦-೧೧ ಹೀಗಿದ್ದರೂ ವಿಷ್ಣುಧ್ಯಾನದಿಂದ ಆತನ ಮನಸ್ಸು ಸ್ವಲ್ಪವೂ ಚಲಿಸಲೇ ಇಲ್ಲ. ಮಹಾವಿಘ್ನಗಳಿಂದಲೂ ಚಲಿಸದಿರುವ ಈತನ ಬಳಿಗೆ ಒಂದು ದೊಡ್ಡ

ಏವಂ ನ ಚಲತೇ ಧ್ಯಾನಾತ್ ಸೋಮಶರ್ಮಾ ದ್ವಿಜೋತ್ತಮಃ ।
ಬಂಭಾರಾವಮಹಾಭೀಮಃ ಸಿಂಹಸ್ತತ್ರ ಸಮಾಗತಃ ॥ ೧೧ ॥

ತಂ ದೃಷ್ಟ್ವಾ ಭಯವಿತ್ರಸ್ತಃ ಸಸ್ಮಾರ ನೃಹರಿಂ ದ್ವಿಜಃ ।
ಇಂದ್ರನೀಲಪ್ರತೀಕಾಶಂ ಪೀತವಸ್ತ್ರಂ ಮಹೌಜಸಂ ।
ಶಂಖಚಕ್ರಧರಂ ದೇವಂ ಗದಾಪಂಕಜಧಾರಿಣಂ ॥ ೧೨ ॥

ಮಹಾಮೌಕ್ತಿಕಹಾರೇಣ ಇಂದುವರ್ಣಾನುಕಾರಿಣಾ ।
ಕೌಸ್ತುಭೇನಾಪಿ ರತ್ನೇನ ದ್ಯೋತಮಾನಂ ಜನಾರ್ದನಂ ॥ ೧೩ ॥

ಶ್ರೀವತ್ಸಾಂಕೇನ ದಿವ್ಯೇನ ಹೃದಯಂ ಯಸ್ಯ ರಾಜತೇ ।
ಸರ್ವಾಭರಣಶೋಭಾಢ್ಯಂ ಶತಪತ್ರನಿಭೇಕ್ಷಣಂ ॥ ೧೪ ॥

ಸುಸ್ಮಿತಾಸ್ಯಂ ಸುಪ್ರಸನ್ನಂ ರತ್ನಹಾರಾಭಿಶೋಭಿತಂ ।
ರಾಜಮಾನಂ ಹೃಷೀಕೇಶಂ ಧ್ಯಾನಂ ತೇನ ಕೃತಂ ಧ್ರುವಂ ॥ ೧೫ ॥

ತ್ವಮೇವ ಶರಣಂ ಕೃಷ್ಣ ಶರಣಾಗತವತ್ಸಲ।
ನಮಸ್ತೇ ದೇವದೇವೇಶ ಕಿಂ ಭಯಂ ಮೇ ಕರಿಷ್ಯತಿ ॥ ೧೬ ॥

---

ಸಿಂಹವು ಗರ್ಜನೆಮಾಡುತ್ತಾ ಬಂದಿತು. ಅದನ್ನು ನೋಡಿ ಆತನು ಹೆದರಿ ಹರಿಯನ್ನು ಸ್ಮರಿಸಿದನು.

೧೨-೧೬. ಆ ಹರಿಯಾದರೋ ಇಂದ್ರನೀಲದಂತೆ ಶ್ಯಾಮಲವಾದ ಶರೀರಕಾಂತಿಯಿಂದ ಬೆಳಗುತ್ತಾ, ಪೀತಾಂಬರವನ್ನುಟ್ಟು ಕೈಗಳಲ್ಲಿ ಶಂಖ, ಚಕ್ರ, ಗದಾಪದ್ಮಗಳನ್ನೂ ಧರಿಸಿರುವನು. ಚಂದ್ರನಂತೆ ಸ್ವಚ್ಛವಾದ ಮುತ್ತಿನಹಾರವನ್ನೂ, ಅತಿಪ್ರಕಾಶಮಾನವಾದ ಕೌಸ್ತುಭಮಣಿಯನ್ನೂ, ಧರಿಸಿರುವನು. ವಕ್ಷಸ್ಥಲದಲ್ಲಿ ಶ್ರೀವತ್ಸವೆಂಬ ಚಿಹ್ನೆಯು ಬೆಳಗುತ್ತಿರುವುದು. ರತ್ನಹಾರವೇ ಮೊದಲಾದ ಸಮಸ್ತ ಆಭರಣಗಳಿಂದ ಅಲಂಕೃತನಾಗಿರುವನು. ಕಮಲದಂತಿರುವ ಮನೋಹರವಾದ ನಯನಗಳು, ಮಂದಹಾಸವನ್ನು ಬೀರುತ್ತಿರುವ ಸೌಮ್ಯವಾದ ಮುಖಭಾವ, ಇವುಗಳಿಂದ ರಾರಾಜಿಸುತ್ತಿರುವ ಆ ಹರಿಯನ್ನು ಮನಸ್ಸಿನಲ್ಲಿಯೇ ಧ್ಯಾನಿಸುತ್ತಾ, ಓ ಕೃಷ್ಣನೇ ನನಗೆ ನೀನೇ ರಕ್ಷಕನು, ಶರಣಾಗತವತ್ಸಲನು, ನಿನಗೆ ನಮಸ್ಕಾರವು. ದೇವೇಶ, ನನಗೆ ಭಯವನ್ನೇಕೆಮಾಡುತ್ತಿ?

**ಯಸ್ಯೋದರೇ ತ್ರಯೋ ಲೋಕಾಃ ಸಪ್ತ ಚಾನ್ಯೇ ಮಹಾತ್ಮನಃ ।**
**ಶರಣಂ ತಂ ಪ್ರಪನ್ನೋಽಸ್ಮಿ ಕಿಂ ಭಯಂ ಮೇ ಕರಿಷ್ಯತಿ ॥ ೧೭ ॥**

**ಯಸ್ಮಾದ್ಭಯಂ ಪ್ರಪದ್ಯಂತೇ ಕೃತ್ಯಾದಿಕಮಹಾಬಲಾಃ ।**
**ಯೋ ಹಿ ಸರ್ವಪ್ರಹರ್ತಾ ಚ ತಮಸ್ಮಿ ಶರಣಂ ಗತಃ ॥ ೧೮ ॥**

**ವೃಂದಾರಕಾಣಾಂ ಸರ್ವೇಷಾಂ ದಾನವಾನಾಂ ಮಹಾತ್ಮನಾಂ ।**
**ಯೋ ಗತಿಃ ಕ್ಲಿಷ್ಟಭಕ್ತಾನಾಂ ತಮಸ್ಮಿ ಶರಣಂ ಗತಃ ॥ ೧೯ ॥**

**ಅಭಯೋ ಭಯನಾಶಾಯ ಪಾಪನಾಶಾಯ ಜ್ಞಾನವಾನ್ ।**
**ಏಕಶ್ಚ ಬ್ರಹ್ಮರೂಪೇಣ ತಮಸ್ಮಿ ಶರಣಂ ಗತಃ ॥ ೨೦ ॥**

**ವ್ಯಾಧೀನಾಂ ನಾಶನಾಯೈವ ಯ ಔಷಧಸ್ವರೂಪವಾನ್ ।**
**ನಿರಾಮಯೋ ನಿರಾನಂದಸ್ತಮಸ್ಮಿ ಶರಣಂ ಗತಃ ॥ ೨೧ ॥**

---

೧೭. ಯಾವನು ಮೂರುಲೋಕಗಳನ್ನೂ ಹೊಟ್ಟೆಯಲ್ಲಿಟ್ಟುಕೊಂಡಿದ್ದಾನೆಯೋ ಸಪ್ತಲೋಕಗಳೂ, ಯಾವನ ಉದರದಲ್ಲಿರುವುವೋ, ಆತನನ್ನು ಶರಣ ಹೊಂದಿದ್ದೇನೆ. ಹೀಗಿರುವ ನನಗೆ ಭಯವೆಂದರೇನು?

೧೮. ಮಾಟವೇ ಮೊದಲಾದವುಗಳು ಯಾವನಿಗೆ ಹೆದರುತ್ತವೋ ಯಾವನು ಎಲ್ಲವನ್ನೂ ನಾಶಮಾಡುತ್ತಾನೆಯೋ ಆತನನ್ನು ಶರಣುಹೊಂದಿದ್ದೇನೆ.

೧೯. ಎಲ್ಲಾ ದೇವತೆಗಳಿಗೂ, ರಾಕ್ಷಸರಿಗೂ, ಮಹಾತ್ಮರಿಗೂ, ಕಷ್ಟಪಟ್ಟ ಭಕ್ತರಿಗೂ, ಯಾವನು ಗತಿಯೋ ಅಂತಹ ಹರಿಯನ್ನು ಶರಣುಹೊಂದಿದ್ದೇನೆ.

೨೦. ಯಾವನು ಅಭಯಪ್ರದನಾಗಿರುವನೋ, ಭಯನಾಶಕನೋ, ಜ್ಞಾನಿಯಾಗಿ ಪಾಪಹಾರಕನೋ, ಬ್ರಹ್ಮರೂಪದಿಂದ ಏಕನಾಗಿದ್ದಾನೆಯೋ, ಅವನನ್ನು ಶರಣು ಹೊಂದಿದ್ದೇನೆ.

೨೧. ವ್ಯಾಧಿಗಳ ನಾಶಕ್ಕೋಸ್ಕರವೇ ಯಾವನು ಔಷಧಿಸ್ವರೂಪನಾಗಿನ್ನಾನೋ, ರೋಗವಿಲ್ಲದ ಆನಂದಸ್ವರೂಪನಾಗಿರುವನೋ, ಅಂತಹ ಸ್ವಾಮಿಯನ್ನು ಶರಣು ಹೊಂದುವೆನು.

ಅಚಲಾಂಶ್ಚಾಲಯೇಲ್ಲೋಕಾನಪಾಪೋ ಜ್ಞಾನಮೇವ ಚ ।
ತಮಸ್ಮಿ ಶರಣಂ ಪ್ರಾಪ್ತಃ ಕಿಂ ಭಯಂ ಮೇ ಕರಿಷ್ಯತಿ ॥ ೨೨ ॥

ಸಾಧೂನಾಮಪಿ ಸರ್ವೇಷಾಂ ಪಾಲಕಃ ಪದ್ಮನಾಭಕಃ ।
ಪಾತಿ ವಿಶ್ವಂ ಚ ವಿಶ್ವಾತ್ಮಾ ತಮಸ್ಮಿ ಶರಣಂ ಗತಃ ॥ ೨೩ ॥

ಯೋ ಮೇ ಮೃಗೇಂದ್ರರೂಪೇಣ ಭಯಂ ದರ್ಶಯತೇಽಗ್ರತಃ ।
ತಮಹಂ ಶರಣಂ ಪ್ರಾಪ್ತೋ ನರಸಿಂಹಂ ಭಯಾಪಹಂ ॥ ೨೪ ॥

ಯಮಾಪನ್ನೋ ಮಹಾಕಾಯೋ ರಣೇ ಹಸ್ತೀ ಸಮಾಗತಃ ।
ಗಜಲೀಲಾಗತಂ ದೇವಂ ಶರಣಾಗತವತ್ಸಲಂ ॥ ೨೫ ॥

ಗಣಪಂ ಜ್ಞಾನಸಂಪನ್ನಂ ಸುಪಾಶಾಂಕುಶಧಾರಿಣಂ ।
ಕಾಲಾಸ್ಯಂ ಗಜತುಂಡಂ ಚ ಶರಣಂ ಸುಗತೋಽಸ್ಮ್ಯಹಂ ॥ ೨೬ ॥

ಹಿರಣ್ಯಾಕ್ಷಪ್ರಹರ್ತಾರಂ ವಾರಾಹಂ ಶರಣಂ ಗತಃ ।
ಹ್ರಸ್ವಾಸ್ತು ವಾಮನಾಃ ಕ್ರೂರಾಃ ಪ್ರೇತಾಃ ಕೂಷ್ಮಾಂಡಕಾದಯಃ ॥
ವಾಮನಂ ತಂ ಪ್ರಪನ್ನೋಽಸ್ಮಿ ಶರಣಾಗತವತ್ಸಲಂ ॥ ೨೭ ॥

---

೨೨. ಚಲನವಿಲ್ಲದ ಲೋಕಗಳನ್ನು ಯಾವನು ಚಲಿಸುವಂತೆ ಮಾಡುತ್ತಾನೋ, ಅಂಥ ಅಪಾಪನೂ, ಜ್ಞಾನಮಯನೂ, ಆದ ಸ್ವಾಮಿಯನ್ನು ಶರಣುಹೊಂದಿರುತ್ತೇನೆ. ಭಯವು ನನ್ನನ್ನು ಏನುಮಾಡುತ್ತದೆ?

೨೩. ಸರ್ವ ಸಾಧುಗಳಿಗೂ ಪಾಲಕನು ಪದ್ಮನಾಭನು. ಆ ವಿಶ್ವಾತ್ಮನೇ ವಿಶ್ವವನ್ನು ಪಾಲಿಸುತ್ತಾನೆ. ಅವನನ್ನು ಶರಣುಹೊಂದಿದ್ದೇನೆ.

೨೪. ಯಾವನು ಮೃಗೇಂದ್ರನ ರೂಪದಿಂದ ಮುಂದೆ ಭಯವನ್ನು ತೋರಿಸುತ್ತಲಿರುವನೋ, ಅಂತಹ ನರಸಿಂಹನನ್ನು ಶರಣುಹೊಂದಿದ್ದೇನೆ.

೨೫-೨೬. ಆಪತ್ತುಹೊಂದಿದ ಆನೆಯು (ಗಜೇಂದ್ರನು) ಯಾವನನ್ನು ಶರಣುಹೊಂದಿತೋ, ಯಾವನು ಗಜಲೀಲೆಯನ್ನು ಹೊಂದಿದ್ದಾನೋ, ಜ್ಞಾನಸಂಪನ್ನನಾದ ಅಂತಹ ಗಣಪನನ್ನು ರಕ್ಷಕನನ್ನಾಗಿ ಹೊಂದಿದ್ದೇನೆ.

೨೭. ಹಿರಣ್ಯಾಕ್ಷನನ್ನು ಕೊಂದ ವರಾಹನೇ ನನಗೆ ಗತಿಯು. ಕುಳ್ಳರು, ಕೆಟ್ಟವರು, ಕ್ರೂರಿಗಳು, ಎಂದು ಪ್ರಸಿದ್ಧರಾದ ಕೂಷ್ಮಾಂಡಾದಿ ಪ್ರೇತಗಳಿಂದ ಭಯವುಂಟಾಗದಂತೆ ನನ್ನನ್ನು ರಕ್ಷಿಸಲು ವಾಮನರೂಪಿಯಾದ ಹರಿಯನ್ನು ಶರಣುಹೊಂದಿದ್ದೇನೆ.

ಮೃತ್ಯುರೂಪಧರಾಸ್ಸರ್ವೇ ದರ್ಶಯಂತಿ ಭಯಂ ಮಮ ।
ಅಮೃತಂ ತಂ ಪ್ರಪನ್ನೋಽಸ್ಮಿ ಕಿಂ ಭಯಂ ಮೇ ಕರಿಷ್ಯತಿ　　॥ ೨೮ ॥

ಬ್ರಹ್ಮಣ್ಯೋ ಬ್ರಹ್ಮದೋ ಬ್ರಹ್ಮಾ ಬ್ರಹ್ಮಜ್ಞಾನಮಯೋ ಹರಿಃ ।
ಶರಣಂ ತಂ ಪ್ರಪನ್ನೋಽಸ್ಮಿ ಕಿಂ ಭಯಂ ಮೇ ಕರಿಷ್ಯತಿ　　॥ ೨೯ ॥

ಅಭಯೋ ಯೋ ಹಿ ಜಗತೋ ಭೀತಿಘ್ನೋ ಭೀತಿದಾಯಕಃ ।
ಭಯರೂಪಂ ಪ್ರಪನ್ನೋಽಸ್ಮಿ ಕಿಂ ಭಯಂ ಮೇ ಕರಿಷ್ಯತಿ　　॥ ೩೦ ॥

ತಾರಕಸ್ಸರ್ವಪುಣ್ಯಾನಾಂ ನಾಶಕಸ್ಸರ್ವಪಾಪಿನಾಂ ।
ತಮಹಂ ಶರಣಂ ಪ್ರಾಪ್ತೋ ಧರ್ಮರೂಪಂ ಜನಾರ್ದನಂ　　॥ ೩೧ ॥

ಜಂಝಾವಾತೋ ಮಹಾಚಂಡೋ ವಪುರ್ದಾರಯಂತಿ ಮೇ ಭೃಶಂ ।
ಶರಣಂ ತಸ್ಯ ಗಂತಾಸ್ಮಿ ಸದಾ ಗತಿರಯಂ ಮಮ　　॥ ೩೨ ॥

---

೨೮. ಮೃತ್ಯುವಿಗೆ ತುತ್ತಾಗತಕ್ಕ ಇಂಥವರೆಲ್ಲರೂ ನನಗೆ ಭಯವನ್ನು ತೋರಿಸುತ್ತಾರೆ. ಮೃತ್ಯುರಹಿತನಾದ ಸ್ವಾಮಿಯನ್ನು ಶರಣುಹೊಂದಿದ್ದೇನೆ. ನನಗೆ ಭಯವೆಂದರೇನು?

೨೯. ಆ ಹರಿಯು ಪರಬ್ರಹ್ಮಸ್ವರೂಪನು, ಬ್ರಹ್ಮಜ್ಞಾನವನ್ನು ಕರುಣಿಸುವವನು. ತಾನು ಸ್ವತಃ ಜ್ಞಾನಮಯನಾದವನು, ಇಂತಹ ಹರಿಯನ್ನು ಶರಣುಹೊಂದಿದ ನನಗೆ ಭಯವುಂಟೇ?

೩೦. ಆ ಹರಿಯು ಸಮಸ್ತ ಜಗತ್ತಿನ ಭಯವನ್ನೂ ಪರಿಹರಿಸುವವನು, ಎಲ್ಲರಿಗೂ ಭಯವನ್ನುಂಟುಮಾಡುವವನೂ ಅವನೇ. ಇಂತಹ ಭಯಸ್ವರೂಪನಾದ ಹರಿಯನ್ನು ಆಶ್ರಯಿಸಿದ ನನಗೆ ಭಯವೆಲ್ಲಿಯದು?

೩೧. ಮತ್ತು ಆ ಹರಿಯು ಪುಣ್ಯಮಾಡಿದವರನ್ನು ಕಾಪಾಡುವವನು, ಪಾಪಿಗಳನ್ನು ನಾಶಮಾಡುವವನು, ಧರ್ಮರೂಪಿಯಾದವನು, ಇಂತಹ ಜನಾರ್ದನನ್ನು ಶರಣುಹೊಂದುತ್ತೇನೆ.

೩೨. ಕ್ರೂರವಾದ ಬಿರುಗಾಳಿಯು ನನ್ನ ಶರೀರವನ್ನು ತಲ್ಲಣಗೊಳಿಸುವುದು. ಆದ್ದರಿಂದ ಆ ಸ್ವಾಮಿಯನ್ನು ಬಿಟ್ಟರೆ ನನಗೆ ಗತಿಯಾರು?

**ಅತಿಶೀತಂ ಚಾತಿವರ್ಷಮಾತಪಸ್ತಾಪದಾಯಕಃ ।**
**ಏಷಾಂ ರೂಪೇಣ ಯೋ ದೇವಸ್ತಸ್ಯಾಹಂ ಶರಣಂ ಗತಃ ॥ ೩೩ ॥**

**ಕಾಲರೂಪಾ ಅಮೀ ಪ್ರಾಪ್ತಾ ಭಯದಾ ಮಮ ಚಾಲಕಾಃ ।**
**ಹರಿಸ್ವರೂಪಿಣಾಮೇಷಾಂ ಪ್ರಗತಶ್ಶರಣಂ ಸದಾ ॥ ೩೪ ॥**

**ಯಂ ಸರ್ವದೇವಂ ಪರಮೇಶ್ವರಂ ಹಿ**
**ನಿಷ್ಕೇವಲಂ ಜ್ಞಾನಮಯಂ ಪ್ರಧಾನಂ ।**
**ವದಂತಿ ನಾರಾಯಣಮಾದಿಸಿದ್ಧಂ**
**ಸಿದ್ಧೇಶ್ವರಂ ತಂ ಶರಣಂ ಪ್ರಪದ್ಯೇ ॥ ೩೫ ॥**

**ಇತಿ ಧ್ಯಾಯನ್ ಸ್ತುವನ್ನಿತ್ಯಂ ಕೇಶವಂ ಕ್ಲೇಶನಾಶನಂ ।**
**ಭಕ್ತ್ಯಾ ತೇನ ಸಮಾನೀತ ಸ್ತದಾತ್ಮಹೃದಯೇ ಹರಿಃ ॥ ೩೬ ॥**

**ಉದ್ಯಮಂ ವಿಕ್ರಮಂ ತಸ್ಯ ಸ ದೃಷ್ಟ್ವಾ ಸೋಮಶರ್ಮಣಃ ।**
**ಆವಿರ್ಭೂಯ ಹೃಷೀಕೇಶಸ್ತಮುವಾಚ ಪ್ರಹರ್ಷಯನ್ ॥ ೩೭ ॥**

---

೩೩. ಅತಿಶೀತ, ಮಳೆ, ಬಿಸಿಲು, ಇವೆಲ್ಲವೂ ಆ ಹರಿಯ ರೂಪಗಳೇ, ಇಂತಹ ರೂಪದಿಂದಿರುವ ದೇವನನ್ನು ಶರಣುಹೊಂದಿದ್ದೇನೆ.

೩೪. ಮೃತ್ಯುರೂಪವಾಗಿ ಇವೆಲ್ಲವೂ ಬಂದು ನನಗೆ ಭಯವನ್ನು ಕೊಡುತ್ತವೆ ನನ್ನನ್ನು ಅಲ್ಲಾಡಿಸುತ್ತದೆ. ಆದುದರಿಂದ ಹರಿಯ ಸ್ವರೂಪಿಯಾದ ಇವರನ್ನೇ ಶರಣುಹೊಂದಿದ್ದೇನೆ.

೩೫. ಸರ್ವದೇವನಾದ, ಕೇವಲನೂ, ಜ್ಞಾನಮಯನೂ ಆದಿಸಿದ್ಧಿಯೆಂದು ಪ್ರಸಿದ್ಧನೂ, ಆದ ನಾರಾಯಣನನ್ನು ಶರಣುಹೊಂದುತ್ತೇನೆ.

೩೬. ಕ್ಲೇಶನಾಶಕನಾದ ಕೇಶವನನ್ನು ಈರೀತಿ ಸ್ತೋತ್ರಮಾಡುತ್ತ ಭಕ್ತಿಯಿಂದ ಅವನ ರೂಪವನ್ನು ತನ್ನ ಹೃದಯದಲ್ಲಿ ನಿಲ್ಲಿಸಿಕೊಂಡನು.

೩೭-೩೮. ಆ ಸೋಮಶರ್ಮನ ಉದ್ಯೋಗ ಧೈರ್ಯಸಾಹಸಗಳನ್ನು ಆ ಸ್ವಾಮಿಯು ನೋಡಿ ಅವನಿಗೆ ಸಂತೋಷವನ್ನುಂಟುಮಾಡಬೇಕೆಂಬ ಇಚ್ಛೆಯಿಂದ

**ಸೋಮಶರ್ಮನ್ ಮಹಾಪ್ರಾಜ್ಞ ಶ್ರೂಯತಾಂ ಭಾರ್ಯಯಾ ಸಹ ।**
**ವಾಸುದೇವೋಽಸ್ಮಿ ವಿಪ್ರೇಂದ್ರ ವರಂ ವರಯ ಸುವ್ರತ ॥ ೩೮ ॥**

**ಶ್ರುತ್ವೋದಿತಂ ಸ ವಿಪ್ರೇಂದ್ರ ಉನ್ಮೀಲ್ಯ ನಯನದ್ವಯಂ ।**
**ದೃಷ್ಟ್ವಾ ವಿಶ್ವೇಶ್ವರಂ ದೇವಂ ಘನಶ್ಯಾಮಂ ಮಹೋದಯಂ ॥ ೩೯ ॥**

**ಸರ್ವಾಭರಣಶೋಭಾಢ್ಯಂ ಸರ್ವಾಯುಧಸಮನ್ವಿತಂ ।**
**ದಿವ್ಯಲಕ್ಷಣಸಂಪನ್ನಂ ಪುಂಡರೀಕನಿಭೇಕ್ಷಣಂ ॥ ೪೦ ॥**

**ಪೀತೇನ ವಾಸಸಾ ಯುಕ್ತಂ ರಾಜಮಾನಂ ಸುರೇಶ್ವರಂ ।**
**ವೈನತೇಯಸಮಾರೂಢಂ ಶಂಖಚಕ್ರಗದಾಧರಂ ॥ ೪೧ ॥**

**ಬ್ರಹ್ಮಾದೀನಾಂ ಸುಧಾತಾರಂ ಜಗತೋಽಸ್ಯ ಮಹಾಯಶಾಃ ।**
**ವಿಶ್ವರೂಪಂ ಸದಾರೂಪಂ ರೂಪಾತೀತಂ ಜನಾರ್ದನಂ ॥ ೪೨ ॥**

**ಹರ್ಷೇಣ ಮಹತಾವಿಷ್ಟೋ ದಂಡವತ್ಪ್ರಣಿಪತ್ಯ ಚ ।**
**ಶ್ರಿಯಾ ಯುಕ್ತಂ ಭಾಸಮಾನಂ ಸೂರ್ಯಕೋಟಿಸಮಪ್ರಭಂ ॥ ೪೩ ॥**

---

ಪ್ರತ್ಯಕ್ಷನಾಗಿ, ಪ್ರಾಜ್ಞನಾದ ಸೋಮಶರ್ಮನೇ, ನಾನು ಹೇಳುವುವನ್ನು ನೀನೂ, ನಿನ್ನ ಪತ್ನಿಯೂ ಕೇಳಿ. ನಾನು ವಾಸುದೇವನು ನಿಮಗೆ ನಾನು ಪ್ರಸನ್ನನಾಗಿರುವೆನು. ವರವನ್ನು ಕೇಳಿ ಎಂದನು.

೩೯-೪೩ ಈ ರೀತಿ ನಾರಾಯಣನು ಹೇಳಲು, ಅದನ್ನು ಕೇಳಿ ಆ ಸೋಮಶರ್ಮನು, ಆಹರಿಯ ದಿವ್ಯತೇಜಸ್ಸನ್ನು ನೋಡಲಾರದೆ ಕಣ್ಣುಗಳನ್ನು ಸ್ವಲ್ಪ ಮುಚ್ಚಿದನು. ಆ ಹರಿಯಾದರೋ ನೀಲಮೇಘದಂತೆ ಪ್ರಕಾಶಮಾನವಾದ ಶರೀರಕಾಂತಿಯಿಂದಲೂ, ಪೀತಾಂಬರವನ್ನು ಧರಿಸಿ, ಸರ್ವಾಭರಣಗಳಿಂದಲೂ, ಸಮಸ್ತ ಆಯುಧಗಳಿಂದ ಕೂಡಿ ಅವನಿಗೆ ಗೋಚರನಾದನು. ಸರ್ವಲಕ್ಷಣಸಂಪನ್ನನೂ, ಕಮಲದಂತೆ ಕಣ್ಣುಗಳುಳ್ಳವನೂ ಆದ ಆ ದೇವದೇವನು ಗರುಡನ ಮೇಲೆ ಕುಳಿತು ಶಂಖಚಕ್ರಗದಾದಿಗಳನ್ನು ಧರಿಸಿ ತನ್ನೆದುರಿಗೆ ಪ್ರತ್ಯಕ್ಷನಾಗಲು, ಆಗ ಸೋಮಶರ್ಮನು ಬ್ರಹ್ಮಾದಿದೇವತೆಗಳಿಗೂ ಕಾರಣಕರ್ತನೂ, ಪ್ರಪಂಚಸ್ವರೂಪನೂ, ರೂಪರಹಿತನಾದರೂ ಬೇಕಾದ ರೂಪವನ್ನು ಧರಿಸಬಲ್ಲವನೂ, ಪಕ್ಕದಲ್ಲಿರುವ ಶ್ರೀ ಲಕ್ಷ್ಮಿಯೊಡನೆ ಯುಕ್ತನಾಗಿ ಕೋಟಿಸೂರ್ಯರಂತೆ ಪ್ರಕಾಶಿಸುತ್ತಲಿರುವವನೂ ಆದ ಜನಾರ್ದನನನ್ನು ಭಯ

ಬದ್ಧಾಂಜಲಿಪುಟೋ ಭೂತ್ವಾ ತಯಾ ಸುಮನಯಾ ಸಹ ।
ಜಯ ದೇವ ಜಗನ್ನಾಥ ಜಯ ಮಾನದ ಮಾಧವ ॥ ೪೪ ॥

ಜಯ ಯೋಗೀಶ ಯೋಗೀಂದ್ರ ಜಯ ಯಜ್ಞಪತೇ ಹರೇ ।
ಜಯ ಯಜ್ಞೇಶ ಯಜ್ಞಘ್ನ ಜಯ ಶಾಶ್ವತ ಸರ್ವಗ ॥ ೪೫ ॥

ಜಯ ಸರ್ವೇಶ್ವರಾನಂತ ಜಯ ರೂಪ ನಮೋಸ್ತುತೇ ।
ಜಯ ಜ್ಞಾನವತಾಂ ಶ್ರೇಷ್ಠ ಜಯ ತ್ವಂ ಜ್ಞಾನನಾಯಕ ॥ ೪೬ ॥

ಜಯ ಸರ್ವದ ಸರ್ವಜ್ಞ ಜಯ ಸತ್ತ್ವವಿಭಾವನ ।
ಜಯ ಜೀವಸ್ವರೂಪೇಶ ಮಹಾಜೀವ ನಮೋಽಸ್ತು ತೇ ॥ ೪೭ ॥

ಜಯ ಯಜ್ಞಗ ಪ್ರಜ್ಞಾಂಗ ಜಯ ಪ್ರಾಣಪ್ರದಾಯಕ ।
ಜಯ ಪಾಪಘ್ನ ಪುಣ್ಯೇಶ ಜಯ ಪುಣ್ಯಪತೇ ಹರೇ ॥ ೪೮ ॥

ಜಯ ಜ್ಞಾನಸ್ವರೂಪೇಶ ಜ್ಞಾನಗಮ್ಯಾಯ ತೇ ನಮಃ ।
ಜಯ ಪದ್ಮಪಲಾಶಾಕ್ಷ ಪದ್ಮನಾಭಾಯ ತೇ ನಮಃ ॥ ೪೯ ॥

---

ಭಕ್ತಿಗಳಿಂದ ದಂಡಾಕಾರವಾಗಿ ನಮಸ್ಕರಿಸಿ ಕೈಗಳನ್ನು ಮುಗಿದುಕೊಂಡು ಬಹು ಸಂತೋಷದಿಂದ ತನ್ನ ಪತ್ನಿಯಾದ ಸುಮನೆಯೊಡನೆ ಈ ರೀತಿ ಸ್ತೋತ್ರ ಮಾಡಿದನು

೪೪-೪೬ ಓ ದೇವದೇವನೇ, ನೀನು ಜಗದೊಡೆಯನು, ಲಕ್ಷ್ಮೀಪತಿಯು, ಯೋಗಿಗಳಲ್ಲಿ ಶ್ರೇಷ್ಠನೆನಿಸಿದವನು. ಯಜ್ಞಗಳಿಗೆ ಅಧಿಪತಿಯೂ ಅದನ್ನು ನಾಶಮಾಡುವವನೂ, ನೀನೇ. ಸಮಸ್ತರಿಗೂ ನೀನು ಸ್ವಾಮಿಯು, ಜ್ಞಾನಸ್ವರೂಪನಾದ ನೀನು ಜ್ಞಾನಿಗಳಲ್ಲಿ ಶ್ರೇಷ್ಠನು. ಇಂತಹ ಓ ಸ್ವಾಮಿಯೇ ನಿನಗೆ ಜಯವಾಗಲಿ.

೪೭. ಸರ್ವಜ್ಞನೂ, ಸತ್ತ್ವವಿಭಾವನೂ, ಆದ ನಿನಗೆ ಜಯವಾಗಲಿ. ಜೀವಸ್ವರೂಪನೇ, ಮಹಾಜೀವನೇ ಇಗೋ ನಿನಗೆ ನಮಸ್ಕಾರವು.

೪೮. ಯಜ್ಞವನ್ನು ಹೊಂದತಕ್ಕವನೂ, ಪ್ರಜ್ಞಾಂಗನೂ, ಪ್ರಾಣಪ್ರದಾಯಕನೂ, ಪಾಪನಾಶಕನೂ, ಪುಣ್ಯೇಶನೂ ಆದ ನಿನಗೆ ಜಯವಾಗಲಿ.

೪೯-೫೦ ನೀನು ಜ್ಞಾನಸ್ವರೂಪನು, ಜ್ಞಾನಗಮ್ಯನು, ಪದ್ಮಾಕ್ಷನು, ಪದ್ಮ

ಜಯ ಗೋವಿಂದ ಗೋಪಾಲ ಜಯ ಶಂಖಧರಾಮಲ ।
ಜಯ ಚಕ್ರಧರಾವ್ಯಕ್ತ ವ್ಯಕ್ತರೂಪಾಯ ತೇ ನಮಃ ॥ ೫೦ ॥

ಜಯ ವಿಕ್ರಮ ಶೋಭಾಂಗ ಜಯ ವಿಕ್ರಮನಾಯಕ ।
ಜಯ ವಿದ್ಯಾವಿಲಾಸಾಂಗ ನಮೋ ವೇದಮಯಾಯ ತೇ ॥ ೫೧ ॥

ಜಯ ವಿಕ್ರಮ ಶೋಭಾಂಗ ಜಯ ಉದ್ಯಮದಾಯಕ ।
ಜಯ ಉದ್ಯಮಕಾಲಾಯ ಉದ್ಯಮಾಯ ನಮೋ ನಮಃ ॥ ೫೨ ॥

ಜಯ ಉದ್ಯಮಶಕ್ತಾಯ ಜಯ ಉದ್ಯಮಕಾರಕ ।
ಯುದ್ಧೋದ್ಯಮಪ್ರವೃತ್ತಾಯ ತಸ್ಮೈ ಸರ್ವಾತ್ಮನೇ ನಮಃ ॥ ೫೩ ॥

ನಮೋ ಹಿರಣ್ಯತೇಜಸ್ಕ ತೇಃಭ್ಯಂ ತೇ ಜಯತೇ ನಮಃ ।
ಅತಿತೇಜಸ್ಸ್ವರೂಪಾಯ ಸರ್ವತೇಜೋಮಯಾಯ ಚ ॥ ೫೪ ॥

ದೈತ್ಯತೇಜೋವಿನಾಶಾಯ ಪಾಪತೇಜೋಹರಾಯ ಚ ।
ಗೋಬ್ರಾಹ್ಮಣಹಿತಾರ್ಥಾಯ ನಮೋಽಸ್ತು ಪರಮಾತ್ಮನೇ ॥ ೫೫ ॥

ನಮೋಽಸ್ತು ಹುತಭುಕ್ತಾಯ ನಮೋ ಹವ್ಯವಹಾಯ ತೇ ।
ನಮಃ ಕವ್ಯವಹಾಯೈವ ಸ್ವಧಾರೂಪಾಯ ತೇ ನಮಃ ॥ ೫೬ ॥

---

ನಾಭನು, ಗೋವಿಂದ, ಗೋಪಾಲ, ಶಂಖಧರ, ಚಕ್ರಧರ, ವ್ಯಕ್ತಾವ್ಯಕ್ತಸ್ವರೂಪ, ಮೊದಲಾದ ನಾಮಗಳಿಂದ ಪ್ರಸಿದ್ಧನಾದ ನಿನಗೆ ನಮಸ್ಕಾರವು.

೫೧-೫೫. ವಿಕ್ರಮ, ಶೋಭಾಂಗ, ವಿದ್ಯಾವಿಲಾಸ, ವಿಕ್ರಮಶೋಭಾಂಗ, ಉದ್ಯಮನಾಯಕ, ಉದ್ಯಮಕಾಲ, ಉದ್ಯಮಶಕ್ತ, ಉದ್ಯಮಕಾರಕ ಯುದ್ಧೋದ್ಯಮ ಪ್ರವೃತ್ತ, ಹಿರಣ್ಯತೇಜಸ್ಕ, ತೇಜಸ್ಸ್ವರೂಪ, ಸರ್ವತೇಜೋಮಯ, ದೈತ್ಯರ ತೇಜೋ ವಿನಾಶಕ, ಪಾಪಹಾರಕ, ಗೋಬ್ರಾಹ್ಮಣ ಹಿತಾರ್ಥ, ಈ ಮೊದಲಾದ ಹೆಸರುಗಳಿಂದ ಪ್ರಸಿದ್ಧನಾದ ಓ ಪರಮಾತ್ಮನೇ ನಿನಗೆ ಜಯವಾಗಲಿ.

೫೬. ಯಜ್ಞಾದಿಗಳಲ್ಲಿ ಮಾಡುವ ಹೋಮಕಾಲದಲ್ಲಿ ದೇವತೆಗಳನ್ನುದ್ದೇಶಿಸಿ ಹೋಮಮಾಡುವ ಹವಿಸ್ಸನ್ನು ಭಕ್ಷಿಸುವವನೂ ನೀನೇ. ಎಂದರೆ ದೇವತೆಗಳಿಗೆ ಕೊಡುವ ಹವಿಸ್ಸೆಲ್ಲಾ ನಿನಗೆ ಅರ್ಪಿತವಾಗುವುದು ನಿನ್ನಮೂಲಕವೇ ದೇವತೆಗಳು

**ಸ್ವಾಹಾರೂಪಾಯ ಯಜ್ಞಾಯ ಯೋಗಬೀಜಾಯ ತೇ ನಮಃ ।**
**ನಮಸ್ತೇ ಶಾರ್ಙ್ಗಹಸ್ತಾಯ ಹರಯೇ ಪಾಪಹಾರಿಣೇ ॥ ೫೭ ॥**

**ಸದಸಚ್ಛೋದನಾಯೈವ ನಮೋ ವಿಜ್ಞಾನಶಾಲಿನೇ ।**
**ನಮೋ ವೇದಸ್ವರೂಪಾಯ ಪಾವನಾಯ ನಮೋ ನಮಃ ॥ ೫೮ ॥**

**ನಮೋಽಸ್ತು ಹರಿಕೇಶಾಯ ಸರ್ವಕ್ಲೇಶಹರಾಯ ಚ ।**
**ಕೇಶವಾಯ ಪರಾಯೈವ ನಮಸ್ತೇ ವಿಶ್ವಧಾರಿಣೇ ॥ ೫೯ ॥**

**ನಮಃ ಕೃಪಾಮಯಾಯೈವ ನಮೋ ಹರ್ಷಮಯಾಯ ಚ ।**
**ಅನಂತಾಯ ನಮೋ ನಿತ್ಯಂ ಶುದ್ಧಾಯ ಕ್ಲೇಶನಾಶಿನೇ ॥ ೬೦ ॥**

**ಆನಂದಾಯ ನಮೋ ನಿತ್ಯಂ ದಿವ್ಯಾಯ ದಿವ್ಯರೂಪಿಣೇ ।**
**ರುದ್ರೈರ್ನಮಿತಪಾದಾಯ ವಿರಂಚಿನಮಿತಾಯ ತೇ ॥ ೬೧ ॥**

**ಸುರಾಸುರೇಂದ್ರನಮಿತಪಾದಪದ್ಮಾಯ ತೇ ನಮಃ ।**
**ನಮೋ ನಮಃ ಸುರೇಶಾಯ ಚಾಮೃತಾಯಾಮೃತಾತ್ಮನೇ ॥ ೬೨ ॥**

---

ತೃಪ್ತಿಪಡುವುದರಿಂದ ಆ ಹವಿಸ್ಸನ್ನು ಒಯ್ಯುವವನೂ ನೀನೇ ಆಗಿರುವೆ. ಪಿತೃಗಳು ಭುಂಜಿಸುವ ಕವ್ಯವೆಂಬ ಹವಿಸ್ಸೂ ನೀನಲ್ಲದೆ ಬೇರೆಯಲ್ಲ, ಆದುದರಿಂದ ಹವ್ಯಕವ್ಯ ಸ್ವರೂಪನೂ, ಸ್ವಾಹಾಸ್ವಧಾಸ್ವರೂಪನೂ, ಆದ ನಿನಗೆ ನಮಸ್ಕಾರವು.

೫೭-೫೮. ಇದಲ್ಲದೇ ನೀನು ಸ್ವಾಹಾರೂಪನೂ, ಯಜ್ಞರೂಪನೂ, ಕೈಯಲ್ಲಿ ಗದೆಯನ್ನು ಧರಿಸಿರುವವನು, ಚರಾಚರ ಸಮಸ್ತ ವಸ್ತುಗಳಿಗೂ ಅಂತರ್ಯಾಮಿಯಾಗಿದ್ದು ಅವುಗಳನ್ನು ಪ್ರೇರಿಸುವವನೂ, ವಿಜ್ಞಾನ, ವೇದ ಇವುಗಳ ಸ್ವರೂಪನೂ, ಆಗಿರುವೆ. ಇಂತಹ ಪರಮ ಪವಿತ್ರನಾದ ಓ ಹರಿಯೇ ನಿನಗೆ ನಮಿಸುವೆನು.

೫೯-೬೦. ಹರಿಕೇಶ, ಕ್ಲೇಶನಾಶಕ, ಪರನಾದ ಕೇಶವ, ಕೃಪಾಮಯ, ಹರ್ಷಯುಕ್ತ, ಅನಂತ, ನಿತ್ಯಶುದ್ಧ, ಮೊದಲಾದ ನಾಮವುಳ್ಳ ನಿನಗೆ ನಮಸ್ಕಾರವು.

೬೧-೬೨. ಓ ಸ್ವಾಮಿಯೇ, ನೀನು ಯಾವಾಗಲೂ ಆನಂದಸ್ವರೂಪನು. ರುದ್ರ ಬ್ರಹ್ಮ, ಇಂದ್ರ, ಮೊದಲಾದ ಸಮಸ್ತ ದೇವತೆಗಳಿಂದಲೂ ನಮಸ್ಕರಿಸಲ್ಪಡುವವನು. ನಾಶವಿಲ್ಲದವನು, ಅಮೃತಸ್ವರೂಪನು, ಇಂತಹ ನಿನ್ನನ್ನು ಭಕ್ತಿಯಿಂದ ನಮಿಸುವೆನು.

ಕ್ಷೀರಸಾಗರವಾಸಾಯ ನಮಃ ಪದ್ಮಾಪ್ರಿಯಾಯ ತೇ ।
ಓಂಕಾರಾಯ ವಿಶುದ್ಧಾಯ ಹ್ಯಚಲಾಯ ನಮೋ ನಮಃ ॥ ೬೩ ॥

ವ್ಯಾಪಿನೇ ವ್ಯಾಪಕಾಯ್ಶೈವ ಸರ್ವವ್ಯಸನಹಾರಿಣೇ ।
ನಮೋ ನಮೋ ವರಾಹಾಯ ಮಹಾಕೂರ್ಮಾಯ ತೇ ನಮಃ ॥ ೬೪ ॥

ನಮೋ ವಾಮನರೂಪಾಯ ನೃಸಿಂಹಾಯ ಪರಾಯ ತೇ ।
ನಮೋ ರಾಮಾಯ ದಿವ್ಯಾಯ ಸರ್ವಕ್ಷತ್ರವಧಾಯ ಚ ॥ ೬೫ ॥

ಸರ್ವಜ್ಞಾನಾಯ ಮತ್ಸ್ಯಾಯ ನಮೋ ರಾಮಾಯ ತೇ ನಮಃ ।
ನಮಃ ಕೃಷ್ಣಾಯ ಬುದ್ಧಾಯ ನಮೋ ಮ್ಲೇಚ್ಛವಿನಾಶಿನೇ ॥ ೬೬ ॥

ನಮಃ ಕಪಿಲವಿಪ್ರಾಯ ಹಯಗ್ರೀವಾಯ ತೇ ನಮಃ ।
ನಮೋ ವ್ಯಾಸಸ್ವರೂಪಾಯ ನಮಃ ಸರ್ವಾಯಾಯ ತೇ ॥ ೬೭ ॥

ಏವಂ ಸ್ತುತ್ವಾ ಹೃಷೀಕೇಶಂ ಪುನರಾಹ ಜನಾರ್ದನಂ ।
ಗುಣಾನಾಂ ತು ಪರಂ ಪಾರಂ ಬ್ರಹ್ಮಾ ವೇತ್ತಿ ನ ಪಾವನಂ ॥ ೬೮ ॥

ನ ಚೈವ ಸ್ತೋತ್ರಂ ಸರ್ವೇಶ ತಥಾ ರುದ್ರಃ ಸಹಸ್ರದೃಕ್ ।
ವಕ್ತುಂ ಕೋ ಹಿ ಸಮರ್ಥಸ್ತು ಕೀದೃಶೀ ಮೇ ಮತಿಃ ಪ್ರಭೋ ॥ ೬೯ ॥

---

೬೩-೬೭. ಓ ಭಕ್ತವತ್ಸಲನೇ! ನೀನು ಕ್ಷೀರಸಮುದ್ರದಲ್ಲಿ ವಾಸಿಸುತ್ತಾ ಲಕ್ಷ್ಮೀ ದೇವಿಗೆ ಆನಂದವನ್ನುಂಟುಮಾಡುತ್ತಿರುವೆ. ವೇದಗಳ ಸಮಸ್ತ ಅರ್ಥವನ್ನು ಒಳಗೊಂಡ ಓಂಕಾರವೆಂಬ ಮಹಾಮಂತ್ರಸ್ವರೂಪನೇ ನೀನು. ಸಮಸ್ತವಿಶ್ವದಲ್ಲಿಯೂ ವ್ಯಾಪಿಸಿರುವವನು. ಪ್ರಾಣಿಗಳ ವ್ಯಸನಗಳನ್ನು ಪರಿಹರಿಸತಕ್ಕವನು ನೀನೊಬ್ಬನೇ. ಅದಕ್ಕಾಗಿಯೇ ವರಾಹ, ಕೂರ್ಮ, ವಾಮನ, ನೃಸಿಂಹ, ರಾಮ, ಪರಶುರಾಮ,ಮತ್ಸ್ಯ ಬುದ್ಧ, ಕೃಷ್ಣ, ಕಪಿಲ, ಹಯಗ್ರೀವ, ವ್ಯಾಸ, ಮೊದಲಾದ ಅನೇಕ ಅವತಾರಗಳನ್ನು ತಾಳಿ ಜಗತ್ತಿನ ಪಾಲನೆಯನ್ನು ಮಾಡುತ್ತಿರುವೆ. ಇಂತಹ ನಿನ್ನನ್ನು ಭಕ್ತಿಯಿಂದ ನಮಸ್ಕರಿಸುವೆನು.

೬೮-೬೯. ನಿನ್ನ ಗುಣಗಳ ಪಾರವನ್ನು ಬ್ರಹ್ಮನೂ ಕೂಡ ಕಾಣನು ಎಂದು ಪುನಃ ಪುನಃ ಆ ಸ್ವಾಮಿಯನ್ನು ನಮಸ್ಕರಿಸುತ್ತಾ, ಸರ್ವೇಶ್ವರನಾದ ನಿನ್ನನ್ನು ರುದ್ರನಾಗಲಿ, ಇಂದ್ರನಾಗಲಿ, ಸ್ತೋತ್ರಮಾಡಲು ಸಮರ್ಥರಲ್ಲ, ನನ್ನ ಬುದ್ಧಿ ಎಷ್ಟರದು?

**ನಿರ್ಗುಣಂ ಸಗುಣಂ ಸ್ತೋತ್ರಂ ಮಯ್ಯೈವ ತವ ಕೇಶವ ।**
**ವಿಪ್ರಭಕ್ತಸ್ಯ ಸರ್ವೇಶ ತವ ದಾಸೋಽಸ್ಮಿ ಸುವ್ರತ ।**
**ಜನ್ಮಜನ್ಮನಿ ಲೋಕೇಶ ದಯಾಂ ಮೇ ಕುರು ಪಾವನ ॥ ೭೦ ॥**

**ಇತಿ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ಸುಮನೋಪಾಖ್ಯಾನೇ ಅಷ್ಟಾದಶೋಽಧ್ಯಾಯಃ**



---

೭೦. ನಿರ್ಗುಣವೂ, ಸುಗುಣವೂ ಆದ ಸ್ತೋತ್ರಗಳನ್ನು ಸ್ವಲ್ಪಮಟ್ಟಿಗೆ ಮಾಡಿದೆನು. ನಾನು ನಿನ್ನ ಭಕ್ತನಾಗಿದ್ದೇನೆ. ಜನ್ಮಜನ್ಮದಲ್ಲಿಯೂ ನನ್ನ ಮೇಲೆ ದಯೆಯನ್ನಿಡು ಎಂದು ಸ್ತೋತ್ರಮಾಡಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಮನೋಪಾಖಾನದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿದುದು



ಶ್ರೀ

---

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
# ಏಕೋನವಿಂಶೋಽಧ್ಯಾಯಃ

---

**ಹರಿರುವಾಚ**

**ತಪಸಾನೇನ ಪುಣ್ಯೇನ ಸತ್ಯೇನಾನೇನ ತೇ ದ್ವಿಜ ।**
**ಸ್ತೋತ್ರೇಣ ಪಾವನೇನಾಪಿ ತುಷ್ಟೋಽಸ್ಮಿ ವ್ರಿಯತಾಂ ವರಃ ॥ ೧ ॥**

**ವರಂ ದದ್ಮಿ ಮಹಾಭಾಗ ಯಸ್ತೇ ಮನಸಿ ದುರ್ಲಭಃ ।**
**ಯಂ ಯಮಿಚ್ಛಸಿ ಕಾಮಂ ತ್ವಂ ತಂ ತಂ ತೇ ಪೂರಯಾಮ್ಯಹಂ ॥ ೨ ॥**

**ಸೋಮಶರ್ಮೋವಾಚ**

**ಪ್ರಥಮಂ ದೇಹಿ ಮೇ ಕೃಷ್ಣ ವರಮೇಕಂ ಸುನಿಶ್ಚಿತಂ ।**
**ಸುಪ್ರಸನ್ನೇನ ಮನಸಾ ಯದ್ಯಸ್ತಿ ಸುದಯಾ ಮಮ ॥ ೩ ॥**

**ಜನ್ಮಜನ್ಮಾಂತರಂ ಪ್ರಾಪ್ಯ ತವ ಭಕ್ತಿಂ ಕರೋಮ್ಯಹಂ ।**
**ದರ್ಶಯಸ್ವ ಪರಂ ಸ್ಥಾನಮಚಲಂ ಮೋಕ್ಷದಾಯಕಂ ॥ ೪ ॥**

---

## ಹತ್ತೊಂಭತ್ತನೆಯ ಅಧ್ಯಾಯವು.

೧. ಹರಿಯು ಹೇಳುತ್ತಾನೆ:—ಎಲೈ ದ್ವಿಜನೇ, ನಿನ್ನ ಪುಣ್ಯ, ಸತ್ಯ, ತಪಸ್ಸುಗಳಿಂದ ಸಂತೋಷಗೊಂಡಿದ್ದೇನೆ. ವರವನ್ನು ಕೇಳು.

೨. ದುರ್ಲಭವಾದರೂ ನಿನ್ನ ಮನಸ್ಸಿನಲ್ಲಿರುವ ವರವನ್ನು ಕೊಡುತ್ತೇನೆ. ಇನ್ನು ಯಾವಯಾವುದನ್ನು ಕೇಳುತ್ತೀಯೋ ಅದೆಲ್ಲವನ್ನೂ ಪೂರ್ತಿಮಾಡುತ್ತೇನೆ. ಎಂದು ಹೇಳಲು,

೩-೪. ಸೋಮಶರ್ಮನು ಹೇಳುತ್ತಾನೆ:—ಎಲೈ ಕೃಷ್ಣನೇ, ನಿನಗೆ ದಯವಿದ್ದರೆ ಮೊದಲು ಒಂದು ವರವನ್ನು ಕೊಡು. ಜನ್ಮಜನ್ಮಾಂತರವನ್ನು ಹೊಂದಿಯೂ, ನಿನ್ನಲ್ಲಿ ಭಕ್ತಿಮಾಡಬೇಕು. ಮೋಕ್ಷಸ್ಥಾನವನ್ನು ಹೊಂದುವ ಮಾರ್ಗವನ್ನು ತೋರಿಸು.

**ಸ್ವವಂಶತಾರಕಂ ಪುತ್ರಂ ದಿವ್ಯಲಕ್ಷಣಸಂಯುತಂ ।**
**ವಿಷ್ಣುಭಕ್ತಿಪರಂ ನಿತ್ಯಂ ಮಮ ವಂಶಪ್ರಧಾರಕಂ ॥ ೫ ॥**

**ಸರ್ವಜ್ಞಂ ಸರ್ವದಂ ದಾಂತಂ ತಪಸ್ತೇಜಸ್ಸಮನ್ವಿತಂ ।**
**ದೇವಬ್ರಾಹ್ಮಣಲೋಕಾನಾಂ ಪಾಲಕಂ ಪೂಜಕಂ ಶುಭಂ ॥ ೬ ॥**

**ದೇವಮಿತ್ರಂ ಪುಣ್ಯಭಾವಂ ದಾತಾರಂ ಜ್ಞಾನಪಂಡಿತಂ ।**
**ದೇಹಿ ಮೇ ಈದೃಶಂ ಪುತ್ರಂ ದಾರಿದ್ರ್ಯಂ ಹರ ಕೇಶವ ॥ ೭ ॥**

**ಭವತ್ವೇವಂ ನ ಸಂದೇಹೋ ವರಮೇನಂ ವೃಣೋಮ್ಯಹಂ ।**

**ಹರಿರುವಾಚ**

**ಏವಮೇವ ದ್ವಿಜಶ್ರೇಷ್ಠ ಭವಿಷ್ಯತಿ ನ ಸಂಶಯಃ ।**
**ಮತ್ಪ್ರಸಾದಾತ್ಸುಪುತ್ರಸ್ತೇ ತವ ವಂಶಪ್ರತಾರಕಃ ॥ ೮ ॥**

**ಭೋಕ್ಷ್ಯಸಿ ತ್ವಂ ವರಾನ್ಭೋಗಾನ್ ದಿವ್ಯಾನ್ ವೈ ಮಾನುಷಾನಿಹ ।**
**ಸಮಾದಾಯ ಪರಂ ಸೌಖ್ಯಂ ಮನಸ್ಸಂಭವಜಂ ಸುಖಂ ॥ ೯ ॥**

---

೫. ಸ್ವವಂಶತಾರಕನೂ, ದಿವ್ಯಲಕ್ಷಣವುಳ್ಳವನೂ, ವಿಷ್ಣುಭಕ್ತಿಯುಳ್ಳವನೂ, ವಂಶಧಾರಕನೂ, ಆದ ಒಬ್ಬ ಪುತ್ರನನ್ನು ಅನುಗ್ರಹಿಸು.

೬-೭. ಆ ಪುತ್ರನು ಸರ್ವಜ್ಞನೂ, ಜಿತೇಂದ್ರಿಯನೂ, ತಪಸ್ಸು, ಬ್ರಹ್ಮವರ್ಚಸ್ಸು, ಇವುಗಳಿಂದ ಕೂಡಿರುವವನೂ, ದೇವಬ್ರಾಹ್ಮಣರಲ್ಲಿ ಭಕ್ತಿಯುಳ್ಳವನೂ, ಆಗಿರಬೇಕಲ್ಲದೆ ದೇವಮಿತ್ರನೂ, ಪುಣ್ಯವಂತನೂ, ದಾನಶೀಲನೂ, ಜ್ಞಾನಿಯೂ, ಆಗಿರಬೇಕು. ಇಂತಹ ಸುಪುತ್ರನನ್ನು ಕೊಟ್ಟು ನನ್ನ ದಾರಿದ್ರ್ಯವನ್ನು ಪರಿಹರಿಸು. ಈರೀತಿಯಾದ ವರಗಳನ್ನು ಕೊಡಬೇಕೆಂದು ನಿನ್ನನ್ನು ಪ್ರಾರ್ಥಿಸಿಕೊಳ್ಳುತ್ತೇನೆ, ಎಂದನು.

೮-೧೦. ಹರಿಯು ಹೇಳಿದನು:— ಹಾಗೆಯೇ ಆಗಲಿ, ಸಂಶಯವಿಲ್ಲ. ನನ್ನ ಪ್ರಸಾದದಿಂದ ನಿನಗೆ ವಂಶವರ್ಧಕನಾದ ಮಗನಾಗುತ್ತಾನೆ. ಆ ಪುತ್ರಪ್ರಾಪ್ತಿಯಿಂದ ನಿನಗೆ ಇಹಪರಸುಖಗಳು ಲಭಿಸುವವು. ಅಲ್ಲದೆ ಉತ್ತಮವಾದ ಸ್ತ್ರೀಸೌಖ್ಯವನ್ನೂ ಸಹ ಅನುಭವಿಸುತ್ತೀಯೆ. ನೀನು ಬದುಕಿರುವವರಿಗೂ ದುಃಖವನ್ನು ಕಾಣುವುದೇ ಇಲ್ಲ. ದಾತೃವೂ, ಭೋಕ್ತೃವೂ, ಗುಣಗ್ರಾಹಿಯೂ, ಆಗುವಿ. ಸಂಶಯವಿಲ್ಲ. ಹೀಗೆ

ಯಾವಜ್ಜೀವಸಿ ವಿಪ್ರ ತ್ವಂ ತಾವದ್ದುಃಖಂ ನ ಪಶ್ಯಸಿ ।
ದಾತಾ ಭೋಕ್ತಾ ಗುಣಗ್ರಾಹೀ ಭವಿಷ್ಯಸಿ ನ ಸಂಶಯಃ ॥ ೧೦ ॥

ಸುತೀರ್ಥೇ ಮರಣಂ ವಿಪ್ರ ಯಾಸ್ಯಸಿ ತ್ವಂ ಪರಾಂ ಗತಿಂ ।
ಏವಂ ವರಂ ಹರಿರ್ದತ್ವಾ ಸುಪ್ರಿಯಾಯ ದ್ವಿಜಾಯ ಸಃ ॥ ೧೧ ॥

ಅಂತರ್ಧಾನಂ ಗತೋ ದೇವಃ ಸ್ವಪ್ನವತ್ಪರಿದೃಶ್ಯತೇ ।
ತದಾ ಸುಮನಯಾ ಯುಕ್ತಃ ಸೋಮಶರ್ಮಾ ದ್ವಿಜೋತ್ತಮಃ ॥ ೧೨ ॥

ಸುತೀರ್ಥೇ ಪಾವನೇ ತಸ್ಮಿನ್ ರೇವಾತೀರೇ ಸುಪುಣ್ಯದೇ ।
ಅಮರಕಂಟಕೇ ವಿಪ್ರೋ ದಾನಪುಣ್ಯಂ ಕರೋತಿ ಸಃ ॥ ೧೩ ॥

ಗತೇ ಬಹುತರೇ ಕಾಲೇ ತಸ್ಯ ವೈ ಸೋಮಶರ್ಮಣಃ ।
ಕಪಿಲಾರೇವಯೋಸ್ಸಂಗೇ ಸ್ನಾನಂ ಕೃತ್ವಾ ಸ ನಿರ್ಗತಃ ॥ ೧೪ ॥

ಪುರತೋ ದೃಷ್ಟವಾನ್ ವಿಪ್ರಃ ಶ್ವೇತಮೇಕಂ ಹಿ ಕುಂಜರಂ ।
ಸುಪ್ರಭಂ ಸುಮದಂ ದಿವ್ಯಂ ಸುಂದರಂ ಚಾರುಲಕ್ಷಣಂ ॥ ೧೫ ॥

---

ಅನೇಕ ಭೋಗಗಳನ್ನು ಅನುಭವಿಸಿದನಂತರ ಸುತೀರ್ಥದಲ್ಲಿ ನಿನಗೆ ಮರಣವು ಒದಗಿ, ಉತ್ತಮಗತಿಯನ್ನು ಹೊಂದುತ್ತೀಯೆ ಎಂದು ವರವನ್ನು ಕೊಟ್ಟನು.

೧೧. ಹರಿಯು ವರವನ್ನು ಕೊಟ್ಟು ಅಂತರ್ಧಾನನಾದನು. ಇವೆಲ್ಲವೂ ಅವನಿಗೆ ಸ್ವಪ್ನದಂತೆ ಕಂಡುಬಂದುವು.

೧೨-೧೩. ಆಗ ಸುಮನಳಿಂದ ಕೂಡಿ ಆ ಬ್ರಾಹ್ಮಣನು ರೇವಾತೀರದಲ್ಲಿರುವ ಅಮರಕಂಟಕವೆಂಬ ಕ್ಷೇತ್ರದಲ್ಲಿ ದಾನಪುಣ್ಯಗಳನ್ನು ಮಾಡುತ್ತಿದ್ದನು.

೧೪. ಹೀಗೆ ಅನೇಕ ಕಾಲಕಳೆಯಲು ಒಂದುದಿನ ಕಪಿಲೆ, ರೇವೆಗಳ ಸಂಗಮದಲ್ಲಿ ಸ್ನಾನಮಾಡಿ ಮನೆಗೆ ಹೋಗುತ್ತಿರುವಾಗ,

೧೫-೧೭. ಆನೆಯಮೇಲೆ ಕುಳಿತು ಒಬ್ಬ ಮಹಾಪುರುಷನು ಹೋಗುತ್ತಿದ್ದುದನ್ನು ಕಂಡನು. ಆ ಆನೆಯು ಶ್ವೇತವರ್ಣವುಳ್ಳದ್ದಾಗಿಯೂ, ನಾನಾಭರಣಗಳಿಂದ ಅಲಂಕೃತವಾಗಿಯೂ, ಸರ್ವಲಕ್ಷಣಸಂಪನ್ನವಾಗಿಯೂ, ಮದದಿಂದಲೂ, ಸುಂದರಾಕಾರದಿಂದಲೂ, ಕೂಡಿ ಒಳ್ಳೇ ಲಕ್ಷಣವುಳ್ಳದ್ದಾಗಿತ್ತು. ಅದರ ಕುಂಭಸ್ಥಳಗಳಲ್ಲಿ

ನಾನಾಭರಣಶೋಭಾಂಗಂ ಬಹುಲಕ್ಷಣಸಂಯುತಂ ।
ಸಿಂದೂರಕುಂಕುಮೈರಸ್ಯ ಕುಂಭಸ್ಥಳೇ ವಿಚರ್ಚಿತೇ ॥ ೧೬ ॥

ಕರ್ಣನೀಲೋತ್ಪಲಯುತಂ ಪತಾಕಾದಂಡಸಂಯುತಂ ।
ನಾಗೋಪರಿಸ್ಥಿತೋ ದಿವ್ಯಃ ಪುರುಷೋ ದೃಷ್ಟವಾಂಸ್ತ್ರಕೈಃ ॥ ೧೭ ॥

ದಿವ್ಯಲಕ್ಷಣಸಂಪನ್ನಃ ಸರ್ವಾಭರಣಭೂಷಿತಃ ।
ದಿವ್ಯಮಾಲಾಂಬರಧರೋ ದಿವ್ಯಗಂಧಾನುಲೇಪನಃ ॥ ೧೮ ॥

ಸುಸೌಮ್ಯಂ ಸೋಮವತ್ಪೂರ್ಣಛತ್ರಚಾಮರಸಂಯುತಂ ।
ನಾಗಾರೂಢಂ ಪ್ರಯಾಂತಂ ತಂ ಪುನಃ ಪಶ್ಯತಿ ಸತ್ತಮಃ ॥ ೧೯ ॥

ಸಿದ್ಧಚಾರಣಗಂಧರ್ವೈಃ ಸ್ತೂಯಮಾನಂ ಸುಮಂಗಲಂ ।
ಸಗಜಂ ಸುಂದರಂ ದೃಷ್ಟ್ವಾ ಪುರುಷಂ ದಿವ್ಯಲಕ್ಷಣಂ ॥ ೨೦ ॥

ವ್ಯತರ್ಕಯತ್ಸೋಮಶರ್ಮಾ ವಿಸ್ಮಯಾವಿಷ್ಟಮಾನಸಃ ।
ಕೋಽಯಂ ಪ್ರಯಾತಿ ದಿವ್ಯಾಂಗಃ ಪಂಥಾನಂ ಪ್ರಾಪ್ಯ ಸುವ್ರತಃ ॥ ೨೧ ॥

ಏವಂ ಚಿಂತಯತಸ್ತಸ್ಯ ಸ ಗತಃ ಪ್ರಾಪ್ತವಾನ್ ಗೃಹಂ ।
ಪ್ರವಿಶಂತಂ ಗೃಹದ್ವಾರಿ ದೇವರೂಪಂ ಮನೋಹರಂ ॥ ೨೨ ॥

---

ಸಿಂದೂರ, ಕುಂಕುಮ, ಇವುಗಳನ್ನು ಲೇಪಿಸಿದ್ದರು. ಕರ್ಣಗಳಲ್ಲಿ ನೀಲೋತ್ಪಲಗಳು ಪ್ರಕಾಶಿಸುತ್ತಿದ್ದವು. ಧ್ವಜಪತಾಕಾದಿಗಳಿಂದ ಅಲಂಕೃತವಾದ ಇಂತಹ ಗಜವನ್ನೇರಿ ಒಬ್ಬ ಮಹಾಪುರುಷನು ಹೋಗುತ್ತಿದ್ದನು.

೧೮-೨೧. ಆ ಪುರುಷನು ಸರ್ವಲಕ್ಷಣಸಂಪನ್ನನಾಗಿ ಕತ್ತಿನಲ್ಲಿ ದಿವ್ಯಮಾಲೆಗಳನ್ನು ಧರಿಸಿ, ಸುಗಂಧವನ್ನು ಲೇಪನಮಾಡಿಕೊಂಡು ಛತ್ರಚಾಮರಾದಿಗಳಿಂದ ಸೇವಿಸಲ್ಪಡುತ್ತಲಿದ್ದನು. ಸೌಮ್ಯನಾಗಿದ್ದ ಈತನನ್ನು ಸಿದ್ಧರು, ಚಾರಣರು, ಗಂಧರ್ವರು ಮೊದಲಾದವರು ಸ್ತುತಿಸುತ್ತಿದ್ದರು. ಈರೀತಿಯಾಗಿ ಮಹಾ ವೈಭವದಿಂದ ದಿವ್ಯವಾದ ಆನೆಯಮೇಲೆ ಕುಳಿತು ಬರುತ್ತಿರುವ ಈ ಪುರುಷನು ಯಾರಿರಬಹುದೆಂದು ಯೋಚಿಸಿದನು.

೨೨-೨೩. ಹೀಗೆ ಯೋಚಿಸುತ್ತಾ ಹೋಗುತ್ತಿರಲು, ಗಜವನ್ನೇರಿದ ಆ ಪುರುಷನೂಸಹ ಇವನ ಮನೆಯ ಬಾಗಿಲವರೆಗೂ ಹೋಗುವುದನ್ನು ಕಂಡನು. ಇದನ್ನು

ಹರ್ಷೇಣ ಮಹತಾವಿಷ್ಟಸ್ಸೋಮಶರ್ಮಾ ದ್ವಿಜೋತ್ತಮಃ ।
ಸ್ವಗೃಹಂ ಪ್ರತಿ ಧರ್ಮಾತ್ಮಾ ತ್ವರಮಾಣಃ ಪ್ರಯಾತಿ ಚ ॥ ೨೩ ॥

ಗೃಹದ್ವಾರಂ ಗತೋ ಯಾವತ್ ತಾವತ್ತಂ ತು ನ ಪಶ್ಯತಿ ।
ಪತಿತಾನಿ ಚ ಪುಷ್ಪಾಣಿ ಪ್ರೇಕ್ಷ್ಯ ತಾನಿ ಮಹಾಮತಿಃ ।
ದಿವ್ಯಾನಿ ಗಂಧಯುಕ್ತಾನಿ ಪ್ರಾಂಗಣೇ ದ್ವಿಜಸತ್ತಮಃ ॥ ೨೪ ॥

ಚಂದನೈಃ ಕುಸುಮೈಃ ಪುಷ್ಪೈಃ ಸುಗಂಧೈಶ್ಚ ವಿಲೇಪಿತಂ ।
ಸ್ವಕೀಯಂ ಪ್ರಾಂಗಣಂ ದೃಷ್ಟ್ವಾ ದೂರ್ವಾಂಕುರಸಮನ್ವಿತಂ ॥ ೨೫ ॥

ಸ ಏವಂ ವಿಸ್ಮಯಾವಿಷ್ಟಶ್ಚಿಂತಯಾನಃ ಪುನಃ ಪುನಃ ।
ದದರ್ಶ ಸುಮನಾಂ ಪ್ರಾಜ್ಞೋ ದಿವ್ಯಮಂಗಳಸಂಯುತಾಂ ॥ ೨೬ ॥

ಸೋಮಶರ್ಮೋವಾಚ

ಕೇನ ದತ್ತಾನಿ ದಿವ್ಯಾನಿ ಹ್ಯೇತಾನ್ಯಾಭರಣಾನಿ ಚ ।
ಶೃಂಗಾರಂ ರೂಪಸೌಭಾಗ್ಯಂ ವಸ್ತ್ರಾಲಂಕಾರಭೂಷಣಂ ॥ ೨೭ ॥

ತನ್ಮೇ ತ್ವಂ ಕಾರಣಂ ಭದ್ರೇ ಕಥಯಸ್ವ ವಿಶೇಷತಃ ।
ಏವಂ ಸಂಭಾಷ್ಯ ತಾಂ ಭಾರ್ಯಾಂ ವಿರರಾಮ ದ್ವಿಜೋತ್ತಮಃ ॥ ೨೮ ॥

---

ಕಂಡು ತುಂಬ ಹರ್ಷದಿಂದ ಸೋಮಶರ್ಮನು ಬೇಗಬೇಗನೆ ತನ್ನ ಮನೆಗೆ ಬಂದು ನೋಡುವಲ್ಲಿ ಆ ಮನುಷ್ಯನು ಅಲ್ಲಿಯೇ ಕಣ್ಮರೆಯಾದನು.

೨೪. ಆ ಬ್ರಾಹ್ಮಣನು ಆಗ ತನ್ನ ಮನೆಯಅಂಗಳದಲ್ಲಿ ಬಿದ್ದಿರುವ ದಿವ್ಯವಾದ ಗಂಧದ ವಾಸನೆಯುಳ್ಳ ಹೂಗಳನ್ನು ನೋಡಿದನು.

೨೫-೨೬. ಚಂದನ, ಹೂ, ಗಂಧಗಳಿಂದಲೂ, ಗರಿಕೆಯ ಚಿಗುರಿನಿಂದಲೂ, ತನ್ನ ಮನೆಯ ಅಂಗಳವು ತುಂಬಿಹೋಗಿರುವುದನ್ನು ಕಂಡು, ಆಶ್ಚರ್ಯಗೊಂಡು ಪದೇ ಪದೇ ಯೋಚಿಸುತ್ತಾ ದಿವ್ಯಮಂಗಳದಿಂದ ಕೂಡಿರುವ ತನ್ನ ಹೆಂಡತಿಯನ್ನು ನೋಡಿ,

೨೭-೨೮. ಸೋಮಶರ್ಮನು ಹೇಳಿದನು:—ಈ ದಿವ್ಯಾಭರಣಗಳನ್ನು ಕೊಟ್ಟವರಾರು? ಈ ಶೃಂಗಾರ, ಈ ರೂಪ, ಈ ವಸ್ತ್ರಗಳೆಲ್ಲಿಂದ ಬಂತು? ಇದರ ಕಾರಣವನ್ನು ನನಗೆ ಪೂರ್ಣವಾಗಿ ಹೇಳು. ಹೀಗೆಂದು ಕೇಳಲು,

## ಸುಮನೋವಾಚ

ಶೃಣು ಕಾಂತ ಸಮಾಯಾತಃ ಕಶ್ಚಿದ್ದೇವವರೋತ್ತಮಃ ।
ಶ್ವೇತನಾಗಂ ಸಮಾರೂಢೋ ದಿವ್ಯಾಭರಣಭೂಷಣಃ ॥ ೨೯ ॥

ದಿವ್ಯಗಂಧಾನುಲಿಪ್ತಾಂಗೋ ದಿವ್ಯಶ್ರಿಯಾ ಸಮನ್ವಿತಃ ।
ನ ಜಾನೇ ಕೋಽಹಿ ದೇವೋ ಸೌ ವಿಪ್ರಗಂಧರ್ವಸೇವಿತಃ ॥ ೩೦ ॥

ಸ್ತೂಯಮಾನಸ್ಸಮಾಯಾತೋ ದೇವಕಿನ್ನರಚಾರಣೈಃ ।
ಯೋಷಿತಃ ಪುಣ್ಯರೂಪಾಸ್ತು ರೂಪಶೃಂಗಾರಸಂಯುತಾಃ ॥ ೩೧ ॥

ಸರ್ವಾಭರಣಶೋಭಾಢ್ಯಾಃ ಸರ್ವಾಃ ಪೂರ್ಣಮನೋರಥಾಃ ।
ತಾಭಿಸ್ಸಹ ಸಮುಕ್ಷಂ ಮೇ ಪುರುಷೇಣ ಮಹಾತ್ಮನಾ ॥ ೩೨ ॥

ಚತುಷ್ಕಂ ಪೂರಿತಂ ದ್ರವ್ಯೈಃ ಸರ್ವಶೋಭಾಸಮನ್ವಿತಂ ।
ತತ್ರಾಹಮಾಸನೇ ಪುಣ್ಯೇ ಸ್ಥಾಪಿತಾ ಸ್ತ್ರೀಗಣೈಃ ಕಿಲ ॥ ೩೩ ॥

ವಸ್ತ್ರಾಲಂಕಾರಭೂಷಾಂ ಮೇ ದದುಸ್ತೇ ಸರ್ವಮೇವ ಹಿ ।
ತಥಾ ಮಂಗಳಮಂತ್ರೈಸ್ತು ಶಾಸ್ತ್ರಗೀತೈಶ್ಚ ಪುಣ್ಯದೈಃ ॥ ೩೪ ॥

---

೨೯-೩೦. ಸುಮನಳು ಹೇಳಿದಳು:—ಪತಿಯೇ ಕೇಳು. ಬಿಳಿಯ ಆನೆಯನ್ನು ಹತ್ತಿಕೊಂಡು ದಿವ್ಯಾಭರಣಯುಕ್ತನಾಗಿ, ಗಂಧವನ್ನು ಲೇಪನಮಾಡಿಕೊಂಡು ಪ್ರಕಾಶಮಾನನಾಗಿ ಒಬ್ಬ ದೇವತೆಯು ಬಂದನು. ಆತನನ್ನು ಬ್ರಾಹ್ಮಣರು, ಗಂಧರ್ವರು, ಮೊದಲಾದವರು ಸೇವಿಸುತ್ತಿದ್ದರು. ಆತನು ಯಾರೆಂದು ತಿಳಿಯೆ.

೩೧-೩೨. ದೇವತೆಗಳು, ಕಿನ್ನರರು, ಚಾರಣರುಗಳಿಂದ ಹೊಗಳಲ್ಪಡುತ್ತಾ ರೂಪಶೃಂಗಾರಗಳಿಂದಲೂ, ಸರ್ವಾಭರಣಗಳಿಂದಲೂ, ಭೂಷಿತರಾದ ಪೂರ್ಣಮನೋರಥರಾದ, ಸ್ತ್ರೀಯರಿಂದಕೂಡಿದ ಒಬ್ಬ ಮಹಾತ್ಮನು ನನ್ನ ಎದುರಿಗೆ ಬಂದನು.

೩೩-೩೬. ಅವನು ಬಂದಕೂಡಲೇ ನಮ್ಮ ಮನೆಯ ಅಂಗಳವೆಲ್ಲವೂ ಹಣಗಳಿಂದ ತುಂಬಲ್ಪಟ್ಟಿತು. ಅವನ ಹತ್ತಿರವಿದ್ದ ಸ್ತ್ರೀಯರು ನನ್ನನ್ನು ಆಸನದಲ್ಲಿ ಕೂರಿಸಿ ವಸ್ತ್ರಾಲಂಕಾರಗಳನ್ನು ನನಗೆ ಕೊಟ್ಟರು. ಶಾಂತಿಮಂತ್ರಗಳಿಂದಲೂ, ಮಂಗಳಗೀತೆಗಳಿಂದಲೂ, ಅವರು ನನಗೆ ಅಭಿಷೇಕಮಾಡಿ ನನ್ನ ಸುತ್ತಲೂ ನೆರೆದು ನಿಂತು, ಎಲ್ಲೈ

ಅಭಿಷಿಕ್ತಾಸ್ಮಿ ತೈಸ್ಸರ್ವೈರಂತರ್ಧಾನಂ ಪುನರ್ಗತಾಃ ।
ಮಾಮೇವಂ ಪರಿತಃ ಸರ್ವೇ ಪುನರೂಚುರ್ದ್ವಿಜೋತ್ತಮ ॥ ೩೫ ॥

ತವ ಗೇಹೇ ವಯಂ ಭದ್ರೇ ವಸಿಷ್ಯಾಮಃ ಸದೈವ ಹಿ ।
ಶುಚಿರ್ಭವಸ್ವ ಕಲ್ಯಾಣಿ ಭರ್ತ್ರಾ ಸಾರ್ಧಂ ಸದೈವ ಹಿ ॥ ೩೬ ॥

ಏವಮುಕ್ತ್ವಾ ಗತಾಃ ಸರ್ವಾ ಏವಂ ದೃಷ್ಟಂ ಮಯೈವ ಹಿ ।
ತಯಾ ಯತ್ಕಥಿತಂ ಸರ್ವಂ ಸಮಾಕರ್ಣ್ಯ ಮಹಾಮತಿಃ ॥ ೩೭ ॥

ಪುನಶ್ಚಿಂತಾಂ ಪ್ರಸನ್ನೋಽಸೌ ಕಿಮಿದಂ ದೇವನಿರ್ಮಿತಂ ।
ವಿಚಿಂತಯಿತ್ವಾಽಥ ತದಾ ಸೋಮಶರ್ಮಾ ಮಹಾಮತಿಃ ॥ ೩೮ ॥

ಬ್ರಹ್ಮಕರ್ಮಣಿ ಸಂಯುಕ್ತಃ ಸಾಧಯನ್ ಧರ್ಮಮುತ್ತಮಂ ।
ತಸ್ಮಾದ್ಗರ್ಭಂ ಮಹಾಭಾಗಾ ದಧಾರ ವ್ರತಶಾಲಿನೀ ॥ ೩೯ ॥

ತೇನ ಗರ್ಭೇಣ ಸಾ ದೇವೀ ಹ್ಯಧಿಕಂ ಶುಶುಭೇ ತದಾ ।
ಸುಪುತ್ರಂ ದೀಪ್ತಿಸಂಯುಕ್ತಂ ತೇಜೋಜ್ವಾಲಾಸಮಾಕುಲಂ ॥ ೪೦ ॥

ಸಾ ಹಿ ಜಜ್ಞೇ ಮಹಾಭಾಗಾ ತನಯಂ ದೇವಸನ್ನಿಭಂ ।
ಅಂತರಿಕ್ಷೇ ತದಾ ನೇದುರ್ದೇವದುಂದುಭಯೋ ಮುಹುಃ ॥ ೪೧ ॥

---

ಮಂಗಳಕರಳೇ? ನಿಮ್ಮ ಮನೆಯಲ್ಲಿ ನಾವು ಯಾವಾಗಲೂ ವಾಸಮಾಡುತ್ತೇವೆ, ಗಂಡನೊಡನೆ ನೀನು ಶುಚಿಯಾಗಿಯೂ, ಸುಖವಾಗಿಯೂ, ಇರು. ಹೀಗೆಂದು ಹೇಳಿ ಎಲ್ಲರೂ ಹೊರಟುಹೋದರು. ಎಂದಳು.

೩೭. ಅವಳು ಹೇಳಿದ್ದೆಲ್ಲವನ್ನೂ ಕೇಳಿ, ಸೋಮಶರ್ಮನು ಇದೇನು ? ಇದೆಲ್ಲವೂ ದೇವನಿರ್ಮಿತವಾಗಿರಬಹುದೇ ?

೩೮-೩೯. ಸೋಮಶರ್ಮನು ಹೀಗೆ ಯೋಚಿಸಿ ಬ್ರಾಹ್ಮಣೋಚಿತವಾದ ಧರ್ಮಗಳನ್ನು ಮಾಡುತ್ತಾ ಇರುವಲ್ಲಿ, ಕೆಲವುಕಾಲದಮೇಲೆ ವ್ರತಿನಿಯಾದ ಆಕೆಯು ಗರ್ಭವನ್ನು ಧರಿಸಿದಳು.

೪೦-೪೨. ಆ ಗರ್ಭದಿಂದ ಆಕೆಯ ತೇಜಸ್ಸು ಹೆಚ್ಚಿತು. ಅನಂತರ ದೀಪ್ತಿಮಂತನೂ, ದಿವ್ಯತೇಜಸ್ಸಿನಿಂದ ಬೆಳಗುತ್ತಿರುವವನೂ, ಆದ ಒಬ್ಬ ಮಗನನ್ನು ಹೆತ್ತಳು.

ಶಂಖಾ್ ದಧ್ಮುರ್ಮಹಾದೇವಾ ಗಂಧರ್ವಾ ಲಲಿತಂ ಜಗುಃ ।
ಅಪ್ಸರಸಸ್ತದಾ ಸರ್ವಾ ನನೃತುಸ್ತಾ ಮುದಾನ್ವಿತಾಃ ॥ ೪೨ ॥

ಅಥ ಬ್ರಹ್ಮಾ ಸುರೈಸ್ಸಾರ್ಧಂ ಸಮಾಯಾತೋ ದ್ವಿಜೋತ್ತಮ ।
ಚಕಾರ ನಾಮ ತಸ್ಯೈವ ಸುವ್ರತೇತಿ ಸಮಾಹಿತಃ ॥ ೪೩ ॥

ನಾಮ ಕೃತ್ವಾ ತತೋ ದೇವಾ ಜಗ್ಮುಃ ಸ್ವರ್ಗಂ ಮಹೌಜಸಃ ।
ಗತೇಷು ತೇಷು ದೇವೇಷು ಸೋಮಸೋಮಾ ಸುತಸ್ಯ ಚ ।
ಜಾತಕರ್ಮಾದಿಕಂ ಕರ್ಮ ಚಕಾರ ದ್ವಿಜಸತ್ತಮಃ ॥ ೪೪ ॥

ಜಾತೇ ಪುತ್ರೇ ಮಹಾಭಾಗೇ ಸುವ್ರತೇ ದೇವನಿರ್ಮಿತೇ ।
ತಸ್ಯ ಗೇಹೇ ಮಹಾಲಕ್ಷ್ಮೀರ್ಧನಧಾನ್ಯಸಮಾಕುಲಾ ॥ ೪೫ ॥

ಗಜಾಶ್ವಮಹಿಷೀಗಾವಃ ಕಾಂಚನಂ ರತ್ನಮೇವ ಚ ।
ಯಥಾ ಕುಬೇರಭವನಂ ಶುಶುಭೇ ರತ್ನಸಂಚಯೈಃ ॥ ೪೬ ॥

---

ಅಂತರಿಕ್ಷದಲ್ಲಿ ಆಗ ದೇವದುಂದುಭಿಗಳು ಮೊಳಗಿದವು. ದೇವತೆಗಳು ಶಂಖವನ್ನು ಊದಿದರು. ಗಂಧರ್ವರು ಸುಖವಾಗಿ ಹಾಡಿದರು. ಅಪ್ಸರಸ್ತ್ರೀಯರು ನರ್ತನ ಮಾಡಿದರು.

೪೩. ಆಗ ಬ್ರಹ್ಮನುದೇವತೆಗಳೊಡನೆ ಅಲ್ಲಿಗೆ ಬಂದು ಆ ಮಗುವಿಗೆ ಸುವ್ರತನೆಂದು ನಾಮಕರಣಮಾಡಿದನು.

೪೪. ಹೆಸರನ್ನಿಟ್ಟು ದೇವತೆಗಳು ಸ್ವರ್ಗಕ್ಕೆ ಹೋದರು. ದೇವತೆಗಳು ಹೋಗುತ್ತಲೂ, ಸೋಮಶರ್ಮನು ಮಗುವಿಗೆ ಜಾತಕರ್ಮಾದಿಗಳನ್ನು ಮಾಡಿದನು.

೪೫-೪೬. ಸುವ್ರತನೆಂಬ ಮಹಾನುಭಾವನು ಹುಟ್ಟಲು, ಅವನ ಮನೆಯಲ್ಲಿ ಲಕ್ಷ್ಮಿಯು ಆನೆ, ಕುದುರೆ, ಎಮ್ಮೆ ದನ, ಚಿನ್ನ, ರತ್ನಗಳು, ಈ ರೂಪದಲ್ಲಿ ಕುಬೇರನ ಮನೆಯಂತೆ ಆ ಸೋಮಶರ್ಮನ ಮನೆಯಲ್ಲಿ ಪ್ರಕಾಶಿಸಿದಳು.

ತತ್ಸೋಮಶರ್ಮಣೋ ಗೇಹಂ ಸಂಪನ್ನಂ ಪರಿರಾಜತೇ ।
ದಾನಪುಣ್ಯಾದಿಕಂ ಕರ್ಮ ಚಕಾರ ದ್ವಿಜಸತ್ತಮಃ ॥ ೪೭ ॥

ತೀರ್ಥಯಾತ್ರಾಂ ಗತೋ ವಿಪ್ರೋ ನಾನಾಪುಣ್ಯಸಮಾಕುಲಃ ।
ಅನ್ಯಾನಿ ಯಾನಿ ಪುಣ್ಯಾನಿ ದಾನಾನಿ ದ್ವಿಜಸತ್ತಮಃ ॥ ೪೮ ॥

ಚಕಾರ ತತ್ರ ಮೇಧಾವೀ ಜ್ಞಾನಪುಣ್ಯಸಮನ್ವಿತಃ ।
ಏವಂ ಸಾಧಯತೇ ಧರ್ಮಂ ಪಾಲಯೇಚ್ಚ ಪುನಃ ಪುನಃ ।
ಪುತ್ರಸ್ಯ ಜಾತಕರ್ಮಾದಿ ಕರ್ಮಾಣಿ ದ್ವಿಜಸತ್ತಮಃ ॥ ೪೯ ॥

ವಿವಾಹಂ ಕಾರಯಾಮಾಸ ಹರ್ಷೇಣ ಮಹತಾ ಕಿಲ ।
ಪುತ್ರಸ್ಯ ಪುತ್ರಾಸ್ಸಂಜಾತಾಃ ಸುಪುಣ್ಯಾ ಲಕ್ಷಣಾನ್ವಿತಾಃ ॥ ೫೦ ॥

ಸತ್ಯಧರ್ಮತಪೋಪೇತಾ ದಾನಧರ್ಮರತಾಸ್ಸದಾ ।
ಸ ತೇಷಾಂ ಪುಣ್ಯಕರ್ಮಾಣಿ ಸೋಮಶರ್ಮಾ ಚಕಾರ ಹ ॥ ೫೧ ॥

---

೪೭-೪೮. ಪುತ್ರೋತ್ಸವದಿಂದ ಸಂತೋಷಗೊಂಡ ಆ ಬ್ರಾಹ್ಮಣನು ಅನೇಕ ಧರ್ಮಗಳನ್ನು ಮಾಡಿದನು. ತೀರ್ಥಯಾತ್ರೆಯೇ ಮೊದಲಾದ ಇನ್ನೂ ಅನೇಕವಾದ ಪುಣ್ಯಕೆಲಸಗಳನ್ನೂ ಮಾಡಿದನು.

೪೯. ಪುತ್ರನ ಜಾತಕರ್ಮಕಾಲದಲ್ಲಿ ಆ ಬ್ರಾಹ್ಮಣನು ಈರೀತಿಯಾಗಿ ಅನೇಕ ಧರ್ಮಗಳನ್ನು ಮಾಡಿದನು.

೫೦. ಅನಂತರ ಆ ಪುತ್ರನು ಯೌವನವನ್ನು ಹೊಂದಲು, ಮದುವೆಯನ್ನೂ ಬಹು ಸಂಭ್ರಮದಿಂದ ಮಾಡಿದನು ಮಗನಿಗೆ ಶೀಲಸಂಪನ್ನರಾದ ಮಕ್ಕಳೂ ಆದರು.

೫೧. ಅವರೆಲ್ಲರೂ ಸತ್ಯ, ಧರ್ಮ, ತಪಸ್ಸುಗಳಿಂದ ಕೂಡಿ, ದಾನ, ಧರ್ಮಗಳನ್ನು ಮಾಡುತ್ತಿದ್ದರು. ಅವರಿಗೆ ಬೇಕಾದ ಉಪನಯನವೇ ಮೊದಲಾದವುಗಳನ್ನೂ ಸೋಮಶರ್ಮನು ಮಾಡಿದನು.

**ಪೌತ್ರಾಣಾಂ ತು ಮಹಾಭಾಗಂಸ್ತೇಷಾಂ ಸೌಖ್ಯೇನ ಮೋದತೇ ।**
**ಸರ್ವಸೌಖ್ಯಂ ಸ ಬುಭಜೇ ತೇಜಸಾ ರಾಜರಾಜವತ್ ॥ ೫೨ ॥**

**ಪಂಚವಿಂಶಾಬ್ದಿಕೋ ಯದ್ವತ್ತದ್ವತ್ಕಾಯಸ್ತು ತಸ್ಯ ಹಿ ।**
**ಸೂರ್ಯತೇಜಃಪ್ರತೀಕಾಶಃ ಸೋಮಶರ್ಮಾ ಮಹಾಮತಿಃ ॥ ೫೩ ॥**

**ಸಾ ಚಾಪಿ ಶುಶುಭೇ ದೇವೀ ಸುಮನಾ ಪುಣ್ಯಮಂಗಲೈಃ ।**
**ಪುತ್ರಪೌತ್ರೈರ್ಮಹಾಭಾಗಾ ದಾನವ್ರತೈಶ್ಚ ಸಂಯುಮ್ನೈಃ ॥ ೫೪ ॥**

**ಅತಿಭಾತಿ ವಿಶಾಲಾಕ್ಷೀ ಪುಣ್ಯೈಃ ಪತಿವ್ರತಾದಿಭಿಃ ।**
**ತಾರುಣ್ಯೇನ ಸಮಾಯುತ್ತಾ ಯಥಾ ಷೋಡಶವಾರ್ಷಿಕೀ ॥ ೫೫ ॥**

**ಮೋದಮಾನೌ ಮಹಾಭಾಗೌ ದಂಪತೀ ಚಾರುದರ್ಶನೌ ।**
**ಹರ್ಷೇಣ ಚ ಸಮಾಯುಕ್ತೌ ಮೋದಮಾನೌ ಮಹೋದಯೌ ॥ ೫೬ ॥**

---

೫೨. ಮೊಮ್ಮಕ್ಕಳ ಪ್ರಾಪ್ತಿಯ ಸುಖದಿಂದ ತಾನು ಸಂತೋಷಪಡುತ್ತಾ ಕುಬೇರನಂತೆ ಸ್ವತಂತ್ರದಿಂದ ಸರ್ವಸೌಖ್ಯವನ್ನೂ ಅನುಭವಿಸಿದನು.

೫೩. ಆದರೂ ಆ ಸೋಮಶರ್ಮನಿಗೆ ಇಪ್ಪತ್ತೈದುವರ್ಷದ ವಯಸ್ಸುಳ್ಳವನಷ್ಟು ದೇಹಶಕ್ತಿಯೂ ಶರೀರ ಸೌಷ್ಟವವೂ ಇತ್ತು.

೫೪. ಆ ಸುಮನಳೂ ಕೂಡ ಮಕ್ಕಳುಮೊಮ್ಮಕ್ಕಳುಗಳಿಂದ ಕೂಡಿ,ದಾನ ವ್ರತಗಳಿಂದ ಶೋಭಿಸಿದಳು.

೫೫-೫೬. ಆ ಸುವ್ರತೆಯು ಪಾತಿವ್ರತ್ಯಾದಿ ಗುಣಗಳಿಂದ ಹದಿನಾರುವರ್ಷದ ಹುಡುಗಿಯಂತೆ ತಾರುಣ್ಯದಿಂದ ಕೂಡಿ ಪ್ರಕಾಶಿಸಿದಳು. ಈ ರೀತಿ ಆ ದಂಪತಿಗಳು ಸಂತೋಷದಿಂದ ಇರುತ್ತಿದ್ದರು. ಇದು ಅವರ ಸಮಾಚಾರವು.

**ಏವಂ ತಯೋಸ್ತು ವೃತ್ತಾಂತಂ ಪುಣ್ಯಾಧಿಕಸಮನ್ವಿತಂ ।**
**ಸವ್ರತಸ್ಯ ಪ್ರವಕ್ಷ್ಯಾಮಿ ತಪಶ್ಚರ್ಯಾಂ ದ್ವಿಜೋತ್ತಮಾಃ ।**
**ಯಥಾ ತೇನ ಸಮಾರಾಧ್ಯ ನಾರಾಯಣಮನಾಮಯಂ ॥ ೫೭ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ಸುಮನೋಪಾಖ್ಯಾನೇ ಸುವ್ರತೋತ್ಪತ್ತಿರ್ನಾಮ ಏಕೋನವಿಂಶೋಽಧ್ಯಾಯಃ**

---

೫೭. ಇನ್ನು ಸುವ್ರತನು ತಪಸ್ಸುಮಾಡಿದ ಕ್ರಮವನ್ನೂ, ತನ್ನ ತಪಸ್ಸಿನಿಂದ ನಾಶರಹಿತನಾದ ಆ ದೇವದೇವನಾದ ನಾರಾಯಣನನ್ನು ಆರಾಧಿಸಿ ಹೇಗೆ ಸಂತೋಷ ಪಡಿಸಿದನೆಂಬುದನ್ನೂ ಹೇಳುವೆನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುವ್ರತೋತ್ಪತ್ತಿರ್ನಾಮ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
## ॥ ವಿಂಶೋಽಧ್ಯಾಯಃ ॥

---

॥ ಸೂತ ಉವಾಚ ॥

ಏಕದಾ ವ್ಯಾಸದೇವೋಽಸೌ ಬ್ರಹ್ಮಾಣಂ ಜಗತಃ ಪತಿಂ ।
ಸುವ್ರತಾಖ್ಯಾನಕಂ ಸರ್ವಂ ಪ್ರಪಚ್ಛಾತೀವವಿಸ್ಮಿತಃ ॥ ೧ ॥

॥ ವ್ಯಾಸ ಉವಾಚ ॥

ಲೋಕಾತ್ಮನ್ ಲೋಕವಿನ್ಯಾಸ ದೇವದೇವ ಮಹಾಪ್ರಭೋ ।
ಸುವ್ರತಸ್ಯಾಥ ಚರಿತಂ ಶ್ರೋತುಮಿಚ್ಛಾಮಿ ಸಾಂಪ್ರತಂ ॥ ೨ ॥

॥ ಬ್ರಹ್ಮೋವಾಚ ॥

ಪಾರಾಶರ್ಯ ಮಹಾಭಾಗ ಶ್ರೂಯತಾಂ ಪುಣ್ಯಸತ್ತಮ ।
ಸುವ್ರತಸ್ಯ ಸುವಿಪ್ರಸ್ಯ ತಪಶ್ಚರ್ಯಾಂ ವದಾಮಿ ತೇ ॥ ೩ ॥

ಸುವ್ರತೋ ನಾಮ ಮೇಧಾವೀ ಬಾಲ್ಯಾದ್ವಿಷ್ಣುಮಚಿಂತಯತ್ ।
ಗರ್ಭೇ ನಾರಾಯಣಂ ದೇವಂ ದೃಷ್ಟವಾನ್ ಪುರುಷೋತ್ತಮಂ ॥ ೪ ॥

---

### ಇಪ್ಪತ್ತನೆಯ ಅಧ್ಯಾಯವು

೧. ಸೂತನು ಹೇಳುತ್ತಾನೆ:—ಒಂದುಸಾರಿ ವ್ಯಾಸನು ಜಗತ್ಪತಿಯಾದ ಬ್ರಹ್ಮನನ್ನು ಸುವ್ರತಾಖ್ಯಾನವನ್ನು ಹೇಳೆಂದು ಕೇಳಿದನು.

೨. ವ್ಯಾಸನು ಹೇಳಿದನು:—ಎಲೈ ಲೋಕಾತ್ಮನೇ, ಸುವ್ರತನ ಚರಿತ್ರೆಯನ್ನು ಕೇಳಬೇಕೆಂದಿದ್ದೇನೆ, ಅದನ್ನು ದಯವಿಟ್ಟು ನನಗೆ ಹೇಳು ಎಂದನು.

೩-೪. ಬ್ರಹ್ಮನು ಹೇಳಿದನು:—ಎಲೈ ವ್ಯಾಸನೇ, ಆ ಸುವ್ರತನ ಚರಿತ್ರೆಯನ್ನು ಹೇಳುವೆನು ಕೇಳು—ಸುವ್ರತನೆಂಬ ಜಾಣನು ಗರ್ಭದಲ್ಲಿರುವಾಗಲೇ ಪುರುಷೋತ್ತಮನ ದರ್ಶನವನ್ನು ಮಾಡಿದನು.

ಪೂರ್ವಕರ್ಮಾನುಭಾವೇನ ಹರೇರ್ಧ್ಯಾನಂ ಗತಸ್ತದಾ ।
ಶಂಖಚಕ್ರಧರಂ ದೇವಂ ಪದ್ಮನಾಭಂ ಸುಪುಣ್ಯದಂ ॥ ೫ ॥

ಧ್ಯಾಯತೇ ಚಿಂತಯನ್ನೇವಂ ಗೀತೇ ಜ್ಞಾನೇ ಪ್ರಪಾಠನೇ ।
ಏವಂ ದೇವಂ ಹರಿಂ ಧ್ಯಾಯನ್ ಸದೈವ ದ್ವಿಜಸತ್ತಮಃ ॥ ೬ ॥

ಕ್ರೀಡತ್ಯೇವಂ ಸದಾ ಡಿಂಭೈಃ ಸಾರ್ಧಂ ವೈ ಬಾಲಕೋತ್ತಮಃ ।
ಬಾಲಕಾನಾಂ ಸ್ವಕಂ ನಾಮ ಹರೇಶ್ಚೈವ ಮಹಾತ್ಮನಃ ॥ ೭ ॥

ಚಕಾರಾಸೌ ಹಿ ಮೇಧಾವೀ ಪುಣ್ಯಾತ್ಮಾ ಪುಣ್ಯವತ್ಸಲಃ ।
ಸಮಾಹ್ವಯತಿ ವೈ ಮಿತ್ರಂ ಹರೇರ್ನಾಮ್ನಾ ಮಹಾಮುನಿಃ ॥ ೮ ॥

ಭೋ ಭೋಃ ಕೇಶವ ಏಹ್ಯೇಹಿ ಪಾಹಿ ಮಾಧವ ಚಕ್ರಭೃತ್ ।
ಕ್ರೀಡಸ್ವ ಚ ಮಯಾ ಸಾರ್ಧಂ ತ್ವಮೇವ ಪುರುಷೋತ್ತಮ ॥ ೯ ॥

ವನಮೇವ ಪ್ರಗಂತವ್ಯಮಾವಾಭ್ಯಾಂ ಮಧುಸೂದನ ।
ಏವಮೇವ ಸಮಾಹ್ವಾನಂ ನಾಮಭಿಶ್ಚ ಹರೇರ್ದ್ವಿಜಃ ॥ ೧೦ ॥

---

೫. ಪೂರ್ವ ಜನ್ಮದ ಪ್ರಭಾವದಿಂದ ಅವನಿಗೆ ಗರ್ಭದಲ್ಲಿರುವಾಗಲೇ ಶಂಖ ಚಕ್ರಗದಾಧಾರಿಯಾದ ಹರಿಯ ಸ್ಮರಣೆಯುಂಟಾಯಿತು.

೬. ಬಾಲಕನಾಗಿರುವಾಗಲೂ ಹರಿಯನ್ನೇ ಧ್ಯಾನಿಸುತ್ತಿದ್ದನು. ಈ ರೀತಿ ಧ್ಯಾನಿಸುತ್ತ, ಗೀತ, ಜ್ಞಾನ, ಪಾಠಗಳಲ್ಲೂ, ಸದಾಕಾಲದಲ್ಲೂ ಹರಿಯನ್ನೇ ಧ್ಯಾನಿಸುತ್ತಿದ್ದನು.

೭. ಹುಡುಗರೊಡನೆ ಆಟವಾಡುವಾಗ ಹುಡುಗರಿಗೂ, ತನಗೂ ಹರಿಯ ನಾಮವನ್ನೇ ಇಟ್ಟುಕೊಂಡು ಆಡುತ್ತಿದ್ದನು.

೮-೧೦. ಅವರನ್ನು ಕರೆಯುವಾಗಲೂ, ಮಿತ್ರರನ್ನು ಕೂಗುವಾಗಲೂ, ಹರಿಯ ಹೆಸರನ್ನಿಟ್ಟೇ ಕೂಗುತ್ತಿದ್ದನು. ಎಲೈ ಕೇಶವನೇ ಬಾ. ಮಾಧವನೇ ಕಾಪಾಡು. ಪುರುಷೋತ್ತಮನೇ ನನ್ನೊಡನೆ ಆಟವಾಡು. ಮಧುಸೂಧನನೇ ನಾವಿಬ್ಬರೂ ಕಾಡಿಗೆ ಹೋಗೋಣ. ಇದೇ ರೀತಿ ವಿಷ್ಣುವಿನ ಹೆಸರಿನಿಂದಲೇ ಎಲ್ಲರನ್ನೂ ಕರೆಯುತ್ತಿದ್ದನು.

ಕ್ರೀಡನೇ ಪಠನೇ ಹಾಸ್ಯೇ ಶಯನೇ ಗೀತಪ್ರೇಕ್ಷಣೇ ।
ಯಾನೇ ಚ ಹ್ಯಾಸನೇ ಧ್ಯಾನೇ ಮಂತ್ರೇ ಜ್ಞಾನೇ ಸುಕರ್ಮಸು ॥ ೧೧ ॥

ಪಶ್ಯತ್ಯೇವಂ ವದತ್ಯೇವಂ ಜಗನ್ನಾಥಂ ಜನಾರ್ದನಂ ।
ಸ ಧ್ಯಾಯತೇ ತಮೇಕಂ ಹಿ ವಿಶ್ವನಾಥಂ ಮಹೇಶ್ವರಂ ॥ ೧೨ ॥

ತೃಣೇ ಕಾಷ್ಠೇ ಚ ಪಾಷಾಣೇ ಶುಷ್ಕೇ ಸಾಂದ್ರೇ ಹಿ ಕೇಶವಂ ।
ಪಶ್ಯತ್ಯೇವಂ ಸ ಧರ್ಮಾತ್ಮಾ ಗೋವಿಂದಂ ಕಮಲೇಕ್ಷಣಂ ॥ ೧೩ ॥

ಆಕಾಶೇ ಭೂಮಿಮಧ್ಯೇ ತು ಪರ್ವತೇಷು ವನೇಷು ಚ ।
ಜಲೇ ಸ್ಥಲೇ ಚ ಪಾಷಾಣೇ ಜೀವೇಷು ಚ ಮಹಾಮತಿಃ ॥ ೧೪ ॥

ನೃಸಿಂಹಂ ಪಶ್ಯತೇ ವಿಪ್ರಃ ಸುವ್ರತಃ ಸುಮನಾಸುತಃ ।
ಬಾಲಕ್ರೀಡಾಂ ಸಮಾಸಾದ್ಯ ರಮತ್ಯೇವಂ ದಿನೇ ದಿನೇ ॥ ೧೫ ॥

ಗೀತೈಶ್ಚ ಗಾಯತೇ ಕೃಷ್ಣಂ ಸುರಾಗೈರ್ಮಧುರಾಕ್ಷರೈಃ ।
ತಾಲೈರ್ಲಯಸಮಾಯುಕ್ತೈಃ ಸುಸ್ವರೈರ್ಮೂರ್ಛನಾನ್ವಿತೈಃ ॥ ೧೬ ॥

---

೧೧-೧೨. ಆಟ, ಓದು, ಹಾಸ್ಯ, ಹಾಸಿಗೆ, ಗೀತ, ನೋಟ, ನಡಿಗೆ, ಆಸನ ಎಲ್ಲದರಲ್ಲೂ ಹರಿಯನ್ನೇ ನೋಡುವನು. ಅವನೊಡನೆ ಮಾತಾಡುವನು. ಈ ರೀತಿ ಯಾವಾಗಲೂ ಆ ಸ್ವಾಮಿಯನ್ನೇ ಧ್ಯಾನಮಾಡುವನು.

೧೩. ಹುಲ್ಲು, ಮರ, ಕಲ್ಲು, ಒಣಗಿದ್ದು, ಹಸಿಯದು ಎಲ್ಲದರಲ್ಲೂ ಕೇಶವನ ಹೊರತು ಮತ್ತೇನನ್ನೂ ಅವನು ನೋಡುತ್ತಿರಲಿಲ್ಲ.

೧೪-೧೫. ಆಕಾಶ, ಭೂಮಿ, ಪರ್ವತ, ವನ, ನೀರು, ಕಲ್ಲು, ಜೀವ ಇವುಗಳಲ್ಲಿ ನೃಸಿಂಹನನ್ನೇ ನೋಡುವನು. ಬಾಲಕ್ರೀಡೆಯಲ್ಲೂ ದಿನ ದಿನವೂ ಹೀಗೆಯೇ ಆಡುವನು.

೧೬. ಒಳ್ಳೆಯರಾಗದಿಂದಲೂ, ಮಧುರಾಕ್ಷರದಿಂದಲೂ, ತಾಲಲಯಗಳಿಂದಲೂ ಮೂರ್ಛನಾದಿಗಳಿಂದಲೂ ಕೃಷ್ಣನನ್ನು ಕುರಿತು ಗಾನಮಾಡುವನು.

॥ ಸುವ್ರತ ಉವಾಚ ॥

ಧ್ಯಾಯಂತಿ ದೇವಾಸ್ಸತತಂ ಮುರಾರಿಂ
ಯಸ್ಯಾಂಗಮಧ್ಯೇ ಸಕಲಂ ನಿವಿಷ್ಟಂ ।
ಯೋಗೇಶ್ವರಂ ಪಾಪವಿನಾಶನಂ ಚ
ಭಜೇ ಶರಣ್ಯಂ ಮಧುಸೂದನಾಖ್ಯಂ॥ ॥ ೧೭ ॥

ಲೋಕೇಷು ಯೋಹಿ ಸಕಲೇಷು ವಿಬೋಧಿತೋಽಪಿ
ಯೋ ಲೋಕಗಶ್ಚ ಗುಣಿನೋ ನಿವಸಂತಿ ಯತ್ರ ।
ದೋಷೈರ್ವಿಹೀನಮಖಿಲೈಃ ಪರಮೇಶ್ವರಂ ತಂ
ಸಂಚಿಂತ್ಯ ಪಾದಯುಗಳಂ ಸತತಂ ನಮಾಮಿ ॥ ೧೮ ॥

ನಾರಾಯಣಂ ಗುಣನಿಧಾನಮನಂತವೀರ್ಯಂ
ವೇದಾಂತಶುದ್ಧಮತಯಃ ಪ್ರಪಠಂತಿ ನಿತ್ಯಂ ।
ಸಂಸಾರಸಾಗರಮಪಾರಮನಂತದುರ್ಗಂ
ಉತ್ತಾರಣಾರ್ಥಮಖಿಲಂ ಶರಣಂ ಪ್ರಪದ್ಯೇ ॥ ೧೯ ॥

ಯೋಗೀಂದ್ರಮಾನಸಸರೋವರರಾಜಹಂಸಂ
ಶುದ್ಧಂ ಪ್ರಭಾವಮಖಿಲಂ ಸತತಂ ಹಿ ಯಸ್ಯ ।

---

೧೭. ಸುವ್ರತನು ಸ್ತೋತ್ರಮಾಡುತ್ತಾನೆ:—ಯಾವನ ದೇಹದಲ್ಲಿ ಎಲ್ಲಾ ಲೋಕಗಳೂ ಅಡಗಿವೆಯೋ ಯಾವನನ್ನು ದೇವತೆಗಳೂ ಧ್ಯಾನಮಾಡುತ್ತಾರೆಯೋ ಅಂತಹ ಪಾಪವಿಮೋಚಕನಾದ ಸ್ವಾಮಿಯನ್ನು ಭಜಿಸುತ್ತೇನೆ.

೧೮. ಎಲ್ಲಾ ಲೋಕಗಳನ್ನೂ ಯಾವನು ಎಚ್ಚರದಿಂದ ನೋಡುತ್ತಾನೋ, ತಾನೂ ಲೋಕದಲ್ಲಿದ್ದಾನೋ, ಗುಣಿಗಳು ಯಾವನ ಆಶ್ರಯದಿಂದ ವಾಸಿಸುತ್ತಾರೋ ಅಂತಹ ದೋಷರಹಿತನಾದ ಪರಮೇಶ್ವರನ ಪಾದಯುಗಳಗಳನ್ನು ನಮಿಸುತ್ತೇನೆ.

೧೯. ವೇದಾಂತದಿಂದ ಶುದ್ಧವಾದ ಬುದ್ಧಿಯುಳ್ಳವರು ಯಾವ ನಾರಾಯಣನನ್ನು, ಸಂಸಾರವೆಂಬ ಸಮುದ್ರವನ್ನು ದಾಟಲು ಪಠಿಸುತ್ತಿರುತ್ತಾರೋ ಅಂಥಹ ವಿಷ್ಣುವನ್ನು ಶರಣುಹೊಂದುತ್ತೇನೆ.

ತಸ್ಯೈವ ಪಾದಯುಗಳಂ ಹ್ಯಮಲಂ ನಮಾಮಿ
ದೀನಸ್ಯ ಮೇಽಶುಭಭಯಾತ್ಕುರು ದೇವ ರಕ್ಷಾಂ ॥ ೨೦ ॥

ಲೋಕಸ್ಯ ಪಾಲನಕೃತೇ ಪರಿಣೀತಧರ್ಮಂ
ಸತ್ವಾನ್ವಿತಂ ಸಕಲಲೋಕಗುರುಂ ಸುರೇಶಂ ।
ಗಾಯಾಮ್ಯಹಂ ಸುರಸಗೀತಕತಾಳಮಾನೈಃ
ಶ್ರೀವತ್ಸಮೇಕಮಖಿಲಂ ಭುವನಸ್ಯದೇವಂ ॥ ೨೧ ॥

ಧ್ಯಾಯೇಽಖಿಲಸ್ಯ ಭುವನಸ್ಯ ಪತಿಂ ಚ ದೇವಂ
ದುಃಖಾಂಧಕಾರದಳನಾರ್ಥಮಿಹೈವ ಚಂದ್ರಂ ।
ಅಜ್ಞಾನನಾಶಕಮಲಂ ಚ ನಿದೇಶತುಲ್ಯ
ಮಾನಂದಕಂದಮಖಿಲಂ ಮಹಿಮಾಸಮೇತಂ ॥ ೨೨ ॥
ಸಂಪೂರ್ಣಮೇವಮಮೃತಸ್ಯ ಕಲಾನಿಧಾನಂ
ತಂ ಗೀತಕೌಶಲಮನನ್ಯರಸೈಃ ಪ್ರಗಾಯೇ ।

ಯುಕ್ತಂ ಸುಯೋಗಕರಣೈಃ ಪರಮಾರ್ಥದೃಷ್ಟಿಂ
ವಿಶ್ವಂ ಸ ಪಶ್ಯತಿ ಚರಾಚರಮೇಕಮಿತ್ಥಂ ॥ ೨೩ ॥
ಪಶ್ಯಂತಿ ನೈವ ಯಮಿಹಾಥ ಸುಪಾಪಲೋಕಾ
ಸ್ತಂ ಕೇಶವಂ ಶರಣಮೇಕಮುಪೈಮಿ ನಿತ್ಯಂ ।

---

೨೦. ಯೋಗೀಂದ್ರರ ಮನಸ್ಸಿನಲ್ಲಿ ಸಂಚರಿಸುವ, ಶುದ್ಧನಾದ, ವಿಶೇಷ ಮಹಿಮನಾದ ಸ್ವಾಮಿಯ ಪಾದಯುಗಳಗಳನ್ನು ನಮಿಸುತ್ತೇನೆ. ದೀನನಾದ ನನ್ನನ್ನು ಕೆಟ್ಟುದದರಿಂದ ರಕ್ಷಿಸು.

೨೧. ಲೋಕಪಾಲನಕ್ಕೋಸ್ಕರ ಧರ್ಮವನ್ನು ಹೊಂದಿರುವ ಸಕಲಲೋಕ ಗುರುವಾದ ದೇವನನ್ನು ತಾಳಮೊದಲಾದವುಗಳಿಂದ ಗಾನಮಾಡುತ್ತೇನೆ.

೨೨. ಎಲ್ಲಾ ಲೋಕಕ್ಕೂ ಒಡೆಯನಾದ ಸ್ವಾಮಿಯನ್ನು ಅಜ್ಞಾನನಾಶಕ್ಕೋಸ್ಕರ ಧ್ಯಾನಿಸುತ್ತೇನೆ.

೨೩. ಸಂಪೂರ್ಣನಾದ, ಅಮೃತಕಲಾನಿಧಾನನಾದ, ಗೀತಕೌಶಲನಾದ, ಸ್ವಾಮಿಯನ್ನು ಗಾನಮಾಡುತ್ತೇನೆ. ಯೋಗಕರಣಗಳಿಂದ ಕೂಡಿದ ವಿಶ್ವವನ್ನು ನೋಡುತ್ತಿರುವ ಸ್ವಾಮಿಯನ್ನು ಗಾನಮಾಡುತ್ತೇನೆ. ಪಾಪಿಗಳು ಯಾವನನ್ನು ನೋಡುವುದಿಲ್ಲವೋ ಅಂತಹ ಕೇಶವನು ನನಗೆ ರಕ್ಷಕನಾಗಲಿ.

ಕರಾಭ್ಯಾಂ ವಾದ್ಯಮಾನಸ್ತು ತಾಲಂ ತಾಲಸಮನ್ವಿತಂ ।
ಗೀತೇನ ಗಾಯತೇ ಕೃಷ್ಣಂ ಬಾಲಕೈಸ್ಸಹ ಮೋದತೇ ॥ ೨೪ ॥

ಏವಂ ತು ಕ್ರೀಡತೇ ನಿತ್ಯಂ ಬಾಲಭಾವೇನ ವೈ ತದಾ ।
ಸುವ್ರತಃ ಸುಮನಾಪುತ್ರೋ ವಿಷ್ಣುಧ್ಯಾನಪರಾಯಣಃ ॥ ೨೫ ॥

ಕ್ರೀಡಮಾನಂ ಪ್ರಾಹ ಮಾತಾ ಸುವ್ರತಂ ಚಾರುಲಕ್ಷಣಂ ।
ಭೋಜನಂ ಕುರು ಮೇ ವತ್ಸ ಕ್ಷುಧಾ ತ್ವಾಂ ಪರಿಪೀಡಯೇತ್ ॥ ೨೬ ॥

ತಾಮುವಾಚ ತದಾ ಪ್ರಾಜ್ಞಃ ಸುಮನಾಂ ಮಾತರಂ ಪುನಃ ।
ಮಹಾಮೃತೇನ ತೃಪ್ತೋಽಸ್ಮಿ ಹರಿಧ್ಯಾನರಸೇನ ವೈ
ಭೋಜನಾಸನಮಾರೂಢೋ ಮಿಷ್ಟಮನ್ನಂ ಪ್ರಪಶ್ಯತಿ । ॥ ೨೭ ॥

ಇದಮನ್ನಂ ಸ್ವಯಂ ವಿಷ್ಣುರಾತ್ಮಾ ಹ್ಯನ್ನಂ ಸಮಾಶ್ರಿತಃ ।
ಆತ್ಮರೂಪೇಣ ಯೋ ವಿಷ್ಣುಶ್ಚಾನ್ನೇನಾನೇನ ತೃಪ್ಯತಿ ॥ ೨೮ ॥

ಕ್ಷೀರಸಾಗರಸಂವಾಸೋ ಯಸ್ಯೈವ ಪರಿಸಂಸ್ಥಿತಃ ।
ಜಲೇನಾನೇನ ಪುಣ್ಯೇನ ತೃಪ್ತಿಮಾಯಾತು ಕೇಶವಃ ॥ ೨೯ ॥

---

೨೪. ಎಂದು ಮುಂತಾಗಿ ತಾಳಕ್ಕೆ ಸರಿಯಾಗಿ ಚಪ್ಪಾಳೆಹಾಕುತ್ತ ಹುಡುಗರೊಡನೆ ಗಾನಮಾಡುವನು.

೨೫. ಹುಡುಗತನದಲ್ಲಿ ಈ ಸುವ್ರತನು ವಿಷ್ಣುಧ್ಯಾನದಲ್ಲಿ ಆಸಕ್ತನಾಗಿ ಹೀಗೆ ಧ್ಯಾನಿಸುತ್ತಿದ್ದನು.

೨೬. ಆಟವಾಡುತ್ತಿರುವ ಇವನನ್ನು ಅವಳ ತಾಯಿಯು ಮಗುವೇ, ಊಟ ಮಾಡು. ಹಸಿವಾದೀತು ಎನ್ನುವಳು.

೨೭. ತಾಯಿಯನ್ನು ಕುರಿತು ಅವನು, ಅಮ್ಮಾ ನಾನು ಮಹಾಅಮೃತದಿಂದ ತೃಪ್ತನಾಗಿದ್ದೇನೆ. ಮಣೆಯ ಮೇಲೆ ಕುಳಿತು ಮೃಷ್ಟಾನ್ನವನ್ನು ಊಟ ಮಾಡುತ್ತಿದ್ದೇನೆ, ಎನ್ನುವನು.

೨೮-೩೦. ಈ ಅನ್ನವು ವಿಷ್ಣುರೂಪವಾದುದು. ಆತ್ಮನು ಅನ್ನವನ್ನು ಆಶ್ರಯಿಸಿದ್ದಾನೆ. ಆತ್ಮರೂಪನಾದ ವಿಷ್ಣುವು ಈ ಅನ್ನದಿಂದ ತೃಪ್ತನಾಗಲಿ.

ತಾಂಬೂಲಚಂದನೈರ್ಗಂಧೈಃ ಏಭಿಃ ಪುಷ್ಪೈರ್ಮನೋಹರೈಃ ।
ಆತ್ಮರೂಪೇಣ ಗೋವಿಂದಃ ತೃಪ್ತಿಮಾಯಾತು ಕೇಶವಃ ॥ ೩೦ ॥

ಶಯನಂ ಯಾತಿ ಧರ್ಮಾತ್ಮಾ ತದಾ ಕೃಷ್ಣಂ ಪ್ರಚಿಂತಯೇತ್ ।
ಯೋಗನಿದ್ರಾಯುತಂ ಕೃಷ್ಣಂ ತಮಹಂ ಶರಣಂ ಗತಃ ॥ ೩೧ ॥

ಭೋಜನಾಚ್ಛಾದನೇಷ್ವೇವಮಾಸನೇ ಶಯನೇ ದ್ವಿಜಃ ।
ಚಿಂತಯೇದ್ವಾಸುದೇವಂ ತಂ ತಸ್ಮೈ ಸರ್ವಂ ಪ್ರಕಲ್ಪಯೇತ್ ॥ ೩೨ ॥

ತಾರುಣ್ಯಂ ಪ್ರಾಪ್ಯ ಧರ್ಮಾತ್ಮಾ ಕಾಮಭೋಗಾನ್ ವಿಹಾಯ ವೈ ।
ಸಂಯುಕ್ತಃ ಕೇಶವಧ್ಯಾನೇ ವೈಢೂರ್ಯೇ ಪರ್ವತೋತ್ತಮೇ ॥ ೩೩ ॥

ಯತ್ರ ಸಿದ್ಧೇಶ್ವರಂ ಲಿಂಗಂ ವೈಷ್ಣವಂ ಪಾಪನಾಶನಂ ।
ರುದ್ರಮೋಂಕಾರಸಂಜ್ಞಂ ಚ ಧ್ಯಾತ್ವಾ ಚೈವಂ ಮಹೇಶ್ವರಂ ॥ ೩೪ ॥

ಬ್ರಹ್ಮಾಣಂ ವಿದ್ಧಿ ತಂ ದೇವಂ ನರ್ಮದಾದಕ್ಷಿಣೇ ತಟೇ ।
ಸಿದ್ಧೇಶ್ವರಂ ಸಮಾಶ್ರಿತ್ಯ ತಪೋಭಾವಂ ವ್ಯಚಿಂತಯತ್ ॥ ೩೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ಸುಮನೋಪಾಖ್ಯಾನೇ ವಿಂಶೋಽಧ್ಯಾಯಃ

---

ಯಾವನು ಕ್ಷೀರಸಾಗರದಲ್ಲಿರುತ್ತಾನೋ, ಅವನು ಈ ನೀರಿನಿಂದ ತೃಪ್ತನಾಗಲಿ. ತಾಂಬೂಲ, ಗಂಧ, ಪುಷ್ಪ, ಇವುಗಳಿಂದ ಆತ್ಮರೂಪದಿಂದಿರುವ ಗೋವಿಂದನು ತೃಪ್ತನಾಗಲಿ ಎನ್ನುವನು.

೩೧. ಮಲಗುವಾಗಲೂ ಕೃಷ್ಣನನ್ನು ಚಿಂತಿಸುವನು. ಯೋಗನಿದ್ರೆಹೊಂದಿರುವ ಅವನನ್ನೇ ಯೋಚಿಸುವನು.

೩೨. ಊಟ, ಹೊದ್ದಿಕೆ, ಆಸನ, ಶಯನಗಳಲ್ಲಿಯೂ ವಾಸುದೇವನನ್ನೇ ಚಿಂತಿಸುತ್ತ ಅವನಿಗೆ ಎಲ್ಲವನ್ನೂ ಅರ್ಪಿಸುವನು.

೩೩-೩೫. ಪ್ರಾಯಬರುತ್ತಲೂ ಆ ಸುವ್ರತನು ಕಾಮಭೋಗಗಳನ್ನು ಬಿಟ್ಟು ವಿಷ್ಣುವನ್ನೇ ಧ್ಯಾನಮಾಡುತ್ತ ವೈಢೂರ್ಯಪರ್ವತದಲ್ಲಿ ನರ್ಮದಾನದಿಯ ದಕ್ಷಿಣ ತೀರದಲ್ಲಿರುವ ಸಿದ್ಧೇಶ್ವರಲಿಂಗವಾದ ಓಂಕಾರಲಿಂಗವನ್ನು ಧ್ಯಾನಿಸುತ್ತಾ ಅದನ್ನು ಆಶ್ರಯಿಸಿಕೊಂಡು ತಪಸ್ಸನ್ನು ಮಾಡಲು ಪ್ರಾರಂಭಿಸಿದನು.

ಇಲ್ಲಗೆ ಪದ್ಮಮಹಾಪುರಾಣದ ಭೂಮಿಖಂಡದ ಸುಮನೋಪಾಖ್ಯಾನದಲ್ಲಿ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
## ಏಕವಿಂಶೋಽಧ್ಯಾಯಃ

---

॥ ವ್ಯಾಸ ಉವಾಚ ॥

**ಪ್ರಶ್ನಮೇಕಂ ಮಹಾಭಾಗ ಕರಿಷ್ಯೇ ಸಾಂಪ್ರತಂ ವದ ।**
**ತ್ವಯೈವ ಪೂರ್ವಮುಕ್ತಂ ತು ಸುವ್ರತಂ ಚ ಪ್ರತೀಶ್ವರಂ ॥ ೧ ॥**

**ಪೂರ್ವಾಭ್ಯಾಸೇನ ಸ ಧ್ಯಾಯೇ ನಾರಾಯಣಮನಾಮಯಂ ।**
**ತಸ್ಯಾಂ ಜಾತೌ ಸಮುತ್ಪನ್ನಃ ಸುವ್ರತಃ ಪೂರ್ವಜನ್ಮನಿ ॥ ೨ ॥**

**ತನ್ಮೇ ತ್ವಂ ಸಾಂಪ್ರತಂ ಬ್ರೂಹಿ ಕಥಮಾರಾಧಿತೋ ಹರಿಃ ।**
**ಅನೇನಾಪಿ ಸುದೇಹೇನ ಕೋಽಯಂ ಪುಣ್ಯಸಮನ್ವಿತಃ ॥ ೩ ॥**

॥ ಬ್ರಹ್ಮೋವಾಚ ॥

**ವೈದಿಶೇ ನಗರೇ ಪುಣ್ಯೇ ಬಹುವೃದ್ಧಿಸಮಾಕುಲೇ ।**
**ತತ್ರ ರಾಜಾ ಮಹಾತೇಜಾ ಋತಧ್ವಜಸುತೋ ಬಲೀ ॥ ೪ ॥**

---

### ಇಪ್ಪತ್ತೊಂದನೆಯ ಅಧ್ಯಾಯವು.

೧-೩. ವ್ಯಾಸನು ಹೇಳುತ್ತಾನೆ:—ಎಲೈ ಮಹಾನುಭಾವನೇ, ಒಂದು ಪ್ರಶ್ನೆಯನ್ನು ಮಾಡಬೇಕೆಂದಿದ್ದೇನೆ. ಸುವ್ರತನ ವಿಷಯವನ್ನು ಕುರಿತು ಮೊದಲೇ ಹೇಳಿದ್ದೀಯೆ. ಅವನು ಪೂರ್ವಾಭ್ಯಾಸದಿಂದ ನಾರಾಯಣನನ್ನು ಧ್ಯಾನಿಸುತ್ತಲಿದ್ದನು ಅಷ್ಟೇ. ಅವನು ಪೂರ್ವಜನ್ಮದಲ್ಲಿ ಯಾವ ಜಾತಿಯಲ್ಲಿ ಹುಟ್ಟಿದ್ದನು? ಅವನು ಹೇಗೆ ಹರಿಯನ್ನು ಆರಾಧಿಸಿದನು? ಈ ಸುದೇಹದಿಂದಲೇ ಪುಣ್ಯಸಂಚಯ ಮಾಡಿದ ಈತನಾರು? ಅದನ್ನು ನನಗೆ ಹೇಳು ಎಂದನು.

೪. ಬ್ರಹ್ಮನು ಹೇಳಿದನು:—ಬಹುಸಮೃದ್ಧಿಯಾದ ವಿದಿಶವೆಂಬ ನಗರದಲ್ಲಿ ಬಹುಬುದ್ಧಿವಂತನಾದ ಋತಧ್ವಜನೆಂಬ ರಾಜನಿದ್ದನು.

**ತಸ್ಯಾತ್ಮಜೋ ಮಹಾಪುಣ್ಯೋ ರುಕ್ಮಭೂಷಣಸಂಜ್ಞಕಃ ।**
**ಸಂಧ್ಯಾಬಲೀ ತಸ್ಯ ಭಾರ್ಯಾ ಧರ್ಮಪತ್ನೀ ಯಶಸ್ವಿನೀ ॥ ೫ ॥**

**ತಸ್ಯಾಂ ಪುತ್ರಂ ಸಮುತ್ಪಾದ್ಯ ಸ ಆತ್ಮಸದೃಶಂ ಬಲೀ ।**
**ತಸ್ಯ ಧರ್ಮಾಂಗದಂ ನಾಮ ಚಕಾರ ನೃಪನಂದನಃ ॥ ೬ ॥**

**ಸರ್ವಲಕ್ಷಣಸಂಪನ್ನಃ ಪಿತೃಭಕ್ತಿಪರಾಯಣಃ ।**
**ರುಕ್ಮಾಂಗದಸ್ಯ ತನಯೋ ಯೋಽಯಂ ಭಗವತಾಂ ವರಃ ॥ ೭ ॥**

**ಪಿತುಃ ಸೌಖ್ಯಾರ್ಥಮೇವಾಪಿ ಮೋಹಿನ್ಯರ್ಥಂ ಶಿರೋ ದದೌ ।**
**ವೈಷ್ಣವೇನ ಚ ಧರ್ಮೇಣ ಪಿತೃಭಕ್ತ್ಯಾ ತು ತಸ್ಯ ವೈ ॥ ೮ ॥**

**ಸುಪ್ರಸನ್ನೋ ಹೃಷೀಕೇಶಃ ಸಕಾಯೋ ವೈಷ್ಣವಂ ಪದಂ ।**
**ನೀತಶ್ಚೈವ ತು ಧರ್ಮಜ್ಞೋ ವೈಷ್ಣವಃ ಸಾತ್ವತಾಂ ವರಃ ॥ ೯ ॥**

**ಧರ್ಮಾಂಗದೋ ಮಹಾಪ್ರಾಜ್ಞಃ ಪ್ರಜ್ಞಾಜ್ಞಾನವಿಶಾರದಃ ।**
**ತತ್ರಸ್ಥೋ ವೈ ಮಹಾಪ್ರಾಜ್ಞೋ ಧರ್ಮೋಽಸೌ ಧರ್ಮಭೂಷಣಃ ॥೧೦॥**

---

೫. ಅವನ ಮಗ ರುಕ್ಮಭೂಷಣನೆಂಬುವನು. ಆತನಿಗೆ ಸಂಧ್ಯಾವಲೀ ಎಂಬ ಧರ್ಮಪತ್ನಿ ಇದ್ದಳು.

೬-೭. ಆಕೆಯಲ್ಲಿ ತನಗೆ ಯೋಗ್ಯವಾದ ಒಂದು ಮಗುವು ಹುಟ್ಟಿತು. ಆದಕ್ಕೆ ಧರ್ಮಾಂಗದನೆಂಬ ಹೆಸರಿಟ್ಟನು. ಅವನು ಸರ್ವಲಕ್ಷಣಸಂಪನ್ನನಾಗಿಯೂ ಪಿತೃಭಕ್ತಿಪರಾಯಣನಾಗಿಯೂ ಇದ್ದನು. ಅಲ್ಲದೆ ಅವನು ಮಹಾಭಾಗವತಶ್ರೇಷ್ಠ ನಾಗಿದ್ದನು.

೮-೯. ಆ ಧರ್ಮಾಂಗದನು ಪಿತೃಭಕ್ತಿಯಿಂದ ಮೋಹಿನಿಗೋಸ್ಕರ ತನ್ನ ತಲೆಯನ್ನೇ ಕೊಟ್ಟನು. ಅಲ್ಲದೆ ವಿಷ್ಣುಭಕ್ತಿಯ ಪ್ರಭಾವದಿಂದ ಸಶರೀರವಾಗಿ ವೈಷ್ಣವಲೋಕವನ್ನು ಹೊಂದಿದನು.

೧೦. ಮತ್ತು ಆ ಧರ್ಮಾಂಗದನು ಜ್ಞಾನಿಯಾಗಿ ಇಹದಲ್ಲಿಯೂ, ಸ್ವರ್ಗ ವಲ್ಲಿಯೂ ಇಷ್ಟವಾದ ಭೋಗಗಳನ್ನೆಲ್ಲಾ ಅನುಭವಿಸಿದನು.

ದಿವ್ಯಾನ್ ಮನೋಽನುಗಾನ್ ಭೋಗಾನ್ ಮೋದಮಾನಃ ಪ್ರಭುಂಜತಿ ।
ಪೂರ್ಣೇ ವರ್ಷಸಹಸ್ರಾಂತೇ ಧರ್ಮಾತ್ಮಾ ಧರ್ಮಭೂಷಣಃ ॥ ೧೧ ॥

ತಸ್ಮಾತ್ಪದಾತ್ಪರಿಭ್ರಷ್ಟೋ ವಿಷ್ಣೋರೇವ ಪ್ರಸಾದತಃ ।
ಸುವ್ರತೋ ನಾಮ ಮೇಧಾವೀ ಸುಮನಾನಂದವರ್ಧನಃ ॥ ೧೨ ॥

ಸೋಮಶರ್ಮಾಖ್ಯತನಯಃ ಶ್ರೇಷ್ಠೋ ಭಗವತಾಂ ವರಃ ।
ತಪಶ್ಚಕಾರ ಮೇಧಾವೀ ವಿಷ್ಣುಧ್ಯಾನಪರೋಽಭವತ್ ॥ ೧೩ ॥

ಕಾಮಕ್ರೋಧಾದಿಕಾನ್ ದೋಷಾನ್ಪರಿತ್ಯಜ್ಯ ದ್ವಿಜೋತ್ತಮಃ ।
ಸಂನಿಯಮ್ಯೇಂದ್ರಿಯಂ ವರ್ಗಂ ತಪಸ್ತೇಪೆ ಸ ನಿರ್ಜನೇ ॥ ೧೪ ॥

ವೈಢೂರ್ಯಪರ್ವತಶ್ರೇಷ್ಠೇ ಸಿದ್ಧೇಶ್ವರಸಮೀಪತಃ ।
ಏಕೀಕೃತ್ಯ ಮನಶ್ಚಾಯಂ ಸಂಯೋಜ್ಯ ವಿಷ್ಣುನಾ ಸಹ ॥ ೧೫ ॥

ಏವಂ ವರ್ಷಶತಂ ಸ್ಥಿತ್ವಾ ಧ್ಯಾನೇ ತಸ್ಯ ಮಹಾತ್ಮನಃ ।
ಸುಪ್ರಸನ್ನೋ ಜಗನ್ನಾಥಃ ಶಂಖಚಕ್ರಗದಾಧರಃ ॥ ೧೬ ॥

---

೧೧-೧೨. ಸಾವಿರ ವರ್ಷಗಳು ಪೂರ್ತಿಯಾಗಲು ಆ ಸ್ವರ್ಗದಿಂದ ಭ್ರಷ್ಟನಾಗಿ ಈ ಸುಮನೆಯಲ್ಲಿ ಸುವ್ರತನೆಂಬ ಹೆಸರಿನಿಂದ ಹುಟ್ಟಿದನು.

೧೩. ಸೋಮಶರ್ಮನಿಗೆ ಮಗನಾಗಿ ಹುಟ್ಟಿ ಭಾಗವತಶ್ರೇಷ್ಠನಾಗಿ ವಿಷ್ಣು ಧ್ಯಾನಪರನಾಗಿ ತಪಸ್ಸನ್ನು ಮಾಡಿದನು.

೧೪. ಆತನು ಕಾಮಕ್ರೋಧಾದಿಗಳನ್ನು ಬಿಟ್ಟು ನಿರ್ಜನವಾದ ಜಾಗದಲ್ಲಿ ತಪಸ್ಸುಮಾಡಿದನು.

೧೫. ವೈಡೂರ್ಯ ಪರ್ವತದಲ್ಲಿ ಸಿದ್ಧೇಶ್ವರನ ಹತ್ತಿರ ಕುಳಿತು ಮನಸ್ಸನ್ನು ದೃಢಮಾಡಿ ಶಿವವಿಷ್ಣುಗಳಲ್ಲಿ ಐಕ್ಯವನ್ನು ಭಾವಿಸಿ ತಪಸ್ಸನ್ನು ಮಾಡಿದನು.

೧೬. ಹೀಗೆ ನೂರು ವರ್ಷಗಳವರಿವಿಗೆ ಧ್ಯಾನದಲ್ಲಿದ್ದು ತಪಸ್ಸುಮಾಡಲು ಶಂಖಚಕ್ರಗದಾಧಾರನಾದ ಜಗನ್ನಾಥನು ಲಕ್ಷ್ಮಿಯೊಡನೆ ಬಂದು ಅವನಿಗೆ ಪ್ರತ್ಯಕ್ಷ ನಾಗಿ ವರವನ್ನು ಕೊಟ್ಟನು.

ತಸ್ಮೈ ವರಂ ದದೌ ಚಾಥ ಲಕ್ಷ್ಮ್ಯಾ ಚ ಸಹ ಕೇಶವಃ ।
ಭೋ ಭೋಃ ಸುವ್ರತ ಧರ್ಮಾತ್ಮನ್ ಬುಧ್ಯಸ್ವ ವಿಬುಧಾಧಿಪ ॥ ೧೭ ॥

ವರಂ ವರಯ ಭದ್ರಂ ತೇ ಕೃಷ್ಣೋಽಹಂ ತೇ ಸಮಾಗತಃ ।
ಏವಮಾಕರ್ಣ್ಯ ಮೇಧಾವೀ ವಿಷ್ಣೋರ್ವಾಕ್ಯಮನುತ್ತಮಂ ॥ ೧೮ ॥

ಹರ್ಷೇಣ ಮಹತಾವಿಷ್ಟೋ ದೃಷ್ಟ್ವಾ ದೇವಂ ಜನಾರ್ದನಂ ।
ಬದ್ಧಾಂಜಲಿಪುಟೋ ಭೂತ್ವಾ ಪ್ರಣಾಮಮಕರೋತ್ತದಾ ॥ ೧೯ ॥

॥ ಸುವ್ರತ ಉವಾಚ ॥

ಸಂಸಾರಸಾಗರಮತೀವ ಗಭೀರಪಾರಂ
ದುಃಖೋರ್ಮಿಭಿರ್ವಿವಿಧಮೋಹಮಯೈಸ್ತರಂಗೈಃ ।
ಸಂಪೂರ್ಣಮಸ್ತಿ ನಿಜದೋಷಗುಣೈಸ್ತು ಪ್ರಾಪ್ತಂ
ತಸ್ಮಾತ್ಸಮುದ್ಧರ ಜನಾರ್ದನ ಮಾಂ ಸುದೀನಂ ॥ ೨೦ ॥

ಕರ್ಮಾಂಬುದೇ ಮಹತಿ ಗರ್ಜತಿ ವರ್ಷತೀವ
ವಿದ್ಯುಲ್ಲತೋಲ್ಲಸತಿ ಪಾತಕಸಂಚಯೈರ್ಮೇ ।
ಮೋಹಾಂಧಕಾರಪಟಲೈರ್ಮಮ ನಷ್ಟದೃಷ್ಟೇ
ರ್ದೀನಸ್ಯ ತಸ್ಯ ಮಧುಸೂದನ ದೇಹಿ ಹಸ್ತಂ ॥ ೨೧ ॥

---

೧೭. ಎಲೈ ಧರ್ಮಾತ್ಮನಾದ ಬ್ರಾಹ್ಮಣನೇ, ನಾನು ಕೃಷ್ಣನು. ನಿನಗೆ ಪ್ರತ್ಯಕ್ಷನಾಗಿ ಇಲ್ಲಿಗೆ ಬಂದಿದ್ದೇನೆ. ವರವನ್ನು ಕೇಳಿಕೋ ಕೊಡುತ್ತೇನೆ. ಎನ್ನಲು,

೧೮-೧೯. ಈ ರೀತಿಯಾದ ವಿಷ್ಣುವಿನ ಮಾತನ್ನು ಕೇಳಿ ಸ್ವಾಮಿಯನ್ನು ನೋಡಿ ಸಂತೋಷಪಟ್ಟು, ಕೈಮುಗಿದುಕೊಂಡು ನಮಸ್ಕಾರಮಾಡಿದನು.

೨೦. ಸುವ್ರತನು ಹೇಳುತ್ತಾನೆ:—ಸಂಸಾರವೆಂಬ ಸಾಗರವು ಅತ್ಯಂತ ಆಳವಾದುದು. ದುಃಖಗಳೆಂಬ ಅಲೆಗಳಿಂದಲೂ ಮೋಹಗಳಿಂದಲೂ ತುಂಬಿದೆ. ಇಂತಹ ಸಂಸಾರದಲ್ಲಿ ನನ್ನ ಸ್ವಭಾವವಾದ ದೋಷಗುಣಗಳಿಂದ ಮಗ್ನನಾಗಿರುವೆನು. ಆದರಿಂದ ನನ್ನನ್ನು ಉದ್ಧರಿಸು.

೨೧. ಕರ್ಮವೆಂಬ ಕಾರ್ಮುಗಿಲು ಗುಡುಗುತ್ತದೆ. ನೀರನ್ನೂ ಸುರಿಸುತ್ತದೆ. ನನ್ನ ಪಾಪಗಳೆಂಬ ಮಿಂಚುಗಳು ಹೊಳೆಯುತ್ತಿವೆ. ಮೋಹವೆಂಬ ಕತ್ತಲೆಯಿಂದ ನನಗೆ ಕಣ್ಣುಕಾಣಿಸುತ್ತಿಲ್ಲ. ಇಂತಹ ನನಗೆ ಅವಲಂಬನವನ್ನು ಕೊಡು.

ಸಂಸಾರಕಾನನವರಂ ಬಹುದುಃಖವೃಕ್ಷೈಃ
ಸಂಸೇವ್ಯಮಾನಮಪಿ ಮೋಹಮಯೈಶ್ಚ ಸಿಂಹೈಃ ।
ಸಂದೀಪ್ತಮಸ್ತಿ ಕರುಣಾಬಹುವಹ್ನಿತೇಜಃ
ಸಂದೀಪ್ಯಮಾನಮನಸಂ ಪರಿಪಾಹಿ ಕೃಷ್ಣ ॥ ೨೨ ॥

ಸಂಸಾರವೃಕ್ಷಮತಿಜೀರ್ಣಮಪೀಹ ಉಚ್ಚಂ
ಮಾಯಾಸುಕಂದಕರುಣಾಬಹುದುಃಖಶಾಖಂ ।
ಜಾಯಾದಿಸಂಘುಚ್ಛದನಂ ಫಲಿತಂ ಮುರಾರೇ
ತಂ ಚಾಧಿರೂಢಪತಿತಂ ಭಗವನ್ ಹಿ ರಕ್ಷ ॥ ೨೩ ॥

ದುಃಖಾನಲೈರ್ವಿವಿಧಮೋಹಮಯೈಃ ಸುಧೂಮ್ರೈಃ
ಶೋಕೈರ್ವಿಯೋಗಮರಣಾಂತಕಸಂನಿಭೈಶ್ಚ ।
ದಗ್ಧೋಽಸ್ಮಿ ಕೃಷ್ಣ ಸತತಂ ಮಮ ದೇಹಿ ಮೋಕ್ಷಂ
ಜ್ಞಾನಾಂಬುನಾಥ ಪರಿಷಿಚ್ಯ ಸದೈವ ಮಾಂತ್ವಂ ॥ ೨೪ ॥

ಮೋಹಾಂಧಕಾರಪಟಲೇ ಮಹತೀವ ಗರ್ತೇ
ಸಂಸಾರನಾಮ್ನಿ ಸತತಂ ಪತಿತಂ ಹಿ ಕೃಷ್ಣ ।

---

೨೨. ಸಂಸಾರವೆಂಬ ಕಾಡು, ದುಃಖವೃಕ್ಷಗಳಿಂದ ತುಂಬಿದೆ. ಅಲ್ಲಿ ಮೋಹವೆಂಬ ಸಿಂಹಗಳಿವೆ. ಅದರ ದಾವಾಗ್ನಿಯಿಂದ ಸುಡಲ್ಪಡುತ್ತಿರುವ ನನಗೆ ಹಸ್ತಾವಲಂಬನವನ್ನು ಕೊಡು.

೨೩. ಸಂಸಾರವೆಂಬ ಮರವು ಹಳೆಯದು. ಜೀರ್ಣವಾಗಿ ಹೋಗಿದೆ. ಮಾಯೆಯೆಂಬುದೇ ಅದಕ್ಕೆ ಮೂಲ. ದುಃಖವೆಂಬುದೇ ಆದರ ಕೊಂಬೆಗಳು. ಹೆಂಡತಿಮೊದಲಾದವರೇ ಎಲೆಗಳು, ಮತ್ತು ಫಲವು. ಇಂತಹ ಮರವನ್ನು ಹತ್ತಿ ಬಿದ್ದಿದ್ದೇನೆ. ನನ್ನನ್ನು ಕಾಪಾಡು.

೨೪. ದುಃಖವೆಂಬ ಬೆಂಕಿಯು, ಮೋಹವೆಂಬ ಹೊಗೆಯಿಂದ ಕೂಡಿಕೊಂಡು ನನ್ನನ್ನು ಸುಡುತ್ತಿದೆ. ಜ್ಞಾನವೆಂಬ ನೀರಿನಿಂದ ನನ್ನನ್ನು ತೋಯಿಸಿ ಮೋಕ್ಷವನ್ನು ಕೊಡು.

೨೫. ಮೋಹವೆಂಬ ಕತ್ತಲೆಯಿಂದ ಕೂಡಿರುವ ಸಂಸಾರವೆಂಬ ಹಳ್ಳದಲ್ಲಿ

ಕೃತ್ವಾ ತರೀಂ ಮಮ ಹಿ ದೀನಭಯಾತುರಸ್ಯ
ತಸ್ಮಾದ್ವಿಕೃಷ್ಯ ಶರಣಂ ನಯ ಮಾಮಿತಸ್ತ್ವಂ ॥ ೨೫ ॥

ತ್ವಾಮೇವ ಯೇ ನಿಯತಮಾನಸಭಾವಯುಕ್ತಾ
ಧ್ಯಾಯಂತ್ಯನನ್ಯಮನಸಾ ಪದವೀಂ ಲಭಂತೇ ।
ನತ್ವೈವ ಪಾದಯುಗಳಂ ಚ ಮಹತ್ಸು ಪುಣ್ಯಂ
ಯೇ ದೇವಕಿನ್ನರಗಣಾಃ ಪರಿಚಿಂತಯಂತಿ ॥ ೨೬ ॥

ನಾನ್ಯಂ ವದಾಮಿ ನ ಭಜಾಮಿ ನ ಚಿಂತಯಾಮಿ
ತ್ವತ್ಪಾದಪದ್ಮಯುಗಳಂ ಸತತಂ ನಮಾಮಿ ।
ಏವಂ ಹಿ ಮಾಮುಪಗತಂ ಶರಣಂ ಚ ರಕ್ಷ
ದೂರೇಣ ಯಾಂತು ಮಮ ಪಾತಕಸಂಚಯಾಸ್ತೇ ॥
ದಾಸೋಽಸ್ಮಿ ಭೃತ್ಯವದಹಂ ತವ ಜನ್ಮ ಜನ್ಮ
ತ್ವತ್ಪಾದಪದ್ಮಯುಗಳಂ ಸತತಂ ನಮಾಮಿ ॥ ೨೭ ॥

ಯದಿ ಕೃಷ್ಣ ಪ್ರಸನ್ನೋಽಸಿ ದೇಹಿ ಮೇ ವರಮುತ್ತಮಂ
ಮಮ ತೌ ಪಿತರೌ ಕೃಷ್ಣ ಸಕಾಯೌ ನಯ ಮಂದಿರೇ ।

---

ಬಿದ್ದಿದ್ದೇನೆ. ದೀನನೂ ಭಯಗ್ರಸ್ತನೂ ಆದ ನನಗೆ ನೀನು ತಾರಕನಾಗಿ ನನ್ನನ್ನು ಹೊರಕ್ಕೆ ತೆಗೆ.

೨೬. ಯಾರು ನಿನ್ನನ್ನು ನಿಯಮವಾಗಿ ಮನಸ್ಸಿಟ್ಟು ಧ್ಯಾನಿಸುತ್ತಾರೋ ಅವರು ಉತ್ತಮವಾದ ಸ್ಥಾನವನ್ನು ಹೊಂದುತ್ತಾರೆ: ನಿನ್ನ ಪಾದಯುಗಳವನ್ನು ಯಾರು ನಮಿಸುತ್ತಾರೋ ಅವರು ದೇವತೆಗಳೂ ಕಿನ್ನರರೂ ಆಗುತ್ತಾರೆ.

೨೭. ಅನ್ಯದೇವತೆಯನ್ನು ನಾನು ನಮಸ್ಕರಿಸುವುದಿಲ್ಲ, ಸೇವಿಸುವುದಿಲ್ಲ. ಯೋಚಿಸುವುದೂ ಇಲ್ಲ. ನಿನ್ನ ಪಾದಗಳನ್ನೇ ಯಾವಾಗಲೂ ನಮಿಸುತ್ತೇನೆ. ಇಂತಹ ನನ್ನನ್ನು ಕಾಪಾಡು. ನನ್ನ ಪಾಪಗಳು ದೂರವಾಗಿ ಹೋಗಲಿ. ನಾನು ನಿನ್ನ ದಾಸನಾಗಿದ್ದೇನೆ. ಜನ್ಮಜನ್ಮದಲ್ಲೂ ಭೃತ್ಯನಾಗಿದ್ದೇನೆ. ನಿನ್ನ ಪಾದಗಳನ್ನು ಯಾವಾಗಲೂ ವಂದಿಸುತ್ತೇನೆ.

೨೮. ನೀನು ನನಗೆ ಪ್ರಸನ್ನನಾಗಿ ವರಕೊಡುವುದಾದರೆ ನನ್ನ ತಾಯಿತಂದೆ

ಆತ್ಮನಶ್ಚ ಕಳತ್ರಂ ಚ ಮಯಾ ಸಹ ನ ಸಂಶಯಃ　　॥ ೨೮ ॥

ಶ್ರೀಕೃಷ್ಣ ಉವಾಚ

ಏವಂ ತೇ ಪರಮಃ ಕಾಮೋ ಭವಿಷ್ಯತಿ ನ ಸಂಶಯಃ ।
ತಸ್ಯ ತುಷ್ಟೋ ಹೃಷೀಕೇಶೋ ಭಕ್ತ್ಯಾ ತಸ್ಯ ಪ್ರತೋಷಿತಃ　　॥ ೨೯ ॥

ಪ್ರಯಾತೋ ವೈಷ್ಣವಂ ಲೋಕಂ ದಾಹಪ್ರಳಯವರ್ಜಿತಂ ।
ಸುವ್ರತೇನ ಸಮಂ ತೌ ದ್ವೌ ಸುಮನಾಸೋಮಶರ್ಮಕೌ　　॥ ೩೦ ॥

ಯಾವತ್ಕಲ್ಪದ್ವಯಂ ಪ್ರಾಪ್ತಂ ತಾವದ್ವೈ ಸುವ್ರತೋ ದ್ವಿಜಃ ।
ಬುಭುಜೇ ಪುಣ್ಯಜಾನ್ ಲೋಕಾನ್ ಭೋಗಾಂಶ್ಚೈವ ಮಹಾಮನಾಃ　　॥೩೧॥

ದೇವಕಾರ್ಯಾರ್ಥಮುತ್ಪೈವ ಕಶ್ಯಪಸ್ಯ ಗೃಹೇ ಪುನಃ ।
ಅವತೀರ್ಣೋ ಮಹಾಪ್ರಾಜ್ಞೋ ವಚನಾತ್ತಸ್ಯ ಶಾರ್ಙ್ಗಿಣಃ　　॥ ೩೨ ॥

ಐಂದ್ರಂ ಪದಂ ಹಿ ಯೋ ಭುಂಕ್ತೇ ವಿಷ್ಣೋಶ್ಚೈವ ಪ್ರಸಾದತಃ ।
ವಸುದತ್ತೇತಿ ವಿಖ್ಯಾತಃ ಸರ್ವದೇವೈರ್ನಮಸ್ಕೃತಃ　　॥ ೩೩ ॥

---

ಗಳನ್ನೂ ಪತ್ನಿಯನ್ನೂ, ನನ್ನನ್ನೂ ಈ ದೇಹದೊಡನೆ ಎಂದರೆ ಸಶರೀರವಾಗಿಯೇ ನಿನ್ನ ಪರಮಪದವಾದ ಸ್ಥಾನಕ್ಕೆ ಕರೆದುಕೊಂಡು ಹೋಗು ಎಂದು ಪ್ರಾರ್ಥಿಸಿದನು.

೨೯. ಶ್ರೀ ಕೃಷ್ಣನು ಹೇಳಿದನು :—ಅವನ ಭಕ್ತಿಯಿಂದ ಸಂತೋಷಗೊಂಡ ಕೃಷ್ಣನು ನಿನ್ನ ಇಷ್ಟದಂತೆಯೇ ಆಗಲೆಂದನು.

೩೦. ಸುವ್ರತನೊಡನೆ ಸುಮನೆ, ಸೋಮಶರ್ಮರೂ ದಾಹಪ್ರಳಯ ವಿನಾಶ ರಹಿತವಾದ ವೈಷ್ಣವಲೋಕವನ್ನು ಹೊಂದಿದರು.

೩೧. ಅಲ್ಲಿ ಕಲ್ಪದ್ವಯಗಳವರೆಗೂ ಸುವ್ರತನು ಪುಣ್ಯಭೋಗಗಳನ್ನು ಅನುಭವಿಸಿದನು.

೩೨. ವಿಷ್ಣುವಿನ ಅಪ್ಪಣೆಯಂತೆ ದೇವಕಾರ್ಯಕ್ಕೋಸ್ಕರ ಕಶ್ಯಪನ ಮನೆಯಲ್ಲಿ ಹುಟ್ಟಿದ್ದನು.

೩೩. ವಸುದತ್ತನೆಂದು ಹೆಸರಿನಿಂದ ಈಗ ಸ್ವರ್ಗದಲ್ಲಿರುವವನೇ ಆತನು. ದೇವತೆಗಳೆಲ್ಲರೂ ಆತನನ್ನು ನಮಸ್ಕರಿಸುವರು.

ಐಂದ್ರಂ ಪದಂ ಹಿ ಯೋ ಭುಂಕ್ತೇ ಸಾಂಪ್ರತಂ ವಾಸವೋ ದಿವಿ।
ಏತತ್ತೇ ಸರ್ವಮಾಖ್ಯಾತಂ ಸೃಷ್ಟಿಸಂಬಂಧಕಾರಣಂ ।
ಅನ್ಯಚ್ಚೈವ ಪ್ರವಕ್ಷ್ಯಾಮಿ ಯತ್ಪೃಚ್ಛಸಿ ಮಹಾಮತೇ ॥ ೩೪ ॥

॥ ವ್ಯಾಸ ಉವಾಚ ॥

ಧರ್ಮಾಂಗದೋ ಮಹಾಪ್ರಾಜ್ಞೋ ರುಕ್ಮಾಂಗದಸುತೋ ಬಲೀ ।
ಆದ್ಯೇ ಕೃತಯುಗೇ ಪ್ರಾಪ್ತೇ ಸೃಷ್ಟಿಕಾಲೇ ಸವಾಸವಃ ॥ ೩೫ ॥

ತತ್ಕಥಂ ದೇವದೇವೇಶ ಹ್ಯನ್ಯೋ ಧರ್ಮಾಂಗದೋ ಭುವಿ ।
ಅನ್ಯೋ ಧರ್ಮಾಂಗದೋ ರಾಜಾ ಕಿಂ ವಾಽಯಂ ತ್ರಿದಶಾಧಿಪಃ ।
ಏವಂ ಮೇ ಸಂಶಯಂ ಜಾತಂ ತದ್ಭವಾಂಶ್ಛೇತ್ತುಮರ್ಹತಿ ॥ ೩೬ ॥

॥ ಬ್ರಹ್ಮೋವಾಚ ॥

ಹಂತ ತೇ ಕೀರ್ತಯಿಷ್ಯಾಮಿ ಸರ್ವಸಂದೇಹನಾಶನಂ ।
ದೇವಸ್ಯ ಲೀಲಾಸೃಷ್ಟ್ಯರ್ಥಂ ವರ್ತತೇ ದ್ವಿಜಸತ್ತಮ ॥ ೩೭ ॥

ಯಥಾ ವಾರಾಶ್ಚ ಪಕ್ಷಾಶ್ಚ ಮಾಸಾಶ್ಚ ಋತವೋ ಯಥಾ ।
ಸಂವತ್ಸರಾಶ್ಚ ಮನವೋ ಯಥಾ ಯಾಂತಿ ಯುಗಾನಿ ಚ ॥ ೩೮ ॥

---

೩೪. ಇದೆಲ್ಲ ಸೃಷ್ಟಿಸಂಬಂಧಕಾರಣವು. ಇದನ್ನೆಲ್ಲಾ ಹೇಳಿರುವೆನು. ಮತ್ತೇನು ಬೇಕು ಕೇಳು, ಹೇಳುವೆನು.

೩೫-೩೬. ವ್ಯಾಸನು ಹೇಳುತ್ತಾನೆ:—ರುಕ್ಮಾಂಗದನ ಮಗನಾದ ಧರ್ಮಾಂಗದನು ಆದಿಯಾದ ಕೃತಯುಗದಲ್ಲಿ ಇಂದ್ರನಾದನು. ಈಗ ನೀನು ಹೇಳುವ ಧರ್ಮಾಂಗದನಾರು? ಅಥವಾ ಬೇರೆಯಾದ ಧರ್ಮಾಂಗದನು ದೇವತೆಗಳೊಡೆಯನೇ? ಈ ಸಂಶಯವನ್ನು ದೂರಮಾಡು. ಎನ್ನಲು,

೩೭. ಬ್ರಹ್ಮನು ಹೇಳುತ್ತಾನೆ:—ಅದನ್ನು ವಿವರವಾಗಿ ಹೇಳುತ್ತೇನೆ. ಕೇಳು. ದೇವರ ಲೀಲೆಯೇ ಸೃಷ್ಟಿಗೋಸ್ಕರವಿದೆ.

೩೮-೩೯. ವಾರ, ಪಕ್ಷ, ತಿಂಗಳು, ಋತುಗಳು, ಸಂವತ್ಸರಗಳು, ಮನುಗಳು, ಹೇಗೆ ಕಳೆಯುತ್ತವೋ ಅದೇ ರೀತಿ ಕಲ್ಪಗಳೂ ಕಳೆದು ಬರುತ್ತಲೇ ಇವೆ. ಚರಾ

ತಥಾ ಕಲ್ಪಾಸ್ಸಮಾಯಾಂತಿ ಪ್ರಜಾಮ್ಯೇವಂ ಜನಾರ್ದನಂ ।
ಅಹಮೇವ ಮಹಾಪ್ರಾಜ್ಞ ಮಯಿ ಯಾಂತಿ ಚರಾಚರಾಃ ॥ ೩೯ ॥

ಪುನಸ್ಸೃಜತಿ ಯೋಗಾತ್ಮಾ ಪೂರ್ವವದ್ವಿಶ್ವಮೇವ ಹಿ ।
ಪುನಶ್ಚಾಹಂ ಪುನರ್ದೇವಾಃ ಪುನಸ್ತೇ ದೇವತಾ ದ್ವಿಜಾಃ ॥ ೪೦ ॥

ತಥಾ ಭೂಪಾಶ್ಚ ತೇ ಸರ್ವೇ ಪ್ರಜಾಶ್ಚೈವ ತಥಾಖಿಲಾಃ ।
ಪ್ರಭವಂತಿ ಮಹಾಭಾಗ ವಿದ್ವಾಂಸ್ತತ್ರ ನ ಮುಹ್ಯತಿ ॥ ೪೧ ॥

ಪೂರ್ವಕಲ್ಪೇ ಮಹಾಭಾಗೋ ಯಥಾ ರುಕ್ಮಾಂಗದೋ ನೃಪಃ ।
ತಥಾ ಧರ್ಮಾಂಗದಶ್ಚಾಯಂ ಸಂಜಾತಃ ಖ್ಯಾತಿಮಾನ್ ದ್ವಿಜ ॥ ೪೨ ॥

ರಾಜಾದಯೋ ಮಹಾಪ್ರಾಜ್ಞ ಯಯಾತಿನಹುಷಾದಯಃ ।
ಮನ್ವಾದಯೋ ಮಹಾತ್ಮಾನಃ ಪ್ರಭವಂತಿ ಲಯಂತಿ ಚ ॥ ೪೩ ॥

ಐಂದ್ರಂ ಪದಂ ಪ್ರಭುಂಜಂತಿ ರಾಜಾನೋ ಧರ್ಮತತ್ಪರಾಃ ।
ಯಥಾ ಧರ್ಮಾಂಗದೋ ವೀರಃ ಪ್ರಭುನಕ್ತಿ ಮಹತ್ಪದಂ ॥ ೪೪ ॥

---

ಚರಗಳಂತೆ ನಾನೂ ಕೂಡ ಆ ಜನಾರ್ದನನನ್ನು ಕಲ್ಪಕಾಲಗಳಲ್ಲ ಹೊಂದುವೆನು. ಎಂದರೆ ಅವನಲ್ಲಿಯೇ ಸೇರಿಹೋಗುವೆನು.

೪೦. ಯೋಗಿಯಾದ ಆತನು ಮೊದಲಿನಂತೆ ನನ್ನನ್ನೂ ದೇವತೆಗಳನ್ನೂ, ಬ್ರಾಹ್ಮಣರನ್ನೂ ಪುನಃ ಸೃಷ್ಟಿಸುತ್ತಾನೆ.

೪೧. ರಾಜರೂ ಪ್ರಜೆಗಳೂ, ಅದರಂತೆಯೇ ಹುಟ್ಟುತ್ತಾರೆ. ಬುದ್ಧಿವಂತನಿಗೆ ಈ ವಿಚಾರದಲ್ಲಿ ಸಂದೇಹವುಂಟಾಗುವುದಿಲ್ಲ.

೪೨. ಪೂರ್ವಕಲ್ಪದಲ್ಲಿ ರುಕ್ಮಾಂಗದನಿಗೆ ದರ್ಮಾಂಗದನು ಹುಟ್ಟಿದಂತೆ ಈ ಕಲ್ಪದಲ್ಲಿಯೂ ಹುಟ್ಟಿದನು. ಇದರಲ್ಲೇನೂ ಸಂಶಯವಿಲ್ಲ.

೪೩. ರಾಮ, ಯಯಾತಿ, ನಹುಷನೇ ಮೊದಲಾದ ರಾಜರೂ, ಮನ್ವಾದಿಗಳೂ ಕೂಡ ಹೀಗೆಯೇ ಹುಟ್ಟುತ್ತಾರೆ. ಹೀಗೆಯೇ ನಾಶವಾಗುತ್ತಾರೆ.

೪೪. ಧರ್ಮಾಂಗದನು ಇಂದ್ರಪದವನ್ನು ಅನುಭವಿಸುವಂತೆಯೇ ಧರ್ಮಿಷ್ಠರಾದ ರಾಜರೂ ಕೂಡ ಇಂದ್ರಪದವಿಯನ್ನು ಅನುಭವಿಸುತ್ತಾರೆ.

ಏವಂ ದೇವಾಶ್ಚ ವೇದಾಶ್ಚ ಪುರಾಣಸ್ಮೃತಿಪೂರ್ವಕಾಃ ।
ಏತತ್ಸರ್ವಂ ಸಮಾಖ್ಯಾತಂ ತವಾಗ್ರೇ ದ್ವಿಜಸತ್ತಮ ।
ಚರಿತಂ ಸುವ್ರತಸ್ಯಾಥ ಪುಣ್ಯಂ ಸುಗತಿದಾಯಕಂ ॥ ೪೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ಸುವ್ರತೋ
ಪಾಖ್ಯಾನಂ ನಾಮ ಏಕವಿಂಶೋಽಧ್ಯಾಯಃ.



---

೪೫. ಇದೇ ರೀತಿ ದೇವತೆಗಳೂ, ವೇದಗಳೂ, ಪುರಾಣ, ಇತಿಹಾಸಗಳೂ ಕೂಡ ಪುನಃ ಪುನಃ ಸೃಷ್ಟಿಸಲ್ಪಡುವವು. ಇದೆಲ್ಲವನ್ನೂ ಹೇಳಿದ್ದೇನೆ. ಸುಗತಿಯನ್ನು ಕೊಡುವ ಸುವ್ರತನ ಚರಿತ್ರೆಯನ್ನೂ ಹೇಳಿದ್ದೇನೆ ಎಂದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುವ್ರತನ
ಉಪಾಖ್ಯಾನದಲ್ಲಿ ಇಪ್ಪತ್ತೊಂದನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ॥ ದ್ವಾ ವಿಂಶೋಽಧ್ಯಾಯಃ ॥

॥ ಋಷಯ ಊಚುಃ ॥

ವಿಚಿತ್ರೇಯಂ ಕಥಾ ಪುಣ್ಯಾ ಸರ್ವಧರ್ಮಪ್ರದಾಯಿನೀ ।
ಸರ್ವಪಾಪಹರಾ ಪ್ರೋಕ್ತಾ ಭವತಾ ವದತಾಂ ವರ ॥ ೧ ॥

ಸೃಷ್ಟಿಸಂಬಂಧಮೇತಂ ನಸ್ತ್ವದ್ಭವಾನ್ವಕ್ತುಮರ್ಹತಿ ।
ಪೂರ್ವಮೇವ ಕಥಂ ಸೃಷ್ಟಿರ್ವಿಸ್ತರಾತ್ಸೂತನಂದನ ॥ ೨ ॥

॥ ಸೂತ ಉವಾಚ ॥

ವಿಸ್ತರೇಣ ಪ್ರವಕ್ಷ್ಯಾಮಿ ಸೃಷ್ಟಿಸಂಹಾರಕಾರಣಂ ।
ಶ್ರುತಮಾತ್ರೇಣ ಯಸ್ಯಾಪಿ ನರಃ ಸರ್ವಜ್ಞತಾಂ ವ್ರಜೇತ್ ॥ ೩ ॥

---

### ಇಪ್ಪತ್ತೆರಡನೆಯ ಅಧ್ಯಾಯವು.

೧. ಋಷಿಗಳು ಹೇಳುತ್ತಾರೆ:—ಈ ಕಥೆಯು ವಿಚಿತ್ರವಾದುದು. ಧರ್ಮವನ್ನು ಕೊಡತಕ್ಕದ್ದು, ಪಾಪಹರವು. ಇಂಥಾದ್ದನ್ನು ಹೇಳಿರುವೆ.

ಆ ಸೃಷ್ಟಿಯ ಸಂಬಂಧವನ್ನು ತಾವು ಸ್ವಲ್ಪ ನಮಗೆ ಹೇಳಬೇಕು. ಮೊಟ್ಟ ಮೊದಲು ಸೃಷ್ಟಿ ಹೇಗಾಯಿತು ಅದನ್ನು ಹೇಳಬೇಕೆನಲು,

೩. ಸೂತನು ಹೇಳುತ್ತಾನೆ:—ಸೃಷ್ಟಿ, ನಾಶಗಳ ವಿಷಯವನ್ನು ವಿಸ್ತಾರವಾಗಿ ಹೇಳುತ್ತೇನೆ. ಕೇಳಿ. ಇದನ್ನು ಕೇಳಿದ ಒಡನೆಯೇ ಮನುಷ್ಯನು ಸರ್ವಜ್ಞನಾಗುತ್ತಾನೆ.

ಹಿರಣ್ಯಕಶಿಪುರ್ಜ್ಯೋ ಹಿ ತೇನ ವ್ಯಾಪ್ತಂ ಜಗತ್ತ್ರಯಂ ।
ತಪಸಾರಾಧ್ಯ ಬ್ರಹ್ಮಾಣಂ ವರಂ ಪ್ರಾಪ ಸುದುರ್ಲಭಂ ॥ ೪ ॥

ತಸ್ಮಾದ್ದೇವಾನ್ಮಹಾಭಾಗಾದಮರತ್ವಂ ತಥೈವ ಚ ।
ದೇವಾನ್ ಲೋಕಾನ್ ಸಮಂ ವ್ಯಾಪ್ಯ ಪ್ರಭುತ್ವಂ ಸ್ವಯಮರ್ಜಿತಂ ॥ ೫ ॥

ತತೋ ದೇವಾಸ್ಸಗಂಧರ್ವಾ ಮುನಯೋ ವೇದಪಾರಗಾಃ ।
ನಾಗಾಶ್ಚ ಕಿನ್ನರಾಸ್ಸಿದ್ಧಾ ಯಕ್ಷಾಶ್ಚೈವ ತಥಾಪರೇ ॥ ೬ ॥

ಬ್ರಹ್ಮಾಣಂ ತಂ ಪುರಸ್ಕೃತ್ಯ ಜಗ್ಮುರ್ನಾರಾಯಣಂ ಪ್ರಭುಂ ।
ಕ್ಷೀರಸಾಗರಸಂಸುಪ್ತಂ ಯೋಗನಿದ್ರಾಂ ಗತಂ ಪ್ರಭುಂ ॥ ೭ ॥

ಸಂಬೋಧ್ಯ ಮಹಾಸ್ತೋತ್ರೈರ್ದೇವಾಃ ಪ್ರಾಂಜಲಯಸ್ಸ್ಥಿತಾಃ ।
ಸಂಬುದ್ಧೇ ತು ದೇವೇಶೇ ವೃತ್ತಾಂತಂ ಸುದುರಾತ್ಮನಃ ।
ಅಚಚಕ್ಷುರ್ಮಹಾತ್ಮಾನಃ ಸಮಾಕರ್ಣ್ಯ ಜಗತ್ಪತಿಃ ॥ ೮ ॥

ನೃಸಿಂಹರೂಪಮಾಸ್ಥಾಯ ತಂ ಜಘಾನ ಮಹಾಬಲಂ ।
ಪುನರ್ವಾರಾಹರೂಪೇಣ ಹಿರಣ್ಯಾಕ್ಷಂ ಮಹಾಬಲಂ ॥ ೯ ॥

---

೪. ಹಿರಣ್ಯಕಶಿಪುವಿನಿಂದಲೇ ಪ್ರಪಂಚವೆಲ್ಲವೂ ವ್ಯಾಪ್ತವಾಗಿದ್ದಿತು. ತಪಸ್ಸಿನಿಂದ ಬ್ರಹ್ಮನನ್ನು ಸಂತೋಷಗೊಳಿಸಿ ಅಸಾಧ್ಯವಾದ ವರಗಳನ್ನು ಪಡೆದನು.

೫. ಆ ಬ್ರಹ್ಮನಿಂದ ಮರಣವಿಲ್ಲದಿರುವಿಕೆಯನ್ನು ಹೊಂದಿ ದೇವತೆಗಳನ್ನೂ, ಲೋಕಗಳನ್ನೂ ಸೇರಿಸಿ ಆಡಳಿತಮಾಡುವಂತೆ ವರವನ್ನು ಪಡೆದನು.

೬-೭. ದೇವತೆಗಳು, ಗಂಧರ್ವರು, ಮುನಿಗಳು, ನಾಗರು, ಸಿದ್ಧರು, ಇವರು ಬ್ರಹ್ಮನನ್ನು ಮುಂದುಮಾಡಿಕೊಂಡು, ಕ್ಷೀರಸಮುದ್ರದಲ್ಲಿ ಯೋಗನಿದ್ರೆಮಾಡುತ್ತಿರುವ ಸ್ವಾಮಿಯ ಬಳಿಗೆ ಹೋಗಿ ಸ್ತೋತ್ರಗಳಿಂದ ಎಬ್ಬಿಸಿ ಕೈಮುಗಿದುಕೊಂಡು ನಿಂತಿದ್ದರು.

೮-೯. ಅವನು ಎಚ್ಚರಗೊಳ್ಳುತ್ತಲೇ, ಆ ದುಷ್ಟನ ಸಮಾಚಾರವನ್ನು ಹೇಳಿದರು. ಅದನ್ನು ಕೇಳಿ ಆ ಸ್ವಾಮಿಯು ನರಸಿಂಹರೂಪವನ್ನು ತಾಳಿ ಅವನನ್ನು ಕೊಂದನು. ಅಲ್ಲದೆ ವರಾಹ ರೂಪವನ್ನು ಧರಿಸಿ ಹಿರಣ್ಯಾಕ್ಷನನ್ನು ಕೊಂದನು.

ತದ್ವಧಾಚ್ಚೈವ ಸಂತಪ್ತಾ ಅಸುರಾ ಯುಯುಧುಶ್ಚ ತಂ ।
ಸೋಽಪ್ಯನ್ಯಾಂಶ್ಚ ಜಘಾನಾಥ ದಾನವಾನ್ ಘೋರದರ್ಶನಾನ್ ॥ ೧೦ ॥

ಏವಂ ವೈ ತೇಷು ನಷ್ಟೇಷು ದಾನವೇಷು ಮಹಾತ್ಮಸು ।
ಅನ್ಯೇಷು ತೇಷು ನಷ್ಟೇಷು ದಿತಿಪುತ್ರೇಷು ವೈ ತದಾ ।
ಪುನಃ ಸ್ಥಾನಂ ಹಿ ಪ್ರಾಪ್ತೇಷು ದೇವೇಷು ಚ ಮಹಾತ್ಮಸು ॥ ೧೧ ॥

ಯಜ್ಞೇಷ್ವಥ ಪ್ರವೃತ್ತೇಷು ಸರ್ವೇಷು ಧರ್ಮಕರ್ಮಸು
ಸ್ವಸ್ಥೇಷು ಸರ್ವಲೋಕೇಷು ದಿತಿರ್ವೈ ದುಃಖಪೀಡಿತಾ ।
ಪುತ್ರಶೋಕೇನ ಸಂತಪ್ತಾ ಹಾಹಾಭೂತಾ ವಿಚೇತನಾ ॥ ೧೨ ॥

ಭರ್ತಾರಂ ಸೂರ್ಯಸಂಕಾಶಂ ತಪಸ್ತೇಜಸ್ಸಮನ್ವಿತಂ ।
ದಾತಾರಂ ಚ ಮಹಾತ್ಮಾನಂ ಭರ್ತಾರಂ ಕಶ್ಯಪಂ ತದಾ ॥ ೧೩ ॥

ಭಕ್ತ್ಯಾ ಪ್ರಣಮ್ಯ ವಿಪ್ರೇಂದ್ರ ತಮುವಾಚ ಮಹಾಮತಿಂ ।
ಭಗವನ್ನಷ್ಟಪುತ್ರಾಹಂ ಕೃತಾ ದೇವೇನ ಚಕ್ರಿಣಾ ॥ ೧೪ ॥

ದೈತ್ಯಾಶ್ಚ ದಾನವಾಸ್ಸರ್ವೇ ದೇವೈಶ್ಚೈವ ನಿಪಾತಿತಾಃ ।
ಪುತ್ರಶೋಕಾನಲೇನಾಹಂ ಸಂತಪ್ತಾ ಮುನಿಸತ್ತಮ ॥ ೧೫ ॥

---

೧೦. ಅವನ ವಧೆಯಿಂದ ದುಃಖಗೊಂಡ ರಾಕ್ಷಸರು ಯುದ್ಧಮಾಡಿದರು. ಆ ಸ್ವಾಮಿಯೂ ಕೂಡ ಕ್ರೂರರಾದ ದಾನವರನ್ನೆಲ್ಲಾ ಕೊಂದನು.

೧೧-೧೨. ಈ ರೀತಿ ದಾನವರೆಲ್ಲರೂ ನಾಶವಾಗಲು ಮಹಾತ್ಮರು ತಮ್ಮ ತಮ್ಮ ಕರ್ಮಗಳನ್ನೂ ಯಜ್ಞಗಳನ್ನೂ ಮಾಡುತ್ತಿದ್ದರು. ಸರ್ವಲೋಕಗಳೂ ಸುಖವಾಗಿದ್ದವು. ಆದರೆ ದಿತಿಯು ಪುತ್ರಶೋಕದಿಂದ ಪೀಡಿತಳಾಗಿ ಬುದ್ಧಿಸ್ತಿಮಿತವಿಲ್ಲದವಳಾದಳು.

೧೩-೧೪. ತಪಸ್ವಿಯೂ, ದಾತೃವೂ, ಮಹಾತ್ಮನೂ ಆದ ತನ್ನ ಗಂಡ ಕಶ್ಯಪನನ್ನು ಭಕ್ತಿಯಿಂದ ನಮಸ್ಕರಿಸಿ ಹೀಗೆಂದು ಹೇಳಿದಳು. ಭಗವಂತನೇ, ಚಕ್ರಧಾರಿಯಾದ ವಿಷ್ಣುವು ನನ್ನ ಮಕ್ಕಳನ್ನು ಕೊಂದುಹಾಕಿದನು.

೧೫. ದೇವತೆಗಳು ನನ್ನ ಮಕ್ಕಳಾದ ದೈತ್ಯರನ್ನೂ ದಾನವರನ್ನೂ, ಕೊಂದು ಹಾಕಿದರು. ಪುತ್ರಶೋಕವೆಂಬ ಅಗ್ನಿಯಿಂದ ನಾನು ಸುಡಲ್ಪಡುತ್ತಿದ್ದೇನೆ.

ಮಮಾನಂದಕರಂ ಪುತ್ರಂ ಸರ್ವತೇಜೋಹರಂ ವಿಭೋ ।
ಸುಬಲಂ ಚಾರುಸರ್ವಾಂಗಂ ರವಿತೇಜಸ್ಸಮಪ್ರಭಂ ॥ ೧೬ ॥

ಬುದ್ಧಿಮಂತಂ ಚ ಸರ್ವಜ್ಞಂ ಜ್ಞಾತಾರಂ ಸರ್ವದೇಹಿನಾಂ ।
ತಪಸ್ತೇಜಸ್ಸಮಾಯುಕ್ತಂ ವೇದಜ್ಞಂ ವೇದಪಾರಗಂ ॥ ೧೭ ॥

ಬ್ರಹ್ಮಜ್ಞಂ ಜ್ಞಾನವೇತ್ತಾರಂ ದೇವಬ್ರಾಹ್ಮಣಪೂಜಕಂ ।
ಜೇತಾರಂ ಸರ್ವಲೋಕಾನಾಂ ಮಮಾನಂದಕರಂ ದ್ವಿಜ ॥ ೧೮ ॥

ಸರ್ವಲಕ್ಷಣಸಂಪನ್ನಂ ಪುತ್ರಂ ಮೇ ದೀಯತಾಂ ವಿಭೋ ।
ಏವಮಾಕರ್ಣ್ಯ ವೈ ತಸ್ಯಾಃ ಕಶ್ಯಪೋ ವಾಕ್ಯಮುತ್ತಮಂ ॥ ೧೯ ॥

ಕೃಪಾವಿಷ್ಟಮನಾಸ್ತುಷ್ಟೋ ದುಃಖಿತಾಂ ತಾಂ ದ್ವಿಜೋತ್ತಮಃ ।
ತಾಮುವಾಚ ಮಹಾಭಾಗಃ ಕೃಪಣಾಂ ದೀನಮಾನಸಾಂ ॥ ೨೦ ॥

ತಸ್ಯಾಶ್ಶಿರಸಿ ಸನ್ನ್ಯಸ್ಯ ಸ್ವಹಸ್ತಂ ಭಾವತತ್ಪರಂ ।
ಭವಿಷ್ಯತಿ ಮಹಾಭಾಗೇ ಯಾದೃಶೋ ವಾಂಛಿತಸ್ಸುತಃ ॥ ೨೧ ॥

---

೧೬. ಆದುದರಿಂದ ನನಗೆ ಆನಂದವನ್ನುಂಟುಮಾಡುವ, ಒಬ್ಬ ಪುತ್ರನನ್ನು ಕರುಣಿಸು. ಅವನು ಬಲಿಷ್ಠನಾಗಿ ಎಲ್ಲರನ್ನೂ ಜಯಿಸಿ ಸೂರ್ಯನಂತೆ ತೇಜಸ್ವಿಯಾಗಿರಬೇಕು. ಅಂತಹ ಪುತ್ರನನ್ನು ಅನುಗ್ರಹಿಸು.

೧೭-೧೮. ಅಲ್ಲದೆ, ಆ ಪುತ್ರನು ಬುದ್ಧಿವಂತನಾಗಿಯೂ, ಸರ್ವಜ್ಞನಾಗಿಯೂ, ಆಗಿರಬೇಕು. ದಾನಶೀಲನೂ, ವೇದಾಧ್ಯಯನಸಂಪನ್ನನೂ, ಆಗಿರಬೇಕು. ಬ್ರಹ್ಮಜ್ಞಾನಿಯಾಗಿ ದೇವಬ್ರಾಹ್ಮಣರ ಪೂಜೆಯಲ್ಲಿ ನಿರತನಾಗಿರಬೇಕು. ಸರ್ವಲೋಕಗಳನ್ನೂ ಜಯಿಸುವ ಸಾಮರ್ಥ್ಯವುಳ್ಳವನಾಗಿ ನನಗೆ ಸದಾ ಆನಂದವನ್ನುಂಟುಮಾಡುತ್ತಿರಬೇಕು. ಇಂತಹ ಸರ್ವಲಕ್ಷಣಸಂಪನ್ನನಾದ ಪುತ್ರನು ನನಗಾಗಬೇಕು ಎಂದು ಪ್ರಾರ್ಥಿಸಿದಳು.

೧೯-೨೨. ಈ ಮಾತನ್ನು ಕೇಳಿ ಕಶ್ಯಪನು ಕೃಪೆಯಿಂದ ಕೂಡಿ, ದುಃಖಿತಳಾದ ಆಕೆಯನ್ನು ಸಮಾಧಾನಮಾಡಿ, ಭಗವಂತನ ಧ್ಯಾನದಲ್ಲಿ ತತ್ಪರನಾಗಿ, ಆಕೆಯ ತಲೆಯಮೇಲೆ ಕೈಯಿಟ್ಟು ಎಂತಹ ಮಗನನ್ನು ನೀನು ಕೇಳುತ್ತೀಯೋ ಅಂತಹವನು

ಏವಮುಕ್ತ್ವಾ ಜಗಾಮಾಸೌ ಮೇರುಂ ಗಿರಿವರೋತ್ತಮಂ ।
ತಪಸ್ತೇಪೇ ನಿರಾಲಂಬಾ ಸಾಧಯನ್ಪರಮದ್ಯುತಿಃ ॥ ೨೨ ॥

ಏತಸ್ಮಿನ್ನಂತರೇ ಸಾ ತು ಗರ್ಭಂ ದಧಾರ ಚೋತ್ತಮಂ ।
ಸಾ ದಿತಿಸ್ಸರ್ವಧರ್ಮಜ್ಞಾ ಚಾರುಕರ್ಮಾ ಮನಸ್ವಿನೀ ॥ ೨೩ ॥

ಶತವರ್ಷಪ್ರಮಾಣಂ ತು ಶುಚಿಸ್ಮೃತೀ ಬಭೂವ ಹ ।
ತಯಾಥ ಜನಿತಃ ಪುತ್ರೋ ಬ್ರಹ್ಮತೇಜಸ್ಸಮನ್ವಿತಃ ॥ ೨೪ ॥

ಅಥ ಕಶ್ಯಪ ಆಯಾತೋ ಹರ್ಷೇಣ ಮಹತಾನ್ವಿತಃ ।
ಚಕಾರ ನಾಮ ಮೇಧಾವೀ ತಸ್ಯ ಪುತ್ರಸ್ಯ ಸತ್ತಮಃ ॥ ೨೫ ॥

ಬಲ ಇತ್ಯಬ್ರವೀದ್ವಿಪ್ರೋ ನಾಮ ತತ್ಸದೃಶೋ ಮಹಾನ್ ।
ಏವಂ ನಾಮ ಚ ಕೃತ್ವಾಥ ವ್ರತಬಂಧಂ ಚಕಾರ ಸಃ ॥ ೨೬ ॥

ಪ್ರಾಹ ಪುತ್ರ ಮಹಾಭಾಗ ಬ್ರಹ್ಮಚರ್ಯಂ ಪ್ರಸಾಧಯ ।
ಏವಮೇತತ್ಕರಿಷ್ಯಾಮಿ ತದ್ವಾಕ್ಯಂ ಜಗೃಹೇ ಚ ಸಃ ॥ ೨೭ ॥

ವೇದಸ್ಯಾಧ್ಯಯನಂ ಕುರ್ಯಾತ್ ಬ್ರಹ್ಮಚರ್ಯೇಣ ಸುವ್ರತಃ ।
ಏವಂ ವರ್ಷಶತಂ ಜಾತಂ ತಸ್ಯೈವಂ ಚ ತಪಸ್ಯತಃ ॥ ೨೮ ॥

---

ನಿನ್ನ ಉದರದಲ್ಲಿ ಹುಟ್ಟುತ್ತಾನೆ ಎಂದು ಆಕೆಯನ್ನು ಸಂತೈಸಲು, ಆ ದಿತಿಯು ಮೇರುಪರ್ವತಕ್ಕೆ ಹೋಗಿ ಇನ್ನೊಬ್ಬರ ಸಹಾಯವಿಲ್ಲದೆ ತಪಸ್ಸನ್ನು ಮಾಡಿದಳು.

೨೩-೨೪. ಇಷ್ಟರಲ್ಲೇ ಸರ್ವಧರ್ಮವನ್ನೂ ಬಲ್ಲ, ಒಳ್ಳೆಯ ಕರ್ಮದಲ್ಲಿ ಆಸಕ್ತಿಯುಳ್ಳ ಆ ದಿತಿಯು ಗರ್ಭವನ್ನು ಧರಿಸಿದಳು. ನೂರುವರ್ಷಗಳವರೆಗೂ ಶುಚಿಯಾಗಿ ಇದ್ದಳು. ಆಮೇಲೆ ಬ್ರಾಹ್ಮತೇಜಸ್ಸಿನಿಂದಕೂಡಿದ ಒಬ್ಬ ಮಗನನ್ನು ಹೆತ್ತಳು.

೨೫-೨೬. ಆಮೇಲೆ ಕಶ್ಯಪನು ಸಂತೋಷದಿಂದ ಆ ಮಗನಿಗೆ ಬಲನೆಂದು ಅನ್ವರ್ಥವಾದ ಹೆಸರನ್ನಿಟ್ಟನು. ಅನಂತರ ಉಪನಯನವನ್ನು ಮಾಡಿದನು.

೨೭. ಮಗನಿಗೆ ಬ್ರಹ್ಮಚರ್ಯವನ್ನು ಸಾಧಿಸೆನ್ನಲು, ಆಗಲಿ ಹಾಗೆಯೇ ಮಾಡುತ್ತೇನೆಂದು ಮಗನು ಹೇಳಿದನು.

೨೮. ಆತನು ಬ್ರಹ್ಮಚರ್ಯದ ವ್ರತನಿಷ್ಠನಾಗಿ ವೇದಾಧ್ಯಯನವನ್ನು ಮಾಡಿದನು. ಹೀಗೆ ಮಾಡುತ್ತಿರಲು ಇವನಿಗೆ ನೂರುವರ್ಷಗಳು ಕಳೆದವು.

**ಮಾತುಸ್ಸಮೀಪಮಾಯಾತಿ ತಪಸ್ತೇಜಸ್ಸಮನ್ವಿತಃ ।**
**ತಪೋವೀರ್ಯಮಯಂ ದಿವ್ಯಂ ಬ್ರಹ್ಮಚರ್ಯಂ ಮಹಾತ್ಮನಃ ॥ ೨೯ ॥**

**ದಿತಿಃ ಪಶ್ಯತಿ ಪುತ್ರಸ್ಯ ಹರ್ಷೇಣ ಮಹತಾನ್ವಿತಾಂ।**
**ತಮುವಾಚ ಮಹಾತ್ಮಾನಂ ಬಲಂ ಪುತ್ರಂ ತಪಸ್ವಿನಂ ॥ ೩೦ ॥**

**ಮೇಧಾವಿನಂ ಮಹಾಪ್ರಾಜ್ಞಂ ಪ್ರಜ್ಞಾಜ್ಞಾನವಿಶಾರದಂ ।**
**ತ್ವಯಿ ಜೀವತಿ ಭೋ ವತ್ಸ ಪ್ರಜೀವಂತಿ ಸುತಾ ಮಮ ॥ ೩೧ ॥**

**ಹಿರಣ್ಯಕಶಿಪಾದ್ಯಾಶ್ಚ ಯೇ ಹತಾಶ್ಚಕ್ರಪಾಣಿನಾ ।**
**ವೈರಂ ಸಾಧಯ ಮೇ ವತ್ಸ ಜಹಿ ದೇವಾರ್ನ ರಿಪೂರ್ನ ರಣೇ ॥ ೩೨ ॥**

**ದನುಶ್ಚ ತಮುವಾಚಾಥ ಬಲಂ ಪುತ್ರಂ ಮಹಾಬಲಂ ।**
**ಆದಾವಿಂದ್ರಂ ಹಿ ದೇವೇಶಂ ದ್ರುತಂ ಸೂದಯ ಪುತ್ರಕ ॥ ೩೩ ॥**

---

೨೯. ಬಳಿಕ ತಪಸ್ತೇಜಸ್ಸಿನಿಂದ ಕೂಡಿದ ಆತನು ತಾಯಿಯಸಮೀಪಕ್ಕೆ ಬರಲು, ಆ ಮಹಾತ್ಮನಾದ ಮಗನ ತಪಸ್ಸನ್ನೂ, ಬ್ರಹ್ಮಚರ್ಯವನ್ನೂ ನೋಡಿ, ದಿತಿಯು ಬಹು ಸಂತೋಷದಿಂದ ನೋಡುತ್ತಿದ್ದಳು.

೩೦-೩೧. ತಪಸ್ವಿಯೂ, ಮಹಾತ್ಮನೂ, ಮೇಧಾವಿಯೂ, ಪ್ರಾಜ್ಞನೂ, ಆದ ಮಗನನ್ನು ಕುರಿತು ಎಲೈ ಮಗನೇ? ನೀನು ಬದುಕಿದ್ದರೆ ನನ್ನ ಮಕ್ಕಳೆಲ್ಲವೂ ಬದುಕಿದ್ದಂತೆಯೇ.

೩೨. ಚಕ್ರಪಾಣಿಯಿಂದ ಹಿರಣ್ಯಕಶಿಪುವೇ ಮೊದಲಾದ ನನ್ನ ಮಕ್ಕಳು ಕೊಲ್ಲಲ್ಪಟ್ಟರು. ಆದುದರಿಂದ ಶತ್ರುಗಳಾದ ದೇವತೆಗಳಲ್ಲಿ ವೈರವನ್ನು ಸಾಧಿಸು. ಯುದ್ಧದಲ್ಲಿ ಶತ್ರುಗಳಾದ ತೇವತೆಗಳನ್ನು ಕೊಲ್ಲು.

೩೩. ದನುವೂ ಸಹ ಮಹಾಬಲಶಾಲಿಯಾದ ಆ ಪುತ್ರನನ್ನು ಕುರಿತು ಮೊದಲು ದೇವೇಶನಾದ ಇಂದ್ರನನ್ನು ಕೊಂದುಹಾಕೆಂದಳು. ಆಮೇಲೆ ದೇವತೆಗಳನ್ನೂ, ಅನಂತರ ಗರುಡವಾಹನನ್ನೂ, ಕೊಲ್ಲು. ಎಂದಳು.

ಪಶ್ಚಾದ್ದೇವಾನ್ನಿಪಾತ್ಯೈತಾಸ್ತಕೋ ಗರುಡವಾಹನಂ ।
ತಥಾ ಚಾಕರ್ಣ್ಯ ಸಾ ದೇವೀ ಹ್ಯದಿತಿಃ ಪತಿದೇವತಾ ॥ ೩೪ ॥

ದುಃಖೇನ ಮಹತಾವಿಷ್ಟಾ ಪುತ್ರಮಿಂದ್ರಮಭಾಷತ ।
ದಿತಿಪುತ್ರೋ ಮಹಾತೇಜಾ ಮಹಾಕಾಯೋ ವ್ಯವರ್ಧಿತಃ ॥ ೩೫ ॥

ದೇವಾನಾಂ ಹಿ ವಧಾರ್ಥಾಯ ತಪಸ್ತೇಪೇ ನಿರಂಜನೇ ।
ಏವಂ ಜಾನೀಹಿ ದೇವೇಶ ಯದಿ ಕ್ಷೇಮಮಿಹೇಚ್ಛಸಿ ॥ ೩೬ ॥

ತಚ್ಛ್ರುತ್ವಾ ವಚನಂ ತಸ್ಯಾಃ ಸ ಮಾತುಃ ಪಾಕಶಾಸನಃ ।
ಚಿಂತಾಮವಾಪ ದುಃಖೇನ ಮಹತೀಂ ದೇವರಾಟ್ ತದಾ ॥ ೩೭ ॥

ಮಹಾಭಯೇನ ಸಂತ್ರಸ್ತಶ್ಚಿಂತಯಾಮಾಸ ವೈ ತದಾ ।
ಕಥಮೇನಂ ಹನಿಷ್ಯಾಮಿ ವೇದಧರ್ಮವಿದೂಷಕಂ ॥ ೩೮ ॥

ಇತಿ ನಿಶ್ಚಿತ್ಯ ದೇವೇಶೋ ಬಲಸ್ಯ ನಿಧನಂ ಪ್ರತಿ ।
ಏಕದಾ ತು ಬಲಸ್ಸಾಯಂ ಸಂಧ್ಯಾರ್ಥಂ ಸಮುಪಾಗತಃ ॥ ೩೯ ॥

---

೩೪-೩೫. ಪತಿಯೇ ದೇವತೆಯೆಂದು ನಂಬಿದ ಆ ಅದಿತಿಯು ಇದನ್ನು ಕೇಳಿ ಬಹಳ ದುಃಖದಿಂದ ಕೂಡಿದವಳಾಗಿ ಇಂದ್ರನನ್ನು ಕುರಿತು ಇಂತೆಂದಳು. ದಿತಿಯ ಮಗನು ಮಹಾ ತೇಜಸ್ವಿಯು, ಮಹಾಕಾಯನು, ಚೆನ್ನಾಗಿ ವೃದ್ಧಿಹೊಂದುತ್ತಿದ್ದಾನೆ.

೩೬. ಅವನು ದೇವತೆಗಳ ವಧೆಗೋಸ್ಕರ ನಿರಂಜನದಲ್ಲಿ ತಪಸ್ಸುಮಾಡಿ, ವರವನ್ನು ಪಡೆದಿರುವನು. ಆದುದರಿಂದ ಎಲೈ ಇಂದ್ರನೇ, ಕ್ಷೇಮವಾಗಿರಬೇಕಾದರೆ ಮೊದಲು ಇದನ್ನು ತಿಳಿದುಕೋ.

೩೭. ಇಂದ್ರನು ತಾಯಿಯ ಮಾತನ್ನು ಕೇಳಿ ಹೆಚ್ಚಾದ ಚಿಂತೆಯನ್ನು ಹೊಂದಿದನು.

೩೮. ಮಹಾಭಯದಿಂದ ಹೆದರಿ, ವೇದಧರ್ಮವಿದೂಷಕನಾದ ಇವನನ್ನು ಹೇಗೆ ಕೊಲ್ಲಲಿ ಎಂದು ಚಿಂತಾಪರನಾದನು.

೩೯. ದೇವೇಂದ್ರನು ಬಲನ ವಧೆಯನ್ನು ಕುರಿತು ಈರೀತಿ ನಿಶ್ಚಯಿಸಿದನು.

**ಕೃಷ್ಣಾಜಿನೇನ ದಿವ್ಯೇನ ದಂಡಕಾಷ್ಠೇನ ರಾಜಿತಃ ।**
**ಅಮಲೇನಾಪಿ ಪುಣ್ಯೇನ ಬ್ರಹ್ಮಚರ್ಯೇಣ ತೇಜಸಾ ॥ ೪೦ ॥**

**ಸಾಗರಸ್ಯೋಪಕಂಠೇ ತಂ ಸಂಧ್ಯಾಸನಮುಪಾಗತಂ ।**
**ಜಪಮಾನಂ ತು ತಂ ದೈತ್ಯಂ ದರ್ಶಯಾಮಾಸ ವಾಸವಃ ॥ ೪೧ ॥**

**ವಜ್ರೇಣ ಪಾಟಯಾಮಾಸ ದೇವೇಂದ್ರೋಽಸೌ ಬಲಂ ತದಾ ।**
**ಏವಂ ನಿಪತಿತಂ ದೃಷ್ಟ್ವಾ ಗತಸತ್ತ್ವಂ ಗತಂ ಭುವಿ ॥ ೪೨ ॥**

**ಹರ್ಷೇಣ ಮಹತಾವಿಷ್ಟೋ ದೇವರಾಣ್ಮುಮುದೇ ತದಾ ।**
**ಏವಂ ನಿಪಾತಿತಂ ದೈತ್ಯಂ ದಿತಿನಂದನಮೇವ ಚ ।**
**ವೀಕ್ಷ್ಯೋತ್ಸವಂ ಚಕಾರಾಶು ಸುಖೇನ ಪಾಕಶಾಸನಃ ॥ ೪೩ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ**
**ಬಲದೈತ್ಯವಧೋನಾಮ ದ್ವಾವಿಂಶೋಽಧ್ಯಾಯಃ**

---

೪೦-೪೧. ಒಂದುಸಾರಿ ಆ ಬಲನು ಸಾಯಂಕಾಲದಲ್ಲಿ ಕೃಷ್ಣಾಜಿನವನ್ನು ಹೊದ್ದುಕೊಂಡು ದಂಡಕೋಲನ್ನು ಹಿಡಿದುಕೊಂಡು ಬ್ರಹ್ಮತೇಜಸ್ಸಿನಿಂದ ಬೆಳಗುತ್ತಾ ಸಂಧ್ಯಾವಂದನೆಗಾಗಿ ಸಮುದ್ರಕ್ಕೆ ಬಂದು ಜಪಮಾಡುತ್ತಿದ್ದಾಗ ಇಂದ್ರನು ಅವನನ್ನು ನೋಡಿ ಇದೇ ಸಮಯವೆಂದು ಯೋಚಿಸಿ, ತನ್ನ ಕೈಲಿದ್ದ ವಜ್ರಾಯುಧದಿಂದ ಅವನನ್ನು ಸೀಳಿದನು.

೪೨. ಕೂಡಲೇ ಆ ಬಲನು ವಜ್ರಾಯುಧದ ಪ್ರಹಾರದಿಂದ ಭೂಮಿಯಲ್ಲಿ ಬಿದ್ದು, ಪ್ರಾಣಬಿಟ್ಟನು. ಅದನ್ನು ನೋಡಿ ಇಂದ್ರನು ಸಂತೋಷಗೊಂಡನು.

೪೩. ದಿತಿಯ ನಂದನನು ಹೀಗೆ ಸತ್ತದ್ದನ್ನು ನೋಡಿ ಇಂದ್ರನು ಸಂತೋಷದಿಂದ ಉತ್ಸವಗಳನ್ನು ನಡೆಸಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಬಲದೈತ್ಯವಧ ಎಂಬಲ್ಲಿಗೆ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ತ್ರಯೋವಿಂಶೋಽಧ್ಯಾಯಃ

॥ ಸೂತ ಉವಾಚ ॥

ಹತಂ ಶ್ರುತ್ವಾ ದಿತಿಃ ಪುತ್ರಮಿಂದ್ರೇಣ ತು ಮಹಾದ್ವಿಜಾಃ ।
ದುಃಖಿತಾ ಕರುಣಂ ಕೃತ್ವಾ ರುರೋದ ಚ ಭೃಶಂ ತಥಾ ॥ ೧ ॥

ಭರ್ತಾರಂ ಚ ಪುನಃ ಪ್ರಾಪ್ಯ ಸ್ವದುಃಖಂ ಸಮುವಾಚ ಹ ।
ತವ ಪುತ್ರೋ ಮಹಾಪಾಪ ಇಂದ್ರಃ ಸುರಗಣೇಶ್ವರಃ ॥ ೨ ॥

ಸಾಗರೋಪಗತಂ ದೃಷ್ಟ್ವಾ ಮಮ ಪುತ್ರಂ ಬಲಂ ತಥಾ ।
ವಜ್ರೇಣ ಪಾತಯಾಮಾಸ ಜಪಮಾನಂ ಸನಾತನಂ ॥ ೩ ॥

ಏವಂ ಶ್ರುತ್ವಾ ತತಃ ಕ್ರುದ್ಧೋ ಮರೀಚಿತನಯಸ್ತದಾ ।
ಕ್ರೋಧೇನ ಮಹತಾವಿಷ್ಟಃ ಪ್ರಜಜ್ವಾಲೇನ ವಹ್ನಿನಾ ॥ ೪ ॥

---

### ಇಪ್ಪತ್ತಮೂರನೆಯ ಅಧ್ಯಾಯವು.

೧. ಸೂತನು ಹೇಳಿದನು :—ತನ್ನ ಮಗನು ಇಂದ್ರನಿಂದ ಕೊಲ್ಲಲ್ಪಟ್ಟದ್ದನ್ನು ಕೇಳಿ ದಿತಿದೇವಿಯು ಬಹುದುಃಖದಿಂದ ಅತ್ತಳು.

೨-೩. ದಿತಿಯು ಪುನಃ ಗಂಡನೊಡನೆ ತನ್ನ ದುಃಖವನ್ನು ಹೇಳಿಕೊಂಡಳು. ದೇವತೆಗಳ ಒಡೆಯನಾದ ಇಂದ್ರನು ಮಹಾಪಾಪಿಯು. ಬಲನು ಸಮುದ್ರದಬಳಿಗೆ ಹೋಗಿ ಪರಾತ್ಪರವಸ್ತು ಕುರಿತು ಜಪಮಾಡುತ್ತಿರಲು ಅಂತಹ ಸಮಯದಲ್ಲಿ ವಜ್ರದಿಂದ ಅವನನ್ನು ಕೊಂದಿರುವನು ಎಂದು ಹೇಳಿದಳು.

೪. ಇದನ್ನು ಕೇಳಿ ಕಶ್ಯಪನು ಬಹಳ ಕೋಪಗೊಂಡನು. ಮಹಾಕೋಪದಿಂದ ಕೂಡಿದ ಆ ಮರೀಚಿಪುತ್ರನು ಬೆಂಕಿಯಿಂದ ಜ್ವಲಿಸುತ್ತಿರುವನೋ ಎಂಬಂತಿದ್ದನು.

**ಅವಲುಂಚ್ಯ ಜಟಾಮೇಕಾಂ ಜುಹಾವಾಸೌ ದ್ವಿಜೋತ್ತಮಃ ।**
**ಇಂದ್ರಸ್ಯೈವ ವಧಾರ್ಥಾಯ ಪುತ್ರಮುತ್ಪಾದಯಾಮ್ಯಹಂ ॥ ೫ ॥**

**ತಸ್ಮಾತ್ಕುಂಡಾತ್ಸಮುತ್ಪನ್ನೋ ಹುತಾಶನಮುಖಾದಪಿ ।**
**ಕೃಷ್ಣಾಂಜನಚಯೋಪೇತಃ ಪಿಂಗಾಕ್ಷೋ ಭೀಷಣಾಕೃತಿಃ ॥ ೬ ॥**

**ದಂಷ್ಟ್ರಾಕರಾಳವಕ್ತ್ರಾಂತೋ ಜಗತಾಂ ಭಯದಾಯಕಃ ।**
**ಮಹಾಸತ್ತ್ವನಿಭೋ ಘೋರೋ ಮೃಗಚರ್ಮಧರಸ್ತಥಾ ॥ ೭ ॥**

**ಸಖಡ್ಗಸ್ತೇಜಸಾ ದೀಪ್ತೋ ಮಹಾಮೇಘೋಪಮೋ ಬಲೀ ।**
**ಉವಾಚ ಕಶ್ಯಪಂ ವಿಪ್ರಮಾದೇಶೋ ಮಮ ದೀಯತಾಂ ॥ ೮ ॥**

**ಕಸ್ಮಾದುತ್ಪಾದಿತೋ ವಿಪ್ರ ಭವತಾ ಕಾರಣಂ ವದ ।**
**ತಮಹಂ ಸಾಧಯಿಷ್ಯಾಮಿ ಪ್ರಸಾದಾತ್ತವ ಸುವ್ರತ ॥ ೯ ॥**

**ಕಶ್ಯಪ ಉವಾಚ**

**ಅಸ್ಯಾ ಮನೋರಥಂ ಪುತ್ರ ಪೂರಯಸ್ವ ಮಮೈವ ಹಿ ।**
**ಆದಿತ್ಯಾಖ್ಯಂ ಮಹಾಪ್ರಾಜ್ಞ ಜಹಿ ಇಂದ್ರಂ ದುರಾತ್ಮಕಂ ॥ ೧೦ ॥**

---

೫. ಬಳಿಕ ಆ ಕಶ್ಯಪನು ತನ್ನ ಒಂದು ಪಕ್ಕದ ಜಟೆಯನ್ನು ಬಿಚ್ಚಿ ಇಂದ್ರನ ವಧೆಗೋಸ್ಕರ ಮಗನನ್ನು ಪಡೆಯುತ್ತೇನೆಂದು ಹೋಮಮಾಡಿದನು.

೬-೯. ಹೀಗೆ ಹೋಮಮಾಡುತ್ತಿರುವಾಗ ಭಯಂಕರಾಕಾರನಾದ ಒಬ್ಬ ಮಹಾಪುರುಷನು ಕೈಯಲ್ಲಿ ಖಡ್ಗವನ್ನು ಹಿಡಿದು ಆ ಅಗ್ನಿಕುಂಡದಿಂದ ಹೊರ ಹೊರಟನು. ಅವನ ಕಣ್ಣುಗಳು ಕೆಂಪಡರಿದ್ದವು. ಉದ್ದವಾದ ಕೋರೆಹಲ್ಲುಗಳು ಮುಖದಿಂದ ಹೊರಹೊಮ್ಮಿ ನೋಡುವವರಿಗೆ ಭಯಂಕರವಾಗಿ ಕಾಣುತ್ತಿದ್ದವು. ಅವನ ಆಕಾರವು ದೊಡ್ಡ ಭೂತದಂತಿದ್ದಿತು. ಮೃಗದ ಚರ್ಮವನ್ನು ಹೊದ್ದು ಮಹಾಮೇಘದಂತೆ ಘರ್ಜಿಸುತ್ತಾ ಜ್ವಲಿಸುತ್ತಿರುವ ಅಗ್ನಿಯಿಂದ ಹೊರಟುಬಂದು ಕಶ್ಯಪನನ್ನು ಕುರಿತು ಎಲೈ ವಿಪ್ರನೇ ನನ್ನನ್ನೇಕೆ ಉತ್ಪತ್ತಿಮಾಡಿದೆ? ನಾನು ಮಾಡಬೇಕಾದ ಕಾರ್ಯವೇನು? ಅಪ್ಪಣೆಮಾಡು. ಅದನ್ನು ನಿನ್ನನುಗ್ರಹದಿಂದ ಸಾಧಿಸುತ್ತೇನೆ ಎಂದನು.

೧೦. ಅದನ್ನು ಕೇಳಿ ಕಶ್ಯಪನು ಹೇಳುತ್ತಾನೆ:—ನನ್ನ ಮತ್ತು ಈಕೆಯ ಇಷ್ಟಾರ್ಥವನ್ನು ಪೂರ್ತಿಮಾಡು. ಅದಿತಿಯ ಮಗನಾದ ಇಂದ್ರನನ್ನು ಕೊಲ್ಲು ಎಂದನು.

ನಿಹತೇ ದೇವರಾಜೇ ತು ಪದಮೈಂದ್ರಂ ಪ್ರಭುಂಕ್ಷ್ವ ಚ ।
ಏವಂ ತೇನ ಸಮಾದಿಷ್ಟಃ ಕಶ್ಯಪೇನ ಮಹಾತ್ಮನಾ ॥ ೧೧ ॥

ವೃತ್ರಸ್ತು ಹ್ಯುದ್ಯಮಂ ಚಕ್ರೇ ತಸ್ಯೇಂದ್ರಸ್ಯ ವಧಾಯ ಚ ।
ಚತುರ್ವೇದಸ್ಯ ಚಾಭ್ಯಾಸಂ ಸ ಚಕ್ರೇ ಪೌರುಷಾನ್ವಿತಃ ॥ ೧೨ ॥

ಬಲಂ ವೀರ್ಯಂ ತಥಾ ಕ್ಷಾತ್ರಂ ತೇಜೋಧೈರ್ಯಸಮನ್ವಿತಂ ।
ದೃಷ್ಟ್ವಾ ವೃತ್ರಸ್ಯ ದೈತ್ಯಸ್ಯ ಸಹಸ್ರಾಕ್ಷೋ ಭಯಾತುರಃ ॥ ೧೩ ॥

ಉಪಾಯಶ್ಚಿಂತಿತಸ್ತಸ್ಯ ವೃತ್ರಸ್ಯಾಪಿ ದುರಾತ್ಮನಃ ।
ವಧಾರ್ಥಂ ದೇವರಾಜೇನ ಹ್ಯಾಹೂಯಾಸೌ ಮಹಾಮುನೀನ್ ॥ ೧೪ ॥

ಸಪ್ತರ್ಷೀನ್ ಪ್ರೇಷಯಾಮಾಸ ವೃತ್ರಂ ದೈತ್ಯೇಶ್ವರಂ ಪ್ರತಿ ।
ಭವಂತಸ್ತತ್ರ ಗಚ್ಛಂತು ಯತ್ರ ವೃತ್ರಸ್ಸ ತಿಷ್ಠತಿ ।
ಸಂಧಿಂ ಕುರ್ವಂತು ವೈ ತೇನ ಸಾರ್ಧಂ ಮಮ ಮುನೀಶ್ವರಾಃ ॥ ೧೫ ॥

ಏವಂ ತೇನ ಸಮಾದಿಷ್ಟಾ ಮುನಯಸ್ಸಪ್ತ ತೇ ತದಾ ।
ವೃತ್ರಾಸುರಂ ಗತಾಃ ಪ್ರೋಚುಃ ಸಹಸ್ರಾಕ್ಷಃ ಪ್ರಯಾಚತಿ ॥ ೧೬ ॥

---

೧೧. ಅವನು ಮೃತನಾದಮೇಲೆ ಇಂದ್ರಪದವಿಯನ್ನು ನೀನೇ ಅನುಭವಿಸು. ಎಂದು ಮಹಾತ್ಮನಾದ ಕಶ್ಯಪನು ಅಪ್ಪಣೆಮಾಡಿದನು.

೧೨. ಹಾಗೆಯೇ ಆಗಲೆಂದು ಹೇಳಿ ಆ ವೃತ್ರನು ಇಂದ್ರನ ವಧೆಗೆ ಪ್ರಯತ್ನ ಪಟ್ಟನು. ಅವನು ನಾಲ್ಕುವೇದಗಳ ಅಭ್ಯಾಸವನ್ನೂ ಮಾಡಿದನು.

೧೩. ಬಲ, ವೀರ್ಯ, ಕ್ಷಾತ್ರತೇಜಸ್ಸು, ಧೈರ್ಯಗಳಿಂದ ಕೂಡಿದ ಆ ದೈತ್ಯನನ್ನು ನೋಡಿ ಇಂದ್ರನು ಭಯಗ್ರಸ್ತನಾದನು.

೧೪-೧೫. ಆ ದುಷ್ಟನ ವಧೆಗೆ ಇಂದ್ರನು ಒಂದು ಉಪಾಯವನ್ನು ಯೋಚಿಸಿದನು. ಮಹಾಮುನಿಗಳಾದ ಸಪ್ತರ್ಷಿಗಳನ್ನು ಕರೆದು ನೀವು ವೃತ್ರನಲ್ಲಿಗೆ ಹೋಗಿ ಅವನೊಡನೆ ನನಗೆ ಸಂಧಿಯನ್ನು ಮಾಡಿ. ಎಂದು ಅವರನ್ನು ವೃತ್ರಾಸುರನ ಸಮೀಪಕ್ಕೆ ಕಳುಹಿಸಿದನು.

೧೬-೧೯. ಇಂದ್ರನು ಹೀಗೆ ಹೇಳಲು ಸಪ್ತರ್ಷಿಗಳು ವೃತ್ರನಲ್ಲಿಗೆ ಹೋಗಿ ಎಲೈ ವೃತ್ರನೇ, ಇಂದ್ರನು ನಿನ್ನೊಡನೆ ಸಖ್ಯವನ್ನು ಬಯಸುತ್ತಾನೆ. ಆದುದರಿಂದ

ಸಖ್ಯಂ ಕರ್ತುಂ ಪ್ರಯಚ್ಛೇತ್ಸ ಕ್ರಿಯತಾಂ ದೈತ್ಯಸತ್ತಮ ।
ಋಷಯಸ್ಸಪ್ತ ತತ್ತ್ವಜ್ಞಾ ಊಚುರ್ವೃತ್ರಂ ಮಹಾಬಲಂ ॥ ೧೭ ॥

ಮೈತ್ರಮಿಚ್ಛತಿ ವೈ ಕರ್ತುಂ ತತ್ಕಥಂ ನ ಕರೋಷಿ ಕಿಂ ।
ಅರ್ಧಮೈಂದ್ರಂ ಪದಂ ವೀರ ಸ ತ್ವಂ ಭುಂಕ್ಷ್ವ ಸುಖೇನ ವೈ ॥ ೧೮ ॥

ವಕ್ತಿ ತ್ವಾಮೇವಮಿಂದ್ರೋಽಪಿ ಹ್ಯಸುರಾ ದೇವತಾಸ್ತಥಾ ।
ಕುರು ಮೈತ್ರೀಂ ತು ತೈಸ್ಸರ್ವೈರ್ವೈರಂ ದೂರೇ ವಿಸೃಜ್ಯ ವೈ ॥ ೧೯ ॥

॥ ವೃತ್ರ ಉವಾಚ ॥

ಯದಿ ಸತ್ಯೇನ ದೇವೇಂದ್ರೋ ಮೈತ್ರಮಿಚ್ಛತಿ ಸತ್ತಮಃ ।
ಸತ್ಯಮಾಶ್ರಿತ ಏವಾಹಂ ಕರಿಷ್ಯೇ ನಾತ್ರ ಸಂಶಯಃ ॥ ೨೦ ॥

ಛದ್ಮಮೇವಂ ಪುರಸ್ಕೃತ್ಯ ಇಂದ್ರೋ ದ್ರೋಹಂ ಸಮಾಚರೇತ್ ।
ತದಾ ಕಿಂ ಕ್ರಿಯತೇ ವಿಪ್ರಾ ಇತ್ಯರ್ಥೇ ಪ್ರತ್ಯಯಂ ಹಿ ಕಿಂ ॥ ೨೧ ॥

ಅಥರ್ಷಯಸ್ತ್ವಿಂದ್ರಮೂಚುರಿತ್ಯರ್ಥಪ್ರತ್ಯಯಂ ವದ ।
ತತ್ರ ತ್ವಂ ಸತ್ಯತಾಂ ಬ್ರೂಹಿ ಯದಿ ಮೈತ್ರಮಿಹೇಚ್ಛಸಿ ॥ ೨೨ ॥

---

ಅವನೊಡನೆ ಸಖ್ಯವನ್ನು ಬೆಳಸು. ಅವನಾಗಿಯೇ ಮೈತ್ರವನ್ನು ಅಪೇಕ್ಷಿಸುವಾಗ ಮಾಡಿಕೊಳ್ಳದಿರಬಾರದು. ಇದಲ್ಲದೆ ಇಂದ್ರಪದದಲ್ಲಿ ಅರ್ಧವನ್ನು ಕೊಡುತ್ತಾನೆ. ಸುಖದಿಂದ ಅನುಭವಿಸು. ಅಸುರರೂ, ದೇವತೆಗಳೂ, ಇಂದ್ರನೂ ಹೀಗೆಂದು ಹೇಳುತ್ತಾರೆ. ಅವರೊಡನೆ ಸ್ನೇಹಮಾಡಿಕೋ, ವೈರವನ್ನು ದೂರದಲ್ಲಿ ಬಿಡು. ಎಂದರು.

೨೦. ವೃತ್ರನು ಹೇಳಿದನು :—ದೇವೇಂದ್ರನು ಸತ್ಯವಾಗಿಯೂ ಸ್ನೇಹವನ್ನು ಇಚ್ಛಿಸುವಪಕ್ಷದಲ್ಲಿ, ಅದೇ ಸತ್ಯವನ್ನಾಶ್ರಯಿಸಿ ಸ್ನೇಹಮಾಡಿಕೊಳ್ಳುತ್ತೇನೆ. ಸಂಶಯವಿಲ್ಲ.

೨೧. ಕಪಟಬುದ್ಧಿಯಿಂದ ಇಂದ್ರನು ದ್ರೋಹಮಾಡಿದರೆ ಆಗ ನೀವೇನು ಮಾಡುತ್ತೀರಿ. ಆ ವಿಷಯದಲ್ಲಿ ನಂಬಿಕೆಯೇನು ? ಎಂದು ಕೇಳಲು,

೨೨. ಆಗ ಸಪ್ತರ್ಷಿಗಳು ಇಂದ್ರನನ್ನು ಕುರಿತು ವೃತ್ರನು ಹೀಗೆ ಹೇಳುವ ನಲ್ಲಾ, ನೀನು ಆ ವಿಷಯದಲ್ಲಿ ನಂಬಿಕೆಯನ್ನೇನುಕೊಡುತ್ತೀಯೆ ? ನಿನಗೆ ಸ್ನೇಹ ಬೇಕಾದರೆ ಸತ್ಯವನ್ನು ಹೇಳು. ಎಂದರು.

॥ ಇಂದ್ರ ಉವಾಚ ॥

ಯದ್ಯಸತ್ಯೇನ ವರ್ತೇಽಹಂ ಭವದ್ಭಿಸ್ಸಹ ಛದ್ಮನಾ ।
ಬ್ರಹ್ಮಹತ್ಯಾದಿಕೈಃ ಪಾಪೈರ್ಲಿಪ್ಯೇಽಹಂ ನಾತ್ರ ಸಂಶಯಃ ॥ ೨೩ ॥

ತೇ ವೃತ್ರಂ ದೈತ್ಯನಾಥಂ ತಂ ಪುನರೂಚುರ್ಮಹೌಜಸಃ ।
ಬ್ರಹ್ಮಹತ್ಯಾದಿಭಿಃ ಪಾಪೈರ್ಲಿಪ್ಯೇಽಹಂ ನಾತ್ರ ಸಂಶಯಃ ॥ ೨೪ ॥

ಇತ್ಯುವಾಚ ಮಹಾಪ್ರಾಜ್ಞ ತ್ವಾಮೇವಂ ಸ ಪುರಂದರಃ ।
ಏತೇನ ಪ್ರತ್ಯಯೇನಾಪಿ ಸಖ್ಯಂ ಕುರು ಮಹಾಮತೇ ॥ ೨೫ ॥

॥ ವೃತ್ರ ಉವಾಚ ॥

ಭವತಾಂ ಶಿಷ್ಟಧರ್ಮೇಣ ಸತ್ಯೇನ ತೇನ ತಸ್ಯ ಚ ।
ಮೈತ್ರಮೇವಂ ಕರಿಷ್ಯಾಮಿ ತೇನ ಸಾರ್ಧಂ ದ್ವಿಜೋತ್ತಮಾಃ ॥ ೨೬ ॥

ವೃತ್ರಮಿಂದ್ರಸ್ಯ ಸಂಸ್ಥಾನಂ ನೀತಂ ಬ್ರಾಹ್ಮಣಪುಂಗವೈಃ ।
ಇಂದ್ರಸ್ತಮಾಗತಂ ದೃಷ್ಟ್ವಾ ವೃತ್ರಮಿತ್ರಾರ್ಥಮುದ್ಯತಂ ॥ ೨೭ ॥

---

೨೩. ಇಂದ್ರನು ಹೇಳಿದನು :—ನಿಮ್ಮೊಡನೆಯೂ ನಾನು ಕಪಟಮಾಡಿದರೆ, ಬ್ರಹ್ಮಹತ್ಯಾದೋಷದಿಂದ ಲಿಪ್ತನಾಗುತ್ತೇನೆ. ಸಂಶಯವಿಲ್ಲ. ಎನ್ನಲು,

೨೪. ಆ ಋಷಿಗಳು ಮತ್ತೆ ವೃತ್ರನ ಬಳಿಗೆ ಹೋಗಿ ನಿನ್ನೊಡನೆ ಕಪಟ ಮಾಡಿದರೆ ಇಂದ್ರನು ಬ್ರಹ್ಮಹತ್ಯಾ ಪಾಪಕ್ಕೆ ಗುರಿಯಾಗುವೆನು. ಸಂಶಯವಿಲ್ಲ ವೆಂದನು,

೨೫. ಹೀಗೆಂದು ಅವನು ಹೇಳಿದನಾದುದರಿಂದ ಈ ನಂಬಿಕೆಯಿಂದ ಅವ ನೊಡನೆ ಸ್ನೇಹವನ್ನು ಮಾಡು ಎಂದರು.

೨೬. ವೃತ್ರನು ಹೇಳಿದನು :—ಎಲೈ ಋಷಿಗಳೇ, ಶಿಷ್ಟಧರ್ಮರತರಾದ ನಿಮ್ಮ ಮಾತಿನ ಭರವಸೆಯಿಂದಲೂ, ಅವನ ಆ ಪ್ರತಿಜ್ಞೆಯಿಂದಲೂ ಅವನೊಡನೆ ಸ್ನೇಹವನ್ನು ಮಾಡಿಕೊಳ್ಳುತ್ತೇನೆ. ಎಂದು ಹೇಳಲು,

೨೭. ಆ ಬ್ರಾಹ್ಮಣರು ವೃತ್ರನನ್ನು ಇಂದ್ರನ ಆಸ್ಥಾನಕ್ಕೆ ಕರೆದುಕೊಂಡು ಹೋದರು.

ಸಿಂಹಾಸನಾತ್ಸಮುತ್ಥಾಯ ಹ್ಯರ್ಘ್ಯಮಾದಾಯ ಸತ್ವರಃ ।
ದದೌ ತಸ್ಮೈ ಸ ಧರ್ಮಾತ್ಮಾ ವೃತ್ರಾಯ ದ್ವಿಜಸತ್ತಮಾಃ ॥ ೨೮ ॥

ಅರ್ಧಂ ಭುಂಕ್ಷ್ವ ಮಹಾಪ್ರಾಜ್ಞ ಐಂದ್ರಮೇಕಂ ಮಹತ್ಪದಂ ।
ವರ್ತಿತವ್ಯಂ ಸುಖೇನಾಪಿ ಚಾವಾಭ್ಯಾಂ ದೈತ್ಯಸತ್ತಮ ॥ ೨೯ ॥

ಏವಂ ವಿಶ್ವಾಸಯೇ ದೈತ್ಯಂ ವೃತ್ರಂ ಮೈತ್ರೇಣ ವೈ ತದಾ ।
ತೇಷು ತೇಷು ಚ ಕಾರ್ಯೇಷು ಛದ್ಮನಾ ದ್ವಿಜಸತ್ತಮಾಃ ॥ ೩೦ ॥

ಛಿದ್ರಂ ಪಶ್ಯತಿ ದುಷ್ಟಾತ್ಮಾ ವೃತ್ರಸ್ಯೈವಂ ಸದೈವ ಹಿ ।
ನಿರಾಧಾರತ್ವಮಿಂದ್ರೋऽಪಿ ದಿವಾರಾತ್ರೌ ಪ್ರವರ್ತತೇ ॥ ೩೧ ॥

ವೃತ್ರಸ್ಯ ಪಶ್ಯ ಸ ಚ್ಛಿದ್ರಂ ಛದ್ಮನಾಪಿ ಮಹಾತ್ಮನಃ ।
ಉಪಾಯಂ ಚಿಂತಯಾಮಾಸ ವೃತ್ರಹತ್ಯೈ ಮಹಾಬಲಃ ॥ ೩೨ ॥

ರಂಭಾ ಸಂಪ್ರೇಷಿತಾ ತೇನ ಮೋಹಾಯಾಸ್ಯಾಸುರಸ್ಯ ವೈ ।
ಯೇನ ಕೇನಾಪ್ಯುಪಾಯೇನ ಯಥಾಹಂ ಘಾತಯೇ ಶುಭೇ ॥ ೩೩ ॥

---

೨೮. ಇಂದ್ರನು ಸ್ನೇಹಕ್ಕೋಸ್ಕರ ಬಂದ ವೃತ್ರನನ್ನು ನೋಡಿ ಅರ್ಘ್ಯಪಾದ್ಯಗಳನ್ನು ಕೊಟ್ಟು ಸತ್ಕರಿಸಿ ಕುಳಿತುಕೊಳ್ಳಲು ಅರ್ಧಾಸನವನ್ನು ಕೊಟ್ಟನು. ಬಳಿಕ ಅವನನ್ನು ಕುರಿತು,

೨೯-೩೦. ಎಲೈ ಪ್ರಾಜ್ಞನೇ, ಇಂದ್ರಪದವಿಯಲ್ಲಿ ಅರ್ಧವನ್ನು ಅನುಭವಿಸು. ನಾವಿಬ್ಬರೂ ಸುಖವಾಗಿರಬೇಕು. ನನ್ನಲ್ಲಿ ಸುಖಬುದ್ಧಿಯಿಂದಿರು. ಎಂದು ಒಳ್ಳೆಯ ಮಾತುಗಳನ್ನು ಆಡುತ್ತಿದ್ದರೂ ಎಲ್ಲಾ ಕೆಲಸಗಳಲ್ಲೂ ಕಪಟದಿಂದ ವಿಶ್ವಾಸವನ್ನು ತೋರಿಸುತ್ತ ಬಂದನು.

೩೧. ದುಷ್ಟನಾದ ಇಂದ್ರನು ಯಾವಾಗಲೂ ಛಿದ್ರವನ್ನು ಹುಡುಕುತ್ತಲೇ ಇದ್ದನು. ಆದರೂ ಅವನಿಗೆ ಯಾವ ಅವಕಾಶವೂ ಸಿಕ್ಕಲಿಲ್ಲ.

೩೨. ಕಪಟದಿಂದ ನೋಡುತ್ತಿದ್ದರೂ ಆ ವೃತ್ರನಲ್ಲಿ ಯಾವ ನೆಪವೂ ಸಿಕ್ಕಲಿಲ್ಲ. ಆಗ ಇಂದ್ರನು ಅವನನ್ನು ಕೊಲ್ಲಲು ಒಂದು ಉಪಾಯವನ್ನು ಯೋಚಿಸಿದನು.

೩೩. ಯಾವುದಾದರೂ ಉಪಾಯಮಾಡಿ ಅವನನ್ನು ಕೊಲ್ಲಬೇಕೆಂದು ಯೋಚಿಸಿ ರಂಭೆಯನ್ನು ಕರೆದು,

ತಥಾ ಕುರುಷ್ವ ಕಲ್ಯಾಣಿ ಸಂಮೋಹಾಯ ಸುರದ್ವಿಷಃ ।
ವನಂ ಪುಣ್ಯಂ ಮಹದ್ದಿವ್ಯಂ ಪುಣ್ಯಪಾದಪಶೋಭಿತಂ ॥ ೩೪ ॥

ಬಹುಪುಷ್ಪಫಲೋಪೇತಂ ಮೃಗಪಕ್ಷಿಸಮಾಕುಲಂ ।
ವಿಮಾನೈರದ್ಭುತೈರ್ದಿವ್ಯೈಃ ಪರಿತಃ ಪರಿಶೋಭಿತಂ ॥ ೩೫ ॥

ದಿವ್ಯಗಂಧರ್ವಸಂಗೀತಂ ಭ್ರಮರಾಕುಲಿತಂ ಸದಾ ।
ಕೋಕಿಲಾನಾಂ ರುತೈಃ ಪುಣ್ಯೈಸ್ಸರ್ವತ್ರ ಮಧುರಾಯತೇ ॥ ೩೬ ॥

ಶಿಖಿಸಾರಂಗನಾದೈಶ್ಚ ಸರ್ವರ್ತುಕುಸುಮಾಕುಲಂ ।
ದಿವ್ಯೈಸ್ತು ಚಂದನೈರ್ವೃಕ್ಷೈಃ ಸರ್ವತ್ರ ಸಮಲಂಕೃತಂ ॥ ೩೭ ॥

ವಾಪೀಕೂಪತಟಾಗೈಶ್ಚ ಜಲಪೂರ್ಣೈರ್ಮನೋಹರೈಃ ।
ಕಮಲೈಶ್ಶತಪತ್ರೈಶ್ಚ ಪುಷ್ಪಿತೈಸ್ಸಮಲಂಕೃತಂ ॥ ೩೮ ॥

ದೇವಗಂಧರ್ವಸಿದ್ಧೈಶ್ಚ ಚಾರಣೈಶ್ಚೈವ ಕಿನ್ನರೈಃ ।
ಮುನಿಭಿಶ್ಶುಭೇ ದಿವ್ಯೈರ್ದೇವೋದ್ಯಾನವನೇನ ಚ ॥ ೩೯ ॥

---

೩೪-೩೬. ಆ ಸುರದ್ವೇಷಿಯಾದ ವೃತ್ರಾಸುರನಿಗೆ ಮೋಹವುಂಟಾಗುವಂತೆ ಮಾಡೆಂದು ಕಳುಹಿಸಿದನು. ಹಾಗೆನ್ನಲು, ಅಲ್ಲಿರುವ ವನವು ಫಲಪುಷ್ಪಗಳಿಂದ ಭರಿತವಾದ ಉತ್ತಮವಾದ ಮರಗಳಿಂದಲೂ ಪಕ್ಷಿಮೃಗಗಳಿಂದಲೂ ಅನೇಕ ವಿಮಾನಗಳಿಂದಲೂ ಶೋಭಿಸುತ್ತಾ ಗಂಧರ್ವರ ಸಂಗೀತದಿಂದಲೂ, ಭ್ರಮರಗಳ ಧ್ವನಿಯಿಂದಲೂ, ಕೋಗಿಲೆಗಳ ಧ್ವನಿಯಿಂದಲೂ ಎಲ್ಲೆಲ್ಲೂ ಚೆನ್ನಾಗಿ ಪ್ರಕಾಶಿಸಿತು.

೩೭. ನವಿಲು ಮತ್ತು ಸಾರಂಗಗಳ ಧ್ವನಿಯಿಂದಲೂ, ಎಲ್ಲ ಋತುಗಳ ಫಲಪುಷ್ಪಗಳಿಂದಲೂ, ಉತ್ತಮವಾದ ಗಂಧದ ಮರಗಳಿಂದಲೂ ಆ ವನವು ಶೋಭಿಸುತ್ತಿತ್ತು.

೩೮. ಆ ವನದಲ್ಲಿದ್ದ ಭಾವಿ, ಕೊಳಗಳು, ತಟಾಕಗಳು ಮೊದಲಾದ ಜಲಾಶ್ರಯಗಳೆಲ್ಲವೂ ನೀರಿನಿಂದ ತುಂಬಿ, ಅವುಗಳಲ್ಲಿ ಅಲ್ಲಲ್ಲಿ ಅರಳಿದ ಕಮಲಗಳಿಂದ ನೋಡಲು ಬಹುರಮ್ಯವಾಗಿತ್ತು.

೩೯-೪೨. ಮತ್ತು ಅಲ್ಲಿರುವ ದಿವ್ಯವಾದ ಉದ್ಯಾನವನಗಳಲ್ಲಿ ದೇವತೆಗಳು, ಗಂಧರ್ವರು, ಸಿದ್ಧರು, ಚಾರಣರು, ಕಿನ್ನರರು, ಮುನಿಗಳು, ಅಪ್ಸರಸ್ತ್ರೀಯರು ವಿಹರಿ

ಅಪ್ಸರೋಗಣಸಂಕೀರ್ಣನಾನಾಕೌತುಕಮಂಗಲೈಃ ।
ಹೇಮಪ್ರಸಾದಸಂಬಾಧೈರ್ದಂಡಛತ್ರೈಶ್ಚ ಚಾಮರೈಃ ॥ ೪೦ ॥

ಕಲಶೈಶ್ಚ ಪತಾಕಾಭಿಃ ಸರ್ವತ್ರ ಸಮಲಂಕೃತಂ ।
ವೇದಧ್ವನಿಸಮಾಕೀರ್ಣಂ ಗೀತಧ್ವನಿಸಮಾಕುಲಂ ॥ ೪೧ ॥

ಏವಂ ನಂದನಮಾಸಾದ್ಯ ಸಾ ರಂಭಾ ಚಾರುಹಾಸಿನೀ ।
ಅಪ್ಸರೋಭಿಸ್ಸಮಂ ತತ್ರ ಕ್ರೀಡತ್ಯೇವಂ ವಿಲಾಸಿನೀ ॥ ೪೨ ॥

॥ ಸೂತ ಉವಾಚ ॥

ಏಕದಾ ತು ಸ ವೃತ್ರೋ ವೈ ಜಗಾಮ ನಂದನಂ ವನಂ ।
ಕತಿಭಿರ್ದಾನವೈಃ ಸಾರ್ಧಂ ವಿಶ್ವಸ್ತಃ ಪರಯಾ ಮುದಾ ॥ ೪೩ ॥

ಅಲಕ್ಷ್ಯೋ ಭ್ರಮತೇ ಪಾರ್ಶ್ವೇ ತಸ್ಯೈವ ಚ ಮಹಾತ್ಮನಃ ।
ದೇವರಾಜಸ್ಸ ವಿಪ್ರೇಂದ್ರಾಶ್ಛಿದ್ರಾನ್ವೇಷೀ ವಿಶಂಕಿತಃ ॥ ೪೪ ॥

ಸ ಹಿ ವೃತ್ರೋ ಮಹಾಪ್ರಾಜ್ಞೋ ವಿಶ್ವಸ್ತಃ ಸರ್ವಕರ್ಮಸು ।
ಇಂದ್ರಂ ಮಿತ್ರಂ ಪರಂ ಜ್ಞಾತ್ವಾ ಭಯಂ ಚಕ್ರೇ ನ ತಸ್ಯ ಸಃ ॥ ೪೫ ॥

---

ಸುತ್ತಿದ್ದರು. ಚಿತ್ರವಿಚಿತ್ರಗಳಾದ ವಸ್ತುಗಳಿಂದ ಅಲಂಕೃತವಾದ ಅನೇಕ ಸುವರ್ಣ ಪ್ರಾಸಾದಗಳು ಅಲ್ಲಲ್ಲಿ ಕಂಗೊಳಿಸುತ್ತಿದ್ದವು. ಆ ಅರಮನೆಗಳನ್ನು ದಂಡ, ಛತ್ರ ಚಾಮರ, ಪತಾಕೆ, ಕಲಶ, ಧ್ವಜ ಮೊದಲಾದುವುಗಳಿಂದ ಶೃಂಗರಿಸಿದ್ದರು. ಇದಲ್ಲದೆ ವೇದಘೋಷಣಗಳಿಂದಲೂ, ಸುಶ್ರಾವ್ಯವಾದ ಸಂಗೀತದಿಂದಲೂ ಅ ವನವು ತುಂಬಿ ಹೋಗಿದ್ದಿತು. ಇಂತಹ ನಂದನವನದಲ್ಲಿ ಚಾರುಹಾಸಿನಿಯಾದ ರಂಭೆಯು ತನ್ನ ಜತೆಗಾರರಾದ ಅನೇಕ ಅಪ್ಸರಸ್ತ್ರೀಯರೊಡಗೂಡಿ ವಿಹರಿಸುತ್ತಿದ್ದಳು.

೪೩. ಸೂತನು ಹೇಳುತ್ತಾನೆ :—ಹೀಗಿರಲು ಒಂದು ಸಾರಿ ವೃತ್ರಾಸುರನು ಕೆಲವು ದಾನವರೊಡನೆ ಬಹಳಸಂತೋಷದಿಂದ ಆ ನಂದನವನಕ್ಕೆ ಹೋದನು.

೪೪. ದೇವರಾಜನಾದ ಇಂದ್ರನು ಬಂದು ಅವನ ಪಕ್ಕದಲ್ಲೇ, ಅವನಿಗೆ ಕಾಣದಂತೆ ಹೆದರಿಕೊಂಡು ಅವನಲ್ಲಿ ಛಿದ್ರವನ್ನು ಹುಡುಕುತ್ತಾ ಇದ್ದನು.

೪೫. ಮಹಾಮತಿಯಾದ ವೃತ್ರನು ಎಲ್ಲಾ ಕೆಲಸಗಳಲ್ಲಿಯೂ ನಂಬಿಕೆಯಿಂದಿರುವ ಇಂದ್ರನು ತನ್ನ ಮಿತ್ರನೆಂದೇ ತಿಳಿದು ನಿರ್ಭಯನಾಗಿದ್ದನು.

ಭ್ರಮಮಾಣೋ ವನಂ ಪಶ್ಯೇತ್ ಸರ್ವತ್ರ ಪರಮಂ ಶುಭಂ ।
ಸುರಮ್ಯಂ ಕೌತುಕವನಂ ವನಿತಾಶತಸಂಕುಲಂ ॥ ೪೬ ॥

ಚಂದನಸ್ಯಾಪಿ ವೃಕ್ಷಸ್ಯ ಛಾಯಾಂ ಶೀತಾಂ ಶುಭಾನ್ವಿತಾಂ ।
ಸಮಾಶ್ರಿತ್ಯ ವಿಶಾಲಾಕ್ಷೀ ರಂಭಾ ತತ್ರ ಚ ದೀವ್ಯತಿ ॥ ೪೭ ॥

ಸಖೀಭಿಸ್ತು ಮಹಾಭಾಗಾ ಡೋಲಾರೂಢಾ ಯಶಸ್ವಿನೀ ।
ಗಾಯತೇ ಸುಸ್ವರಂ ಗೀತಂ ಸರ್ವವಿಶ್ವಪ್ರಮೋಹನಂ ॥ ೪೮ ॥

ತತ್ರ ವೃತ್ರಸ್ಸಮಾಯಾತಃ ಕಾಮಾಕುಲಿತಮಾನಸಃ ।
ಡೋಲಾರೂಢಾಂ ಸಮಾಲೋಕ್ಯ ರಂಭಾಂ ತಾಂ ಸುಮನೋಹರಾಂ ॥೪೯॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ವೃತ್ರವಂಚನೇ ತ್ರಯೋವಿಂಶೋಽಧ್ಯಾಯಃ

---

೪೬-೪೮. ವೃತ್ರನು ಅಲ್ಲಲ್ಲಿ ಸಂಚರಿಸುತ್ತಾ ಆ ರಮಣೀಯವಾದ ವನವನ್ನು ನೋಡುತ್ತಿದ್ದನು. ರಮ್ಯವೂ, ಕೌತುಕವೂ ಆದ, ಅನೇಕ ಸ್ತ್ರೀಯರಿಂದ ಕೂಡಿದ, ಆ ವನದಲ್ಲಿ ಚಂದನ ಮರದ ನೆರಳಿನಲ್ಲಿ ರಂಭೆಯು ಸಖಿಯರೊಡನೆ ವಿಹರಿಸುತ್ತಾ ಉಯ್ಯಾಲೆಯಲ್ಲಿ ಕೂಡು ವಿಶ್ವಮೋಹಕವಾದ ಸಂಗೀತವನ್ನು ಸುಸ್ವರದಿಂದ ಹಾಡುತ್ತಿದ್ದಳು.

೪೯. ಅಲ್ಲಿಗೆ ವೃತ್ರಾಸುರನು ಬಂದು ಉಯ್ಯಾಲೆಯಲ್ಲಿ ತೂಗುತ್ತಿರುವ ಮನೋಹರಳಾದ ಆಕೆಯನ್ನು ನೋಡಿ ಕಾಮಾಕುಲಿತನಾದನು.

ಇಲ್ಲಿಗೆ ಪದ್ಮಮಹಾಪುರಾಣದಲ್ಲಿ ಭೂಮಿಖಂಡದಲ್ಲಿ ವೃತ್ರವಂಚನೆಯಲ್ಲಿ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ಚತುರ್ವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಇಯಂ ತು ಕಾ ಗಾಯತಿ ಚಾರುಲೋಚನಾ
ವಿಲಾಸಯಂತೀ ಪರಿತೋ ವನಂ ಚ ।
ಅತೀವ ಶೋಭಾಂ ಲಭತೇ ಮನೋಹರಾ
ಹ್ಯಪೂರ್ವಭಾವೈಃ ಪರಿಮೋಹಯಂತೀ ॥ ೧ ॥

ದೃಷ್ಟ್ವಾ ಸ ರಂಭಾಂ ಕಮಲಾಯತಾಕ್ಷೀಂ
ಪೀನಸ್ತನೀಂ ಚಂದನಚರ್ಚಿತಾಂಗೀಂ ।
ಪದ್ಮಾಸನಾ ಕಾಮಗೃಹಂ ನ ವೈಷಾ
ನೋ ವಾ ರತಿಶ್ಚಾರುಮನೋಹರೇಯಂ ॥ ೨ ॥

---

### ಇಪ್ಪತ್ತನಾಲ್ಕನೆಯ ಅಧ್ಯಾಯವು.

೧. ಸೂತನು ಹೇಳುತ್ತಾನೆ:—ಇವಳಾರು ? ವನವನ್ನೆಲ್ಲಾ ತನ್ನ ಗಾನದಿಂದ ಹರ್ಷಗೊಳ್ಳುವಂತೆ ಮಾಡುತ್ತ ಎಲ್ಲರನ್ನೂ ಮೋಹಗೊಳಿಸುತ್ತಲಿರುವಳು.

೨. ಈಕೆಯ ಕಣ್ಣುಗಳು ಕಮಲದಂತೆ ಸುಂದರವಾಗಿರುವುವು. ಸ್ತನಗಳು ದುಂಡಾಗಿರುವುವು. ದಿವ್ಯವಾದ ಗಂಧವನ್ನು ತನ್ನ ಅಂಗಗಳಿಗೆ ಲೇಪನಮಾಡಿಕೊಂಡು ಮನೋಹರಳಾಗಿ ಒಪ್ಪುತ್ತಿರುವಳು. ಇವಳಾರಿರಬಹುದು ? ಲಕ್ಷ್ಮಿಯೇ? ಲಕ್ಷ್ಮಿಯಾಗಿದ್ದರೆ ಪುರುಷರ ಮನಸ್ಸಿನಲ್ಲಿ ಪೂಜ್ಯಭಾವನೆಯನ್ನುಂಟುಮಾಡುವಳೇ ಹೊರತು ಕಾಮವಿಕಾರವನ್ನು ಮಾಡುವುದಿಲ್ಲ. ಆದುದರಿಂದ ಇವಳು ಲಕ್ಷ್ಮಿಯಲ್ಲ. ಅಥವಾ ಇವಳು ರತಿಯಾಗಿರಬಹುದೆಂದರೆ ಸೌಂದರ್ಯನಿಧಿಯೆನಿಸಿರುವ ರತಿಗಿಂತಲೂ ಇವಳು ಅತ್ಯಂತಮನೋಹರಳಾಗಿರುವಳು.

ಸಂಪೂರ್ಣಭಾವಾಂ ಪರಿರೂಪಯುಕ್ತಾಂ
　ಕಾಮಾಂಗಲೀಲಾಮತಿಮಾದಧಾನಾಂ ।
ಪಶ್ಯಾಮಿ ಚೈನಾಂ ಚ ಸುಕಾಮಮೋಹಿತಾಂ
　ಯಾಸ್ಯಾಮಿ ಪೃಚ್ಛಾಮಿ ಚ ಕಾ ಭವೇತ್ಸಾ　　　　॥ ೩ ॥

ಇತೀವ ದೈತ್ಯಸ್ಸ್ವಿಂಚಿಂತಯಾನಃ
　ಕಾಲೇನ ಮುಗ್ಧಸ್ಸ ಚ ಕಾಲನೋದಿತಃ ।
ರಂಭಾಂ ತು ತಾಂ ತತ್ರ ಜಗಾಮ ಸತ್ವರಂ
　ಉವಾಚ ವೈ ದೀನಮನಾಃ ಸುಲೋಚನಾಂ　　　　॥ ೪ ॥

ಕಸ್ಯಾಸಿ ವಾ ಸುಂದರಿ ಕೇನ ಸೇವಿತಾ
　ಕಿಂ ನಾಮ ತೇ ಪುಣ್ಯತಮಂ ವದಸ್ವ ಮೇ ।
ತವೈವ ರೂಪೇಣ ಮಹಾತಿತೇಜಸಾ
　ಮುಗ್ಧೋಽಸ್ಮಿ ಬಾಲೇ ಮಮ ವಶ್ಯತಾಂ ವ್ರಜ　　　　॥ ೫ ॥

---

೩. ಹಾವಭಾವವಿಲಾಸವೈಯ್ಯಾರಗಳಿಂದ ಇವಳು ಪುರುಷರಿಗೆ ಕಾಮೋದ್ರೇಕವನ್ನು ಉಂಟುಮಾಡುತ್ತಿರುವಳು. ಅಲ್ಲದೇ ತಾನೂ ಕಾಮಕ್ರೀಡೆಯನ್ನೇ ಅಪೇಕ್ಷಿಸುತ್ತಿರುವಂತೆ ತೋರ್ಪಡಿಸುತ್ತಿರುವಳು. ಒಳ್ಳೇದು ಇವಳ ಬಳಿಗೆ ಹೋಗಿ ಇವಳಾರೆಂಬುದನ್ನು ವಿಚಾರಿಸಿ ನೋಡುತ್ತೇನೆ.

೪. ಹೀಗೆಂದು ಆ ದೈತ್ಯನು ಯೋಚಿಸುತ್ತಾ ರಂಭೆಯ ಬಳಿಗೆ ಹೋದನು. ಕಾಲಕ್ಕೆ ವಶರಾಗದವರು ಯಾರೂ ಇಲ್ಲವಷ್ಟೆ? ಅದರಂತೆ ಕಾಲವಶದಿಂದ ಬುದ್ಧಿಹೀನನಾಗಿ,

೫. ಅವಳ ಬಳಿಗೆ ಹೋಗಿ, ಎಲೈ ಸುಂದರಿಯೇ ? ನೀನು ಯಾರಮಗಳು, ಯಾರಹೆಂಡತಿ, ನಿನ್ನ ಹೆಸರೇನು, ಅನುಪಮವಾದ ನಿನ್ನ ರೂಪಲಾವಣ್ಯಗಳು ನನ್ನನ್ನು ಮುಗ್ಧನನ್ನಾಗಿ ಮಾಡಿ ನಿನ್ನ ಬಳಿಗೆ ಕರೆತಂದಿರುವವು. ಆದುದರಿಂದ ನನ್ನ ವಶವರ್ತಿಯಾಗಿ ಸುಖಿಸು ಎನ್ನಲು,

**ಏವಮುಕ್ತ್ವಾ ವಿಶಾಲಾಕ್ಷೀ ಪ್ರಾಹ ಕಾಮಾತುರಂ ಪ್ರತಿ ।**
**ಅಹಂ ರಂಭಾ ಮಹಾಭಾಗ ಕ್ರೀಡಾರ್ಥಂ ವನಮುತ್ತಮಂ ॥ ೬ ॥**

**ಸಖೀಭಿಸ್ಸಹಿತಾ ಯಾತಾ ನಂದನಂ ಕಾಮದಂ ಶುಭಂ ।**
**ತ್ವಂ ಚ ಕೋ ವಾ ಕಿಮರ್ಥಂ ಹಿ ಮಮ ಪಾರ್ಶ್ವಮುಪಾಗತಃ ॥ ೭ ॥**

**॥ ವೃತ್ರ ಉವಾಚ ॥**

**ಶ್ರೂಯತಾಮಭಿಧಾಸ್ಯಾಮಿ ಯೋಽಹಂ ಬಾಲೇ ಸಮಾಗತಃ ।**
**ಹುತಾಶನಾತ್ಸಮುತ್ಪನ್ನಃ ಕಶ್ಯಪಸ್ಯ ಸುತಶ್ಶುಭೇ ॥ ೮ ॥**

**ಸಖಾಹಂ ದೇವದೇವಸ್ಯ ಶಕ್ರಸ್ಯಾಪಿ ಶುಭಾನನೇ ।**
**ಐಂದ್ರಂ ಪದಂ ವರಾರೋಹೇ ಹ್ಯರ್ಧಂ ಮೇ ಭುಕ್ತಿಮಾಗತಂ ॥ ೯ ॥**

**ಅಹಂ ವೃತ್ರಃ ಕಥಂ ದೇವಿ ಮಾಂ ಚೈವಂ ತ್ವಂ ನ ವಿಂದಸಿ ।**
**ತ್ರೈಲೋಕ್ಯಂ ವಶಮಾಯಾತಂ ಪಶ್ಯ ಮೇ ವರವರ್ಣಿನಿ ॥ ೧೦ ॥**

**ಅಹಂ ಶರಣಮಾಯಾತಃ ಕಾಮಾದ್ವಚ್ಮಿ ವರಾನನೇ ।**

---

೬-೭. ಆಕೆಯು ಆ ಕಾಮಾತುರನನ್ನು ಕುರಿತು, ನಾನು ರಂಭೆಯು. ಕ್ರಿಡಿಸುವುದಕ್ಕೋಸ್ಕರ ಉತ್ತಮವಾದ ಈ ವನಕ್ಕೆ ಸಖಿಯರೊಡನೆ ಬಂದಿರುವೆನು. ನೀನು ಯಾರು? ಏತಕ್ಕೋಸ್ಕರ ನನ್ನ ಬಳಿಗೆ ಬಂದಿರುವೆ? ಹೇಳು ಎಂದಳು.

೮. ವೃತ್ರಾಸುರನು ಹೇಳಿದನು:—ಎಲೌ ರಂಭೆಯೇ, ನಾನಾರೆಂಬುದನ್ನು ಹೇಳುತ್ತೇನೆ ಕೇಳು. ನಾನು ಹುಟ್ಟಿದ್ದು ಅಗ್ನಿಯಿಂದ, ಕಶ್ಯಪಋಷಿಗೆ ನಾನು ಮಗನಾಗಬೇಕು.

೯. ದೇವದೇವನಾದ ಇಂದ್ರನೇ ನನಗೆ ಪರಮಮಿತ್ರನು, ಇಂದ್ರನ ಮಹತ್ಪದವಿಯ ಅರ್ಧಭಾಗವನ್ನು ಅನುಭವಿಸುತ್ತಿರುವೆನು.

೧೦. ನನ್ನ ಹೆಸರು ವೃತ್ರಾಸುರನೆಂದು ಇಷ್ಟು ಪ್ರಸಿದ್ಧನಾಗಿರುವ ನನ್ನನ್ನು ನೀನು ತಿಳಿಯೆಯಾ? ನೋಡು ನನಗೆ ಮೂರು ಲೋಕಗಳೂ ಸ್ವಾಧೀನವಾಗಿವೆ.

೧೧. ನಿನ್ನ ರೂಪದಿಂದ ಮೋಹಿತನಾಗಿ ನಾನು ನಿನಗೆ ಶರಣುಬಂದಿದ್ದೇನೆ.

ರಮಸ್ವ ಮಾಂ ವಿಶಾಲಾಕ್ಷಿ ಕಾಮೇನಾಕುಲಿತಂ ಪ್ರಿಯೇ　　॥ ೧೧ ॥

॥ ರಂಭೋವಾಚ ॥

ವಶಗಾಹಂ ತವೈವಾದ್ಯ ಭವಿಷ್ಯಾಮಿ ನ ಸಂಶಯಃ ।
ಯದ್ಯದ್ವದಾಮ್ಯಹಂ ವೀರ ತತ್ತತ್ಕಾರ್ಯಂ ತ್ವಯೈವ ಹಿ　　॥ ೧೨ ॥

ಏವಮಸ್ತು ಮಹಾಭಾಗೇ ತತ್ತತ್ಸರ್ವಂ ಕರೋಮ್ಯಹಂ ।
ಏವಂ ಸಂಭಾಷಣಂ ಶ್ರುತ್ವಾ ತಯಾ ಸಹ ಮಹಾಬಲಃ　　॥ ೧೩ ॥

ತಸ್ಮಿನ್ವನೇ ಮಹಾಪುಣ್ಯೇ ರೇಮೇ ದಾನವಸತ್ತಮಃ ।
ತಸ್ಯಾ ಗೀತೇನ ನೃತ್ಯೇನ ಹಾಸ್ಯೇನ ಲಲಿತೇನ ಚ　　॥ ೧೪ ॥

ಅತಿಮುಗ್ಧೋ ಮಹಾದೈತ್ಯಃ ಸ ತಸ್ಯಾಸ್ಸುರತೇನ ಚ ।
ತಮುವಾಚ ಮಹಾಭಾಗಂ ದಾನವಂ ಸಾ ವರಾನನಾ　　॥ ೧೫ ॥

ಸುರಾಪಾನಂ ಕುರುಷ್ವೇತಿ ಪಿಬಸ್ವ ಮಧುಮಾಧವೀಂ ।
ತಾಮುವಾಚ ವಿಶಾಲಾಕ್ಷೀಂ ರಂಭಾಂ ಶಶಿನಿಭಾನನಾಂ　　॥ ೧೬ ॥

---

ನನಗೆ ಕಾಮಾತುರವು ಹೆಚ್ಚಾಗಿದೆ. ಕಾಮದಿಂದ ವ್ಯಥೆ ಹೊಂದುತ್ತಿರುವ ನನ್ನಲ್ಲಿ ರಮಿಸು. ಎಂದನು.

೧೨-೧೩. ರಂಭೆಯು ಹೇಳುತ್ತಾಳೆ:—ಒಳ್ಳೇದು, ನೀನು ಹೇಳುವಂತೆ ನಿನಗೆ ನಾನು ಅಧೀನಳಾಗುತ್ತೇನೆ. ಸಂಶಯವಿಲ್ಲ. ಆದರೆ ನಾನು ಹೇಳಿದ ಕೆಲಸವನ್ನೆಲ್ಲಾ ನೀನು ಮಾಡಬೇಕು. ಎನ್ನಲು, ವೃತ್ರಾಸುರನು ಅವಳನ್ನು ಕುರಿತು, ಮಹಾಭಾಗಳೇ, ಹಾಗೇ ಆಗಲಿ. ನೀನು ಹೇಳಿದುದನ್ನೆಲ್ಲಾ ಮಾಡುತ್ತೇನೆ. ಎಂಬುದಾಗಿ ಮಾತುಕೊಟ್ಟು, ಅವಳೊಡನೆ ಆ ನಂದನವನದಲ್ಲಿಯೇ ರಮಿಸಿದನು.

೧೪-೧೫. ಅವಳ, ನೃತ್ತ, ಗೀತ, ಹಾಸ್ಯ; ಸುರತಗಳಿಂದ ಪರವಶನಾಗಿರುವಾಗ, ವಸಂತಋತುವಿನ ಈ ಮಧುವನ್ನೂ, ಸುರಾಪಾನವನ್ನೂ ಮಾಡೆಂಬುದಾಗಿ ಹೇಳಿದಳು.

೧೬-೧೭. ಇದನ್ನು ಕೇಳಿ ಆಕೆಯನ್ನು ಕುರಿತು, ನಾನು ಬ್ರಾಹ್ಮಣನ ಮಗ

ಪುತ್ರೋಽಹಂ ಬ್ರಾಹ್ಮಣಸ್ಯಾಪಿ ವೇದವೇದಾಂಗಪಾರಗಃ ।
ಸುರಾಪಾನಂ ಕಥಂ ಭದ್ರೇ ಕರಿಷ್ಯಾಮಿ ವಿನಿಂದಿತಾಂ ॥ ೧೭ ॥

ತಯಾ ತು ರಂಭಯಾ ದೇವ್ಯಾ ಪ್ರೀತ್ಯಾ ದತ್ತಾ ಸುರಾ ಹಠಾತ್ ।
ತಸ್ಯಾ ದಾಕ್ಷಿಣ್ಯಭಾವೈಸ್ತು ಸುರಾಪಾನಂ ಕೃತಂ ತದಾ ॥ ೧೮ ॥

ಅತಿಮುಗ್ಧಸ್ಸುರಾಪಾನಾತ್ ಜ್ಞಾನಭ್ರಷ್ಟೋಽಭವತ್ತದಾ ।
ತದಂತರೇ ಸುರೇಂದ್ರೇಣ ವಜ್ರೇಣ ನಿಹತಸ್ತಥಾ ॥ ೧೯ ॥

ಬ್ರಹ್ಮಹತ್ಯಾದಿಕೈಃ ಪಾಪೈಃ ಸ ಲಿಪ್ತೋ ವೃತ್ರಹಾ ತತಃ ।
ಬ್ರಾಹ್ಮಣಾಸ್ತು ತತಃ ಪ್ರೋಚುರಿಂದ್ರ ಪಾಪಂ ಕೃತಂ ತ್ವಯಾ ॥ ೨೦ ॥

ಅಸ್ಮದ್ವಾಕ್ಯಾತ್ತು ವಿಶ್ವಸ್ತೋ ವೃತ್ರೋ ನಾಮ ಮಹಾಬಲಃ ।
ಹತೋ ವಿಶ್ವಾಸಭಾವೇನ ಏವಂ ಪಾಪಂ ತ್ವಯಾ ಕೃತಂ ॥ ೨೧ ॥

ಇಂದ್ರ ಉವಾಚ

ಯೇನ ಕೇನಾಪ್ಯುಪಾಯೇನ ಹಂತವ್ಯೋರಿಸ್ಸದೈವ ಹಿ ।

---

ನಾಗಿರುವೆನು. ವೇದವೇದಾಂಗಗಳನ್ನೂ ಅಧ್ಯಯನಮಾಡಿರುವೆನು. ಹೀಗಿರುವಾಗ ಹೇಗೆತಾನೇ ಈ ಸುರಾಪಾನವನ್ನು ಮಾಡಲಿ? ಎಂದನು.

೧೮. ಆಗ ರಂಭೆಯು ಪ್ರೀತಿಯಿಂದ ಬಲಾತ್ಕರಿಸಿ ಸುರೆಯನ್ನು ಕೊಟ್ಟಳು. ಆಕೆಯ ದಾಕ್ಷಿಣ್ಯದಿಂದ ಆಗ ಅವನೂ ಕೂಡ ಸುರಾಪಾನವನ್ನು ಮಾಡಿದನು.

೧೯. ಆ ಸುರಾಪಾನದಿಂದ ಜ್ಞಾನತಪ್ಪಿದವನಾದನು. ಈ ಮಧ್ಯದಲ್ಲಿ ಸಮಯ ಕಾಯುತ್ತಿದ್ದ ದೇವೇಂದ್ರನು ಆತನನ್ನು ವಜ್ರಾಯುಧದಿಂದ ಕೊಂದನು.

೨೦-೨೧. ಆಗ ಬ್ರಹ್ಮಹತ್ಯಾಪಾಪವು ಇಂದ್ರನನ್ನು ಆವರಿಸಿತು. ಅನಂತರ ಬ್ರಾಹ್ಮಣರು, ಎಲೈ ಇಂದ್ರನೇ ನೀನು ಕೆಟ್ಟಕೆಲಸಮಾಡಿ ಪಾಪಿಯಾದೆ. ಮಹಾಬಲಿಷ್ಠನಾದ ವೃತ್ರನು ನಮ್ಮ ಮಾತಿನಲ್ಲಿ ನಂಬಿಕೆಯಿಟ್ಟು ಬಂದುದರಿಂದ ಅವನಲ್ಲಿ ವಿಶ್ವಾಸಭಾವವನ್ನು ತೋರ್ಪಡಿಸುತ್ತಾ ಕೃತಘ್ನಭಾವದಿಂದ ಅವನನ್ನು ಕೊಂದಿದ್ದೀಯೆ. ಈ ರೀತಿಯಾಗಿ ನೀನು ಮಹಾಪಾಪಿಯಾಗಿರುವೆ ಎಂದರು.

೨೨-೨೪. ಇಂದ್ರನು ಹೇಳಿದನು ;—ಶತ್ರುವನ್ನು ಯಾವುದಾದರೂ ಉಪಾ

ದೇವಬ್ರಾಹ್ಮಣಹಂತಾ ಚ ಯಜ್ಞಧರ್ಮಸ್ಯ ಕಂಟಕಃ ॥ ೨೨ ॥

ನಿಹತೋ ದಾನವೋ ದುಷ್ಟೋ ಲೋಕಾನಾಂ ಚ ವಿನಾಶಕೃತ್ ।
ಕಿಮರ್ಥಂ ಕುಪಿತಾ ಯೂಯಮೇತನ್ನ್ಯಾಯಸ್ಯ ಲಕ್ಷಣಂ ॥ ೨೩ ॥

ವಿಚಾರಶ್ಚಾಪಿ ಕರ್ತವ್ಯೋ ಭವದ್ಭಿರ್ದ್ವಿಜಸತ್ತಮಾಃ ।
ಪಶ್ಚಾತ್ಕಾರ್ಯಂ ಪ್ರಕರ್ತವ್ಯಂ ನ್ಯಾಯ್ಯಾನ್ಯಾಯಂ ವಿಚಿಂತ್ಯತಾಂ ॥ ೨೪ ॥

ಏವಂ ಸಂಬೋಧಿತಾ ವಿಪ್ರಾ ಇಂದ್ರೇಣಾಪಿ ಮಹಾತ್ಮನಾ ।
ಬ್ರಹ್ಮಾದಿಭಿಃ ಸುರೈಸ್ಸರ್ವೈರ್ಬೋಧಿತಾಸ್ತೇ ಚ ಸತ್ತಮಾಃ ॥
ಜಗ್ಮುಃ ಸ್ವಸ್ಥಾನಮೇವಂ ಹಿ ನಿಹತೇ ಧರ್ಮಕಂಟಕೇ ॥ ೨೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ವೃತ್ರಾಸುರವಧೋನಾಮ ಚತುರ್ವಿಂಶೋಽಧ್ಯಾಯಃ

---

ಯದಿಂದ ಕೊಲ್ಲಲೇಬೇಕು. ಅದರಲ್ಲೂ ದೇವರು, ಬ್ರಾಹ್ಮಣರು, ಇವರನ್ನು ಕೊಲ್ಲುವವನೂ, ಯಜ್ಞಕ್ಕೂ ಧರ್ಮಕ್ಕೂ ಕಂಟಕಪ್ರಾಯನೂ, ಲೋಕವಿನಾಶಕನೂ ಆದ ಈ ದೈತ್ಯನನ್ನು ಕೊಂದಿರುವೆನು. ಇದರಲ್ಲಿ ಪಾಪವೇನಿದೆ? ಅಲ್ಲದೆ ಇದು ರಾಜನ್ಯಾಯದ ಲಕ್ಷಣ. ನೀವೇಕೆ ಕೋಪಗೊಳ್ಳುತ್ತೀರಿ? ಎಲೈ ಬ್ರಾಹ್ಮಣರೇ, ನೀವೂ ವಿಚಾರಮಾಡಬೇಕು. ಆಮೇಲೆ ಕೆಲಸಮಾಡಬೇಕು. ನ್ಯಾಯಾನ್ಯಾಯಗಳನ್ನು ವಿಚಾರಿಸಿರಿ.

೨೫. ಎಂದು ಹೇಳಿ, ಇಂದ್ರನೂ, ಬ್ರಹ್ಮಾದಿದೇವತೆಗಳೂ ಸಹ ಆ ಬ್ರಾಹ್ಮಣರನ್ನು ಸಮಾಧಾನಮಾಡಿದರು. ಹೀಗೆ ಧರ್ಮಕಂಟಕನಾದ ಈತನು ಕೊಲ್ಲಲ್ಪಡಲಾಗಿ ಎಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದರು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೃತ್ರಾಸುರನ
ವಧೆಯಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ಪಂಚವಿಂಶೋಽಧ್ಯಾಯಃ

॥ ಸೂತ ಉವಾಚ ॥

**ವೃತ್ರಂ ತು ನಿಹತಂ ಶ್ರುತ್ವಾ ಸಾ ದಿತಿರ್ದುಃಖಪೀಡಿತಾ ।**
**ಪುತ್ರಶೋಕೇನ ತೇನೈವ ಸಂದಗ್ಧಾ ದ್ವಿಜಸತ್ತಮಾಃ ॥ ೧ ॥**

**ಉವಾಚ ಚ ಮಹಾತ್ಮಾನಂ ಕಶ್ಯಪಂ ಮುನಿಸತ್ತಮಂ ।**
**ಇಂದ್ರಸ್ಯಾಪಿ ಸುದುಷ್ಟಸ್ಯ ವಧಾರ್ಥಂ ಮುನಿಪುಂಗವಾಃ ॥ ೨ ॥**

**ಬ್ರಹ್ಮತೇಜೋಮಯಂ ದಿವ್ಯಂ ದುಸ್ಸಹಂ ಸರ್ವದೈವತೈಃ ।**
**ಪುತ್ರೈಕಂ ದಾತುಮರ್ಹೋಽಸಿ ಸುಪ್ರಿಯಾಹಂ ಯದಾ ವಿಭೋ ॥ ೩ ॥**

---

### ಇಪ್ಪತ್ತೈದನೆಯ ಅಧ್ಯಾಯವು.

೧. ಸೂತನು ಹೇಳಿದನು :—ತನ್ನ ಮಗನು ಸತ್ತದ್ದನ್ನು ಕೇಳಿ ದಿತಿಯು ಪುತ್ರಶೋಕದಿಂದ ಬಹುವಾಗಿ ದುಃಖಪಟ್ಟಳು.

೨. ಮತ್ತು ದುಷ್ಟನಾದ ಇಂದ್ರನನ್ನು ಕೊಲ್ಲಲು ಋಷಿಶ್ರೇಷ್ಠನಾದ ಕಶ್ಯಪನನ್ನು ಕುರಿತು.

೩. ಎಲೈ ಪತಿಯೇ, ನಾನು ನಿನಗೆ ಪ್ರಿಯಳಾಗಿದ್ದರೆ ಸರ್ವದೇವತೆಗಳಿಂದಲೂ ತಡೆಯಲಸಾಧ್ಯನಾಗಿಯೂ ಬ್ರಹ್ಮತೇಜೋಮಯನಾಗಿಯೂ ಇರುವ ಒಬ್ಬ ಮಗನನ್ನು ನನಗೆ ಅನುಗ್ರಹಿಸು ಎಂದಳು.

॥ ಕಶ್ಯಪ ಉವಾಚ ॥

ನಿಹತೌ ಬಲವೃತ್ರೌ ತೌ ಮಮ ಪುತ್ರೌ ಮಹಾಬಲೌ ।
ಪಾಪಮಾಶ್ರಿತ್ಯ ದೇವೇನ ಇಂದ್ರೇಣಾಪಿ ದುರಾತ್ಮನಾ ॥ ೪ ॥

ತಸ್ಯೈವ ಚ ವಧಾರ್ಥಾಯ ಪುತ್ರಮೇಕಂ ದದಾಮ್ಯಹಂ ।
ವರ್ಷಾಣಾಂ ತು ಶತೈಕಂ ತ್ವಂ ಶುಚಿರ್ಭವ ಯಶಸ್ವಿನಿ ॥ ೫ ॥

ಏವಮುಕ್ತ್ವಾ ಸ ಯೋಗೀಂದ್ರೋ ಹಸ್ತಂ ಶಿರಸಿ ವೈ ತದಾ ।
ದತ್ವಾ ದಿತ್ಯಾ ಸಹೈವಾಸೌ ಗತೋ ಮೇರೋಸ್ತಪೋವನಂ ॥ ೬ ॥

ತಪ ಆಸ್ಥಾಯ ಸಾ ದೇವೀ ತಪಂತೀ ವಹ್ನಿಶಾಲಿನೀ ।
ಶುಚಿಷ್ಮತೀ ತದಾ ಭೂತ್ವಾ ಪುತ್ರಾರ್ಥಂ ದ್ವಿಜಸತ್ತಮಾಃ ॥ ೭ ॥

ತತೋ ದೇವೈಸ್ಸಹಸ್ರಾಕ್ಷೋ ಜ್ಞಾತ್ವಾ ತಸ್ಯಾಸ್ತಮುದ್ಯಮಂ ।
ದಿತ್ಯಾಶ್ಚೈವಂ ಮಹಾಭಾಗಾ ಅಂತರಪ್ರೇಕ್ಷಕೋಽಭವತ್ ॥ ೮ ॥

---

೪. ಕಶ್ಯಪನು ಹೇಳುತ್ತಾನೆ:—ಮಹಾಬಲಿಷ್ಠರಾದ ಬಲ, ವೃತ್ರ ಎಂಬ ನನ್ನ ಇಬ್ಬರು ಮಕ್ಕಳನ್ನೂ ಕಪಟಿಯಾದ ಇಂದ್ರನು ಕೊಂದನು.

೫. ಆಗಲಿ, ಅವನನ್ನು ಕೊಲ್ಲುವುದಕ್ಕೋಸ್ಕರ ಒಬ್ಬ ಮಗನನ್ನು ಉತ್ಪಾದನೆಮಾಡುತ್ತೇನೆ. ನೀನು ನೂರುವರ್ಷಗಳವರೆಗೂ ಶುಚಿಯಾಗಿ ತಪಸ್ಸುಮಾಡು.

೬. ಎಂದು ಹೇಳಿ, ಆ ಋಷಿಯು ಆಕೆಯ ತಲೆಯಮೇಲೆ ಕೈಯಿಟ್ಟು ವರವನ್ನೂ ಕೊಟ್ಟು, ಅವಳೊಡನೆಯೇ ಮೇರುವಿನ ಬಳಿಯ ತಪೋವನಕ್ಕೆ ಹೋದನು.

೭. ಅಲ್ಲಿ ಆ ದಿತಿಯು ಅಗ್ನಿತ್ರಯಗಳನ್ನು ಇಟ್ಟುಕೊಂಡು, ಸದಾಶುಚಿಯಾಗಿ ಪುತ್ರಪ್ರಾಪ್ತಿಗಾಗಿ ತಪಸ್ಸುಮಾಡುತ್ತಿದ್ದಳು.

೮. ಇತ್ತ ಇಂದ್ರನು ದೇವತೆಗಳಿಂದ ಈ ಸಮಾಚಾರವನ್ನು ತಿಳಿದು ಸಮಯವನ್ನು ಹುಡುಕುತ್ತಿದ್ದನು.

**ಪಂಚವಿಂಶಾಬ್ದಿಕೋ ಭೂತ್ವಾ ದೇವರಾಟ್ ದೇವತಾಪಸಃ ।**
**ಬ್ರಾಹ್ಮಣಸ್ಯ ಚ ರೂಪೇಣ ತಸ್ಯಾಶ್ಚಾಂತಿಕಮಾಗತಃ ॥ ೯ ॥**

**ಸ ತಾಂ ಪ್ರಣಮ್ಯ ಧರ್ಮಾತ್ಮಾ ಮಾತರಂ ತಪಸಾನ್ವಿತಾಂ ।**
**ತಯೋಕ್ತಸ್ತು ಸಹಸ್ರಾಕ್ಷೋ ಭವಾನ್ ಕೋ ದ್ವಿಜಸತ್ತಮ ॥ ೧೦ ॥**

**ತಾಮುವಾಚ ಸಹಸ್ರಾಕ್ಷಃ ಪುತ್ರೋಽಹಂ ತವ ಶೋಭನೇ ।**
**ಬ್ರಾಹ್ಮಣೋ ವೇದವಿದ್ವಾಂಶ್ಚ ಧರ್ಮಂ ಜಾನಾಮಿ ಸುವ್ರತೇ ॥ ೧೧ ॥**

**ತಪಸಸ್ತವ ಸಾಹಾಯ್ಯಂ ಕರಿಷ್ಯೇ ನಾತ್ರ ಸಂಶಯಃ ।**
**ಶುಶ್ರೂಷತಿ ಸ ಚೈವಂ ಹಿ ಮಾತರಂ ತಾಂ ತಪಸ್ವಿನೀಂ ।**
**ತಮಿಂದ್ರಂ ಸಾ ನ ಜಾನಾತಿ ಆಗತಂ ದುಷ್ಟಕಾರಿಣಂ ॥ ೧೨ ॥**

**ಧರ್ಮಪುತ್ರಂ ವಿಜಾನಾತಿ ಶುಶ್ರೂಷಂತಂ ದಿನೇ ದಿನೇ ।**
**ಅಂಗಂ ಸಂವಾಹಯೇದ್ದೇವ್ಯಾಃ ಪಾದೌ ಪ್ರಕ್ಷಾಳಯೇತ್ತದಾ ॥ ೧೩ ॥**

---

೯-೧೦. ಹೀಗಿರಲು ಇಂದ್ರನು ಇಪ್ಪತ್ತೈದು ವರ್ಷದ ಬ್ರಾಹ್ಮಣತಪಸ್ವಿಯ ರೂಪವನ್ನು ಹಾಕಿಕೊಂಡು ಆಕೆಯ ಬಳಿಗೆ ಬಂದು, ತಪಸ್ಸುಮಾಡುತ್ತಿರುವ ಆ ತಾಯಿಗೆ ನಮಸ್ಕರಿಸಲು, ಆಕೆಯು ಎಲೈ ಬ್ರಾಹ್ಮಣನೇ, ನೀನಾರು ಎಂದು ಕೇಳಿದಳು.

೧೧. ಆಗ ಇಂದ್ರನು, ನಾನು ನಿನ್ನ ಮಗನು, ಬ್ರಾಹ್ಮಣನು. ವೇದಾದಿಗಳನ್ನು ತಿಳಿದಿದ್ದೇನೆ. ಧರ್ಮವನ್ನು ಚೆನ್ನಾಗಿ ಅರಿತಿರುವೆನು. ನಿನ್ನ ತಪಸ್ಸಿಗೆ ಶುಶ್ರೂಷಾದಿಗಳಿಂದ ಸಹಾಯಮಾಡುತ್ತೇನೆಂದು ಹೇಳಿ,

೧೨. ತಪಸ್ಸು ಮಾಡುತ್ತಿರುವ ಆ ತಾಯಿಯನ್ನು ಶಿಶ್ರೂಷೆ ಮಾಡುತ್ತಿದ್ದನು. ಆಕೆಯು ಅವನನ್ನು ದುಷ್ಟನಾದ ಇಂದ್ರನೆಂದು ತಿಳಿಯಲಿಲ್ಲ.

೧೩. ಆಕೆಯು ಆತನನ್ನು ಧರ್ಮಪುತ್ರನೆಂದು ತಿಳಿದೇ ಶಿಶ್ರೂಷೆ ಮಾಡಿಸಿಕೊಳ್ಳುತ್ತಿದ್ದಳು. ಅವನೂ ಆಕೆಯ ಕೈಕಾಲು ಅಮುಕುವುದು. ಕಾಲು ತೊಳೆಯುವುದು, ಮುಂತಾದ ಸೇವೆಯನ್ನು ಮಾಡುತ್ತಿದ್ದನು.

ಫಲಂ ಪುಷ್ಪಂ ಪಯಃ ಪತ್ರಂ ವಲ್ಕಲಾಜಿನಮೇವ ಚ ।
ದದಾತ್ಯೇವಂ ಸ ಧರ್ಮಾತ್ಮಾ ಪ್ರೀತ್ಯಾ ತಸ್ಯೈ ಸದೈವ ಹಿ ॥ ೧೪ ॥

ಭಕ್ತ್ಯಾ ಸಂತೋಷಿತಾ ತಸ್ಯ ಸಂತುಷ್ಟಾ ತಮಭಾಷತ ।
ಪುತ್ರೇ ಜಾತೇ ಮಹಾಪುಣ್ಯ ಇಂದ್ರೇ ಚ ನಿಹತೇ ಸತಿ ॥ ೧೫ ॥

ಕುರು ರಾಜ್ಯಂ ಮಹಾಭಾಗ ಪುತ್ರೇಣ ಮಮ ದೈವಕಂ ।
ಏವಮಸ್ತು ಮಹಾಭಾಗೇ ತ್ವತ್ಪ್ರಸಾದಾಚ್ಛುಚಿಸ್ಮಿತೇ ॥ ೧೬ ॥

ತಸ್ಯಾಶ್ಛಿದ್ರಾಂತರಂ ಪ್ರೇಪ್ಸುರಭವತ್ಪಾಕಶಾಸನಃ ।
ಪೂರ್ಣೇ ವರ್ಷಶತೇ ತಸ್ಯಾ ದದರ್ಶಾಂತರಮೀಶ್ವರಃ ॥ ೧೭ ॥

ಅಕೃತ್ವಾ ಪಾದಯೋಃಶೌಚಂ ದಿತಿಶ್ಶಯನಮಾವಿಶತ್ ।
ಸುಪ್ತಾ ಪಶ್ಚಾಚ್ಛಿರಃ ಕೃತ್ವಾ ಮುಕ್ತಕೇಶಾಸುವಿಹ್ವಲಾ ॥ ೧೮ ॥

ನಿದ್ರಾಮಾಹಾರಯಾಮಾಸ ತಸ್ಯಾಃ ಕುಕ್ಷಿಂ ಪ್ರವಿಶ್ಯ ಸಃ ।
ವಜ್ರಪಾಣಿಸ್ತತೋ ಗರ್ಭಂ ಸಪ್ತಧಾ ವಿಚಕರ್ತ ಹ ॥ ೧೯ ॥

---

೧೪. ಆಕೆಗೆ ಹಣ್ಣು, ಹೂ, ನೀರು, ಎಲೆ, ಬಟ್ಟೆ ಮುಂತಾದುವನ್ನು ತಂದು ಪ್ರೀತಿಯಿಂದ ಕೊಡುತ್ತಿದ್ದನು.

೧೫-೧೬. ಆತನ ಭಕ್ತಿಯಿಂದ ಸಂತೋಷಹೊಂದಿ ಆತನನ್ನು ಕುರಿತು ಮಹಾ ಪುಣ್ಯವಂತನೂ, ಬಲಿಷ್ಠನೂ ಆದ ಮಗನು ಹುಟ್ಟಿ ಇಂದ್ರನನ್ನು ಕೊಂದಮೇಲೆ ಆ ನನ್ನ ಮಗನೊಂದಿಗೆ ನೀನು ದೇವರಾಜ್ಯವನ್ನಾಳು ಎಂದಳು. ಅದಕ್ಕೆ ಈತನು ತಮ್ಮ ಪ್ರಸಾದದಿಂದ ಹಾಗೆಯೇ ಆಗಲಿ ಎಂದನು.

೧೭. ಇಂದ್ರನು ಆಕೆಯಲ್ಲಿ ಛಿದ್ರವನ್ನೇ ಹುಡುಕುತ್ತಿದ್ದನು. ಹೀಗೆ ನೂರು ವರ್ಷಗಳು ತುಂಬಲು ಆತನು ಒಂದು ವ್ಯತ್ಯಾಸವನ್ನು ಕಂಡನು.

೧೮. ಒಂದುದಿನ ಆಯಾಸದಿಂದಿರುವಾಗ ಕಾಲು ತೊಳೆದುಕೊಳ್ಳದೇ ಹಾಸಿಗೆಗೆ ಹೋಗಿ, ತಲೆಯಕೂದಲನ್ನು ಗಂಟುಹಾಕಿಕೊಳ್ಳದೆ ತಲೆಯನ್ನು ಹಿಂದಕ್ಕೆ ಮಾಡಿಕೊಂಡು ಮಲಗಿದಳು.

೧೯. ಹಾಗೆ ಮಲಗಲು, ಇದೇ ಸಮಯವೆಂದು ಇಂದ್ರನು ಅವಳ ಗರ್ಭವನ್ನು ಪ್ರವೇಶಿಸಿ, ವಜ್ರಾಯುಧದಿಂದ ಗರ್ಭದಲ್ಲಿದ್ದ ಮಗುವನ್ನು ಏಳುಭಾಗವಾಗಿ ಕತ್ತರಿಸಿದನು.

ವಜ್ರೇಣ ತೀಕ್ಷ್ಣಧಾರೇಣ ರುರೋದ ಉದರೇ ಸ್ಥಿತಃ ।
ಸ ಗರ್ಭಸ್ತತ್ರ ವಿಪ್ರೇಂದ್ರಾ ಇಂದ್ರಹಸ್ತಗತೇನ ವೈ ॥ ೨೦ ॥

ರುದಮಾನಂ ಮಹಾಗರ್ಭಂ ತಮುವಾಚ ಪುನಃ ಪುನಃ ।
ಶತಕ್ರತುರ್ಮಹಾತೇಜಾ ಮಾರೋದೀರಿತ್ಯಭಾಷತ ॥ ೨೧ ॥

ಸಪ್ತಧಾ ಕೃತವಾನ್ ಶಕ್ರಸ್ತಂ ಗರ್ಭಂ ದಿತಿಜಂ ಪುನಃ ।
ಪುನಸ್ಸರೋದಮಾನಂ ತಮೇಕೈಕಂ ಸಪ್ತಧಾಕರೋತ್ ॥ ೨೨ ॥

ತೇ ವೈ ಜಾತಾಸ್ತು ಮರುತೋ ದೇವಾಸ್ಸರ್ವೇ ಮಹೌಜಸಃ ।
ಯಥಾ ಇಂದ್ರೇಣ ವೈ ಪ್ರೋಕ್ತಾ ಬಭೂವುರ್ನಾಮತಸ್ತಥಾ ॥ ೨೩ ॥

ಅನಿವಾರ್ಯಮಹಾಕಾಯಾಸ್ತೀವ್ರತೇಜಃಪರಾಕ್ರಮಾಃ ।
ಏಕೋನಾಶ್ಚ ಬಭೂವುಸ್ತೇ ಪಂಚಾಶನ್ಮರುತಸ್ತತಃ ॥ ೨೪ ॥

---

೨೦-೨೧. ಎಲೈ ಬ್ರಾಹ್ಮಣರೇ, ಇಂದ್ರನು ತನ್ನ ವಜ್ರಾಯುಧದಿಂದ ಕತ್ತರಿಸುತ್ತಿರಲು, ಆ ಗರ್ಭವು ಅಳುವುದಕ್ಕೆ ಮೊದಲುಮಾಡಿತು. ಆಗ ಇಂದ್ರನು ಆ ಗರ್ಭವನ್ನು ಅಳಬೇಡವೆಂದು ಸಮಾಧಾನಮಾಡಿದರೂ,

೨೨. ಪುನಃ ಅದು ಅಳುತ್ತಿದ್ದುದನ್ನು ನೋಡಿ ಒಂದೊಂದನ್ನೂ ಏಳೇಳಾಗಿ ಮತ್ತೆ ಕತ್ತರಿಸಿದನು.

೨೩. ಹಾಗೆ ಕತ್ತರಿಸಲ್ಪಟ್ಟ ಅವೆಲ್ಲವೂ ಉತ್ತಮವಾದ ದೇವತೆಗಳಾದವು. ಇಂದ್ರನು ಮಾರುದ(ಅಳಬೇಡ) ಎಂದುದರಿಂದ ಅವುಗಳು ಮಾರುತವೆಂದೇ ಹೆಸರನ್ನು ಹೊಂದಿದವು.

೨೪. ಗರ್ಭದ ಆ ಚೂರುಗಳೇ ತಡೆಯಲಸದಳವಾದ ಪರಾಕ್ರಮಿಗಳಾಗಿ ದೊಡ್ಡ ದೇಹವುಳ್ಳವರಾಗಿ ನಾಲ್ವತ್ತೊಂಭತ್ತು ಜನ ಮರುತ್ತುಗಳಾದರು.

ಮರುತೋ ನಾಮ ತೇ ಖ್ಯಾತಾ ಇಂದ್ರಮೇವ ಸಮಾಶ್ರಿತಾಃ ।
ಭೂತಾನಾಮೇವ ಸರ್ವೇಷಾಂ ರೋಚಯಂತೋ ಜಗನ್ಮಹತ್ ॥ ೨೫ ॥

ವರಂ ದೇವನಿಕಾಯೇಷು ಹರಿಃ ಪ್ರಾದಾತ್ಪ್ರಜಾಪತಿಃ ।
ಕ್ರಮಶಸ್ತಾನಿ ರಾಜ್ಯಾನಿ ಪೃಥುಪೂರ್ವಾಣಿ ತಾನಿ ವೈ ॥ ೨೬ ॥

ಸ ದೇವಃ ಪುರುಷಃ ಕೃಷ್ಣಃ ಸರ್ವವ್ಯಾಪೀ ಜಗದ್ಗುರುಃ ।
ತಪೋಜಿಷ್ಣುರ್ಮಹಾತೇಜಾಸ್ಸರ್ವ ಏಕಃ ಪ್ರಜಾಪತಿಃ ॥ ೨೭ ॥

ಪರ್ಜನ್ಯಃ ಪಾವಕಃ ಪುಣ್ಯಃ ಸರ್ವಾತ್ಮಾ ಸರ್ವ ಏವ ಹಿ ।
ತಸ್ಯ ಸರ್ವಮಿದಂ ಪುಣ್ಯಂ ಜಗತ್ಸ್ಥಾವರಜಂಗಮಂ ॥ ೨೮ ॥

ಭೂತಸರ್ಗಮಿದಂ ಸಮ್ಯಕ್ ಶ್ರುತ್ವಾಥ ದ್ವಿಜಸತ್ತಮಾಃ ।
ನ ಕಿಂಚಿದ್ಭಯಮಸ್ತೀಹ ಪರಲೋಕೇಭಯಂ ಕುತಃ ॥ ೨೯ ॥

ಇಮಾಂ ಸೃಷ್ಟಿಂ ಮಹಾಪುಣ್ಯಾಂ ಸರ್ವಪಾಪಹರಾಂ ಶುಭಾಂ ।
ಯಃ ಶೃಣೋತಿ ನರೋ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥ ೩೦ ॥

---

೨೫. ಅವರೆಲ್ಲರೂ ಮರುತ್ತುಗಳೆಂಬ ಹೆಸರಿನಿಂದ ಪ್ರಸಿದ್ಧರಾಗಿ, ಇಂದ್ರನನ್ನೇ ಆಶ್ರಯಿಸಿದರು. ಪ್ರಾಣಿಗಳಿಗೂ ಒಟ್ಟಿನಲ್ಲಿ ಜಗತ್ತೆಲ್ಲವನ್ನೂ ರಂಜಿಸುತ್ತ ಪ್ರಿಯರಾದರು.

೨೬. ಹರಿಯು ಆ ದೇವತೆಗಳೊಳಗೆ ಅವರನ್ನು ಸೇರಿಸಿ ಗೌರವಿಸಿ, ಪೃಥುವೇ ಮೊದಲಾದ ನಲವತ್ತೊಂಭತ್ತು ರಾಜ್ಯಗಳನ್ನು ಕೊಟ್ಟನು.

೨೭-೨೮. ಇಂತಹ ದೇವದೇವನಾದ ಪರಮಪುರುಷನೇ ಕೃಷ್ಣನು. ಅವನು ಸರ್ವವ್ಯಾಪಿ, ಜಗದ್ಗುರುವು, ಇವನನ್ನು ತಪಸ್ಸಿನಿಂದ ಮಾತ್ರವೇ ಪಡೆಯಲು ಸಾಧ್ಯವು. ಸಮಸ್ತಪ್ರಪಂಚಸ್ವರೂಪನು. ಅದ್ವಿತೀಯನು. ಸೃಷ್ಟಿಕರ್ತನು. ಪರ್ಜನ್ಯ, ಅಗ್ನಿ, ಕುಬೇರ ಮೊದಲಾದ ರೂಪಗಳಿಂದ ಸಮಸ್ತ ಚರಾಚರ ಪ್ರಪಂಚವನ್ನೂ ವ್ಯಾಪಿಸಿರುವವನೂ ಅವನೇ. ಸಮಸ್ತ ಜಗತ್ತೂ ಅವನಿಗೆ ವಶವಾಗಿರುವುದು.

೨೯. ಪ್ರಾಣಿಗಳ ಈ ಸೃಷ್ಟಿಯನ್ನು ಕೇಳಿದವನು ಇಹಲೋಕದಲ್ಲೂ, ಪರಲೋಕದಲ್ಲೂ ಭಯಪಡಬೇಕಾದುದಿಲ್ಲ.

೩೦. ಮಹಾಪುಣ್ಯಪ್ರದವೂ, ಪಾಪಹರವೂ ಆದ ಈ ಸೃಷ್ಟಿಯನ್ನು ಕೇಳಿದವನು ಎಲ್ಲಾ ಪಾಪಗಳಿಂದಲೂ ಮುಕ್ತನಾಗುತ್ತಾನೆ.

ಸ ಹಿ ಧನ್ಯಶ್ಚ ಪುಣ್ಯಶ್ಚ ಸ ಹಿ ಸತ್ಯಸಮನ್ವಿತಃ ।
ಯಃ ಶೃಣೋತಿ ಇಮಾಂ ಸೃಷ್ಟಿಂ ಸ ಯಾತಿ ಪರಮಾಂ ಗತಿಂ ॥ ೩೧ ॥

ಸರ್ವಪಾಪ ವಿಶುದ್ಧಾತ್ಮಾ ವಿಷ್ಣುಲೋಕಂ ಚ ಗಚ್ಛತಿ ॥ ೩೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ಮರುದುತ್ಪತ್ತಿರ್ನಾಮ ಪಂಚವಿಂಶೋಽಧ್ಯಾಯಃ



---

೩೧-೩೨. ಈ ಸೃಷ್ಟಿಯನ್ನು ಕೇಳಿದವನು ಧನ್ಯನು, ಪುಣ್ಯವಂತನು, ಸತ್ಯದಿಂದ ಕೂಡಿದವನು. ಈತನು ಸರ್ವ ಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಹೊಂದುವನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಮರುತ್ತುಗಳ ಉತ್ಪತ್ತಿ
ಎಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ಷಡ್ವಿಂಶೋಽಧ್ಯಾಯಃ

॥ ಸೂತ ಉವಾಚ ।

ಸ ಪ್ರಭುಸ್ಸರ್ವದೇವಸ್ತು ಹ್ಯಭ್ಯಷಿಚ್ಯ ತತೋ ನೃಪಂ ।
ಪೃಥುಂ ವೇನಸ್ಯ ತನಯಂ ಸರ್ವರಾಜ್ಯೇ ಮಹಾಪ್ರಭುಃ ॥ ೧ ॥

ಮಹಾಬಾಹುಂ ಮಹಾಕಾಯಂ ಯಥೇಂದ್ರಂ ಚ ಸುರೇಶ್ವರಂ ।
ಕ್ರಮೇಣಾಪಿ ತತೋ ಬ್ರಹ್ಮಾ ರಾಜ್ಯಾನಿ ಸುವಿಚಾರ್ಯ್ಯ ಹಿ ॥ ೨ ॥

ಯದ್ಯಸ್ಯಾಪಿ ಭವೇದ್ಯೋಗ್ಯಂ ದಾತುಂ ತದುಪಚಕ್ರಮೇ ।
ವೃಕ್ಷಾಣಾಂ ಬ್ರಾಹ್ಮಣಾನಾಂ ಚ ಗ್ರಹರ್ಕ್ಷಾಣಾಂ ತಥೈವ ಚ ॥ ೩ ॥

---

## ಇಪ್ಪತ್ತಾರನೆಯ ಅಧ್ಯಾಯವು.

೧. ಸೂತನು ಹೇಳುತ್ತಾನೆ:—ಸರ್ವದೇವನಾದ ಆ ಸ್ವಾಮಿಯು ವೇನನ ಮಗನಾದ ಪೃಥುವನ್ನು ಸರ್ವರಾಜ್ಯದಲ್ಲಿ ಅಭಿಷೇಕ ಮಾಡಿದನು.

೨. ಮಹಾಭಾಹುವೂ, ಮಹಾಕಾಯನೂ ಆದ ಇಂದ್ರನನ್ನು ದೇವರಾಜ್ಯದಲ್ಲಿ ಅಭಿಷೇಕಮಾಡಿದನು. ಅನಂತರ ಆ ಸ್ವಾಮಿಯು ಕ್ರಮವಾಗಿ ವಿಚಾರಮಾಡುತ್ತಾ ಯಾವನಿಗೆ ಯಾವುದು ಯೋಗ್ಯವೆಂದು ತೋರುತ್ತದೆಯೋ ಅವನವನಿಗೆ ಅದನ್ನು ಕೊಡುತ್ತಾಬಂದನು.

೩. ಮರಗಳು, ಬ್ರಾಹ್ಮಣರು, ಗ್ರಹಗಳೂ, ಇವರಿಗೆ ತಪೋನಿಧಿಯಾದ ಸೋಮನನ್ನು ರಾಜನನ್ನಾಗಿ ಮಾಡಿದನು.

ಸೋಮಂ ರಾಜ್ಯೇಽಭಿಷಿಂಚಚ್ಚ ತಪಸಾಂ ಚ ಮಹಾಮತಿಃ ।
ಧರ್ಮಾಣಾಂ ಸರ್ವಯಜ್ಞಾನಾಂ ಪುಣ್ಯಾನಾಂ ಸೌಮ್ಯತೇಜಸಾ ॥ ೪ ॥

ಅಪಾಂ ಮಧ್ಯೇ ತಥಾ ದೇವಂ ತೀರ್ಥಾನಾಂ ಹಿ ತಥೈವ ಚ ।
ವರುಣಂ ಸೋಽಭ್ಯಷಿಂಚದ್ವೈ ರತ್ನಾನಾಂ ಚ ದ್ವಿಜೋತ್ತಮ ॥ ೫ ॥

ಅನ್ಯೇಷಾಂ ಸರ್ವಯಕ್ಷಾಣಾಂ ರಾಜ್ಯೇ ವೈಶ್ರವಣಂ ಪುನಃ ।
ವಿಷ್ಣುಮೇವ ಮಹಾಪ್ರಾಜ್ಞಮಾದಿತ್ಯಾನಾಂ ಪಿತಾಮಹಃ ॥ ೬ ॥

ರಾಜ್ಯೇ ಸಂಸ್ಥಾಪಯಾಮಾಸ ತೀರ್ಥಾನಾಂ ಹಿತಹೇತವೇ ।
ಸರ್ವೇಷಾಮೇವ ಪುಣ್ಯಾನಾಂ ದಕ್ಷಮೇವ ಪ್ರಜಾಪತಿಂ ॥ ೭ ॥

ಸಮರ್ಥಂ ಸರ್ವಧರ್ಮಜ್ಞಂ ಪ್ರಜಾಪತಿಗಣೇಶ್ವರಂ ।
ದೈತ್ಯಾನಾಂ ದಾನವಾನಾಂ ಚ ವಿಷ್ಣುತೇಜಸ್ಸಮನ್ವಿತಂ ॥ ೮ ॥

ಪ್ರಹ್ಲಾದಂ ಸ್ಥಾಪಯಾಮಾಸ ಸ ಹಿ ರಾಜ್ಯೇ ಪ್ರಜಾಪತಿಃ ।
ಯಮಂ ವೈವಸ್ವತಂ ಧರ್ಮಂ ಪಿತೃರಾಜ್ಯೇಽಭ್ಯಷಿಂಚಯತ್ ॥ ೯ ॥

ಯಕ್ಷರಾಕ್ಷಸಭೂತಾನಾಂ ಪಿಶಾಚೋರಗರಕ್ಷಸಾಂ ।
ಯೋಗಿನೀನಾಂ ಚ ಸರ್ವಾಸಾಂ ವೇತಾಳಾನಾಂ ಮಹಾತ್ಮನಾಂ ॥ ೧೦ ॥

---

೪-೫. ಧರ್ಮ, ಯಜ್ಞ, ಪುಣ್ಯ, ಇವುಗಳಿಗೂ, ತೀರ್ಥಾದಿಗಳಿಂದಕೂಡಿದ ಸಮಸ್ತ ಜಲರಾಶಿಗಳಿಗೂ ಸೌಮ್ಯನಾಗಿರುವ ವರುಣನನ್ನು ರಾಜನನ್ನಾಗಿ ಮಾಡಿದನು

೬. ಯಕ್ಷರಿಗೆ ಕುಬೇರನನ್ನೂ, ತೀರ್ಥಗಳ ಹಿತದೃಷ್ಟಿಯಿಂದ ಆದಿತ್ಯರಿಗೆ ವಿಷ್ಣುವನ್ನೂ, ರಾಜನನ್ನಾಗಿ ಮಾಡಿದನು.

೭-೯. ಪುಣ್ಯಗಳಿಗೆ ದಕ್ಷನನ್ನೂ, ದೈತ್ಯರಿಗೂ, ದಾನವರಿಗೂ, ವಿಷ್ಣುತೇಜೋಯುಕ್ತನಾದ ಪ್ರಹ್ಲಾದನನ್ನೂ, ಪಿತೃಗಳಿಗೆ ಯಮನನ್ನೂ, ರಾಜನನ್ನಾಗಿ ಮಾಡಿದನು

೧೦-೧೩. ಯಕ್ಷರು, ರಾಕ್ಷಸರು, ಭೂತಗಳು, ಪಿಶಾಚಗಳು, ಉರಗರು, ರಾಕ್ಷಸರು, ಯೋಗಿನಿಗಳು, ವೇತಾಳಗಳು, ಕಂಕಾಳಗಳು, ಕೂಷ್ಮಾಂಡರು, ಭೂಮಿಯ ಇತರ ಪ್ರಾಣಿಗಳಿಗೂ, ಗಿರಿಶನನ್ನೂ, ಪರ್ವತಗಳಿಗೆ ಹಿಮವಂತನನ್ನೂ, ನದಿ, ಕೆರೆ,

ಕಂಕಾಳಾನಾಂ ಹಿ ಸರ್ವೇಷಾಂ ಕೂಷ್ಮಾಂಡಾನಾಂ ತಥೈವ ಚ ।
ಪಾರ್ಥಿವಾನಾಂ ತು ಸರ್ವೇಷಾಂ ಗಿರಿಶಂ ಶೂಲಪಾಣಿನಂ ॥ ೧೧ ॥

ಪರ್ವತಾನಾಂ ಹಿ ಸರ್ವೇಷಾಂ ಹಿಮವಂತಂ ಮಹಾಗಿರಿಂ ।
ನದೀನಾಂ ಚ ತಟಾಗಾನಾಂ ವಾಪಿಕಾನಾಂ ತಥೈವ ಚ ॥ ೧೨ ॥

ಕುಂಡಾನಾಂ ಕೂಪರಾಜ್ಯೇ ಹಿ ದಿವ್ಯೇಷು ಚ ಸುರೇಶ್ವರಃ ।
ಸಾಗರಾಣಾಂ ಚ ಸರ್ವೇಷಾಂ ಪುಷ್ಕರಂ ತೀರ್ಥಮುತ್ತಮಂ ।
ಗಂಧರ್ವಾಣಾಂ ಚ ಸರ್ವೇಷಾಂ ಪುಣ್ಯಾತ್ಮಾನಂ ಮಹಾಬಲಂ ॥ ೧೩ ॥

ನಾಮ್ನಾ ಚಿತ್ರರಥಂ ರಾಜ್ಯೇ ಸೋಽಭ್ಯಷಿಂಚತ್ಸುರೇಶ್ವರಃ ।
ನಾಗಾನಾಂ ಪುಣ್ಯವೀರ್ಯಾಣಾಂ ವಾಸುಕಿಂ ಚ ಚತುರ್ಮುಖಃ ॥ ೧೪ ॥

ಸರ್ಪಾಣಾಂ ಚ ತಥಾ ರಾಜ್ಯೇಽಭ್ಯಷಿಂಚಚ್ಚ ತಕ್ಷಕಂ ।
ವಾರಣಾನಾಂ ತಥಾ ರಾಜ್ಯೇ ಸ ಚೈರಾವಣಮಾದಿಶತ್ ॥ ೧೫ ॥

ಅಶ್ವಾನಾಂ ಚೈವ ಸರ್ವೇಷಾಮುಚ್ಚೈಃಶ್ರವಸ ಮೇವ ಚ ।
ಪಕ್ಷಿಣಾಂ ಚೈವ ಸರ್ವೇಷಾಂ ವೈನತೇಯಮಥಾಪಿ ಸಃ ॥ ೧೬ ॥

ಮೃಗಾಣಾಂ ಚ ತತೋ ರಾಜ್ಯೇ ಬ್ರಹ್ಮಾ ಸಿಂಹಮಥಾದಿಶತ್ ।
ಗೋವೃಷಂ ತು ಗವಾಂ ಮಧ್ಯೇ ಹ್ಯಭ್ಯಷಿಂಚತ್ಪ್ರಜಾಪತಿಃ ॥ ೧೭ ॥

ವನಸ್ಪತೀನಾಂ ಸರ್ವೇಷಾಂ ಪ್ಲಕ್ಷಂ ರಾಜಾನಮಾದಿಶತ್ ।
ಏವಂ ರಾಜ್ಯಾನಿ ಪುಣ್ಯಾನಿ ಸಂಸ್ಥಾಪ್ಯ ಸ ಪಿತಾಮಹಃ ॥ ೧೮ ॥

---

ಬಾವಿ, ಕಟ್ಟೆಗಳು ಸಾಗರಗಳು, ಇವೆಲ್ಲಕ್ಕೂ ಪುಷ್ಕರನನ್ನೂ, ಗಂಧರ್ವರಿಗೆಲ್ಲಾ ಚಿತ್ರರಥನನ್ನೂ, ರಾಜನನ್ನಾಗಿ ಮಾಡಿದನು.

೧೪-೧೭. ನಾಗರಿಗೆ ವಾಸುಕಿಯನ್ನೂ, ಸರ್ಪಗಳಿಗೆ ತಕ್ಷಕನನ್ನೂ, ಆನೆಗಳಿಗೆ ಐರಾವತವನ್ನೂ, ಕುದುರೆಗಳಿಗೆ ಉಚ್ಚೈಃಶ್ರವಸ್ಸನ್ನೂ, ಪಕ್ಷಿಗಳಿಗೆ ಗರುಡನನ್ನೂ, ಮೃಗಗಳಿಗೆ ಸಿಂಹವನ್ನೂ, ಗೋವುಗಳಿಗೆ ಗೂಳಿಯನ್ನೂ, ರಾಜನನ್ನಾಗಿ ಮಾಡಿದನು.

೧೮. ವನಸ್ಪತಿಗಳಿಗೆ ಪ್ಲಕ್ಷ(ಬಸುರಿ)ಮರವನ್ನೂ ರಾಜನನ್ನಾಗಿ ಮಾಡಿದನು. ಹೀಗೆ ಒಂದೊಂದಕ್ಕೂ ಒಂದುರಾಜ್ಯ, ಅವುಗಳಿಗೆ ರಾಜನನ್ನು ಗೊತ್ತುಮಾಡಿದನು.

ದಿಶಾಪಾಲಾಂಸ್ತತೋ ಬ್ರಹ್ಮಾ ಸ್ಥಾಪಯಾಮಾಸ ಸತ್ತಮಃ ।
ವೈರಾಜಸ್ಯ ತಥಾ ಪುತ್ರಂ ಪೂರ್ವಸ್ಯಾಂ ದಿಶ್ಯಸಿಂಚಯತ್ ॥ ೧೯ ॥

ಸುಧನ್ವಾನಂ ದಿಶಃ ಪಾಲಂ ರಾಜಾನಂ ಸೋಽಭ್ಯಷಿಂಚಯತ್ ।
ದಕ್ಷಿಣಸ್ಯಾಂ ಮಹಾತ್ಮಾನಂ ಕರ್ದಮಸ್ಯ ಪ್ರಜಾಪತೇಃ ॥ ೨೦ ॥

ಪುತ್ರಂ ಶಂಖಪದಂ ನಾಮ ರಾಜಾನಂ ಸೋಽಭ್ಯಷಿಂಚಯತ್ ।
ಪಶ್ಚಿಮಾಯಾಂ ತಥಾ ಬ್ರಹ್ಮಾ ವರುಣಸ್ಯ ಪ್ರಜಾಪತೇಃ ॥ ೨೧ ॥

ಪುತ್ರಂ ಚ ಪುಷ್ಕರಂ ನಾಮ ಸೋಽಭ್ಯಷಿಂಚತ್ ಪ್ರಜಾಪತಿಃ ।
ಉತ್ತರಸ್ಯಾಂ ದಿಶಿ ಬ್ರಹ್ಮಾ ನಳಕೂಬರಮೇವ ಚ ॥ ೨೨ ॥

ಏವಂ ಚೈವಾಭ್ಯಷಿಂಚಚ್ಚ ದಿಕ್ಪಾಲಾನ್ಸ ಮಹೌಜಸಃ ।
ಯೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪತ್ತನಾ ॥ ೨೩ ॥

ಯಥಾಪ್ರದೇಶಮದ್ಯಾಪಿ ಧರ್ಮೇಣ ಪರಿಪಾಲ್ಯತೇ ।
ಪೃಥುಶ್ಚೈವ ಮಹಾಭಾಗೋ ಹ್ಯಭಿಷಿಕ್ತೋ ನರಾಧಿಪಃ ॥ ೨೪ ॥

ರಾಜಸೂಯಾದಿಭಿಸ್ಸರ್ವೈರಭಿಷಿಕ್ತಸ್ಸ ಏವ ಚ ।
ವಿಧಿನಾ ವಿಧಿದೃಷ್ಟೇನ ಸ ಚ ರಾಜ್ಯೇ ಮಹೀಪತಿಃ ॥ ೨೫ ॥

---

೧೯-೨೨. ಇದೇರೀತಿ ದಿಕ್ಪಾಲರನ್ನೂ ಆ ಬ್ರಹ್ಮನು ಸ್ಥಾಪಿಸಿದನು. ಪೂರ್ವ ದಿಕ್ಕಿನಲ್ಲಿ ವೈರಾಜನ ಮಗನನ್ನು, ಅಭಿಷೇಕ ಮಾಡಿದನು. ಆತನು ಸುಧನ್ವನೆಂಬ ಹೆಸರುಳ್ಳವನು. ಅವನು ಆ ದಿಕ್ಕಿಗೆ ರಾಜನಾದನು. ದಕ್ಷಿಣದಿಕ್ಕಿಗೆ ಕರ್ದಮಪ್ರಜಾಪತಿಯ ಮಗನಾದ ಶಂಖಪಾದನನ್ನು ರಾಜನನ್ನಾಗಿ ಮಾಡಿದನು. ಪಶ್ಚಿಮದಿಕ್ಕಿಗೆ ವರುಣನ ಮಗನಾದ ಪುಷ್ಕರನನ್ನು ರಾಜನನ್ನಾಗಿ ಮಾಡಿದನು. ಉತ್ತರದಿಕ್ಕಿಗೆ ಆ ಬ್ರಹ್ಮನು ನಳಕೂಬರನನ್ನು ರಾಜನನ್ನಾಗಿ ಮಾಡಿದನು.

೨೩. ಈರೀತಿಯಾಗಿ ದಿಕ್ಪಾಲರನ್ನೂ, ನಿಯಮಿಸಿದನು. ಅವರೆಲ್ಲರೂ ಧರ್ಮದಿಂದ ಸಪ್ತದ್ವೀಪದಿಂದ ಕೂಡಿರುವ ಈ ಭೂಮಿಯನ್ನು ಈಗಲೂಕೂಡ ಧರ್ಮದಿಂದ ಪಾಲಿಸುತ್ತಿದ್ದಾರೆ.

೨೪-೨೫. ರಾಜ್ಯವಾಳಲು ನಿಯಮಿಸಲ್ಪಟ್ಟ ಈ ಪೃಥುವು ರಾಜಸೂಯವೇ ಮೊದಲಾದ ಯಜ್ಞಗಳನ್ನು ಮಾಡಿ ಧರ್ಮದಿಂದ ರಾಜ್ಯಪರಿಪಾಲನೆಮಾಡಿದನು. ಇನ್ನೂ ಅನೇಕವಾದ ವಿಧಿಗಳಿಂದ ಯಾಗಾದಿಗಳನ್ನುಮಾಡಿ ರಾಜ್ಯಭಾರಮಾಡಿದನು.

ಚಾಕ್ಷುಷೇ ನಾಮ್ನ್ಯತೀತೇ ತು ಮನೌ ಚೈವ ಮಹೌಜಸಿ ।
ಮನ್ವಂತರೇ ಮಹಾಭಾಗಾ ದೇವಪುಣ್ಯೇ ಹಿತೈಷಿಣೀ ॥ ೨೬ ॥

ತತೋ ವೈವಸ್ವತಾಯೈವ ಮನವೇ ರಾಜ್ಯಮಾದಿಶತ್ ।
ವಿಸ್ತರಂ ಚಾಪಿ ವ್ಯಾಖ್ಯಾಸ್ಯೇ ಪೃಥೋಶ್ಚೈವ ಮಹಾತ್ಮನಃ ।
ಯದಿ ಯೂಯಂ ಚ ವಿಪ್ರೇಂದ್ರಾಃ ಶುಶ್ರೂಷಥ ಹ್ಯತಂದ್ರಿತಾಃ ॥ ೨೭ ॥

ಏತದೇವ ಪ್ರತಿಷ್ಠಾನಂ ಮಹತ್ಪುಣ್ಯಂ ಪ್ರಕೀರ್ತಿತಂ ।
ಸರ್ವೇಷ್ವೇವ ಪುರಾಣೇಷು ತ್ವೇವಂ ಹಿ ನಿಶ್ಚಿತಂ ಸದಾ ॥ ೨೮ ॥

ಪುಣ್ಯಂ ಯಶಸ್ಯಮಾಯುಷ್ಯಂ ಸ್ವರ್ಗವಾಸಕರಂ ಶುಭಂ ।
ಧನ್ಯಂ ಪವಿತ್ರಂ ವಿಖ್ಯಾತಂ ಪುತ್ರದಂ ಬುದ್ಧಿಕಾರಕಂ ॥ ೨೯ ॥

ಇತಿ ಶ್ರೀ ಮಹಾಪುರಣೇ ಪಾದ್ಮೇ ಭೂಮಿಖಂಡೇ ಪೃಥು
ಚರಿತಪ್ರಸ್ತಾವೋ ನಾಮ ಷಡ್ವಿಂಶೋಧ್ಯಾಯಃ.

---

೨೬. ಶಕ್ತನಾದ ಚಾಕ್ಷುಷಮನುವು ತನ್ನ ರಾಜ್ಯಭಾರವನ್ನು ಸರಿಯಾದ ರೀತಿಯಿಂದ ಮಾಡಿ, ಕೀರ್ತಿವಂತನಾದನು. ಅನಂತರ ದೇವತೆಗಳಪ್ರೀತಿಗೆ ಪಾತ್ರನಾದ ವೈವಸ್ವತಮನುವಿಗೆ ರಾಜ್ಯವನ್ನು ಕೊಟ್ಟನು.

೨೭. ನಿಮಗೆ ಬೇಸರವಿಲ್ಲದೆ ಕೇಳುವ ಇಚ್ಛೆಇದ್ದಲ್ಲಿ ಆ ಪೃಥುವಿನ ವಿಷಯವನ್ನು ಇನ್ನೂ ವಿಸ್ತಾರವಾಗಿ ಹೇಳುತ್ತೇನೆ.

೨೮. ಈ ವಿಷಯವನ್ನು ಶ್ರವಣಮಾಡುವುದು ಬಹು ಪುಣ್ಯಕರವೆಂದು ಪರಿಗಣಿಸಲ್ಪಟ್ಟಿದೆ. ಎಲ್ಲಾ ಪುರಾಣಗಳಲ್ಲಿಯೂ ಇದನ್ನು ಅಂಗೀಕರಿಸಿದ್ದಾರೆ.

೨೯. ಇದು ಪುಣ್ಯ, ಯಶಸ್ಸು, ಸ್ವರ್ಗ, ಶುಭಗಳನ್ನು ಕೊಡತಕ್ಕದ್ದು. ಮತ್ತು ಇದನ್ನು ಕೇಳುವವನು ಧನ್ಯನೂ, ಪವಿತ್ರನೂ, ಖ್ಯಾತಿವಂತನೂ, ಆಗುವುದಲ್ಲದೆ ಸುಪುತ್ರನನ್ನೂ ಒಳ್ಳೆಯ ಜ್ಞಾನವನ್ನೂ, ಪಡೆದು ಸುಖಿಸುವನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದ ಪೃಥುಚರಿತೆಯಲ್ಲಿ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ಸ ಪ್ತ ವಿ ಂ ಶೋ ऽ ಧ್ಯಾ ಯಃ

॥ ಋಷಯ ಊಚುಃ ॥

ವಿಸ್ತರೇಣ ಸಮಾಖ್ಯಾಹಿ ಜನ್ಮ ತಸ್ಯ ಮಹಾತ್ಮನಃ ।
ಪೃಥೋಶ್ಚೈವ ಮಹಾಭಾಗ ಶ್ರೋತುಕಾಮಾ ವಯಂ ಪುನಃ ॥ ೧ ॥

ರಾಜ್ಞಾ ತೇನ ಯಥಾ ದುಗ್ಧಾ ಚೇಯಂ ಧಾತ್ರೀ ಮಹಾತ್ಮನಾ ।
ಪುನರ್ದೇವೈಶ್ಚ ಪಿತೃಭಿರ್ಮುನಿಭಿಸ್ತತ್ತ್ವವೇದಿಭಿಃ ॥ ೨ ॥

ಯಥಾ ದೈತ್ಯೈಶ್ಚ ನಾಗೈಶ್ಚ ವೃಕ್ಷೈಶ್ಚ ಪರ್ವತಾದಿಕೈಃ ।
ಶೈಲೈಶ್ಚೈವ ಪಿಶಾಚೈಶ್ಚ ಗಂಧರ್ವೈಃ ಪುಣ್ಯಕರ್ಮಭಿಃ ॥ ೩ ॥

ಬ್ರಾಹ್ಮಣೈಶ್ಚ ತಥಾ ಸಿದ್ಧೈರ್ಬ್ರಾಹ್ಮಣೈರ್ಭೀಮವಿಕ್ರಮೈಃ ।
ಪೂರ್ವಮೇವ ಯಥಾ ದುಗ್ಧಾ ಹ್ಯನ್ಯೈಶ್ಚೈವ ಮಹಾತ್ಮಭಿಃ ॥ ೪ ॥

---

### ಇಪ್ಪತ್ತೇಳನೆಯ ಅಧ್ಯಾಯವು.

೧. ಋಷಿಗಳು ಹೇಳುತ್ತಾರೆ:—ಮಹಾತ್ಮನಾದ ಆ ಪೃಥುವಿನ ಚರಿತ್ರೆಯನ್ನು ಕೇಳಬೇಕೆಂದಿದ್ದೇವೆ ಅದನ್ನು ವಿಸ್ತಾರವಾಗಿ ಹೇಳು.

೨-೪. ಆ ಪೃಥುವು ಮೊದಲು ಭೂಮಿಯನ್ನು ಕರೆದುದು ಹೇಗೆ? ದೇವತೆಗಳು, ಪಿತೃಗಳು, ಮುನಿಗಳು, ದೈತ್ಯರು, ನಾಗರು, ವೃಕ್ಷಗಳು, ಪರ್ವತಗಳು, ಪಿಶಾಚಗಳು, ಗಂಧರ್ವರು, ಬ್ರಾಹ್ಮಣರು, ಸಿದ್ಧರು, ಇವರು ಮೊದಲೇ ಕರೆದಿದ್ದರಷ್ಟೆ, ಅವರಿಗೂ ಇವರಿಗೂ ವಿಶೇಷವೇನು? ದಯವಿಟ್ಟು ತಿಳಿಸು.

ತೇಷಾಮೇವ ಹಿ ಸರ್ವೇಷಾಂ ವಿಶೇಷಂ ಪಾತ್ರಧಾರಣಂ ।
ಕ್ಷೀರಸ್ಯಾಪಿ ವಿಧಿಂ ಬ್ರೂಹಿ ವಿಶೇಷಂ ಚ ಮಹಾಮತೇ ॥ ೫ ॥

ವೇನಸ್ಯಾಪಿ ನೃಪಸ್ಯೈವ ಪಾಣಿರೇವ ಮಹಾತ್ಮನಃ ।
ಮಥಿತೋ ಮುನಿಭಿಃ ಪೂರ್ವಂ ಕ್ರುದ್ಧೈಶ್ಚಾಪಿ ಮಹಾತ್ಮಭಿಃ ।
ಅಕಸ್ಮಾತ್ಕಾರಣಂ ಸರ್ವಂ ಸೂತಪುತ್ರ ವದಸ್ವ ನಃ ॥ ೬ ॥

ವಿಚಿತ್ರೇಯಂ ಮಹಾಪುಣ್ಯಾ ಕಥಾ ಪಾತಕನಾಶಿನೀ ।
ಶ್ರೋತುಕಾಮಾ ವಯಂ ಪುಣ್ಯಾಂ ತೃಪ್ತಿರ್ನೈವ ಪ್ರಜಾಯತೇ ॥ ೭ ॥

॥ ಸೂತ ಉವಾಚ ॥

ವೈನ್ಯಸ್ಯ ಚ ಪೃಥೋರೇವ ತಸ್ಯ ವಿಸ್ತರಮೇವ ಚ ।
ಜನ್ಮ ವೀರ್ಯಂ ಯಥಾ ಕ್ಷಾತ್ರಂ ಪೌರುಷಂ ದ್ವಿಜಸತ್ತಮಾಃ ॥ ೮ ॥

ಪ್ರವಕ್ಷ್ಯಾಮಿ ಯಥಾ ಸರ್ವಂ ಚರಿತಂ ತಸ್ಯ ಧೀಮತಃ ।
ಶೃಣುಧ್ವಂ ಭೋ ಮಹಾಭಾಗಾ ಮತ್ತೋ ವೈ ದ್ವಿಜಸತ್ತಮಾಃ ॥ ೯ ॥

---

೫. ಅಲ್ಲದೆ ಕ್ಷೀರಸಮುದ್ರದ ಮಥನದ ವಿಷಯವನ್ನೂ ತಿಳಿಸು. ಕೋಪಗೊಂಡ ಮಹಾತ್ಮರಾದ ಋಷಿಗಳೂ, ಮುನಿಗಳೂ, ವೇನನ ಕೈಯನ್ನು ಕಡೆದರಷ್ಟೇ? ಅದರ ವಿಷಯವನ್ನೂ ತಿಳಿಸು,

೬-೭. ಅನಿರೀಕ್ಷಿತವಾಗಿ ಮಾಡಿದ ಇವುಗಳಿಗೆ ಕಾರಣವನ್ನು ತಿಳಿಸು. ಈ ಕಥೆಯು ಮಹಾ ಪುಣ್ಯಪ್ರದವೂ, ಪಾತಕನಾಶಕವೂ, ಆಗಿದೆ. ವಿಚಿತ್ರವಾಗಿಯೂ ಇದೆ. ಕೇಳಲು ನಮಗೆ ಬಹಳ ಆಸೆಯಿದೆ. ಕೇಳುತ್ತಿದ್ದರೆ ತೃಪ್ತಿಯೇ ಉಂಟಾಗುವುದಿಲ್ಲ ಎಂದರು.

೮-೯. ಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣಶ್ರೇಷ್ಠರೇ, ಕೇಳಿ. ವೇನನ ಮಗನಾದ ಪೃಥುವಿನ ಬಲ, ಪರಾಕ್ರಮ, ಕ್ಷಾತ್ರತೇಜಸ್ಸುಗಳನ್ನೂ, ಅವನ ಮಿಕ್ಕ ವಿಷಯಗಳನ್ನೂ, ಹೇಳುತ್ತೇನೆ.

ಅಭಕ್ತಾಯ ನ ವಕ್ತವ್ಯಮಶ್ರದ್ಧಾಯ ಶಠಾಯ ಚ ।
ಸುಮೂರ್ಖಾಯ ಸುಮೋಹಾಯ ಕುಶಿಷ್ಯಾಯ ತಥೈವ ಚ ॥ ೧೦ ॥

ಉದಾಸೀನಸ್ಯ ಕೂಟಾಯ ಧರ್ಮನಾಶಾಯ ಚ ದ್ವಿಜಾಃ ।
ಅನ್ಯಥಾ ಪಠತೇ ಯೋಹಿ ನಿರಯಂ ಚ ಪ್ರಯಾತಿ ಹಿ ॥ ೧೧ ॥

ಭವಂತೋ ಭಾವಯುಕ್ತಾಶ್ಚ ಸತ್ಯಧರ್ಮಪರಾಯಣಾಃ ।
ಭವತಾಮಗ್ರತಸ್ಸರ್ವಂ ಚರಿತಂ ಪಾಪನಾಶನಂ ॥ ೧೨ ॥

ಸಂಪ್ರವಕ್ಷ್ಯಾಮ್ಯಶೇಷೇಣ ಶೃಣ್ವತಾಂ ಸುಮಹಾತ್ಮನಾಂ ।
ಸ್ವರ್ಗ್ಯಂ ಯಶಸ್ಯಮಾಯುಷ್ಯಂ ಧನ್ಯಂ ವೇದೈಶ್ಚ ಸಂಮತಂ ॥ ೧೩ ॥

ರಹಸ್ಯಮೃಷಿಭಿಃ ಪ್ರೋಕ್ತಂ ಪ್ರವಕ್ಷ್ಯಾಮಿ ದ್ವಿಜೋತ್ತಮಾಃ ।
ಯಶ್ಚೈನಂ ಕಥಯೇನ್ನಿತ್ಯಂ ಪೃಥೋರ್ವೈನ್ಯಸ್ಯ ವಿಸ್ತರಂ ॥ ೧೪ ॥

---

೧೦-೧೧. ಭಕ್ತನಲ್ಲದವನು, ಶ್ರದ್ಧೆಯಿಲ್ಲದವನು, ಅಯೋಗ್ಯ ಮೂರ್ಖ, ಮೋಹವುಳ್ಳವನು, ಅಯೋಗ್ಯನಾದ ಶಿಷ್ಯ, ಉದಾಸೀನನು, ಚಾಡಿಕಾರನು, ಧರ್ಮ ನಾಶನು, ಇಂಥವರಿಗೆ ಇದನ್ನು ಹೇಳಕೂಡದು. ಹೇಳಿದರೆ ಅವನಿಗೆ ನರಕ ಪ್ರಾಪ್ತಿಯಾಗುತ್ತದೆ.

೧೨. ನೀವು ಒಳ್ಳೆಯ ಭಾವದಿಂದ ಕೂಡಿದ್ದೀರಿ. ಸತ್ಯದಲ್ಲೂ, ಧರ್ಮದಲ್ಲೂ ಆಸಕ್ತರಾಗಿದ್ದೀರಿ. ಆದುದರಿಂದ ಪಾಪನಾಶಕವಾದ ಈ ಚರಿತ್ರೆಯನ್ನು ನಿಮಗೆ ಹೇಳುತ್ತೇನೆ.

೧೩. ಇದು ಸ್ವರ್ಗಪ್ರದವಾದ್ದು, ಆಯಸ್ಸನ್ನು ಕೊಡತಕ್ಕದ್ದು, ಧನ್ಯತೆಯನ್ನು ಕೊಡತಕ್ಕದ್ದು, ವೇದಕ್ಕೆ ಸಮಾನವಾದುದು, ಇಂತಹ ರಹಸ್ಯವಾದ ಈ ವಿಷಯವನ್ನು ಋಷಿಗಳು ಹೇಳಿದ್ದಾರೆ. ಅದನ್ನೇ ನಿಮಗೆ ಹೇಳುತ್ತೇದೆ.

೧೪. ಮೊದಲು ಬ್ರಾಹ್ಮಣರಿಗೆ ನಮಸ್ಕರಿಸಿ, ಈ ಪೃಥುವಿನ ಚರಿತ್ರೆಯನ್ನು ಯಾವನು ಹೇಳುತ್ತಾನೋ ಅವನು ತನ್ನ ಪಾಪಪುಣ್ಯಗಳ ವಿಚಾರದಲ್ಲಿ ಯೋಚಿಸ ಬೇಕಾಗಿಲ್ಲ.

ಬ್ರಾಹ್ಮಣೇಭ್ಯೋ ನಮಸ್ಕೃತ್ಯ ನೈವ ಶೋಚೇತ್ಕೃತಾಕೃತಂ ।
ಸಪ್ತಜನ್ಮಾರ್ಜಿತಂ ಪಾಪಂ ಶ್ರುತಮಾತ್ರೇಣ ನಶ್ಯತಿ ॥ ೧೫ ॥
ಬ್ರಾಹ್ಮಣೋ ವೇದವೇತ್ತಾ ಚ ಕ್ಷತ್ರಿಯೋ ವಿಜಯೀ ಭವೇತ್ ।
ವೈಶ್ಯೋ ಧನಸಮೃದ್ಧಃ ಸ್ಯಾಚ್ಛೂದ್ರಸ್ತು ಶ್ರವಣಾತ್ಸುಖೀ ॥ ೧೬ ॥
ಏವಂ ಫಲಮವಾಪ್ನೋತಿ ಪಠನಾತ್ ಶ್ರವಣಾದಪಿ ।
ಪೃಥೋರ್ಜನ್ಮ ಚರಿತ್ರಂ ಚ ಪವಿತ್ರಂ ಪಾಪನಾಶನಂ ॥ ೧೭ ॥
ಧರ್ಮಗೋಪ್ತಾ ಮಹಾಪ್ರಾಜ್ಞೋ ವೇದಶಾಸ್ತ್ರಾರ್ಥಕೋವಿದಃ ।
ಅತ್ರಿವಂಶಸಮುತ್ಪನ್ನಃ ಪೂರ್ವಮತ್ರಿಸಮಃ ಪ್ರಭುಃ ॥ ೧೮ ॥
ಸ್ರಷ್ಟಾ ಸರ್ವಸ್ಯ ಧರ್ಮಸ್ಯ ಅಂಗೋ ನಾಮ ಪ್ರಜಾಪತಿಃ ।
ಯ ಆಸೀತ್ತಸ್ಯ ಪುತ್ರೋ ವೈ ವೇನೋ ನಾಮ ಪ್ರಜಾಪತಿಃ ॥ ೧೯ ॥
ಧರ್ಮಮೇವಂ ಪರಿತ್ಯಜ್ಯ ಸರ್ವದೈವ ಪ್ರವರ್ತತೆ ।
ಮೃತ್ಯೋಃ ಕನ್ಯಾ ಮಹಾಭಾಗಾ ಸುನೀಥಾ ನಾಮ ನಾಮತಃ ॥ ೨೦ ॥
ತಾಂ ತು ಅಂಗೋ ಮಹಾಭಾಗಃ ಸುನೀಥಾಮುಪಯೇಮಿವಾನ್ ।
ತಸ್ಯಾಮುತ್ಪಾದಯಾಮಾಸ ವೇನಂ ಧರ್ಮಪ್ರಣಾಶನಂ ॥ ೨೧ ॥

---

೧೫-೧೭. ಈ ಚರಿತ್ರೆಯನ್ನು ಕೇಳಿದ ಮಾತ್ರದಿಂದಲೇ ಏಳುಜನ್ಮದ ಪಾಪವು ನಾಶವಾಗುತ್ತದೆ. ಬ್ರಾಹ್ಮಣನು ಕೇಳಿದರೆ ವೇದಗಳನ್ನೆಲ್ಲಾ ತಿಳಿದವನಾಗಿಯೂ, ಕ್ಷತ್ರಿಯನು ಕೇಳಿದರೆ ಜಯಶಾಲಿಯೂ, ವೈಶ್ಯನು ಕೇಳಿನರೆ ಧನಸಮೃದ್ಧಿಯುಳ್ಳವನೂ ಶೂದ್ರನು ಸುಖಿಯೂ ಆಗುತ್ತಾರೆ. ಕೇಳುವುದರಿಂದಲೂ, ಹೇಳುವುದರಿಂದಲೂ, ಈ ರೀತಿಯಾದ ಫಲಪ್ರಾಪ್ತಿಯಾಗುವುದು. ಈ ಪೃಥುವಿನ ಜನ್ಮವೂ, ಚರಿತ್ರೆಯೂ, ಕೂಡ ಪವಿತ್ರವೂ, ಪಾಪನಾಶಕವೂ, ಆಗಿದೆ.

೧೮-೧೯. ಪೂರ್ವದಲ್ಲಿ ಧರ್ಮವನ್ನು ಕಾಪಾಡುವವನೂ, ಮಹಾ ಬುದ್ಧಿವಂತನೂ, ವೇದಶಾಸ್ತ್ರಾರ್ಥಗಳನ್ನು ತಿಳಿದವನೂ, ಅತ್ರಿವಂಶದಲ್ಲಿ ಹುಟ್ಟಿ ಅತ್ರಿಋಷಿಗೆ ಸಮಾನನಾದವನೂ, ಸರ್ವಧರ್ಮಕ್ಕೂ ಉತ್ಪಾದಕನೂ, ಆದ ಅಂಗನೆಂಬ ಒಬ್ಬ ರಾಜನಿದ್ದನು. ಅವನ ಮಗನೇ ವೇನನೆಂಬ ಘೋರಿಯು. ಈ ವೇನನು ಧರ್ಮವನ್ನು ಬಿಟ್ಟು ಯಾವಾಗಲೂ ಸ್ವೇಚ್ಛಾಪ್ರವರ್ತಕನಾಗಿ ವರ್ತಿಸುತ್ತಿದ್ದನು.

೨೦-೨೧. ಮೃತ್ಯುವಿಗೆ ಸುನೀಥೆಯೆಂಬ ಮಗಳಿದ್ದಳು. ಅವಳನ್ನು ಅಂಗನೆಂಬುವನು ಮದುವೆಯಾದನು. ಆಕೆಯಲ್ಲಿ ಧರ್ಮನಾಶಕನಾದ ಈ ವೇನನು ಹುಟಿದನು.

ಮಾತಾಮಹಸ್ಯ ದೋಷೇಣ ವೇನಃ ಕಾಲಾತ್ಮಜಾತ್ಮಜಃ ।
ನಿಜಧರ್ಮಂ ಪರಿತ್ಯಜ್ಯ ಹ್ಯಧರ್ಮನಿರತೋಽಭವತ್ ॥ ೨೨ ॥

ಕಾಮಾಲ್ಲೋಭಾನ್ಮಹಾಮೋಹಾತ್ಪಾಪಮೇವ ಸಮಾಚರತ್ ।
ವೇದಾಚಾರಮಯಂ ಧರ್ಮಂ ಪರಿತ್ಯಜ್ಯ ನರಾಧಿಪಃ ॥ ೨೩ ॥

ಅನ್ವವರ್ತತ ಪಾಪೇನ ಮದಮತ್ಸರಮೋಹಿತಃ ।
ವೇದಾಧ್ಯಯನಹೀನಾಶ್ಚ ಪ್ರವರ್ತಂತೇ ತದಾ ದ್ವಿಜಾಃ ॥ ೨೪ ॥

ನಿಸ್ಸ್ವಾಧ್ಯಾಯವಷಟ್ಕಾರಾಃ ಪ್ರಜಾಸ್ತಸ್ಮಿನ್ಪ್ರಜಾಪತೌ ।
ಪ್ರವೃತ್ತಾ ನ ಪಪುಃ ಸೋಮಂ ಹುತಂ ಯಜ್ಞೇಷು ದೇವತಾಃ ॥ ೨೫ ॥

ಇತ್ಯುವಾಚ ಸ ದುಷ್ಟಾತ್ಮಾ ಬ್ರಾಹ್ಮಣಾನ್ ಪ್ರತಿ ನಿತ್ಯಶಃ ।
ನಾಧ್ಯೇತವ್ಯಂ ನ ಹೋತವ್ಯಂ ನ ದೇಯಂ ದಾನಮೇವ ಚ ॥ ೨೬ ॥

ನ ಯಷ್ಟವ್ಯಂ ನ ಹೋತವ್ಯಮಿತಿ ತಸ್ಯ ಪ್ರಜಾಪತೇಃ ।
ಆಸೀತ್ಪ್ರತಿಜ್ಞಾ ಕ್ರೂರೇಯಂ ವಿನಾಶೇ ಪ್ರತ್ಯುಪಸ್ಥಿತೇ ॥ ೨೭ ॥

---

೨೨. ತಾಯಿಯ ತಂದೆ(ಅಜ್ಜ)ಯಲ್ಲಿದ್ದ ಕೆಟ್ಟಗುಣಗಳೆಲ್ಲವೂ ಇವನಲ್ಲಿ ನಿಂತು ತನ್ನ ಧರ್ಮವನ್ನು ಬಿಟ್ಟು ಅಧರ್ಮದಲ್ಲಿ ಆಸಕ್ತನಾಗುವಂತೆ ಮಾಡಿದವು.

೨೩. ಕಾಮ, ಲೋಭ, ಮೋಹಗಳಿಗೆ ವಶನಾಗಿ ವೇದೋಕ್ತವಾದ ಧರ್ಮವನ್ನು ಬಿಟ್ಟು ಪಾಪಕೃತ್ಯಗಳನ್ನೇ ಆಚರಿಸುತ್ತಿದ್ದನು.

೨೪-೨೫. ಮದ, ಮತ್ಸರ, ಮೋಹದಿಂದಕೂಡಿ, ಪಾಪದಲ್ಲೇ ಆಸಕ್ತನಾದನು. ರಾಜನು ಈರೀತಿ ಇರಲು ಬ್ರಾಹ್ಮಣರು ಅಧ್ಯಯನಮಾಡುವುದನ್ನು ಬಿಟ್ಟುಬಿಟ್ಟರು. ಯಾಗಾದಿಗಳನ್ನು ಮಾಡದೇಹೋದರು. ಸೋಮಪಾನವೇ ಇಲ್ಲದೇಹೋಯಿತು. ದೇವತೆಗಳಿಗೆ ಹವಿಸ್ಸಿಲ್ಲದಂತಾಯಿತು.

೨೬. ಆ ದುಷ್ಟನು ಬ್ರಾಹ್ಮಣರಿಗೆ ಅಧ್ಯಯನ ಮಾಡಬೇಡಿ, ಹೋಮ ಮಾಡಬೇಡಿ, ದಾನ ಕೊಡಬೇಡಿ, ಯಜ್ಞಮಾಡಬೇಡಿ, ಎಂದು ಹೇಳುತ್ತಿದ್ದನು.

೨೭. ತನ್ನ ವಿನಾಶವು ಸಮೀಪಿಸಲು ಅವನಿಗೆ ಬುದ್ಧಿಯು ಕೆಟ್ಟುಹೋಗಿ, ಈ ರೀತಿಯಾದ ಕ್ರೂರವಾದ ಅಪ್ಪಣೆಯನ್ನು ಮಾಡಿದನು.

ಅಹಮಿಜ್ಯಶ್ಚ ಯಷ್ಟಾ ಚ ಯಜ್ಞಶ್ಚೇತಿ ಪುನಃ ಪುನಃ ।
ಮಯಿ ಯಜ್ಞಾವಿಧಾತವ್ಯಾ ಮಯಿ ಹೋತವ್ಯಮೇವ ಚ ॥ ೨೮ ॥

ಇತ್ಯಬ್ರವೀತ್ಸದಾ ವೇನೋ ಹ್ಯಹಂ ವಿಷ್ಣುಸ್ಸನಾತನಃ ।
ಅಹಂ ಬ್ರಹ್ಮಾಹಮಿಂದ್ರೋಽಸ್ಮಿ ರುದ್ರೋ ಮಿತ್ರಸ್ಸದಾಗತಿಃ ॥ ೨೯ ॥

ಅಹಮೇವ ಸದಾ ಭೋಕ್ತಾ ಹವ್ಯಕವ್ಯಸ್ಯ ನೋಪರಃ ।
ಅಥ ತೇ ಮುನಯಃ ಕ್ರುದ್ಧಾ ವೇನಂ ಪ್ರತಿ ಮಹಾಬಲಾಃ ।
ಊಚುಸ್ತೇ ಸಂಗತಾಸ್ಸರ್ವೇ ರಾಜಾನಂ ಪಾಪಚೇತಸಂ ॥ ೩೦ ॥

॥ ಮುನಯಃ ಊಚುಃ ॥

ರಾಜಾ ಹಿ ಪೃಥಿವೀನಾಥಃ ಪ್ರಜಾಂ ಪಾಲಯತೇ ಸದಾ ।
ಧರ್ಮಮೂರ್ತಿಸ್ಸ ರಾಜೇಂದ್ರಸ್ತಸ್ಮಾದ್ಧರ್ಮಾನ್ಹಿ ರಕ್ಷಯೇತ್ ॥ ೩೧ ॥

ವಯಂ ದೀಕ್ಷಾಂ ಪ್ರವಿಶಾಮೋ ಯಜ್ಞೇ ದ್ವಾದಶವಾರ್ಷಿಕೀಂ ।
ಅಧರ್ಮಂ ಕುರು ಮಾ ವೇನ ನೈಷ ಧರ್ಮಸ್ಸತಾಮಿತಿ ॥ ೩೨ ॥

---

೨೮-೨೯. ನಾನೇ ಯಾಗಮಾಡತಕ್ಕವನು. ಯಾಗವನ್ನು ತಿನ್ನತಕ್ಕವನೂ ನಾನೇ. ನಾನೇ ಯಜ್ಞಸ್ವರೂಪನು. ಆದುದರಿಂದ ನನ್ನನ್ನು ಕುರಿತು ಯಜ್ಞಹೋಮಾದಿಗಳನ್ನು ಮಾಡಬೇಕು. ನಾನೇ ವಿಷ್ಣುವು, ನಾನೇ ಬ್ರಹ್ಮನು, ನಾನೇ ಇಂದ್ರನೂ, ರುದ್ರನೂ, ವಾಯುವೂ, ಆಗಿದ್ದೇನೆ. ಹವ್ಯಕವ್ಯಗಳನ್ನು ತಿನ್ನತಕ್ಕವನು ನಾನೇ ಆಗಿರುವೆನು. ಮತ್ತೊಬ್ಬನಿಲ್ಲ ಎಂದು ಮುಂತಾಗಿ ಹೇಳುತ್ತಿದ್ದನು.

೩೦. ಆಗ ಋಷಿಗಳೆಲ್ಲಾ ಕೋಪಗೊಂಡು ಒಟ್ಟಾಗಿ ಸೇರಿ, ಪಾಪಬುದ್ಧಿಯುಳ್ಳ ವೇನನನ್ನು ಕುರಿತು,

೩೧. ಮುನಿಗಳು ಹೇಳಿದರು:—ಎಲೈ ವೇನನೇ, ಕೇಳು. ರಾಜನು ಭೂಮಿಗೆ ಒಡೆಯನು. ಯಾವಾಗಲೂ ಪ್ರಜೆಗಳನ್ನು ಕಾಪಾಡತಕ್ಕವನು. ಧರ್ಮಮೂರ್ತಿಯು, ಆದುದರಿಂದ ಅವನು ಧರ್ಮವನ್ನು ಕಾಪಾಡಬೇಕು.

೩೨. ಈಗ ಹನ್ನೆರಡುವರ್ಷ ಮಾಡಬೇಕಾದ ಯಾಗದಲ್ಲಿ ನಾವು ದೀಕ್ಷಿತರಾಗುತ್ತೇವೆ. ನೀನು ಅದರಲ್ಲಿ ಅಧರ್ಮಪ್ರವೃತ್ತನಾಗಬೇಡ. ಇದು ಸತ್ಪುರುಷರ ಧರ್ಮವಲ್ಲ.

ಕುರು ಧರ್ಮಂ ಮಹಾರಾಜ ಸತ್ಯಪುಣ್ಯಂ ಸಮಾಚರ ।
ರಾಜಾಹಂ ಪಾಲಯಿಷ್ಯಾಮಿ ಇತಿ ತೇ ಸಮಯಃ ಕೃತಃ ॥ ೩೩ ॥

ತಾಂಸ್ತಥಾ ಬ್ರುವತೋ ವೀಕ್ಷ್ಯ ಋಷೀನ್ ದುರ್ವೃತ್ತಚೇಷ್ಟಿತಃ ।
ಉವಾಚೋದ್ಧರ್ಮಗಶ್ಚಾಸೌ ಕ್ರುದ್ಧೋಽಂತಕ ಇವಾಪರಃ ॥ ೩೪ ॥

ಜ್ಞಾನವೀರ್ಯತಪಸ್ಸತ್ಯೈರ್ಮಯಾ ವಾ ಕಸ್ಸಮೋ ಭುವಿ ।
ಪ್ರಭವಂ ಸರ್ವಭೂತಾನಾಂ ಧರ್ಮಾಣಾಂ ಚ ವಿಶೇಷತಃ ॥ ೩೫ ॥

ಸಮ್ಮೂಢಾ ನ ವಿದುರ್ನೂನಂ ಭವಂತೋ ಮಾಂ ವಿಚೇತಸಃ ।
ಇಮಾಂ ದಹೇಯಂ ಪೃಥಿವೀಂ ಪ್ಲಾವಯೇಯಂ ಜಲೈಸ್ತಥಾ ॥ ೩೬ ॥

ದ್ಯಾಂ ಭುವಂ ಚ ರುಂಧೇಯಂ ನಾತ್ರ ಕಾರ್ಯಾ ವಿಚಾರಣಾ ।
ಯದಾ ನ ಶಕ್ಯತೇ ಮೋಹಾದವಲೇಪಾಚ್ಚ ಪಾರ್ಥಿವಃ ॥ ೩೭ ॥

ಅಪನೇತುಂ ತದಾ ವೇನಂ ತತಃ ಕ್ರುದ್ಧಾ ಮಹರ್ಷಯಃ ।
ವಿಸ್ಫುರಂತಂ ತತೋ ವೇನಂ ಬಲಾತ್ಸಂಗೃಹ್ಯ ತೇ ರುಷಾ ॥ ೩೮ ॥

---

೩೩. ಎಲೈ ಮಹಾರಾಜನೇ, ಧರ್ಮವನ್ನು ಮಾಡು. ಸತ್ಯ, ಪುಣ್ಯಗಳನ್ನು ಆಚರಿಸು. । ನೀನೂಕೂಡ ಧರ್ಮವನ್ನು ಕಾಪಾಡುತ್ತೇನೆಂದು ಪ್ರತಿಜ್ಞೆಮಾಡಿರುವೆ. ಅದನ್ನು ಜ್ಞಾಪಿಸಿಕೋ ಎಂದರು.

೩೪. ಇವರು ಹೇಳುತ್ತಿರುವ ಈ ಮಾತನ್ನು ಕೇಳಿ, ಕೆಟ್ಟಮನುಷ್ಯನಾದ ಈ ವೇನನು ಯಮನಂತೆ ಕೋಪಗೊಂಡು ಧರ್ಮಮೀರಿ ಈರೀತಿ ಹೇಳಿದನು.

೩೫. ಜ್ಞಾನ, ವೀರ್ಯ, ತಪಸ್ಸು, ಸತ್ಯಗಳಲ್ಲಿ ನನಗೆ ಸಮನಾದವನು ಯಾರಿದ್ದಾರೆ? ನಾನೇ ಸರ್ವಭೂತಗಳಿಗೂ, ಧರ್ಮಕ್ಕೂ, ಉತ್ಪತ್ತಿಸ್ಥಾನನು. ಇದನ್ನು ಮೂಢರು ನಿಜವಾಗಿಯೂ ತಿಳಿಯಲಾರರು.

೩೬. ಈ ಭೂಮಿಯನ್ನು ಸುಡತಕ್ಕ ಬೆಂಕಿಯೂ ನಾನೇ. ನೀರಿನಿಂದ ನೆನಿಸುವವನೂ ನಾನೇ. ಅಂತರಿಕ್ಷವನ್ನೂ, ಭೂಮಿಯನ್ನೂ ತಡಯಬಲ್ಲೆ. ಈ ವಿಷಯದಲ್ಲಿ ಸಂದೇಹವಿಲ್ಲ. ಎಂದು ಅಹಂಕಾರದ ಮಾತುಗಳನ್ನಾಡಿದನು.

೩೭-೩೮. ಅಜ್ಞಾನದಿಂದಲೂ, ಹೆಮ್ಮೆಯಿಂದಲೂ, ಅವನನ್ನು ಹಿಂತಿರುಗಿಸಲು ಆಗದಿರುವುದನ್ನು ನೋಡಿ, ಅವನಮೇಲೆ ಋಷಿಗಳು ಕೋಪಗೊಂಡು ವೇನನನ್ನು ಬಲವಂತವಾಗಿ ಹಿಡಿದು ಅವನ ಬಲತೊಡೆಯನ್ನು ಕಡೆದರು.

ವೇನಸ್ಯ ತಸ್ಯ ಸವ್ಯೋರುಂ ಮಮನ್ಥುರ್ಜಾತಮನ್ಯವಃ ।
ಕೃಷ್ಣಾಂಜನಚಯೋಪೇತಮತಿಹ್ರಸ್ವಂ ವಿಲಕ್ಷಣಂ ॥ ೩೯ ॥

ದೀರ್ಘಾಸ್ಯಂ ಚ ವಿರೂಪಾಕ್ಷಂ ನೀಲಕಂಚುಕವರ್ಚಸಂ ।
ಲಂಬೋದರಂ ವ್ಯೂಢಕರ್ಣಮತಿಬಾಹುಂ ದುರೋದರಂ ॥ ೪೦ ॥

ದದೃಶುಸ್ತೇ ಮಹಾತ್ಮಾನೋ ನಿಷೀದೇತ್ಯಬ್ರುವಂಸ್ತತಃ ।
ತೇಷಾಂ ತದ್ವಚನಂ ಶ್ರುತ್ವಾ ನಿಷಸಾದ ಭಯಾತುರಃ ॥ ೪೧ ॥

ಪರ್ವತೇಷು ವನೇಷ್ವೇವ ತಸ್ಯ ವಂಶಃ ಪ್ರತಿಷ್ಠಿತಃ ।
ನಿಷಾದಾಶ್ಚ ಕಿರಾತಾಶ್ಚ ಭಿಲ್ಲಾನಾಹಳಕಾಸ್ತಥಾ ॥ ೪೨ ॥

ಭ್ರಮರಾಶ್ಚ ಪುಳಿಂದಾಶ್ಚ ಯೇ ಚಾನ್ಯೇ ಮ್ಲೇಚ್ಛಜಾತಯಃ ।
ಪಾಪಾಚಾರಾಶ್ಚ ತೇ ಸರ್ವೇ ತಸ್ಮಾದಂಗಾತ್ಪ್ರಜಜ್ಞಿರೇ ॥ ೪೩ ॥

ಅಥ ತೇ ಋಷಯ ಸರ್ವೇ ಪ್ರಸನ್ನಮನಸಸ್ತತಃ ।
ಗತಕಲ್ಮಷಮೇವಾತ್ರ ಜ್ಞಾತ್ವಾ ವೇನಂ ನೃಪೋತ್ತಮಂ ॥ ೪೪ ॥

---

೩೯-೪೧. ಹೀಗೆ ಕಡೆಯುತ್ತಿರುವಾಗ ಅವನ ತೊಡೆಯಿಂದ ಒಬ್ಬ ವಿಲಕ್ಷಣಾಕಾರವುಳ್ಳ ಪುರುಷನು ಆವಿರ್ಭವಿಸಿದನು. ಅವನು ಕುಳ್ಳಾಗಿಯೂ, ಕಾಡಿಗೆಯಂತೆ ಕಪ್ಪಗಿರುವ ಶರೀರವುಳ್ಳವನಾಗಿಯೂ, ಇದ್ದನು. ಉದ್ದವಾದ ಮುಖ, ವಕ್ರವಾದ ಕಣ್ಣುಗಳು, ದಪ್ಪಹೊಟ್ಟೆ, ಚಿಕ್ಕಕಿವಿ, ಉದ್ದವಾದ ತೋಳು, ಇವುಗಳಿಂದ ನೋಡುವುದಕ್ಕೆ ಭಯಂಕರನಾಗಿ ಕಾಣುತ್ತಿದ್ದನು. ಋಷಿಗಳು ಅವನನ್ನು ನೋಡಿ, ಕೂತುಕೊಳ್ಳುವಂತೆ ಹೇಳಲು, ಅದರಂತೆ ಕೂತುಕೊಂಡನು.

೪೨-೪೩. ಪರ್ವತಗಳಲ್ಲೂ, ವನಗಳಲ್ಲೂ, ಅವನ ವಂಶೀಯರು ವಾಸಮಾಡುವರು. ಈರೀತಿ ಅವನ ವಂಶವು ನಿಂತಿದೆ. ನಿಷಾದರು, ಕಿರಾತರು, ಭಿಲ್ಲರು, ನಾಹಳಕರು, ಭ್ರಮರರು, ಪುಳಿಂದರು ಇನ್ನೂ ಉಳಿದ ಮ್ಲೇಚ್ಛಜಾತಿಯರು, ಪಾಪಾಚಾರವುಳ್ಳವರು, ಮೊದಲಾದವರು ಯಾರಿದ್ದಾರೋ ಅವರೆಲ್ಲರೂ ಆ ಅಂಗದಿಂದ ಹುಟ್ಟಿದವರು.

೪೪-೪೬. ಆಮೇಲೆ ಋಷಿಗಳೆಲ್ಲರರೂ ಪ್ರಸನ್ನಮನಸ್ಸುಳ್ಳವರಾಗಿ ವೇನನಲ್ಲಿ ಇರುವ ಕಲ್ಮಷವೆಲ್ಲವೂ ಹೋಯಿತೆಂದು ತಿಳಿದು, ಅವನ ಬಲಗೈಯನ್ನು ಕಡೆದರು.

ಮಮನ್ಥುರ್ದಕ್ಷಿಣಂ ಪಾಣಿಂ ತಸ್ಯೈವ ಚ ಮಹಾತ್ಮನಃ ।
ಮಥಿತೇ ತಸ್ಯ ಪಾಣೌ ತು ಸಂಜಾತಸ್ಸ್ವೇದ ಏವ ಹಿ ॥ ೪೫ ॥

ಪುನರ್ಮಮನ್ಥುಸ್ತೇ ವಿಪ್ರಾ ದಕ್ಷಿಣಂ ಪಾಣಿಮೇವ ಚ ।
ಸುಕರಾತ್ಪುರುಷೋ ಜಜ್ಞೇ ದ್ವಾದಶಾದಿತ್ಯಸನ್ನಿಭಃ ॥ ೪೬ ॥

ತಪ್ತಕಾಂಚನವರ್ಣಾಂಗೋ ದಿವ್ಯಮಾಲಾಂಬರೋ ವರಃ ।
ದಿವ್ಯಾಭರಣಶೋಭಾಂಗೋ ದಿವ್ಯಗಂಧಾನುಲೇಪನಃ ॥ ೪೭ ॥

ಮುಕುಟೇನಾರ್ಕವರ್ಣೇನ ಕುಂಡಲಾಭ್ಯಾಂ ವಿರಾಜಿತಃ ।
ಮಹಾಕಾಯೋ ಮಹಾಬಾಹೂ ರೂಪೇಣಾಪ್ರತಿಮೋ ಭುವಿ ॥ ೪೮ ॥

ಖಡ್ಗಬಾಣಧರೋ ಧನ್ವೀ ಕವಚೀ ಚ ಮಹಾಪ್ರಭುಃ ।
ಸರ್ವಲಕ್ಷಣಸಂಪನ್ನಃ ಸರ್ವಾಲಂಕಾರಭೂಷಣಃ ॥ ೪೯ ॥

ತೇಜಸಾ ರೂಪಭಾವೇನ ವರ್ಣೈಶ್ಚೈವ ಮಹಾಮತಿಃ ।
ದಿವಿ ಚಂದ್ರೋ ಯಥಾ ಭಾತಿ ಭುವಿ ವೇನಾತ್ಮಜಸ್ತಥಾ ॥ ೫೦ ॥

---

ಆದನ್ನು ಕಡೆಯುತ್ತಲೂ ಬೆವರು ಬಂದಿತು. ಬಲಗೈಯನ್ನು ಪುನಃ ಕಡೆದರು. ಆ ಕೈ ಇಂದ ದ್ವಾದಶಾದಿತ್ಯರಿಗೆ ಸಮನಾದ ಒಬ್ಬ ಮನುಷ್ಯನು ಹುಟ್ಟಿದನು.

೪೭-೫೦. ಆತನು ಪುಟವಿಕ್ಕಿದ ಚಿನ್ನದಂತೆ ಶರೀರಕಾಂತಿಯಿಂದ ಬೆಳಗುತ್ತಾ ದಿವ್ಯವಸ್ತ್ರವನ್ನುಟ್ಟು ನಾನಾವಿಧವಾದ ಆಭರಣಗಳನ್ನೂ, ಮಾಲೆಗಳನ್ನೂ, ಧರಿಸಿ, ದಿವ್ಯಗಂಧವನ್ನು ಲೇಪನಮಾಡಿಕೊಂಡು ಶಿರಸ್ಸಿನಲ್ಲಿ ಸೂರ್ಯನಂತೆ ಬೆಳಗುತ್ತಿರುವ ಪ್ರಕಾಶಮಾನವಾದ ಕಿರೀಟವನ್ನೂ, ಕರ್ಣಗಳಲ್ಲಿ ಕುಂಡಲಗಳನ್ನೂ, ಧರಿಸಿ ಶೋಭಿಸುತ್ತಿದ್ದನು. ದೀರ್ಘವಾದ ಬಾಹುಗಳು, ಅಸದೃಶವಾದ ಶರೀರಸೌಂದರ್ಯ, ಇವುಗಳಿಂದಕೂಡಿ, ಕೈಗಳಲ್ಲಿ ಖಡ್ಗಬಾಣಗಳನ್ನು ಧರಿಸಿ, ಕವಚವನ್ನು ತೊಟ್ಟು, ಸರ್ವಾಲಂಕಾರಭೂಷಿತನಾಗಿಯೂ, ಸರ್ವಲಕ್ಷಣಸಂಪನ್ನನಾಗಿಯೂ, ಪ್ರಕಾಶಿಸುತ್ತಿದ್ದನು. ಮತ್ತು ತನ್ನ ರೂಪ, ತೇಜಸ್ಸು ಶರೀರದ ಸೊಬಗು, ಮೊದಲಾದ ಗುಣಗಳಿಂದ ಆಕಾಶದಲ್ಲಿ ಚಂದ್ರನು ಪ್ರಕಾಶಿಸುವಂತೆ ಈ ವೇನನ ಮಗನು ಒಪ್ಪುತ್ತಿದ್ದನು.

ತಸ್ಮಿನ್ ಜಾತೇ ಮಹಾಭಾಗೇ ದೇವಾಶ್ಚ ಋಷಯೋಽಮಲಾಃ ।
ಉತ್ಸವಂ ಚಕ್ರಿರೇ ಸರ್ವೇ ವೇನಸ್ಯ ತನಯಂ ಪ್ರತಿ ॥ ೫೧ ॥

ದೀಪ್ಯಮಾನಸ್ಸ್ವವಪುಷಾ ಸಾಕ್ಷಾದಗ್ನಿರಿವ ಜ್ವಲನ್ ।
ಆದ್ಯಮಾಜಗವಂ ನಾಮ ಧನುರ್ಗೃಹ್ಯ ಮಹಾಬಲಃ ॥ ೫೨ ॥

ಶರಾಂಶ್ಚ ದಿವ್ಯಾನ್ ರಕ್ಷಾರ್ಥಂ ಕವಚಂ ಚ ಮಹಾಪ್ರಭಂ ।
ಜಾತೇ ಸತಿ ಮಹಾಭಾಗೇ ಪೃಥೌ ವೀರೇ ಮಹಾತ್ಮನಿ ॥ ೫೩ ॥

ಸಂಪ್ರಹೃಷ್ಟಾನಿ ಭೂತಾನಿ ಸಮಸ್ತಾನಿ ದ್ವಿಜೋತ್ತಮಾಃ ।
ಸರ್ವತೀರ್ಥಾನಿ ತೋಯಾನಿ ಪುಣ್ಯಾನಿ ವಿವಿಧಾನಿ ಚ ॥ ೫೪ ॥

ತಸ್ಯಾಭಿಷೇಕಂ ವಿಪ್ರೇಂದ್ರಾಃ ಸರ್ವ ಏವೋಪಚಕ್ರಿರೇ ।
ಪಿತಾಮಹಸ್ತತೋ ದೇವಾ ಭೂತಾನಿ ವಿವಿಧಾನಿ ಚ ।
ಸ್ಥಾವರಾಣಿ ಚರಾಣ್ಯೇವ ಹ್ಯಭ್ಯಷಿಂಚನ್ನರಾಧಿಪಂ ॥ ೫೫ ॥

ಮಹಾವೀರಂ ಪ್ರಜಾಪಾಲಂ ಪೃಥುಮೇವ ದ್ವಿಜೋತ್ತಮಾಃ ।
ಪೃಥುರ್ವೈನ್ಯೋ ರಾಜರಾಜೋ ಹ್ಯಭಿಷಿಕ್ತಶ್ಚರಾಚರೈಃ ॥ ೫೬ ॥

ದೇವೈರ್ವಿಪ್ರೈಸ್ತಥಾ ನಾಗೈರಭಿಷಿಕ್ತೋ ಮಹಾಮುನಾಃ ।
ಸ ರಾಜ್ಯಮಭಿಪೇದೇ ವೈ ಪೃಥುರ್ವೈನ್ಯಃ ಪ್ರತಾಪವಾನ್ ॥ ೫೭ ॥

---

೫೧. ಅವನು ಹುಟ್ಟಿದಾಗ ದೇವತೆಗಳೂ, ಋಷಿಗಳೂ, ವೇನನ ಮಗನಿಗೋಸ್ಕರ ಅನೇಕ ಉತ್ಸವಗಳನ್ನು ಮಾಡಿದರು.

೫೨. ಆ ವೇನನ ಮಗನಾದ ಪೃಥುವು ದೇಹಕಾಂತಿಯಿಂದ ಸಾಕ್ಷಾದಗ್ನಿಯಂತೆ ಪ್ರಕಾಶಿಸುತ್ತಾ ಮೊದಲನೆಯ ಅಜಗವವೆಂಬ ಧನುಸ್ಸನ್ನೂ, ದಿವ್ಯವಾದ ಬಾಣಗಳನ್ನೂ ಧರಿಸಿ ಕವಚವನ್ನು ತೊಟ್ಟುಕೊಂಡನು.

೫೩-೫೪. ವೀರನಾದ ಪೃಥುವು ಹುಟ್ಟಲಾಗಿ ಪ್ರಾಣಿಗಳೆಲ್ಲವೂ ಸಂತೋಷಗೊಂಡವು. ಸರ್ವತೀರ್ಥಗಳೂ, ನಾನಾವಿಧವಾದ ಪುಣ್ಯೋದಕಗಳೂ ಪ್ರಸನ್ನವಾದವು. ಅವುಗಳಲ್ಲಿ ಬ್ರಾಹ್ಮಣರು ಸ್ನಾನಮಾಡಲು ಮೊದಲುಮಾಡಿದರು.

೫೫-೫೭. ಬ್ರಹ್ಮನೇ ಮೊದಲಾದ ದೇವತೆಗಳೂ, ಅನೇಕವಿಧವಾದ ಸ್ಥಾವರಜಂಗಮಪ್ರಾಣಿಗಳೂ, ಕುಬೇರ, ಬ್ರಾಹ್ಮಣರು, ನಾಗರು ಮೊದಲಾದ ಮಹಾತ್ಮರೆಲ್ಲರೂ ಪ್ರಜಾಪಾಲಕನಾದ ವೇನನ ಮಗ ಪೃಥುವಿಗೆ ರಾಜ್ಯಾಭಿಷೇಕಮಾಡಿದರು.

ತಸ್ಯ ಪಿತ್ರಾ ಪ್ರಜಾಸ್ಸರ್ವಾಃ ಕದಾ ನೈವಾನುರಂಜಿತಾಃ ।
ತೇನಾನುರಂಜಿತಾಸ್ಸರ್ವಾ ಮುಮುದಿರೇ ಸುಖೇನ ವೈ ॥ ೫೮ ॥

ಅಸ್ಯಾನುರಾಗಾದ್ವೀರಸ್ಯ ರಾಜರಾಜೇತಿ ನಾಮ ಚ ।
ಪ್ರಜಜ್ಞೇಽಸ್ಯ ಸುವೀರಸ್ಯ ಸಮುದ್ರೇಽಪಿ ದ್ವಿಜೋತ್ತಮಾಃ ॥ ೫೯ ॥

ಅಪಸ್ತಸ್ತಂಭಿರೇ ಸರ್ವಾ ಭಯಾತ್ತಸ್ಯ ಮಹಾತ್ಮನಃ ।
ಪ್ರಯಾತಸ್ಯ ರಥಸ್ಯಾಪಿ ತಸ್ಯೈವ ಚ ಮಹಾತ್ಮನಃ ॥ ೬೦ ॥

ದುರ್ಗಮಾರ್ಗಂ ವಿಲೋಪ್ಯೇವ ಸುಮಾರ್ಗಂ ಪರ್ವತಾ ದದುಃ ।
ಆಜ್ಞಾಭಂಗಂ ನ ಚಕ್ರುಶ್ಚ ಗಿರಯಸ್ಸರ್ವ ಏವ ತೇ ॥ ೬೧ ॥

ಅಕೃಷ್ಟಪಚ್ಯಾ ಪೃಥಿವೀ ಸರ್ವತ್ರ ಕಾಮಧೇನವಃ ।
ಪರ್ಜನ್ಯಃ ಕಾಮವರ್ಷೀ ಚ ದೇವಯಜ್ಞಾ ಮಹೋತ್ಸವಾಃ ॥ ೬೨ ॥

---

೫೮. ಇವನ ತಂದೆಯಾದ ವೇನನು ಪ್ರಜೆಗಳನ್ನು ಸರಿಯಾಗಿ ಪಾಲಿಸಲಿಲ್ಲ. ಆದರೆ ಪೃಥುವು ಹಾಗೆ ಮಾಡದೆ ಪ್ರಜೆಗಳನ್ನು ಪ್ರೀತಿಯಿಂದ ಸಲಹುತ್ತಿದ್ದನು. ಪ್ರಜೆಗಳೂ ಸಹ ಸುಖವಾಗಿದ್ದರು.

೫೯. ಆತನಲ್ಲಿರುವ ಪ್ರೀತಿಯಿಂದ ಪ್ರಜೆಗಳು ಅವನಿಗೆ ರಾಜರಾಜನೆಂಬ ಹೆಸರಿಟ್ಟರು. ಅವನು ಸಮುದ್ರ ಮಧ್ಯದಲ್ಲೆಲ್ಲಾ ಹಾಗೆಯೇ ಪ್ರಖ್ಯಾತನಾದನು.

೬೦-೬೧. ನೀರುಕೂಡ ಆ ಮಹಾತ್ಮನಿಗೆ ಹೆದರಿಕೊಂಡು ಅವನು ಹೋಗುವ ದಾರಿಯಲ್ಲಿ ರಥಕ್ಕೆ ತೊಂದರೆಯಾಗದಂತೆ ಗಟ್ಟಿಯಾಗುತ್ತಿತ್ತು. ಪರ್ವತಗಳೂ ಕೂಡ ಕಷ್ಟವಾದ ಮಾರ್ಗವನ್ನು ಕೂಡಲೆ ಸುಗಮವಾಗಿ ಮಾಡಿ ಅವನ ಆಜ್ಞೆಯನ್ನು ಪಾಲಿಸುತ್ತಿದ್ದವು.

೬೨. ಭೂಮಿಯು ಉಳದಿದ್ದರೂ ಫಲಕೊಡುತ್ತಿತ್ತು. ಎಲ್ಲೆಲ್ಲಿ ನೋಡಿದರೂ ಕಾಮಧೇನುಗಳೇ ಕಾಣುತ್ತಿದ್ದವು. ಪರ್ಜನ್ಯನು ಬೇಕಾದಾಗ ಮಳೆ ಸುರಿಸುತ್ತಿದ್ದನು. ದೇವತೆಗಳನ್ನು ಉದ್ದೇಶಿಸಿ ಮಾಡುವ ಯಜ್ಞಗಳೂ, ಮಹೋತ್ಸವಗಳೂ ಎಲ್ಲೆಲ್ಲಿಯೂ ನಡೆಯುತ್ತಿದ್ದವು.

ಕುರ್ವಂತಿ ಬ್ರಾಹ್ಮಣಾಸ್ಸರ್ವೇ ಕ್ಷತ್ರಿಯಾಶ್ಚ ತಥಾ ಪರೇ ।
ಸರ್ವಕಾಮಫಲಾ ವೃಕ್ಷಾಃ ತಸ್ಮಿನ್ ಶಾಸತಿ ಪಾರ್ಥಿವೇ ॥ ೬೩ ॥

ನ ದುರ್ಭಿಕ್ಷಂ ನ ಚ ವ್ಯಾಧಿರ್ನಾಕಾಲಮರಣಂ ನೃಣಾಂ ।
ಸರ್ವೇ ಸುಖೇನ ಜೀವಂತಿ ಲೋಕಾ ಧರ್ಮಪರಾಯಣಾಃ ॥ ೬೪ ॥

ತಸ್ಮಿನ್ ಶಾಸತಿ ದುರ್ಧರ್ಷೇ ರಾಜರಾಜೇ ನೃಪಾತ್ಮಜೇ ।
ಏತಸ್ಮಿನ್ನಂತರೇ ಕಾಲೇ ಯಜ್ಞೇ ಪೈತಾಮಹೇ ಶುಭೇ ॥ ೬೫ ॥

ಸೂತಃ ಸೂತ್ಯಾಂ ಸಮುತ್ಪನ್ನಃ ಸೌಮ್ಯೇಽಹನಿ ಮಹಾಮತಿಃ ।
ತಸ್ಮಿನ್ನೇವ ಮಹಾಯಜ್ಞೇ ಜಜ್ಞೇ ಪ್ರಾಜ್ಞೋಽಥ ಮಾಗಧಃ ॥ ೬೬ ॥

ಪೃಥೋಸ್ಸ್ತವಾರ್ಥಂ ತೌ ತತ್ರ ಸಮಾಹೂತೌ ಮಹರ್ಷಿಭಿಃ ।
ಸೂತಸ್ಯ ಲಕ್ಷಣಂ ವಕ್ಷ್ಯೇ ಮಹಾಪುಣ್ಯಂ ದ್ವಿಜೋತ್ತಮಾಃ ॥ ೬೭ ॥

ಶಿಖಾಸೂತ್ರೇಣ ಸಂಯುಕ್ತಃ ಸ್ತೋತ್ರಾಧ್ಯಯನತತ್ಪರಃ ।
ಸರ್ವಶಾಸ್ತ್ರಾರ್ಥವೇತ್ತಾಸಾವಗ್ನಿಹೋತ್ರಮುಪಾಸತೇ ॥ ೬೮ ॥

---

೬೩. ಆ ರಾಜನು ಭೂಮಿಯನ್ನು ಆಳುತ್ತಿರಲು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಅವರವರ ಕೆಲಸವನ್ನು ಮಾಡಿಕೊಳ್ಳುತ್ತಿದ್ದರು. ವೃಕ್ಷಗಳು ಬೇಕಾದ ಫಲಗಳನ್ನು ಕೊಡುತ್ತಿದ್ದವು.

೬೪. ಅವನ ರಾಜ್ಯಭಾರದಲ್ಲಿ ದುರ್ಭಿಕ್ಷವಿಲ್ಲ, ರೋಗಭಯವಿಲ್ಲ, ಅಕಾಲ ಮರಣವಿಲ್ಲ. ಎಲ್ಲರೂ ಸುಖದಿಂದ ಜೀವಿಸುತ್ತಿದ್ದರು. ಜನಗಳು ಧರ್ಮದಲ್ಲಿ ಆಸಕ್ತರಾಗಿದ್ದರು. ಹೀಗೆ ರಾಜರಾಜನು ಆಳುತ್ತಿದ್ದಾಗ ಎಲ್ಲ ಪ್ರಾಣಿಗಳೂ ಸುಖ ವಾಗಿದ್ದವು.

೬೫-೬೭. ಹೀಗಿರಲು ಬ್ರಹ್ಮನನ್ನುದ್ದೇಶಿಸಿ ಮಾಡುವ ಯಜ್ಞವೊಂದು ಆಗ ಪ್ರಾಪ್ತವಾಯಿತು. ಆಗ ಸೂತಿಯಲ್ಲಿ ಹುಟ್ಟಿದವನು ಸೂತ, ಮತ್ತು ಮಾಗಧ ಇವರನ್ನು ಆ ಯಜ್ಞದಲ್ಲಿ ಪೃಥುವಿನ ಸ್ತೋತ್ರಕ್ಕೋಸ್ಕರ ಋಷಿಗಳು ಕರೆಸಿದರು. ಎಲೈ ಬ್ರಾಹ್ಮಣರೇ, ಸೂತನ ಲಕ್ಷಣವನ್ನು ಹೇಳುತ್ತೇನೆ, ಕೇಳಿ.

೬೮. ಅವನಿಗೆ ಜುಟ್ಟು, ಜನಿವಾರಗಳುಂಟು. ಸ್ತೋತ್ರ, ಅಧ್ಯಯನಗಳನ್ನು ಮಾಡಿ ಸರ್ವಶಾಸ್ತ್ರವನ್ನೂ ತಿಳಿದಿರಬೇಕು. ಅಗ್ನಿಹೋತ್ರವನ್ನಾಚರಿಸಬೇಕು.

**ದಾನಾಧ್ಯಯನಸಂಯುಕ್ತೋ ಬ್ರಹ್ಮಾಚಾರಪರಾಯಣಃ ।**
**ದೇವಾನಾಂ ಬ್ರಾಹ್ಮಣಾನಾಂ ಚ ಪೂಜನಾಭಿರತಸ್ಸದಾ ॥ ೬೯ ॥**

**ಯಾಚಕಸ್ತಾವಕೈಃ ಪುಣ್ಯೈರ್ವೇದಮಂತ್ರೈರ್ಯಜೇತ್ಕಿಲ ।**
**ಸದಾಚಾರಪರೋ ನಿತ್ಯಂ ಸಂಭೋಜ್ಯೋ ಬ್ರಾಹ್ಮಣೈಸ್ಸಹ ॥ ೭೦ ॥**

**ಏವಂ ಹಿ ಮಾಗಧೋ ಜಜ್ಞೇ ವೇದಾಧ್ಯಯನವರ್ಜಿತಃ ।**
**ವಂದಿನಶ್ಚಾರಣಾಶ್ಚಾನ್ಯೇ ಬ್ರಹ್ಮಾಚಾರವಿವರ್ಜಿತಾಃ । ॥ ೭೧ ॥**

**ಜ್ಞೇಯಾಸ್ತೇ ಚ ಮಹಾಭಾಗಾಃ ಸ್ತಾವಕಾಃ ಪ್ರಭವಂತಿ ವೈ ।**
**ಸ್ತವನಾರ್ಥಮುಭೌ ಸೃಷ್ಟೌ ನಿಪುಣೌ ವಂದಿಮಾಗಧೌ ॥ ೭೨ ॥**

**ತಾವೂಚುರ್ಋಷಯಸ್ಸರ್ವೇ ಸ್ತೂಯತಾಮೇಷ ಪಾರ್ಥಿವಃ ।**
**ಕರ್ಮೈತದನುರೂಪಂ ಚ ಯಾದೃಶೋಽಯಂ ನರಾಧಿಪಃ ॥ ೭೩ ॥**

---

೬೯. ದಾನ, ಅಧ್ಯಯನ ಇವುಗಳನ್ನು ಮಾಡಬೇಕು. ಬ್ರಾಹ್ಮಣನ ಆಚಾರ ವಿರಬೇಕು. ದೇವಬ್ರಾಹ್ಮಣರ ಪೂಜೆಯಲ್ಲಿ ಆಸಕ್ತನಾಗಿರಬೇಕು.

೭೦. ಒಳ್ಳೊಳ್ಳೆಯ ಸ್ತೋತ್ರಮಾಡುವುದರಿಂದ ಹಣಸಂಪಾದಿಸಬೇಕು. ವೇದಮಂತ್ರಗಳಿಂದ ಯಾಗಮಾಡಬೇಕು. ಸದಾಚಾರಪರನಾಗಿರಬೇಕು. ಹೀಗಿರುವ ಸೂತನು ಬ್ರಾಹ್ಮಣರೊಡನೆ ಕುಳಿತು ಭೋಜನಮಾಡಬಹುದು.

೭೧-೭೨. ಮಾಗಧನು ಇದೇ ರೀತಿಯಾದವನು. ಆದರೆ ಅವನಿಗೆ ವೇದಾಧ್ಯಯನಮಾಡುವ ಅಧಿಕಾರವಿಲ್ಲ. ಇನ್ನೂ ಕೆಲವರುಂಟು. ಅವರು ವಂದಿಗಳೆಂದೂ, ಚಾರಣರೆಂದೂ ಎನ್ನಿಸಿಕೊಳ್ಳುತ್ತಾರೆ. ಅವರಿಗೆ ಬ್ರಾಹ್ಮಣನ ಆಚಾರಗಳಿಲ್ಲ. ಸ್ತೋತ್ರಮಾಡುವ ವಿಚಾರದಲ್ಲಿ ಇವರು ನಿಪುಣರು. ಆ ಕಾರ್ಯಕ್ಕಾಗಿಯೇ ಈ ವಂದಿ ಮಾಗಧರು ಸೃಷ್ಟಿಸಲ್ಪಟ್ಟಿದ್ದಾರೆ.

೭೩. ಬಳಿಕ ಎಲ್ಲಾ ಋಷಿಗಳೂ ಆ ವನ್ದಿಮಾಗಧರನ್ನು ಕುರಿತು ಈ ರಾಜನನ್ನು ಸ್ತೋತ್ರಮಾಡಿ, ಸ್ತೋತ್ರಮಾಡುವ ಕೆಲಸವು ನಿಮಗೆ ಯೋಗ್ಯವಾದುದು. ರಾಜನು ಹೇಗಿರುವನೋ ಅದನ್ನೆಲ್ಲಾ ಹೇಳಿ. ಎನ್ನಲು,

ತಾವೂಚತುಸ್ತದಾ ಸರ್ವಾಂಸ್ತಾನೃಷೀನ್ನಂದಿಮಾಗಧೌ ।
ಆವಾಂ ದೇವಾನೃಷೀಂಶ್ಚೈವ ಪ್ರೀಣಯಾವಃ ಸ್ವಕರ್ಮಭಿಃ ॥ ೭೪ ॥

ನ ಚಾಸ್ಯ ವಿದ್ಮೋ ವೈ ಕರ್ಮ ಪ್ರತಿಷ್ಠಾಲಕ್ಷಣಂ ಯಶಃ ।
ಕರ್ಮಣಾ ಯೇನ ಕುರ್ಯಾವ ಸ್ತೋತ್ರಮಸ್ಯ ಮಹಾತ್ಮನಃ ॥ ೭೫ ॥

ಜಾನೀವಸ್ತನ್ನ ವಿಪ್ರೇಂದ್ರಾ ಅವಿಜ್ಞಾತಗುಣಸ್ಯ ಹಿ ।
ಭವಿಷ್ಯೈಶ್ಚ ಗುಣೈಃ ಪುಣ್ಯೈಃ ಸ್ತೋತವ್ಯೋಽಯಂ ನರಾಧಿಪಃ ॥ ೭೬ ॥

ಕೃತವಾನ್ ಯಾನಿ ಕರ್ಮಾಣಿ ಪೃಥುರೇವ ಮಹಾಯಶಾಃ ।
ಊಚುಸ್ತೇ ಮುನಯಸ್ತಸ್ಯ ಗುಣಾನ್ ದಿವ್ಯಾಂಶ್ಚ ಭಾವಿನಃ ॥ ೭೭ ॥

ಸತ್ಯವಾನ್ ಜ್ಞಾನಸಂಪನ್ನೋ ಬುದ್ಧಿಮಾನ್ ಖ್ಯಾತವಿಕ್ರಮಃ ।
ಸದಾ ಶೂರೋ ಗುಣಗ್ರಾಹೀ ಪುಣ್ಯವಾಂಸ್ತ್ಯಾಗವಾನ್ ಗುಣೀ ॥ ೭೮ ॥

ಧಾರ್ಮಿಕಸ್ಸತ್ಯವಾದೀ ಚ ಯಜ್ಞಾನಾಂ ಯಾಜಕೋತ್ತಮಃ ।
ಪ್ರಿಯವಾಕ್ಸತ್ಯವಾಗ್ದಾಂತೋ ಧಾನ್ಯವಾನ್ಧನವಾನ್ಸುಧೀಃ ॥ ೭೯ ॥

---

೭೪. ಆಗ ಆ ಇಬ್ಬರು ವಂದಿಮಾಗಧರೂ ಆ ಋಷಿಗಳನ್ನು ಕುರಿತು ನಾವಿಬ್ಬರೂ ದೇವತೆಗಳನ್ನೂ, ಋಷಿಗಳನ್ನೂ, ನಮ್ಮ ಕರ್ಮಗಳಿಂದ ತೃಪ್ತಿಪಡಿಸುತ್ತೇವೆ.

೭೫. ಈ ಮಹಾತ್ಮನ ಕೆಲಸವನ್ನಾಗಲಿ, ಗೌರವವನ್ನಾಗಲಿ, ಲಕ್ಷಣವನ್ನಾಗಲಿ, ಯಶಸ್ಸನ್ನಾಗಲಿ ನಾವು ತಿಳಿಯೆವು, ಆದುದರಿಂದ ಹೇಗೆತಾನೇ ಇವನನ್ನು ಸ್ತೋತ್ರಮಾಡಲು ಸಾಧ್ಯ?

೭೬. ಅವನ ಗುಣವೊಂದೂ ನಮಗೆ ಗೊತ್ತಿಲ್ಲದಿರುವುದರಿಂದ ಅವನು ಮುಂದೆ ಮಾಡುವ ಕಾರ್ಯಗಳ ವಿಚಾರವಾಗಿ ಆ ಸಂಬಂಧವಾದ ಗುಣಗಳಿಂದ ಮಾತ್ರ ಸ್ತೋತ್ರಮಾಡಬೇಕು ಅಷ್ಟೇ ಎಂದರು.

೭೭. ಇದನ್ನು ಕೇಳಿ ಆಗ ಋಷಿಗಳು ಈ ಪೃಥುವು ಮಾಡಿದ ಕೆಲಸಗಳನ್ನೂ ಮುಂದಿನ ಗುಣಗಳನ್ನೂ ಹೀಗೆ ವಿವರಿಸಿದರು.

೭೮-೮೧. ಅವನು ಸತ್ಯವಂತನು, ಜ್ಞಾನಿಯು, ಬುದ್ಧಿವಂತನು, ವಿಕ್ರಮಶಾಲಿಯು, ಶೂರನು, ಗುಣವನ್ನು ಗ್ರಹಿಸುವವನು. ಪುಣ್ಯವಂತ, ತ್ಯಾಗೀ, ಗುಣವಂತ, ಧಾರ್ಮಿಕ, ಸತ್ಯವಾದಿ, ಯಾಗಮಾಡತಕ್ಕವನು, ಪ್ರಿಯವಾದ ಮಾತನಾಡುವವನು, ಸತ್ಯವಾದಿ, ಇಂದ್ರಿಯನಿಗ್ರಹಶೀಲ, ಧಾನ್ಯವುಳ್ಳವನು, ಧನವುಳ್ಳವನು,

ಗುಣಜ್ಞಶ್ಚ ಕೃತಜ್ಞಶ್ಚ ಧರ್ಮಜ್ಞಸ್ಸತ್ಯವತ್ಸಲಃ ।
ಸರ್ವಗಸ್ಸರ್ವದೋ ವೇತ್ತಾ ಬ್ರಹ್ಮಣ್ಯೋ ವೇದವತ್ಸುಧೀಃ ॥ ೮೦ ॥

ಯಜ್ಞವಾಂಶ್ಚ ಸುಶೂರಶ್ಚ ವೇದವೇದಾಂಗಪಾರಗಃ ।
ಧನ್ಯೋ ಗೋಪ್ತಾ ಪ್ರಜಾನಾಂ ಚ ವಿಜಯೀ ಸಮರಾಂಗಣೇ ॥ ೮೧ ॥

ರಾಜಸೂಯಾದಿಕಾನಾಂ ತು ಯಜ್ವಾನಾಂ ರಾಜಸತ್ತಮಃ ।
ಆಹರ್ತಾ ಭೂತಲೇ ಚೈಕಃ ಸರ್ವಧರ್ಮಸಮನ್ವಿತಃ ॥ ೮೨ ॥

ಏತೇ ಗುಣಾ ಅಸ್ಯ ಚಾಗ್ರೇ ಭವಿಷ್ಯಂತಿ ಮಹಾತ್ಮನಃ ।
ಋಷಿಭಿಸ್ತೌ ನಿಯುಕ್ತೌ ಚ ಕುರ್ವಾಣೌ ಸೂತಮಾಗಧೌ ॥ ೮೩ ॥

ಗುಣೈಶ್ಚೈವ ಭವಿಷ್ಯೈಶ್ಚ ಸ್ತೋತ್ರಂ ತಸ್ಯ ಮಹಾತ್ಮನಃ ।
ತದಾ ಪ್ರಭೃತಿ ಲೋಕೇऽಸ್ಮಿಂಸ್ತವೇಷು ದ್ವಿಜಸತ್ತಮಾಃ ॥ ೮೪ ॥

ಮಾಗಧಾದ್ಯಾಃ ಪ್ರಯುಜ್ಯಂತೇ ತೇಷಾಂ ದ್ರವಿಣಮುತ್ತಮಂ ।
ಸೂತಾಯ ಮಾಗಧಾಯೈವ ವಂದಿನೇऽಥ ಮಹೋದಯಂ ॥ ೮೫ ॥

ಚಾರಣಾಯ ತತಃ ಪ್ರಾದಾತ್ಕಳಿಂಗಂ ದೇಶಮೇವ ಚ
ಪೃಥುಃ ಪ್ರಾದಾಚ್ಚ ಧರ್ಮಾತ್ಮಾ ಹೈಹಯಂ ದೇಶಮೇವ ಚ ॥ ೮೬ ॥

---

ಒಳ್ಳೆಯ ಬುದ್ಧಿವಂತನು. ಗುಣಜ್ಞ, ಕೃತಜ್ಞ, ಧರ್ಮಜ್ಞ, ಸತ್ಯದಲ್ಲಿ ಪ್ರೀತಿಯುಳ್ಳವನು. ಸರ್ವರಲ್ಲೂ ಪ್ರೀತಿ ಇರತಕ್ಕವನು. ಸರ್ವವನ್ನೂ ದಾನಮಾಡುವವನು. ಎಲ್ಲವನ್ನೂ ಬಲ್ಲವನು, ಬ್ರಹ್ಮವನ್ನು ಬಲ್ಲವನು, ವೇದವನ್ನು ಬಲ್ಲವನು. ಧನ್ಯ, ಪ್ರಜೆಗಳ ರಕ್ಷಕ, ಯುದ್ಧದಲ್ಲಿ ವಿಜಯಶಾಲಿಯಾದವನು.

೮೨. ಅಲ್ಲದೆ ಈ ರಾಜನು ರಾಜಸೂಯ ಮುಂತಾದ ಯಾಗಗಳನ್ನು ಮಾಡುತ್ತಾನೆ. ಇವನೊಬ್ಬನೇ ಈ ಯಾಗವನ್ನು ಮಾಡತಕ್ಕವನು. ಸರ್ವಧರ್ಮದಿಂದಲೂ ಕೂಡಿದ್ದಾನೆ. ಈ ಗುಣಗಳೆಲ್ಲಾ ಇವನಿಗೆ ಮುಂದೆ ಬರುತ್ತವೆ.

೮೩. ಋಷಿಗಳಿಂದ ಈ ರೀತಿ ಅಪ್ಪಣೆಮಾಡಲ್ಪಟ್ಟ ಸೂತಮಾಗಧರು ಭವಿಷ್ಯವಾದ ಗುಣಗಳಿಂದ ಈ ಮಹಾತ್ಮನನ್ನು ಸ್ತೋತ್ರಮಾಡಿದರು.

೮೪-೮೬. ಅದು ಮೊದಲುಗೊಂಡು ಜನರು ಸೂತಮಾಗಧರನ್ನು ಸ್ತೋತ್ರದಲ್ಲಿ ಉಪಯೋಗಿಸಿಕೊಳ್ಳುತ್ತಾರೆ. ಈ ರಾಜನು ಅವರಿಗೆ ಬೇಕಾದಷ್ಟು ದ್ರವ್ಯವನ್ನು ಕೊಟ್ಟನು. ಚಾರಣರಿಗೆ ಕಳಿಂಗ, ಹೈಹಯ ದೇಶಗಳನ್ನು ಕೊಟ್ಟನು.

ರೇವಾತೀರೇ ಪುರಂ ಕೃತ್ವಾ ಸ್ವನಾಮ್ನಾ ನೃಪಸತ್ತಮಃ ।
ಬ್ರಾಹ್ಮಣೇಭ್ಯೋ ದ್ವಿಜಶ್ರೇಷ್ಠಾಸ್ತದಾದಾದ್ವಿಪುಲಂ ವಸು ॥ ೮೭ ॥

ಸರ್ವಜ್ಞಂ ಸರ್ವದಾತಾರಂ ಧರ್ಮವೀರ್ಯಂ ನರೋತ್ತಮಂ ।
ದದೃಶುಸ್ತಂ ಪ್ರಜಾಸ್ಸರ್ವಾ ಮುನಯಶ್ಚ ತತೋಽಮಲಾಃ ॥ ೮೮ ॥

ಊಚುಃ ಪರಸ್ಪರಂ ಪುಣ್ಯ ಏಷ ರಾಜಾ ಮಹಾಮತಿಃ ।
ದೇವಾದೀನಾಂ ವೃತ್ತಿದಾತಾ ಹ್ಯಸ್ಮಾಕಂ ಚ ವಿಶೇಷತಃ ॥ ೮೯ ॥

ಪ್ರಜಾನಾಂ ಪಾಲಕಶ್ಚೈವ ವೃತ್ತಿದೋ ಹಿ ಭವಿಷ್ಯತಿ ।
ಇಯಂ ಧಾತ್ರೀ ಮಹಾಪ್ರಾಜ್ಞಾ ಉಪ್ತಂ ಬೀಜಂ ಪುರಾ ಕಿಲ ॥ ೯೦ ॥

ಜೀವನಾರ್ಥಂ ಪ್ರಜಾನಾಂ ತು ಗ್ರಸಯಿತ್ವಾ ಸ್ಥಿರಾಽಭವತ್ ।
ತತಃ ಪೃಥುಂ ದ್ವಿಜಶ್ರೇಷ್ಠಾಃ ಪ್ರಜಾಸ್ಸಮಭಿದುದ್ರುವುಃ ॥ ೯೧ ॥

ವಿಧತ್ಸ್ವೇತಿ ಸುವೃತ್ತಿಂ ನೋ ಮುನೀನಾಂ ವಚನಾತ್ತದಾ ।
ಗ್ರಾಸಯಿತ್ವಾ ತದಾ ತಾನಿ ಪೃಥ್ವೀ ಜಾತಾ ಸುನಿಶ್ಚಲಾ ॥ ೯೨ ॥

---

೮೭. ರೇವಾನದೀತೀರದಲ್ಲಿ ಒಂದೂರನ್ನು ಕಟ್ಟಿಸಿ, ಅದನ್ನೂ, ಬೇಕಾದಷ್ಟು ಹಣವನ್ನೂ, ಬ್ರಾಹ್ಮಣರಿಗೆ ಕೊಟ್ಟನು.

೮೮. ಅಮಲರಾದ ಋಷಿಗಳು ಆತನನ್ನು ಸರ್ವಜ್ಞನನ್ನಾಗಿಯೂ, ಸರ್ವವನ್ನೂ ದಾನಮಾಡತಕ್ಕವನನ್ನಾಗಿಯೂ, ಧರ್ಮವೀರನನ್ನಾಗಿಯೂ, ತಿಳಿದರು.

೮೯. ಈ ರಾಜನು ಪುಣ್ಯವಂತನು, ಬುದ್ಧಿವಂತನು, ದೇವತೆಗಳಿಗೂ ಜೀವವನ್ನು ಕೊಡತಕ್ಕವನು. ನಮಗೂ ಇನ್ನೂ ಹೆಚ್ಚಾಗಿ ಕೊಡತಕ್ಕವನು. ಪ್ರಜೆಗಳಿಗೂ ಪಾಲಕನಾಗಿದ್ದಾನೆ. ಎಂದು ಅನ್ಯೋನ್ಯವಾಗಿ ಮಾತನಾಡಿಕೊಳ್ಳುತ್ತಿದ್ದರು.

೯೦-೯೧. ಎಲೈ ಬ್ರಾಹ್ಮಣರಿರಾ, ಪೂರ್ವದಲ್ಲಿ ಈ ಭೂಮಿಯು, ಪ್ರಜೆಗಳು ಜೀವನಕ್ಕೋಸ್ಕರ ಬಿತ್ತಿದ ಬೀಜವನ್ನು ನುಂಗಿ ಫಲ ಕೊಡದೇ ಹೋಯಿತು. ಆಗ ಪ್ರಜೆಗಳು ರಾಜನ ಬಳಿಗೆ ಹೋದರು. ನಮಗೂ ಕೂಡ ಒಳ್ಳೇವೃತ್ತಿಯನ್ನು ಕಲ್ಪಿಸು ಎಂದು ಮುನಿಗಳು ಹೇಳಿದರು.

೯೨-೯೩. ಭೂಮಿಯು ಬೀಜವನ್ನು ನುಂಗುವುದನ್ನೂ, ಪ್ರಜೆಗಳಿಗೆ ಬಂದಿರುವ ಭಯವನ್ನೂ ನೋಡಿ ಮಹರ್ಷಿಗಳ ಮಾತಿನಂತೆ ನಡಸಲು ಕೋಪಗೊಂಡು ಬಿಲ್ಲು

**ಭಯಂ ಪ್ರಜಾನಾಂ ಸುಮಹತ್ಸ ದೃಷ್ಟ್ವಾ ರಾಜಸತ್ತಮಃ ।**
**ಮಹರ್ಷಿವಚನಾಚ್ಚಾಪಿ ಪ್ರಗೃಹ್ಯ ಸಶರಂ ಧನುಃ ॥ ೯೩ ॥**

**ಅಭ್ಯಧಾವತ ವೇಗೇನ ಪೃಥ್ವೀಂ ಕ್ರುದ್ಧೋ ನರಾಧಿಪಃ ।**
**ಕುಂಜರಂ ರೂಪಮಾಸ್ಥಾಯ ಭಯಾತ್ತಸ್ಯ ತು ಮೇದಿನೀ ॥ ೯೪ ॥**

**ವನೇಷು ದುರ್ಗದೇಶೇಷು ಗುಪ್ತಾ ಭೂತಾ ಚಚಾರ ಸಾ ।**
**ನ ಪಶ್ಯತಿ ಮಹಾಪ್ರಾಜ್ಞಃ ಕುರೂಪಂ ದ್ವಿಜಸತ್ತಮಾಃ ॥ ೯೫ ॥**

**ಆಚಚಕ್ಷುರ್ಮಹಾಭಾಗಂ ಕುಂಜರಂ ರೂಪಮಾಸ್ಥಿತಾ ।**
**ತತಃ ಕುಂಜರರೂಪಾಂ ತಾಮಭಿದುದ್ರಾವ ಪಾರ್ಥಿವಃ ॥ ೯೬ ॥**

**ತಾಡ್ಯಮಾನಾ ಚ ಸಾ ತೇನ ನಿಶಿತೈರ್ಮಾರ್ಗಣೈಸ್ತದಾ ।**
**ಹರಿರೂಪಂ ಸಮಾಸ್ಥಾಯ ಪಲಾಯನಪರಾಭವತ್ ॥ ೯೭ ॥**

**ಹರಿರೂಪಾಂ ಪಾರ್ಥಿವಸ್ತಾಮಭಿದುದ್ರಾವ ವೇಗವಾನ್ ।**
**ತತಃ ಕ್ರುದ್ಧೋ ಮಹಾಪ್ರಾಜ್ಞೋ ರೋಷಾದರುಣಲೋಚನಃ ॥ ೯೮ ॥**

---

ಬಾಣಗಳನ್ನು ತೆಗೆದುಕೊಂಡು ವೇಗದಿಂದ ಭೂಮಿಯನ್ನು ಬಡಿಯಲು ಹೋದನು.

೯೪. ಈ ರಾಜನ ಭಯದಿಂದ ಭೂಮಿಯು ಆನೆಯರೂಪವನ್ನು ಹೊಂದಿ, ಗುಟ್ಟಾಗಿ ವನಗಳಲ್ಲಿಯೂ ದುರ್ಗಗಳಲ್ಲಿಯೂ, ಸಂಚರಿಸತೊಡಗಿತು.

೯೫. ಆ ಭೂಮಿಯನ್ನು ರಾಜನು ಕಾಣದೇ ಹೋಗಲು, ಇತರರು ಭೂಮಿಯು ಆನೆರೂಪವನ್ನು ಹೊಂದಿ, ಗುಟ್ಟಾಗಿರುವುದನ್ನು ಹೇಳಿದರು.

೯೬-೯೭. ಇದನ್ನು ಕೇಳಿ ರಾಜನು ಆನೆಯ ಆಕಾರವನ್ನು ಹೊಂದಿರುವ ಅದನ್ನು ಬೆನ್ನಟ್ಟಿ ಹೋದನು. ಮತ್ತು ತೀಕ್ಷ್ಣವಾದ ಬಾಣಗಳಿಂದ ಹೊಡೆಯಲು ಮೊದಲಿಟ್ಟನು. ಅದನ್ನು ತಿಳಿದು ಜಿಂಕೆಯ ರೂಪವನ್ನು ಹೊಂದಿ ಓಡಿಹೋಗಲು ಮೊದಲುಮಾಡಿತು.

೯೮. ಜಿಂಕೆಯ ರೂಪದಿಂದ ಓಡಿಹೋಗುತ್ತಿರುವ ಅದನ್ನೂ ಬಿಡದೆ ಓಡಿಸಿಕೊಂಡು ಹೋಗಿ ತೀಕ್ಷ್ಣವಾದ ಬಾಣಗಳಿಂದ ಹೊಡೆಯಲು ಮೊದಲಿಟ್ಟನು.

ಸುಬಾಣೈರ್ನಿಶಿತೈಸ್ತೀಕ್ಷ್ಣೈ ರಾಜಘ್ನಾನ ಸ ಮೇದಿನೀಂ ।
ಆಕುಲಾ ವ್ಯಾಕುಲಾ ಜಾತಾ ಬಾಣಾಘಾತಹತಾ ತದಾ ॥ ೯೯ ॥

ಮಹಿಷೀರೂಪಮಾಸ್ಥಾಯ ಪಲಾಯನಪರಾಭವತ್ ।
ತಾಮುಪ್ಯಧಾವದ್ವೇಗೇನ ಬಾಣಪಾಣಿರ್ಧನುರ್ಧರಃ ॥ ೧೦೦ ॥

ಸಾ ಗೌರ್ಭೂತ್ವಾ ದ್ವಿಜಶ್ರೇಷ್ಠಾಃ ಸ್ವರ್ಗಮೇವ ಗತಾ ದ್ರುತಂ ।
ಬ್ರಹ್ಮಣಃ ಶರಣಂ ಪ್ರಾಪ್ತಾ ವಿಷ್ಣೋಶ್ಚೈವ ಮಹಾತ್ಮನಃ ॥ ೧೦೧ ॥

ರುದ್ರಾದೀನಾಂ ಚ ದೇವಾನಾಂ ತ್ರಾಣಸ್ಥಾನಂ ನ ವಿಂದತಿ ।
ಅಲಭಂತೀ ಚ ಸಾ ತ್ರಾಣಂ ವೈನ್ಯಮೇವಾನ್ವಪದ್ಯತ ॥ ೧೦೨ ॥

ತಸ್ಯ ಪಾರ್ಶ್ವೇ ಪುನಃ ಪ್ರಾಪ್ತಾ ಬಾಣಾಘಾತಸಮಾಕುಲಾ ।
ಬದ್ಧಾಂಜಲಿಪುಟಾ ಭೂತ್ವಾ ತಂ ಪೃಥುಂ ವಾಕ್ಯಮಬ್ರವೀತ್ ॥ ೧೦೩ ॥

ತ್ರಾಹಿ ತ್ರಾಹೀತಿ ರಾಜೇಂದ್ರ ಸಾ ರಾಜಾನಮಭಾಷತ ।
ಅಹಂ ಧಾತ್ರೀ ಮಹಾಪ್ರಾಜ್ಞ ಸರ್ವಾಧಾರಾ ವಸುಂಧರಾ ॥ ೧೦೪ ॥

---

೯೯. ಆ ಬಾಣದ ಏಟನ್ನು ತಾಳಲಾರದೆ ವ್ಯಥೆಪಟ್ಟು ಎಮ್ಮೆಯ ರೂಪವನ್ನು ಹೊಂದಿ ಓಡಲು ಮೊದಲುಮಾಡಿತು.

೧೦೦. ಬಾಣವನ್ನು ತೆಗೆದುಕೊಂಡು ಆ ಮಹಿಷಿಯನ್ನು ಓಡಿಸಿಕೊಂಡು ಹೋಗಲು ಆ ಭೂಮಿಯು ಗೋರೂಪವನ್ನು ಹೊಂದಿ ಸ್ವರ್ಗಕ್ಕೆ ಹೋಯಿತು.

೧೦೧. ಅಲ್ಲಿಂದ ಬ್ರಹ್ಮನ ಮನೆಗೆ ಹೋಯಿತು. ಅಲ್ಲಿಯೂ ಅದಕ್ಕೆ ರಕ್ಷಣೆ ಸಿಕ್ಕಲಿಲ್ಲ. ಅನಂತರ ವಿಷ್ಣುವಿನ ಹತ್ತಿರ ಹೋಗಲು ಅಲ್ಲಿಯೂ ರಕ್ಷಣೆ ಸಿಕ್ಕಲಿಲ್ಲ. ರುದ್ರನೇ ಮೊದಲಾದ ದೇವತೆಗಳ ಬಳಿಯಲ್ಲೂ ರಕ್ಷಣೆ ಸಿಕ್ಕಲಿಲ್ಲ.

೧೦೨. ಎಲ್ಲಿಯೂ ರಕ್ಷಣೆ ಸಿಕ್ಕದಿರಲು ವೇನನ ಮಗನಾದ ಆ ಪೃಥುವನ್ನೇ ಶರಣುಹೊಂದಿ ಅವನ ಪಾರ್ಶ್ವದಲ್ಲಿ ಬಂದು ನಿಂತಿತು.

೧೦೩. ಕೈಮುಗಿದುಕೊಂಡು ಆ ರಾಜನನ್ನು ಕುರಿತು ನನ್ನನ್ನು ಕಾಪಾಡು, ಕಾಪಾಡು ಎಂದು ಕೇಳಿಕೊಂಡಿತು.

೧೦೪. ಎಲೈ ಪ್ರಾಜ್ಞನೇ, ನಾನು ಭೂಮಿಯು. ಸರ್ವಕ್ಕೂ ಆಧಾರಳು. ವಸುಂಧರಳು ನನ್ನನ್ನು ಕೊಂದರೆ ಎಳುಲೋಕಗಳನ್ನೂ ಕೊಂದಂತೆಯೇ ಎಂದು ತಿಳಿ. ಎಂದು ಹೇಳಿ,

ನಿಹತಾಯಾಂ ಮಯಿ ನೃಪ ನಿಹತಂ ಲೋಕಸಪ್ತಕಂ ।
ಕೃತಾಂಜಲಿಪುಟಾ ಭೂತ್ವಾ ಪೂಜ್ಯಾ ಲೋಕೈಸ್ತ್ರಿಭಿಸ್ಸದಾ ॥ ೧೦೫ ॥

ಅನ್ಯದ್ವದಾಮಿ ತೇ ಭೂಪ ಅವಧ್ಯಾ ಸ್ತ್ರೀ ಸದಾ ಭವೇತ್ ।
ಸ್ತ್ರೀಣಾಂ ವಧೇ ಮಹಾನ್ದೋಷೋ ಹ್ಯುಕ್ತಃ ಪೂರ್ವೈರ್ಮಹಾತ್ಮಭಿಃ॥೧೦೬॥

ಗವಾಂ ವಧೇ ಮಹತ್ಪಾಪಂ ದೃಷ್ಟಮಸ್ತಿ ದ್ವಿಜೋತ್ತಮೈಃ ।
ಮಯಾ ವಿನಾ ಮಹಾರಾಜ ಕಥಂ ಧಾರಯಸೇ ಪ್ರಜಾಃ ॥ ೧೦೭ ॥

ಅಹಂ ಯದಾ ಸ್ಯಾಂ ಚ ಧರಾ ತದಾ ಲೋಕಾಶ್ಚರಾಚರಾಃ
ಸ್ಥಿರತ್ವಂ ಯಾಂತಿ ತೇ ಸರ್ವೇ ಸ್ಥಿರೀಭೂತಾ ಯದಾ ಹ್ಯಹಂ ॥ ೧೦೮ ॥

ಮಾಂ ವಿನಾ ತ ಇಮೇ ಲೋಕಾ ವಿನಶ್ಯೇಯುಶ್ಚರಾಚರಾಃ ॥ ೧೦೯ ॥

ಪುನಃ ಪ್ರಜಾ ವಿನಶ್ಯೇಯುರ್ಮಮ ನಾಶೇ ಸಮಾಗತೇ ।
ಕಥಂ ಧಾರಯಿತಾ ಚಾಸಿ ಪ್ರಜಾ ರಾಜನ್ವಿನಾ ಮಯಾ ॥ ೧೧೦ ॥

---

೧೦೫. ಮೂರುಲೋಕಕ್ಕೂ ಪೂಜ್ಯಳಾದ ಆಕೆಯು ಕೈಮುಗಿದುಕೊಂಡು ಎಲೈ ರಾಜನೇ, ಇನ್ನೊಂದು ಮಾತು. ಸ್ತ್ರೀಯನ್ನು ಯಾವಾಗಲೂ ಕೊಲ್ಲಬಾರದಷ್ಟೆ?

೧೦೬. ಸ್ತ್ರೀಯನ್ನು ಕೊಂದರೆ ಮಹಾ ದೋಷವೆಂದು ಮಹಾತ್ಮರು ಹೇಳಿದ್ದಾರೆ. ಅಲ್ಲದೆ ಗೋವಧೆ ಮಾಡಿದರೆ ಮಹಾಪಾಪ ಬರುತ್ತದೆಂದೂ ಹೇಳಿದ್ದಾರೆ.

೧೦೭. ಎಲೈ ರಾಜನೇ, ನಾನಿಲ್ಲದಿದ್ದರೆ ನೀನು ಪ್ರಜೆಗಳನ್ನು ಹೇಗೆ ಧರಿಸುತ್ತಿ? ಧರೆಯಾದ ನಾನಿದ್ದರೆ ಆಗ ಚರಾಚರವಾದ ಲೋಕಗಳಿರುತ್ತವೆ.

೧೦೮-೧೦೯. ನಾನು ಸ್ಥಿರವಾಗಿದ್ದರೆ ಎಲ್ಲವೂ ಸ್ಥಿರವಾಗಿರುತ್ತವೆ. ನಾನಿಲ್ಲದೇ ಹೋದರೆ ಈ ಲೋಕಗಳೆಲ್ಲವೂ ನಾಶವಾಗುತ್ತವೆ.

೧೧೦. ನಾನು ನಾಶವಾದರೆ ಪ್ರಜೆಗಳೂ ನಾಶವಾಗುತ್ತಾರೆ. ನಾನಿಲ್ಲದಿದ್ದರೆ ಪ್ರಜೆಗಳನ್ನು ಹೇಗೆ ಧರಿಸುತ್ತೀಯೆ ?

ಮಯಿ ಲೋಕಾಃ ಸ್ಥಿರಾ ರಾಜನ್ ಮಯೇದಂ ಧಾರ್ಯತೇ ಜಗತ್ ।
ಮದ್ವಿನಾಶೇ ವಿನಶ್ಯೇಯುಃ ಪ್ರಜಾಸ್ಸರ್ವಾ ನ ಸಂಶಯಃ ॥ ೧೧೧ ॥

ತಸ್ಮಾನ್ನಾರ್ಹಸಿ ಮಾಂ ಹನ್ತುಂ ಶ್ರೇಯಶ್ಚೇತ್ತ್ವಂ ಚಿಕೀರ್ಷಸಿ ।
ಪ್ರಜಾನಾಂ ಪೃಥಿವೀಪಾಲ ಶೃಣು ಮೇ ತ್ವಂ ಹಿತಂ ವಚಃ ॥ ೧೧೨ ॥

ಉಪಾಯೈಶ್ಚ ಮಹಾಭಾಗ ಸುಸಿದ್ಧಿಂ ಯಾನ್ತ್ಯುಪಕ್ರಮಾಃ ।
ಸಮಾಲೋಕ್ಯ ಹ್ಯುಪಾಯಂ ತ್ವಂ ಪ್ರಜಾನಾಂ ಶಂ ವಿಧತ್ಸ್ವ ಚ ॥ ೧೧೩ ॥

ಮಾಂ ಹತ್ವಾ ತ್ವಂ ಮಹಾರಾಜ ಧಾರಣೇ ಪಾಲನೇ ಸದಾ ।
ಪೋಷಣೇ ಚ ಮಹಾಪ್ರಾಜ್ಞ ಮದ್ವಿನಾ ಹಿ ಕಥಂ ನೃಪ ॥ ೧೧೪ ॥

ಧರಿಷ್ಯಸಿ ಪ್ರಜಾಂ ಚೇಮಾಂ ಕೋಪಂ ಯಚ್ಛ ತ್ವಮಾತ್ಮನಃ ।
ಅನ್ನಮಯೀ ಭವಿಷ್ಯಾಮಿ ಧರಿಷ್ಯಾಮಿ ಪ್ರಜಾಮಿಮಾಂ ॥ ೧೧೫ ॥

ಅಹಂ ನಾರೀ ಹ್ಯವಧ್ಯಾ ಚ ಪ್ರಾಯಶ್ಚಿತ್ತೀ ಭವಿಷ್ಯಸಿ ।
ಅವಧ್ಯಾ ಚ ಸ್ತ್ರಿಯಂ ಪ್ರಾಹುಸ್ತಿರ್ಯಗ್ಯೋನಿಗತಾಮಪಿ ॥ ೧೧೬ ॥

---

೧೧೧. ನನ್ನಲ್ಲಿ ಲೋಕಗಳು ಸ್ಥಿರವಾಗಿವೆ. ನಾನೇ ಈ ಜಗತ್ತೆಲ್ಲವನ್ನೂ ಧರಿಸಿರುತ್ತೇನೆ. ನಾನು ನಾಶವಾದರೆ ಪ್ರಜೆಗಳೆಲ್ಲರೂ ನಾಶವಾಗುತ್ತಾರೆ. ಇದರಲ್ಲಿ ಸಂಶಯವಿಲ್ಲ.

೧೧೨. ನಿನಗೆ ಒಳ್ಳೆಯದಾಗಬೇಕಾದರೆ ನನ್ನನ್ನು ಕೊಲ್ಲಬೇಡ. ಎಲೈ ಪ್ರಜಾ ಪಾಲಕನೇ, ನನ್ನ ಹಿತೋಕ್ತಿಯನ್ನು ಕೇಳು.

೧೧೩. ಕಾರ್ಯಗಳು ಉಪಾಯದಿಂದ ಸಿದ್ಧಿಯನ್ನು ಹೊಂದುತ್ತವೆ. ಆದುದ ರಿಂದಸಮಯೋಚಿತವಾದ ಉಪಾಯವನ್ನುಹುಡುಕಿ ಪ್ರಜೆಗಳಿಗೆ ಶುಭವನ್ನು ಮಾಡು.

೧೧೪-೧೧೫. ನನ್ನನ್ನು ಕೊಂದಮೇಲೆ ರಾಜನಾದ ನೀನು ಧಾರಣೆ, ಪಾಲನೆ ಗಳನ್ನು ಹೇಗೆ ಮಾಡುತ್ತೀಯೆ ? ಪೋಷಣವೂಕೂಡ ನಾನಿಲ್ಲದಿದ್ದರೆ ಹೇಗಾಗುತ್ತದೆ? ಆದುದರಿಂದ ಈ ನಿನ್ನ ಕೋಪವನ್ನು ತಡೆದು ಪ್ರಜೆಗಳನ್ನು ಪಾಲಿಸು. ನಾನೂಸಹ ಪ್ರಜೆಗಳಿಗೆ ಅನ್ನವನ್ನು ಕಲ್ಪಿಸುತ್ತೇನೆ. ಸರ್ವರಿಗೂ ಆಶ್ರಯಸ್ಥಾನವಾಗಿರುವೆನು.

೧೧೬. ನಾನು ಹೆಂಗಸು. ಹೆಂಗಸನ್ನು ಕೊಲ್ಲಬಾರದು. ಕೊಂದರೆ ನೀನು

ವಿಚಾರ್ಯೈವಂ ಮಹಾರಾಜ ಧರ್ಮೇಣ ತ್ಯಕ್ತುಮರ್ಹಸಿ ।
ಏವಂ ನಾನಾವಿಧೈರ್ವಾಕ್ಯೈರುಕ್ತೋ ಧಾತ್ರ್ಯಾ ಧರಾಧಿಪಃ ॥ ೧೧೭ ॥

ಕೋಪಮೇನಂ ಮಹಾರಾಜ ತ್ಯಜ ದಾರುಣಮೇವ ಹಿ ।
ಪ್ರಸನ್ನೇ ತ್ವಯಿ ರಾಜೇಂದ್ರ ತದಾ ಸ್ವಸ್ಥಾ ಭವಾಮ್ಯಹಂ ॥ ೧೧೮ ॥

ಏವಮುಕ್ತಸ್ತಯಾ ರಾಜಾ ಪೃಥುರ್ವೈನ್ಯಃ ಪ್ರತಾಪವಾನ್ ।
ತಾಮುವಾಚ ಮಹಾಭಾಗಾಂ ಧರಿತ್ರೀಂ ದ್ವಿಜಸತ್ತಮಾ ॥ ೧೧೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ಪೃಥೂಪಾಖ್ಯಾನೇ ಸಪ್ತವಿಂಶೋಽಧ್ಯಾಯಃ

---

ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗುತ್ತದೆ. ಕೀಳುಜಾತಿಯ ಹೆಣ್ಣುಪ್ರಾಣಿಯಾದರೂ ಅದನ್ನು ಕೊಲ್ಲಕೂಡದೆಂದು ಹೇಳಿದೆಯಷ್ಟೆ?

೧೧೭. ಆದುದರಿಂದ ವಿಚಾರಮಾಡಿ ನೋಡು. ಧರ್ಮವಿಚಾರಮಾಡಿ ನನ್ನನ್ನು ಬಿಡುವುದು ಮೇಲು.

೧೧೮-೧೧೯. ಕ್ರೂರವಾದ ಈ ಕೋಪವನ್ನು ಬಿಡು. ಕೋಪವು ಕೆಟ್ಟದಷ್ಟೆ? ನೀನು ಪ್ರಸನ್ನನಾದರೆ ಆಗ ನಾನು ಸ್ವಸ್ಥಳಾಗುತ್ತೇನೆ. ಎಂದು ನಾನಾಬಗೆಯ ಮಾತುಗಳಿಂದ ಪೃಥುವನ್ನು ಕುರಿತು ಭೂಮಿಯು ಹೇಳುತ್ತಲೂ, ಆಗ ಆ ರಾಜನು ಭೂಮಿಯನ್ನು ಕುರಿತು ಇಂತೆಂದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಪೃಥೂಪಾಖ್ಯಾನವೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ಅ ಷ್ಟಾ ವಿ ಂ ಶೋ ऽ ಧ್ಯಾ ಯಃ

॥ ಪೃಥುರುವಾಚ ॥

ಹತೇ ತಸ್ಮಿನ್ ಮಹಾಪಾಪ ಏಕಸ್ಮಿನ್ ಪಾಪಚಾರಿಣಿ ।
ಲೋಕಾಸ್ಸುಖೇನ ಜೀವಂತಿ ಸಾಧವಃ ಪುಣ್ಯದರ್ಶಿನಃ ॥ ೧ ॥

ತಸ್ಮಾದೇಕಂ ಪ್ರಹರ್ತವ್ಯಂ ಪಾಪಿಷ್ಠಂ ಪಾಪಚೇತನಂ ।
ತಸ್ಮಾತ್ತ್ವಾಂ ಹಿ ಹನಿಷ್ಯಾಮಿ ಸರ್ವಾರ್ಥಸ್ಯ ಪ್ರಣಾಶಿನೀಂ ॥ ೨ ॥

ತ್ವಯಾ ಬೀಜಾನಿ ಸರ್ವಾಣಿ ಗ್ರಸ್ತಾನ್ಯೇತಾನಿ ಸಾಂಪ್ರತಂ ।
ಗ್ರಾಸಂ ಕೃತ್ವಾ ಸ್ಥಿರಿಭೂತ್ವಾ ಪ್ರಜಾ ಹತ್ವಾ ಕ್ವ ಯಾಸ್ಯಸಿ ॥ ೩ ॥

---

## ಇಪ್ಪತ್ತೆಂಟನೆಯ ಅಧ್ಯಾಯ

೧. ಪೃಥುಚಕ್ರವರ್ತಿಯು ಹೇಳಿದನು:—ಪಾಪಮಾಡತಕ್ಕ ಒಬ್ಬನನ್ನು ಕೊಂದರೆ, ಅನೇಕ ಜನ ಪುಣ್ಯವಂತರೂ, ಲೋಕದಲ್ಲಿನ ಜನರೆಲ್ಲರೂ ಸುಖವಾಗಿ ಜೀವಿಸುತ್ತಾರೆ.

೨. ಆದುದರಿಂದ ಪಾಪಬುದ್ಧಿಯುಳ್ಳ ಒಬ್ಬನನ್ನು ಕೊಲ್ಲಬೇಕು, ಸಮಸ್ತವನ್ನೂ ನಾಶಮಾಡುವ ನಿನ್ನನ್ನು ಈಗ ಕೊಲ್ಲುತ್ತೇನೆ.

೩. ಜನರು ಬಿತ್ತಿದ ಬೀಜಗಳೆಲ್ಲವನ್ನೂ ಈಗ ನೀನು ನುಂಗಿಕೊಂಡೆ. ಹಾಗೆ ನುಂಗಿಯೂ, ಗಟ್ಟಿಯಾಗಿದ್ದು ಪ್ರಜೆಗಳನ್ನೂ ಕೊಂದು, ಎಲ್ಲಿ ಹೋಗುತ್ತೀಯೇ ?

ಹತೇ ಪಾಪೇ ದುರಾಚಾರೇ ಸುಖಂ ಜೀವಂತಿ ಸಾಧವಃ ।
ತಸ್ಮಾತ್ಪಾಪಂ ಪ್ರಹರ್ತವ್ಯಂ ಸತ್ಯಮೇವ ನ ಸಂಶಯಃ ॥ ೪ ॥

ಪಾಲಿತವ್ಯಂ ಪ್ರಯತ್ನೇನ ಯಸ್ಮಾದ್ಧರ್ಮಃ ಪ್ರವರ್ತತೇ ।
ಭವತ್ಯಾ ತು ಮಹತ್ಪಾಪಂ ಪ್ರಜಾಸಂಕ್ಷಯಕಾರಕಂ ॥ ೫ ॥

ಏಕಸ್ಯಾರ್ಥೇ ನ ಯೋ ಹನ್ಯಾದಾತ್ಮನೋ ವಾ ಪರಸ್ಯ ವಾ ।
ಲೋಕೋಪತಾಪಕಂ ಹತ್ವಾ ನ ಭವೇತ್ತಸ್ಯ ಪಾತಕಂ ॥ ೬ ॥

ಯಸ್ಮಿಂಸ್ತು ನಿಹತೇ ಪಾಪ ಏಕಸ್ಮಿನ್ ಸ್ವೇ ಪರೇ ತಥಾ ।
ಬಹವಸ್ಸುಖಮೇಧಂತೇ ಹನ್ಯಾದ್ದುಷ್ಟಂ ನ ಪಾತಕಂ ॥ ೭ ॥

ಪ್ರಜಾನಿಮಿತ್ತಂ ತ್ವಾಮೇವ ಹನಿಷ್ಯಾಮಿ ನ ಸಂಶಯಃ ।
ಯದಿ ಮೇ ಪುಣ್ಯಸಂಯುಕ್ತಂ ವಚನಂ ನ ಕರಿಷ್ಯಸಿ ॥ ೮ ॥

ಜಗತೋಽಸ್ಯ ಹಿತಾರ್ಥಾಯ ಸಾಧು ಚೈವಂ ವಸುಂಧರೇ ।
ಹನಿಷ್ಯೇ ತ್ವಾಂ ಶಿತೈರ್ಬಾಣೈರ್ಮದ್ವಾಕ್ಯಾತ್ತು ಪರಾಙ್ಮುಖೀಂ ॥ ೯ ॥

---

೪. ದುರಾಚಾರವುಳ್ಳ ಪಾಪಿಯನ್ನು ಕೊಂದರೆ ಸಾಧುಗಳು ಸುಖವಾಗಿರುತ್ತಾರೆ. ಆದುದರಿಂದ ಪಾಪಿಯನ್ನು ಕೊಲ್ಲಲೇಬೇಕು. ಇದು ಸತ್ಯವು. ಸಂಶಯವಿಲ್ಲ.

೫. ಯಾವರೀತಿಯಿಂದ ಧರ್ಮವು ನಿಲ್ಲುತ್ತದೆಯೋ ಆ ರೀತಿಮಾಡಬೇಕು. ನೀನಾದರೋ ಪ್ರಜಾನಾಶಕರೂಪವಾದ ಮಹಾಪಾಪವನ್ನು ಮಾಡಿದ್ದೀಯೆ.

೬. ಲೋಕೋಪಕಾರಕ್ಕೋಸ್ಕರ ತನ್ನವನನ್ನೇ ಆಗಲಿ, ಪರನನ್ನೇ ಆಗಲಿ ಕೊಂದರೆ ಅವನಿಗೆ ಆ ಕೊಂದಪಾಪವು ಅಂಟುವುದಿಲ್ಲ.

೭. ಒಬ್ಬ ದುಷ್ಟನನ್ನು ಕೊಂದರೆ ತನ್ನವರೂ ಮತ್ತು ಅನೇಕರೂ ಸುಖವನ್ನು ಹೊಂದುತ್ತಾರೆ. ದುಷ್ಟನನ್ನು ಕೊಂದರೆ ಪಾಪವಿಲ್ಲ.

೮. ನಾನು ಹೇಳುವ ಪುಣ್ಯಪ್ರದವಾದ ಮಾತಿನಂತೆ ನೀನು ನಡೆಯದಿದ್ದರೆ, ಪ್ರಜೆಗಳಿಗೋಸ್ಕರ ನಿನ್ನನ್ನು ಕೊಲ್ಲುತ್ತೇನೆ. ಸಂಶಯವಿಲ್ಲ.

೯. ನನ್ನ ಮಾತನ್ನು ನೀನು ನಡೆಸದಿದ್ದರೆ ಈ ಜಗತ್ತಿನ ಹಿತಕ್ಕೋಸ್ಕರ ನಿನ್ನನ್ನು ಈ ಹರಿತವಾದ ಬಾಣಗಳಿಂದ ಕೊಲ್ಲುತ್ತೇನೆ.

ಸ್ವೀಯೇನ ತೇಜಸಾ ಚೈವ ಪ್ರಜಾಸ್ತ್ರೈಲೋಕ್ಯವಾಸಿನೀಃ ।
ಪುಣ್ಯಾಶ್ಚಾಹಂ ಧರಿಷ್ಯಾಮಿ ಧರ್ಮೇಣಾಪಿ ನ ಸಂಶಯಃ ॥ ೧೦ ॥

ಮಚ್ಛಾಸನಂ ಸಮಾಸ್ಥಾಯ ಧರ್ಮಯುಕ್ತಂ ವಸುಂಧರೇ ।
ಇಮಾಃ ಪ್ರಜಾ ಆಜ್ಞಯಾ ಮೇ ಸಂಜೀವಯ ಸದೈವ ಹಿ ॥ ೧೧ ॥

ಏವಂ ಮೇ ಶಾಸನಂ ಭದ್ರೇ ಹ್ಯದ್ಯೈವ ಹಿ ಕರಿಷ್ಯಸಿ ।
ತತಃ ಪ್ರೀತೋಽಸ್ಮಿ ತೇ ನಿತ್ಯಂ ಗೋಪಾಯಿಷ್ಯಾಮಿ ಸರ್ವದಾ ॥
ತ್ವಾಮೇವ ಹಿ ನ ಸಂದೇಹಮನ್ಯೇ ಚೈವ ನೃಪೋತ್ತಮಾಃ ॥ ೧೨ ॥

ಧೇನುರೂಪೇಣ ಸಾ ದೇವೀ ಬಾಣಾಂಚಿತಕಳೇಬರಾ ।
ಉವಾಚೇದಂ ಪೃಥುಂ ವೈನ್ಯಂ ಧರ್ಮಾತ್ಮಾನಂ ಮಹಾಮತಿಂ ॥ ೧೩ ॥

ಧರಿತ್ರ್ಯುವಾಚ

ತವಾದೇಶಂ ಮಹಾರಾಜ ಸತ್ಯಪುಣ್ಯಾರ್ಥಸಂಯುತಂ ।
ಪ್ರಜಾನಿಮಿತ್ತಮತ್ಯರ್ಥಂ ವಿಧಾಸ್ಯಾಮಿ ನ ಸಂಶಯಃ ॥ ೧೪ ॥

---

೧೦. ಮೂರು ಲೋಕದಲ್ಲಿರುವ ಪ್ರಜೆಗಳನ್ನೂ ನಾನು ಧರ್ಮದಿಂದ ಪಾಲಿಸುತ್ತೇನೆ (ಧರಿಸುತ್ತೇನೆ).

೧೧. ಎಲೈ ವಸುಂಧರೆಯೇ, ನನ್ನ ಆಜ್ಞೆಯನ್ನು ಶಿರಸಾವಹಿಸಿ ಈ ಪ್ರಜೆಗಳನ್ನು ಯಾವಾಗಲೂ ಜೀವದಿಂದಿರಿಸು.

೧೨. ನನ್ನ ಅಪ್ಪಣೆಯನ್ನು ಈಗಲೇ ಪಾಲಿಸುವೆಯಾದರೆ ನಿನ್ನ ವಿಷಯದಲ್ಲಿ ಪ್ರೀತಿಯಿಟ್ಟು ಯಾವಾಗಲೂ ನಿನ್ನನ್ನು ಕಾಪಾಡುತ್ತೇನೆ. ಸಂದೇಹವಿಲ್ಲ. ಮಿಕ್ಕ ರಾಜರುಗಳೂ ಸಹ ಹಾಗೆಯೇ ಕಾಪಾಡುತ್ತಾರೆ ಎಂದನು.

೧೩. ಬಾಣಪ್ರಹಾರದಿಂದ ಶರೀರವು ವ್ಯಥೆಪಡುತ್ತಿರಲು ಆ ಭೂಮಿಯು ಧೇನುರೂಪವನ್ನು ಧರಿಸಿ, ಧರ್ಮಾತ್ಮನೂ, ಮಹಾಮತಿಯೂ ಆದ ಪೃಥುವನ್ನು ಕುರಿತು ಇಂತೆಂದಳು.

೧೪. ಧರಿತ್ರಿಯು ಹೇಳುತ್ತಾಳೆ:—ಸತ್ಯದಿಂದಲೂ, ಪುಣ್ಯದಿಂದಲೂ, ಕೂಡಿರುವ ನಿನ್ನ ಮಾತನ್ನು ಪ್ರಜೆಗಳಿಗೋಸ್ಕರ ನಡೆಸುತ್ತೇನೆ. ಸಂಶಯವಿಲ್ಲ.

೧೫. ಕೈಗೊಂಡಕೆಲಸಗಳು ಪ್ರಯತ್ನದಿಂದಲೂ, ಉಪಾಯಗಳಿಂದಲೂ ಸಿದ್ಧಿಸುತ್ತವೆ.

ಉದ್ಯಮೇನಾಪಿ ಪುಣ್ಯೇನ ತೂಪಾಯ್ಯೈಸ್ತೇ ನರೇಶ್ವರ ।
ಸಮಾರಂಭಾಃ ಪ್ರಸಿದ್ಧ್ಯಂತಿ ಪುಣ್ಯಾಶ್ಚೈವಾಪ್ಯುಪಕ್ರಮಾಃ ॥ ೧೫ ॥

ಉಪಾಯಂ ಪಶ್ಯ ರಾಜೇಂದ್ರ ಯೇನ ತ್ವಂ ಸತ್ಯವಾನ್ಭವೇಃ ।
ಧಾರಯೇಥಾಃ ಪ್ರಜಾಶ್ಚೇಮಾ ಯಥಾ ಸರ್ವಾಃ ಪ್ರವರ್ಧಯೇ ॥ ೧೬ ॥

ಸಂಲಗ್ನಾಶ್ಚೋತ್ತಮಾ ಬಾಣಾ ಮಮಾಂಗೇ ತಾನ್ ಸಮುದ್ಧರ ।
ಸಮಾಂ ಕುರು ಮಹಾರಾಜ ತಿಷ್ಠೇನ್ಮಯಿ ಯಥಾ ಪಯಃ ॥ ೧೭ ॥

॥ ಸೂತ ಉವಾಚ ॥

ಧನುರಗ್ರೇಣ ತಾನ್ ಶೈಲಾನ್ ನಾನಾರೂಪಾನ್ ಗುರೂಂಸ್ತದಾ ।
ಉತ್ಸಾರಯಂಸ್ತತೋಽಸೌ ಹಿ ಸಮರೂಪಾಂ ಚಕಾರ ಹ ॥ ೧೮ ॥

ತತಃಪ್ರಭೃತಿ ತೇ ಶೈಲಾ ವೃದ್ಧಿಮಾಪುರ್ದ್ವಿಜೋತ್ತಮಾಃ ।
ತಸ್ಯಾ ಅಂಗಾತ್ಸ್ವಯಂ ಬಾಣಾನ್ ಸ್ವಕೀಯಾನ್ ನೃಪನಂದನಃ ॥ ೧೯ ॥

ಸಮುದ್ಧೃತ್ಯ ತತೋ ವೈನ್ಯಃ ಪ್ರೀತೇನ ಮನಸಾ ತದಾ ।
ಗರ್ತಾಶ್ಚ ಕಂದರಾಶ್ಚೈವ ಬಾಣಾಘಾತೈಸ್ಸಮೀಕೃತಾಃ ॥ ೨೦ ॥

---

೧೬. ಎಲೈ ದೊರೆಯೇ, ನೀನು ಸತ್ಯವಂತನಾಗಲು ಹೇಗೆ ಈ ಪ್ರಜೆಗಳನ್ನು ಧರಿಸಬಹುದು, ವೃದ್ಧಿಪಡಿಸಬಹುದು ಎಂಬುದಕ್ಕೆ ಒಂದು ಉಪಾಯವನ್ನು ಹುಡುಕು.

೧೭. ನನ್ನ ಮೈಯಲ್ಲಿ ಬಾಣಗಳು ಚುಚ್ಚಿಕೊಂಡಿವೆ. ಅವುಗಳನ್ನು ತೆಗೆ. ನೀರು ನಿಲ್ಲುವಂತೆ ನನ್ನ ಶರೀರವಾದ ಈ ಭೂಮಿಯನ್ನು ಸಮವಾಗಿ ಮಾಡು.

೧೮. ಸೂತನು ಹೇಳಿದನು:—ಆಗ ಆ ರಾಜನು ಧನುಸ್ಸಿನ ತುದಿಯಿಂದ ದಪ್ಪವಾದ ಬೆಟ್ಟಗುಡ್ಡಗಳನ್ನು ಎಳೆಯುತ್ತಾ ಹಳ್ಳತಿಟ್ಟುಗಳನ್ನು ಸರಿಮಾಡಿ ನೀರು ನಿಲ್ಲುವಂತೆ ಸಮವಾಗಿ ಮಾಡಿದನು.

೧೯-೨೦. ಆಮೇಲೆ ಆ ಬೆಟ್ಟಗಳೂ ಬೆಳೆದವು. ರಾಜನು ಅದರ ಅವಯವದಿಂದ ತನ್ನ ಬಾಣಗಳನ್ನು ಕಿತ್ತನು. ಮತ್ತು ಬಾಣಗಳಿಂದ ಹಳ್ಳಕೊಳ್ಳಗಳನ್ನು ಸಮವಾಗುವಂತೆ ಮಾಡಿದನು.

ಏವಂ ಪೃಥ್ವೀಂ ಸಮಾಂ ಸರ್ವಾಂ ಚಕಾರ ಪುಣ್ಯವರ್ಧನಃ ।
ಸಮಾಂ ಕೃತ್ವಾ ಮಹಾಭಾಗಾಂ ವತ್ಸಮಸ್ಯಾ ಹ್ಯಕಲ್ಪಯತ್ ॥ ೨೧ ॥

ಮನುಂ ಸ್ವಾಯಂಭುವಂ ಪೂರ್ವಂ ಪರಿಚಿಂತ್ಯ ಪುನಃ ಪುನಃ ।
ಅತೀತೇಷ್ವೇವ ಸರ್ವೇಷು ಮನುಷು ದ್ವಿಜಸತ್ತಮಾಃ ॥ ೨೨ ॥

ವಿಷಮತ್ವಂ ಗತಾ ಭೂಮಿಃ ಪಂಥಾ ನಾಸೀಚ್ಚ ಕುತ್ರಚಿತ್ ।
ಸಮಾನಿ ವಿಷಮಾಣ್ಯೇವಂ ಸ್ವಯಮಾಸೀದ್ದ್ವಿಜೋತ್ತಮಾಃ ॥ ೨೩ ॥

ಪೂರ್ವಂ ಮನೋಶ್ಚಾಕ್ಷುಷಸ್ಯ ಪ್ರಾಪ್ತೇ ಚೈವಾಂತರೇ ತಥಾ ।
ಜಾತೇ ಪೂರ್ವವಿಸರ್ಗೇ ಚ ವಿಷಮೇ ಚ ಧರಾತಲೇ ॥ ೨೪ ॥

ಗ್ರಾಮಾಣಾಂ ಚ ಪುರಾಣಾಂ ಚ ಪತ್ತನಾನಾಂ ತಥೈವ ಚ ।
ದೇಶಾನಾಂ ಕ್ಷೇತ್ರಪನ್ನಾನಾಂ ಮರ್ಯಾದಾ ನ ಹಿ ದೃಶ್ಯತೇ ॥ ೨೫ ॥

ಕೃಷಿರ್ನೈವ ಚ ವಾಣಿಜ್ಯಂ ನ ಗೋರಕ್ಷಾ ಪ್ರವರ್ತತೇ ।
ನಾನೃತಂ ಭಾಷತೇ ಕಶ್ಚಿನ್ನಲೋಭೋ ನ ಚ ಮತ್ಸರಃ ॥ ೨೬ ॥

---

೨೧. ಆ ಮಹಾನುಭಾವನು ಹೀಗೆ ಭೂಮಿಯನ್ನು ಸಮವನ್ನಾಗಿ ಮಾಡಿ ಅದಕ್ಕೊಂದು ಕರುವನ್ನು ಕಲ್ಪನೆಮಾಡಿದನು.

೨೨. ಸ್ವಾಯಂಭುವಮನು ಮೊದಲುಗೊಂಡು ವೈವಸ್ವತಮನುವಿನವರೆಗೂ, ಅನೇಕ ಮನುಗಳು ಕಳೆದುಹೋದರು. ಈ ಮಧ್ಯದಲ್ಲಿ ವಿಚಾರವು ಹೀಗಿದೆ.

೨೩. ಭೂಮಿಯು ಹಳ್ಳತಿಟ್ಟಾಗುತ್ತಾ ಬಂದಿತು. ಎಲ್ಲೂ ದಾರಿಯೇ ಇಲ್ಲವಾಯಿತು. ಸಮವಾಗಿದ್ದ ಭೂಮಿಯು ಕಾಲಕ್ರಮದಿಂದ ಹಳ್ಳತಿಟ್ಟಾಗುತ್ತಾ ಬಂದಿತು-

೨೪-೨೫. ಪೂರ್ವದ ಚಾಕ್ಷುಷಮನ್ವಂತರದಲ್ಲೂ ಹಾಗೆಯೇ ಆಯಿತು, ಮೊದಲು ಸೃಷ್ಟಿಯಾದಮೇಲೆ ಭೂಮಿಯು ವಿಷಮವಾಯಿತು. ಗ್ರಾಮ, ಪಟ್ಟಣ· ಹಳ್ಳಿಗಳು, ದೇಶಗಳು, ಜನಪದಗಳು ಇವುಗಳ ಎಲ್ಲೆಯೇ ತಿಳಿಯದಂತಾಯಿತು.

೨೬. ವ್ಯವಸಾಯ, ವ್ಯಾಪಾರ, ಗೋರಕ್ಷಣೆಗಳೊಂದೂ ಇಲ್ಲವಾಯಿತು. ಒಬ್ಬನೂ ಸುಳ್ಳಾಡುತ್ತಿರಲಿಲ್ಲ, ಲೋಭಮತ್ಸರಗಳಿರಲಿಲ್ಲ, ಅಭಿಮಾನಪಡುತ್ತಿರಲಿಲ್ಲ, ಪಾಪವನ್ನು ಮಾಡುತ್ತಲೇ ಇರಲಿಲ್ಲ.

ನಾಭಿಮಾನಂ ಚ ವೈ ಪಾಪಂ ನ ಕರೋತಿ ಕದಾಪಿ ಚ ।
ವೈವಸ್ವತಸ್ಯ ಚ ಮನೋಃ ಪ್ರಾಪ್ತೇ ಚೈವಾಂತರೇ ದ್ವಿಜಾಃ ॥ ೨೭ ॥

ವೈನ್ಯಸ್ಯ ಸಂಭವಾತ್ಪೂರ್ವಂ ಪ್ರಜಾನಾಮೇವ ಸಂಭವಃ ।
ಇಮಾ ಪ್ರಜಾಃ ದ್ವಿಜಾಸ್ಸರ್ವಾ ನಿವಾಸಂ ಸಮರೋಚಯನ್ ॥ ೨೮ ॥

ಕ್ವಚಿದ್ಭೂಮೌ ಗಿರೌ ವಾಪಿ ನದೀತೀರೇಷು ವೈ ತದಾ ।
ಕುಂಜೇಷು ಸರ್ವತೀರ್ಥೇಷು ಸಾಗರಸ್ಯ ತಟೇಷು ಚ ॥ ೨೯ ॥

ನಿವಾಸಂ ಚಕ್ರಿರೇ ಸರ್ವಾಃ ಪ್ರಜಾಃ ಪುಣ್ಯೇನ ವೈ ತದಾ ।
ತಾಸಾಮಾಹಾರಃ ಸಂಜಾತಃ ಫಲಂ ಪುಷ್ಪಂ ತಥಾ ಮಧು ॥ ೩೦ ॥

ತಾಸಾಂ ಕೃಚ್ಛ್ರೇಣ ಮಹತಾ ಚಾಹಾರಸ್ಸ್ಯಾದ್ವಿಜೋತ್ತಮಾಃ ।
ಪೃಥುರ್ವೈನ್ಯಃ ಸಮಾಲೋಕ್ಯ ಪ್ರಜಾನಾಂ ಕಷ್ಟಮೇವ ಹಿ ॥ ೩೧ ॥

ಸ್ವಾಯಂಭುವೋ ಮನುರ್ವತ್ಸಃ ಕಲ್ಪಿತಸ್ತೇನ ಭೂಭುಜಾ ।
ಸ್ವಪಾಣಿಃ ಕಲ್ಪಿತಸ್ತೇನ ಪಾತ್ರಮೇವಂ ಮಹಾಮತೇ ॥ ೩೨ ॥

---

೨೭. ವೈವಸ್ವತಮನ್ವಂತರದಲ್ಲಿ ವೇನನಮಗ ಪೃಥು ಹುಟ್ಟುವುದಕ್ಕೆ ಮೊದಲು ಜನಗಳ ಸ್ಥಿತಿ ಹೀಗಿದ್ದಿತು.

೨೮-೩೦. ಆಗ ಪ್ರಜೆಗಳು ಎಲ್ಲರೂ ಕೆಲಕೆಲವು ಜಾಗಗಳಲ್ಲಿಯೂ, ಪರ್ವತಗಳಲ್ಲಿಯೂ ನದೀತೀರಗಳಲ್ಲಿಯೂ, ಪೊದರುಗಳಲ್ಲಿಯೂ, ಎಲ್ಲಾ ತೀರ್ಥಗಳಲ್ಲಿಯೂ ಸಮುದ್ರದ ದಡದಲ್ಲೂ ಪುಣ್ಯವನ್ನು ಆಚರಿಸುತ್ತಾ ಬಂದರು. ಅವರಿಗೆ, ಹಣ್ಣು, ಹೂ, ಜೇನು ಇವೇ ಆಹಾರವಾಯಿತು.

೩೧. ಎಲೈ ಬ್ರಾಹ್ಮಣರೇ, ಅವರು ಬಹಳ ಕಷ್ಟದಿಂದ ಆಹಾರವನ್ನು ಸಂಪಾದಿಸಿ ಕೊಳ್ಳುತ್ತಿದ್ದರು. ಪ್ರಜೆಗಳ ಈ ಕಷ್ಟವನ್ನು ಪೃಥುಚಕ್ರವರ್ತಿಯು ನೋಡಿ ಉತ್ತಮವಾದ ಸ್ವಾಯಂಭುವಮನುವಿನ ಆಜ್ಞೆಯನ್ನು ತಿಳಿದು ಹಾಗೇ ಮಾಡಬೇಕೆಂದು ಆ ಸ್ವಾಯಂಭುವಮನುವನ್ನೇ ಕರುವನ್ನಾಗಿ ಕಲ್ಪಿಸಿದನು.

೩೨-೩೩. ಪುರುಷಶ್ರೇಷ್ಠನಾದ ಆ ಪೃಥುವು ತನ್ನ ಕೈಯನ್ನೇ ಪಾತ್ರೆಯನ್ನಾಗಿ ಮಾಡಿಕೊಂಡು ಗೋರೂಪವಾದ ಭೂಮಿಯನ್ನು ಆಗ ಕರೆದನು. ಸಸ್ಯಗಳಲ್ಲಿ

ಸ ಪೃಥುಃ ಪುರುಷವ್ಯಾಘ್ರೋ ದುದೋಹ ವಸುಧಾಂ ತದಾ ।
ಸರ್ವಸಸ್ಯಮಯಂ ಕ್ಷೀರಂ ಸಸರ್ವಾನ್ನಂ ಗುಣಾನ್ವಿತಂ　　॥ ೩೩ ॥

ತೇನ ಪುಣ್ಯೇನ ಚಾನ್ನೇನ ಸುಧಾಕಲ್ಪೇನ ತಾಃ ಪ್ರಜಾಃ ।
ಪಿತೄನ್ಯಜನ್ತಿ ದೇವಾಂಶ್ಚ ವೈ ಪ್ರಜಾಪತಿಮುಖಾಂಸ್ತದಾ　　॥ ೩೪ ॥

ಪ್ರಸಾದಾತ್ತಸ್ಯ ವೈನ್ಯಸ್ಯ ಸುಖಂ ಜೀವಂತಿ ತಾಃ ಪ್ರಜಾಃ ।
ದೇವೇಭ್ಯಶ್ಚ ಪಿತೃಭ್ಯಶ್ಚ ದತ್ವಾ ಚಾನ್ನಂ ಪ್ರಜಾಸ್ತಥಾ　　॥ ೩೫ ॥

ಬ್ರಾಹ್ಮಣೇಭ್ಯೋ ವಿಶೇಷೇಣ ಚಾತಿಥಿಭ್ಯಸ್ತಥೈವ ಚ ।
ಪಶ್ಚಾದ್ಭುಂಜಂತಿ ಪುಣ್ಯಾಸ್ತಾಃ ಪ್ರಜಾಸ್ಸರ್ವಾ ದ್ವಿಜೋತ್ತಮಾಃ　　॥ ೩೬ ॥

ಯಜ್ಞೈಶ್ಚಾನ್ನೈರ್ಯಜಂತೇ ಚ ತರ್ಪಯಂತಿ ಜನಾರ್ದನಂ ।
ತೇನಾನ್ನೇನೈವ ದೇವೇಶಂ ತೃಪ್ತಿಂ ಗಚ್ಛಂತಿ ದೇವತಾಃ　　॥ ೩೭ ॥

ಪುನರ್ವರ್ಷತಿ ಪರ್ಜನ್ಯಃ ಪ್ರೇಷಿತೋ ಮಾಧವೇನ ಚ ।
ತಸ್ಮಾತ್ಪುಣ್ಯಾ ಮಹೌಷಧ್ಯಃ ಸಂಭವಂತಿ ಸುಪುಣ್ಯದಾಃ　　॥ ೩೮ ॥

---

ಪ್ರಚುರವಾದ ಹಾಲನ್ನು ಒಳ್ಳೆಯ ಗುಣಗಳಿಂದಕೂಡಿದ ಅನ್ನವನ್ನೂ ಕರೆದನು.

೩೪. ಅಮೃತಕ್ಕೆ ಸಮವಾದ ಆ ಅನ್ನದಿಂದ ಪ್ರಜೆಗಳೂ, ದೇವಪಿತೃಗಳನ್ನು ತೃಪ್ತಿಪಡಿಸುತ್ತಾರೆ.

೩೫. ಆ ವೈನ್ಯ ಪೃಥುವಿನ ಅನುಗ್ರಹದಿಂದ ಪ್ರಜೆಗಳು ದೇವತೆಗಳಿಗೂ, ಪಿತೃಗಳಿಗೂ ಅನ್ನವನ್ನು ಕೊಡುತ್ತ ಸುಖದಿಂದ ಜೀವಿಸುತ್ತಾರೆ.

೩೬. ಈ ರೀತಿ ಪ್ರಜೆಗಳೆಲ್ಲರೂ, ಬ್ರಾಹ್ಮಣರಿಗೂ, ಅತಿಥಿಗಳಿಗೂ, ಸತ್ಕಾರ ಮಾಡಿ ಅನಂತರ ಆ ಪುಣ್ಯಯುಕ್ತವಾದ ಅನ್ನವನ್ನು ತಾವು ಊಟಮಾಡುತ್ತಾರೆ.

೩೭. ಅನ್ನದಿಂದಲೇ ಯಜ್ಞಮಾಡುತ್ತಾರೆ. ಅದೇ ಅನ್ನದಿಂದ ಸ್ವಾಮಿಯಾದ ವಿಷ್ಣುವನ್ನು ಪೂಜಿಸುತ್ತಾರೆ. ದೇವತೆಗಳಿಗೂ ತೃಪ್ತಿಹೊಂದಿಸಿ ತಾವೂ ತೃಪ್ತರಾಗುತ್ತಾರೆ.

೩೮. ಮಾಧವನಿಂದ ಪ್ರೇರಿಸಲ್ಪಟ್ಟ ಪರ್ಜನ್ಯನು ಪುನಃ ಮಳೆಸುರಿಸುತ್ತಾನೆ. ಅದರಿಂದ ಉತ್ತಮವಾದ ಮಹೌಷಧಿಗಳು ಹುಟ್ಟುತ್ತವೆ.

**ಸಸ್ಯಜಾತಾನಿ ಸರ್ವಾಣಿ ಪೃಥೋಃ ಪ್ರಭೃತಿ ನಾನ್ಯದಾ ।**
**ತತೋಽನ್ನೇನ ಪ್ರಜಾಸ್ಸರ್ವಾ ವರ್ತಂತೇಽದ್ಯಾಪಿ ನಿತ್ಯಶಃ ॥ ೩೯ ॥**

**ಋಷಿಭಿಶ್ಚೈವ ಮಿಳಿತೈರ್ದುಗ್ಧಾ ಚೇಯಂ ವಸುಂಧರಾಃ ।**
**ಪುನರ್ವಿಪ್ರೈರ್ಮಹಾಭಾಗೈಃ ಸತ್ಯವದ್ಭಿಃ ಸುರೈಸ್ತಥಾ ॥ ೪೦ ॥**

**ಸೋಮೋ ವತ್ಸಸ್ವರೂಪೋಽಭೂದ್ದೋಗ್ಧಾ ದೇವಗುರುಸ್ಸ್ವಯಂ ।**
**ಊರ್ಜಂ ಕ್ಷೀರಂ ಪಯಃ ಕಲ್ಪಂ ತೇನ ಜೀವಂತಿ ಚಾಮರಾಃ ॥ ೪೧ ॥**

**ತೇಷಾಮನ್ನೇನ ಪುಣ್ಯೇನ ಸರ್ವೇ ಜೀವನ್ತಿ ಜನ್ತವಃ ।**
**ಸತ್ಯಪುಣ್ಯೈಃ ಪ್ರವರ್ತಂತೇ ಋಷಿದುಗ್ಧಾ ವಸುಂಧರಾ ॥ ೪೨ ॥**

**ಅಥಾತಃ ಸಂಪ್ರವಕ್ಷ್ಯಾಮಿ ಯಥಾ ದುಗ್ಧಾ ವಸುಂಧರಾ ।**
**ಪಿತೃಭಿಶ್ಚ ಪುರಾ ವತ್ಸವಿಧಿನಾ ಯೇನ ವೈ ತದಾ ॥ ೪೩ ॥**

**ಸುಪಾತ್ರಂ ರಾಜತಂ ಕೃತ್ವಾ ಸ್ವಧಾಕ್ಷೀರಂ ದ್ವಿಜೋತ್ತಮಾಃ ।**
**ಪರಿಕಲ್ಪ್ಯ ಯಮಂ ವತ್ಸಂ ದೋಗ್ಧಾ ಚಾಂತಕ ಏವ ಚ ॥ ೪೪ ॥**

---

೩೯. ಅದರಿಂದ ಸಸ್ಯಗಳು ಹುಟ್ಟಿ ಫಲಕೊಡುತ್ತವೆ. ಇದು ಪೃಥುವಿನಿಂದ ಈಚೆಗೆ ಆಗುತ್ತಿರುವುದು. ಅದಕ್ಕೆ ಹಿಂದೆ ಈ ರೀತಿ ಇರಲಿಲ್ಲ. ಈ ವಿಧವಾದ ಅನ್ನದಿಂದ ಎಲ್ಲ ಪ್ರಜೆಗಳು ನಿತ್ಯದಲ್ಲಿಯೂ ಜೀವಿಸುತ್ತಿದ್ದಾರೆ.

೪೦. ಆಮೇಲೆ ಬ್ರಾಹ್ಮಣರೂ ದೇವತೆಗಳೂ ಋಷಿಗಳೂ ಸೇರಿಕೊಂಡು ಈ ಭೂಮಿಯನ್ನು ಕರೆದರು.

೪೧. ಆಗ ಸೋಮನು ಕರುವಾದನು. ಕರೆಯುವವನು ಇಂದ್ರನಾದನು. ಊರ್ಜವೆಂಬ ಹಾಲಿನಂತಿರುವ ಹಾಲನ್ನು ಕರೆದನು. ಅದರಿಂದ ದೇವತೆಗಳು ಆಹಾರವಂತರಾಗಿ ಬದುಕುತ್ತಾರೆ.

೪೨. ಆ ದೇವತೆಗಳು ಕೊಡುವ ಅನ್ನದಿಂದ ಸರ್ವಪ್ರಾಣಿಗಳು ಬದುಕುತ್ತವೆ. ಋಷಿಗಳು ಕರೆದುದರಿಂದ ಭೂಮಿಯು ಸತ್ಯ, ಪುಣ್ಯಗಳಿಂದ ನಡೆಯುತ್ತಿದೆ.

೪೩-೪೪. ಇನ್ನು ಮೇಲೆ ಭೂಮಿಯನ್ನು ಪಿತೃಗಳು ಹೇಗೆ ಕರೆದರೆಂಬುದನ್ನು ಹೇಳುತ್ತೇನೆ. ಪಿತೃಗಳು ಯಮನನ್ನು ಕರುವನ್ನಾಗಿಯೂ, ಅಂತಕನನ್ನು ಕರೆಯುವ ಗೊಲ್ಲನನ್ನಾಗಿಯೂ ಮಾಡಿ, ಸ್ವಧಾ ಎಂಬ ಹಾಲನ್ನು ಬೆಳ್ಳಿಯಪಾತ್ರೆಯಲ್ಲಿ ಕರೆದರು.

ನಾಗೈಸ್ಸರ್ಪೈರ್ತತಸ್ತತೋ ದುಗ್ಧಾ ತಕ್ಷಕಂ ವತ್ಸಮೇವ ಚ ।
ಅಲಾಬುಪಾತ್ರಮಾದಾಯ ವಿಷಂ ಕ್ಷೀರಂ ದ್ವಿಜೋತ್ತಮಾಃ ॥ ೪೫ ॥

ನಾಗಾನಾಂ ತು ತಥಾ ದೋಗ್ಧಾ ಧೃತರಾಷ್ಟ್ರಃ ಪ್ರತಾಪವಾನ್ ।
ಸರ್ಪಾ ನಾಗಾ ದ್ವಿಜಶ್ರೇಷ್ಠಾಸ್ತೇನ ವರ್ತಂತಿ ಚಾತುಳಾಃ ॥ ೪೬ ॥

ನಾಗಾ ವರ್ತಂಶಿ ತೇನಾಪಿ ಹ್ಯತ್ಯುಗ್ರೇಣ ದ್ವಿಜೋತ್ತಮಾಃ ।
ವಿಷೇಣ ಘೋರರೂಪೇಣ ಸರ್ಪಾಶ್ಚೈವ ಭಯಾನಕಾಃ ॥ ೪೭ ॥

ತೇನೈವ ವರ್ತಯನ್ತ್ಯುಗ್ರಾ ಮಹಾಕಾಯಾ ಮಹಾಬಲಾಃ ।
ತದಾಧಾರಾಸ್ತದಾಚಾರಾಸ್ತದ್ವೀರ್ಯಾಸ್ತತ್ಪರಾಕ್ರಮಾಃ ॥ ೪೮ ॥

ಅಥಾತಃ ಸಂಪ್ರವಕ್ಷ್ಯಾಮಿ ಯಥಾ ದುಗ್ಧಾ ವಸುಂಧರಾ ।
ಅಸುರೈರ್ದಾನವೈಸ್ಸರ್ವೈಃ ಕಲ್ಪಯಿತ್ವಾ ದ್ವಿಜೋತ್ತಮಾಃ ॥ ೪೯ ॥

ಪಾತ್ರಮುತ್ರಾನ್ನಸದೃಶಮಾಯಸಂ ಸರ್ವಕಾಮಿಕಂ ।
ಕ್ಷೀರಂ ಮಾಯಾಮಯಂ ಕೃತ್ವಾ ಸರ್ವಾರಾತಿವಿನಾಶನಂ ॥ ೫೦ ॥

ತೇಷಾಮಭೂತ್ಸ ವೈ ವತ್ಸೋ ವಿರೋಚನಃ ಪ್ರತಾಪವಾನ್ ।

---

೪೫. ನಾಗಗಳೂ, ಸರ್ಪಗಳೂ, ಸೇರಿ ತಕ್ಷಕನನ್ನು ಕರುವನ್ನಾಗಿ ಮಾಡಿಕೊಂಡು ಸೋರೇಬುರುಡೆಯ ಪಾತ್ರೆಯಲ್ಲಿ ವಿಷವೆಂಬ ಹಾಲನ್ನು ಕರೆದವು.

೪೬. ನಾಗಗಳು ಧೃತರಾಷ್ಟ್ರನೆಂಬ ಸರ್ಪವನ್ನು ಕರೆಯುವವನನ್ನಾಗಿ ಮಾಡಿಕೊಂಡವು. ಆದುದರಿಂದಲೇ ಸರ್ಪಗಳೂ, ನಾಗಗಳೂ ಬಹು ಕ್ರೂರವಾಗಿ ವರ್ತಿಸುತ್ತವೆ.

೪೭-೪೮. ಅದುಮೊದಲು ನಾಗಗಳು ಘೋರರೂಪವಾದ ವಿಷದಿಂದ ಕೂಡಿ ಉಗ್ರವಾಗಿ ನಡೆದುಕೊಳ್ಳುತ್ತಿವೆ. ಸರ್ಪಗಳೂ ಕೂಡ ಭಯಂಕರಾಕಾರವಾಗಿ, ಮಹಾಬಲಶಾಲಿಗಳಾಗಿ ಆ ವಿಷದ ಆಧಾರದಿಂದಲೇ ಉಗ್ರವಾಗಿ ವರ್ತಿಸುತ್ತಿವೆ.

೪೯. ಇನ್ನು ಅಸುರರೂ, ದಾನವರೂ ಹೇಗೆ ಭೂಮಿಯನ್ನು ಕರೆದರೆಂಬುದನ್ನು ಹೇಳುತ್ತೇನೆ.

೫೦-೫೧. ಪಾತ್ರೆಯನ್ನು ಅನ್ನಕ್ಕೆ ಅನುಗುಣವಾಗಿ ಮಾಡಿಕೊಂಡರು. ಎಂದರೆ ಕಬ್ಬಿಣದ ಪಾತ್ರೆಯನ್ನು ಮಾಡಿಕೊಂಡು ಮಾಯೆಯೆಂಬ ಹಾಲನ್ನು ಕರೆದರು.

ಋತ್ವಿಗ್ದ್ವಿಮೂರ್ಧಾ ದೈತ್ಯಾನಾಂ ಮಧುರ್ದೋಗ್ಧಾ ಮಹಾಬಲಃ ।
ತಯಾದಿಮಾಯಯಾ ದೈತ್ಯಾಃ ಪ್ರವರ್ತಂತೇ ಮಹಾಬಲಾಃ ॥ ೫೧ ॥

ಮಹಾಪ್ರಜ್ಞಾ ಮಹಾಕಾಯಾ ಮಹಾತೇಜಃಪರಾಕ್ರಮಾಃ ।
ತದ್ಬಲಂ ಪೌರುಷಂ ತೇಷಾಂ ತೇನ ಜೀವನ್ತಿ ದಾನವಾಃ ॥ ೫೨ ॥

ತಯೈತೇ ಸ್ಯುರಥಾದ್ಯಾಪಿ ಸರ್ವೇ ಮಾಯಾವಿದೋ ದ್ವಿಜಾಃ ।
ವರ್ತನ್ತ್ಯಮಿತಪ್ರಜ್ಞಾಸ್ತೇ ತದೇಷಾಮಮಿತಂ ಬಲಂ ॥ ೫೩ ॥

ತಥಾ ತು ದುಗ್ಧಾ ಯಕ್ಷೈಸ್ಸಾ ಸರ್ವಾಧಾರಾ ಸುಮೇದಿನೀ ।
ಇತಿ ಶುಶ್ರುಮ ವಿಪ್ರೇಂದ್ರಾಃ ಪುರಾ ಕಲ್ಪೇ ಮಹಾತ್ಮಭಿಃ ॥ ೫೪ ॥

ಅಂತರ್ಧಾನಮಯಂ ಕ್ಷೀರಂ ಅಯಸ್ಪಾತ್ರೇಷು ವಿಸ್ತರೇ ।
ವೈಶ್ರವಣೋ ಮಹಾಪ್ರಾಜ್ಞಸ್ತದಾ ವತ್ಸಃ ಪ್ರಕಲ್ಪಿತಃ ॥ ೫೫ ॥

---

ಅದು ಎಲ್ಲಾ ಶತ್ರುಗಳನ್ನೂ ನಾಶಮಾಡತಕ್ಕದ್ದು. ಅವರಿಗೆ ವಿರೋಚನನೆಂಬುವನು ಕರುವಾದನು. ದೈತ್ಯರಲ್ಲಿ ಮುಂದಾಳಾದ ಮಧುವೆಂಬುವನು ಕರೆಯುವವನಾದನು.

೫೨-೫೩. ದೈತ್ಯರು ಆ ಆದಿಮಾಯೆಯ ಪ್ರಭಾವದಿಂದ ಬಲಿಷ್ಠರಾಗಿ ಪ್ರವರ್ತಿಸುತ್ತಾರೆ. ಆದುದರಿಂದ ಹೆಚ್ಚು ಬುದ್ಧಿಯುಳ್ಳವರಾಗಿಯೂ, ದೊಡ್ಡ ದೇಹವೂ ಪರಾಕ್ರಮವೂ ಉಳ್ಳವರಾಗಿಯೂ ಇದ್ದಾರೆ. ಆ ಮಾಯೆಯ ಬಲವೇ ಅವರಿಗೆ ಪೌರಷವು. ಅದರಿಂದಲೇ ಆ ದಾನವರು ಜೀವಿಸುತ್ತಾರೆ. ಅದರಿಂದಲೇ ಈಗಲೂ ಅವರು ಮಾಯಾವಿಗಳಾಗಿ ವರ್ತಿಸುತ್ತಾರೆ. ಆದರಿಂದಲೇ ಬಹುಬುದ್ಧಿಯುಳ್ಳವರಾಗಿಯೂ ಇದ್ದಾರೆ. ಅದೇ ಇವರಿಗೆ ಅಮಿತವಾದ ಬಲವು.

೫೪. ಅದೇ ರೀತಿ ಯಕ್ಷರೂ ಕೂಡ ಭೂದೇವಿಯನ್ನು ಕರೆದರು. ಪೂರ್ವ ಕಲ್ಪದಲ್ಲಿ ಹೀಗಾಯಿತೆಂದು ಮಹಾತ್ಮರು ಹೇಳಿರುವುದನ್ನು ಕೇಳಿದ್ದೇವೆ.

೫೫. ಯಕ್ಷರು ವೈಶ್ರವಣನನ್ನು ಕರುವನ್ನಾಗಿ ಮಾಡಿಕೊಂಡು, ಅಂತರ್ಧಾನವೆಂಬ ಹಾಲನ್ನು ಕಬ್ಬಿಣದ ಪಾತ್ರೆಯಲ್ಲಿ ಕರೆದರು.

ಪಿತಾ ಮಣಿಧರಸ್ಯಾಪಿ ಪ್ರಾಜ್ಞೋ ಬುದ್ಧಿಮತಾಂ ವರಃ ।
ದೋಗ್ಧಾ ರಜತನಾಭಸ್ತು ತಸ್ಯಾಶ್ಚಾಸೀನ್ಮಹಾಮತಿಃ ॥ ೫೬ ॥

ಸರ್ವಜ್ಞಸ್ಸರ್ವಧರ್ಮಜ್ಞೋ ಯಕ್ಷರಾಜಸುತೋ ಬಲೀ ।
ಅಷ್ಟಬಾಹುರ್ಮಹಾತೇಜಾ ದ್ವಿಶೀರ್ಷಸ್ಸುಮಹಾತಪಾಃ ॥ ೫೭ ॥

ಯಕ್ಷಾ ವರ್ತಂತಿ ತೇನಾಪಿ ಸರ್ವದೈವ ದ್ವಿಜೋತ್ತಮಾಃ ।
ಪುನರ್ದುಗ್ಧಾ ತ್ವಿಯಂ ಪೃಥ್ವೀ ರಾಕ್ಷಸೈಶ್ಚ ಮಹಾಬಲೈಃ ॥ ೫೮ ॥

ತಥಾ ಚೈಷಾ ಪಿಶಾಚೈಶ್ಚ ಮಾರುತೈರ್ದುಷ್ಟಚಾರಿಭಿಃ ।
ಉತ್ಪ್ಲುತಂ ತತ್ರ ಕಪಾಲಂ ಶಾವಂ ಪಾತ್ರಮಯಂ ಕೃತಂ ॥ ೫೯ ॥

ಸುಪ್ರಜಾಂ ಭೋಕ್ತುಕಾಮಾಸ್ತೇ ತೀವ್ರಕೋಪಪರಾಕ್ರಮಾಃ ।
ದೋಗ್ಧಾ ರಜತನಾಭಸ್ತು ತೇಷಾಮಾಸೀನ್ಮಹಾಬಲಃ ।
ಸುಮಾಲೀ ನಾಮ ವತ್ಸಶ್ಚ ಶೋಣಿತಂ ಕ್ಷೀರಮೇವ ಚ ॥ ೬೦ ॥

---

೫೬-೫೭. ಅವರಿಗೆ ಮಣಿಧರನ ತಂದೆಯೂ, ಬುದ್ಧಿವಂತನೂ, ಆದ ರಜತನಾಭನು ಕರೆಯತಕ್ಕವನಾದನು. ಅವನು ಸರ್ವಜ್ಞನೂ, ಸರ್ವಧರ್ಮವನ್ನು ತಿಳಿದವನೂ ಆಗಿದ್ದನು. ಅವನಿಗೆ ಎಂಟು ಬಾಹುಗಳೂ, ಎರಡು ತಲೆಗಳೂ ಇದ್ದವು. ಮಹಾತೇಜಸ್ವಿಯಾಗಿಯೂ ತಪಶ್ಶಾಲಿಯಾಗಿಯೂ ಇದ್ದನು. ಯಕ್ಷರೂ ಅದರಿಂದಲೇ ಸರ್ವಕಾಲದಲ್ಲೂ ವರ್ತಿಸುತ್ತಿರುತ್ತಾರೆ.

೫೮-೫೯. ಅನಂತರ ರಾಕ್ಷಸರೂ, ಪಿಶಾಚಿಗಳೂ, ಮಾರುತಗಳೂ ಈ ಭೂಮಿಯನ್ನು ಪುನಃ ಕರೆದರು. ಅವರು ಕಾದಿರುವ, ಶವದಸಂಬಂಧವಾದ ಕಪಾಲವನ್ನು ಪಾತ್ರೆಯನ್ನಾಗಿ ಮಾಡಿಕೊಂಡರು.

೬೦. ತೀವ್ರವಾದ ಕೋಪ ಪರಾಕ್ರಮಿಗಳಾದ ಅವರು ಒಳ್ಳೆಯ ಮಕ್ಕಳಾಗಬೇಕೆಂದು ಆಸೆಪಟ್ಟರು. ಅವರಿಗೆ ಮಹಾಬಲಶಾಲಿಯಾದ ರಜತನಾಭನು ಕರೆಯತಕ್ಕವನಾದನು. ಸುಮಾಲಿಯು ಕರುವಾದನು. ರಕ್ತವೆಂಬ ಹಾಲನ್ನು ಕರೆದರು.

ರಕ್ಷಾಂಸಿ ಯಾತುಧಾನಾಶ್ಚ ಪಿಶಾಚಾಶ್ಚ ಮಹಾಬಲಾಃ ।
ತೇನ ಯಕ್ಷಾಶ್ಚ ಜೀವಂತಿ ಭೂತಸಂಘಾಶ್ಚ ದಾರುಣಾಃ ॥ ೬೧ ॥

ಗಂಧರ್ವೈರಪ್ಸರೋಭಿಶ್ಚ ಪುನರ್ದುಗ್ಧಾ ವಸುಂಧರಾ ।
ಕೃತ್ವಾ ವತ್ಸಂ ಸುವಿದ್ವಾಂಸಂ ತೇ ಚ ಚಿತ್ರರಥಂ ಪುನಃ ॥ ೬೨ ॥

ದುದುಹುಃ ಪದ್ಮಪಾತ್ರೇ ತು ಗಾಂಧರ್ವಂ ಗೀತಸಂಕುಲಂ ।
ಸುರುಚಿರ್ನಾಮ ಗಂಧರ್ವಸ್ತೇಷಾಮಾಸೀನ್ಮಹಾಮತಿಃ ॥ ೬೩ ॥

ದೋಗ್ಧಾ ಪುಣ್ಯತಮಶ್ಚೈವ ತಸ್ಯಾಶ್ಚ ದ್ವಿಜಸತ್ತಮಾಃ ।
ಶುಚೀನಾಂ ತು ಮಹಾತ್ಮಾನಃ ಸುಕ್ಷೀರಂ ದುದುಹುಸ್ತದಾ ।
ಗಂಧರ್ವಾಸ್ತೇನ ಜೀವನ್ತಿ ಯಕ್ಷಾಶ್ಚಾಪ್ಸರಸಸ್ತಥಾ ॥ ೬೪ ॥

ಪರ್ವತೈಶ್ಚ ಮಹಾಪುಣ್ಯೈರ್ದುಗ್ಧಾ ಚೇಯಂ ವಸುಂಧರಾ ।
ರತ್ನಾನಿ ವಿವಿಧಾನ್ಯೇವ ಔಷಧೀಶ್ಚಾಮೃತೋಪಮಾಃ ॥ ೬೫ ॥

ವತ್ಸಶ್ಚೈವ ಮಹಾಭಾಗೋ ಹಿಮವಾನ್ಪರಿಕಲ್ಪಿತಃ ।
ಮೇರುರ್ದೋಗ್ಧಾ ಚ ಸಂಜಾತಃ ಪಾತ್ರಂ ಕೃತ್ವಾ ಸುಸಾನು ಚ ॥ ೬೬ ॥

---

೬೧. ಆದುದರಿಂದಲೇ ರಾಕ್ಷಸರು, ಯಾತುಧಾನರು, ಪಿಶಾಚರೂಕೂಡ ಮಹಾಬಲಿಷ್ಠರಾದರು. ಅದರಿಂದಲೇ ಯಕ್ಷರೂ, ಕ್ರೂರವಾಗಿರುವ ಭೂತಗಳೂ ಜೀವಿಸುತ್ತವೆ.

೬೨-೬೪. ಗಂಧರ್ವರೂ, ಅಪ್ಸರರೂ, ಬುದ್ಧಿವಂತನಾದ ಚಿತ್ರರಥನನ್ನು ಕರುವನ್ನಾಗಿ ಮಾಡಿಕೊಂಡು ಪದ್ಮದ ಪಾತ್ರೆಯಲ್ಲಿ ಗೀತಗಳಿಂದ ಕೂಡಿದ ಗಂಧರ್ವ ವಿದ್ಯೆಯನ್ನು ಕರೆದರು. ಅವರಿಗೆ ಸುರಚಿ ಎಂಬ ಗಂಧರ್ವನು ಕರೆಯುವವನಾದನು. ಅವರು ಶುಚಿಯೆಂಬ ಹಾಲನ್ನು ಕರೆದರು. ಆದರಿಂದಲೇ ಗಂಧರ್ವರೂ, ಯಕ್ಷರೂ ಅಪ್ಸರಸ್ಸುಗಳೂ ಜೀವಿಸುತ್ತಾರೆ.

೬೫-೬೬. ಪರ್ವತಗಳೂ ಕೂಡ ನಾನಾವಿಧವಾದ ರತ್ನಗಳನ್ನೂ, ಅಮೃತಕ್ಕೆ ಸಮಾನವಾದ ಔಷಧಿಗಳನ್ನೂ ಕರೆದವು. ಅವುಗಳಿಗೆ ಹಿಮವಂತನು ಕರುವಾಗಿಯೂ, ಮೇರುವು ಕರೆಯುತಕ್ಕವನಾಗಿಯೂ, ಆಗಿ ತಪ್ಪಲು ಪ್ರದೇಶವನ್ನು ಪಾತ್ರೆಯನ್ನಾಗಿಯೂ ಮಾಡಿಕೊಂಡರು. ಆ ಹಾಲಿನಿಂದ ಎಲ್ಲಾ ಬೆಟ್ಟಗಳೂ ದೊಡ್ಡವಾಗಿ ಬೆಳೆದವು.

ತೇನ ಕ್ಷೀರೇಣ ಸಂವೃದ್ಧಾಃ ಶೈಲಾಸ್ಸರ್ವೇ ಮಹೋಚ್ಛ್ರಯಾಃ ।
ಪುನರ್ದುಗ್ಧಾ ಮಹಾವೃಕ್ಷೈಃ ಪುಣ್ಯೈಃ ಕಲ್ಪದ್ರುಮಾದಿಭಿಃ ॥ ೬೭ ॥

ಪಲಾಶಂ ಪಾತ್ರಮಾನಿನ್ಯುಶ್ಛಿನ್ನದಗ್ಧಪ್ರರೋಹಣಂ ।
ಶಾಲೋ ದುದೋಹ ಪುಣ್ಯಾಂಗಃ ಪ್ಲಕ್ಷೋ ವತ್ಸೋಽಭವತ್ತದಾ ॥ ೬೮ ॥

ಗುಹ್ಯಕೈಶ್ಚಾರಣೈಸ್ಸಿದ್ಧೈರ್ವಿದ್ಯಾಧರಗಣೈಸ್ತಥಾ ।
ದುಗ್ಧಾ ಚೇಯಂ ಸರ್ವಧಾತ್ರೀ ಸರ್ವಕಾಮಪ್ರದಾಯಿನೀ ॥ ೬೯ ॥

ಯಂ ಯಮಿಚ್ಛನ್ತಿ ಯೇ ಲೋಕಾ ಪಾತ್ರವತ್ಸವಿಶೇಷಣೈಃ ।
ತೈಸ್ತೈಸ್ತೇಷಾಂ ದದಾತ್ಯೇವ ಕ್ಷೀರಂ ಸದ್ಭಾವಮೀದೃಶಂ ॥ ೭೦ ॥

ಇಯಂ ಧಾತ್ರೀ ವಿಧಾತ್ರೀ ಚ ತ್ವಿಯಂ ಶ್ರೇಷ್ಠಾ ವಸುಂಧರಾ ।
ಸರ್ವಕಾಮದುಘಾ ಧೇನುರಿಯಂ ಪುಣ್ಯೈರಲಂಕೃತಾ ॥ ೭೧ ॥

ಇಯಂ ಜ್ಯೇಷ್ಠಾ ಕನಿಷ್ಠಾ ತು ಚೇಯಂ ಸೃಷ್ಟಿರಿಯಂ ಪ್ರಜಾ ।
ಪಾವನೀ ಪುಣ್ಯದಾ ಪುಣ್ಯಾ ಸರ್ವಸಸ್ಯಪ್ರರೋಹಿಣೀ ॥ ೭೨ ॥

---

೬೭-೬೮. ಕಲ್ಪವೃಕ್ಷಗಳು, ಕಡಿದರೂ ಸುಟ್ಟರೂ ಪುನಃ ಹುಟ್ಟುವ ಮುತ್ತುಗದ ಪಾತ್ರೆಯಲ್ಲಿ ಕರೆದವು. ಶಾಲವೃಕ್ಷವು ಕರೆಯಿತು. ಪ್ಲಕ್ಷವು (ಬಸುರಿ) ಕರುವಾಯಿತು.

೬೯. ಗುಹ್ಯಕರು, ಚಾರಣರು, ಸಿದ್ಧರು, ವಿದ್ಯಾಧರರು, ಮೊದಲಾದವರು ಇದೇ ರೀತಿ ಸರ್ವಕಾಮಗಳನ್ನೂ ಕೊಡುವ ಈ ಭೂಮಿಯನ್ನು ಕರೆದರು.

೭೦. ಲೋಕದ ಪ್ರಾಣಿಗಳು, ಪಾತ್ರೆ, ಕರು, ಕರೆಯುವವನ ಭೇದದಿಂದ ಯಾವಯಾವ ವಸ್ತುಗಳನ್ನು ಕೇಳಿದವೋ ಅಂತಹ ವಸ್ತುರೂಪವಾದ ಹಾಲನ್ನು ಕೊಟ್ಟಿತು.

೭೧. ಈ ಭೂಮಿಯು ಧರಿಸುವವಳು. ಹೆಚ್ಚಾಗಿ ಪೋಷಿಸುವವಳು, ಶ್ರೇಷ್ಠಳು. ಹಣವನ್ನು ಹೊಂದಿರುವವಳು. ಎಂದರೆ ಅನೇಕವಿಧವಾದ ದ್ರವ್ಯಗಳು ಭೂಮಿಯಲ್ಲಿವೆ. ಬೇಕಾದ್ದನ್ನು ಕೊಡುವವಳು. ಪುಣ್ಯದಿಂದ ಅಲಂಕೃತಳು.

೭೨. ಈ ಭೂಮಿಯೇ ದೊಡ್ಡವಳೂ ಚಿಕ್ಕವಳೂ ಆಗಿದ್ದಾಳೆ. ಇವಳೇ ಸೃಷ್ಟಿಯು. ಇವಳೇ ಪ್ರಜೆಯು. ಪಾವನವಾದವಳು. ಪುಣ್ಯವನ್ನು ಕೊಡುವವಳು. ಎಲ್ಲಾ ಸಸ್ಯವನ್ನೂ ಬೆಳೆಯುವವಳು.

ಚರಾಚರಸ್ಯ ಸರ್ವಸ್ಯ ಪ್ರತಿಷ್ಠಾ ಯೋನಿರೇವ ಚ ।
ಮಹಾಲಕ್ಷ್ಮೀರಿಯಂ ವಿದ್ಯಾ ಸರ್ವವಿಶ್ವಮಯೀ ತದಾ ॥ ೭೩ ॥

ಸರ್ವಕಾಮದುಘಾ ದೋಗ್ಧ್ರೀ ಸರ್ವಬೀಜಪ್ರರೋಹಿಣೀ ।
ಸರ್ವೇಷಾಂ ಶ್ರೇಯಸಾಂ ಮಾತಾ ಸರ್ವಲೋಕಧರಾ ತ್ವಿಯಂ ॥ ೭೪ ॥

ಪಂಚಾನಾಮಪಿ ಭೂತಾನಾಂ ಪ್ರಕಾಶೋ ರೂಪಮೇವ ಚ ।
ಆಸೀದಿಯಂ ಸಮುದ್ರಾಂತಾ ಮೇದಿನೀತಿ ಪರಿಶ್ರುತಾ ॥ ೭೫ ॥

ಮಧುಕೈಟಭಯೋಃ ಕ್ಲೃಪ್ತಾ ಮೇದಸಾ ಸಮಭಿಪ್ಲುತಾ ।
ತೇನೇಯಂ ಮೇದಿನೀಂ ದೇವೀ ಪ್ರೋಚ್ಯತೇ ಬ್ರಹ್ಮವಾದಿಭಿಃ ॥ ೭೬ ॥

ತತಶ್ಚ ಪ್ರೀತಿಮದ್ರಾಜ್ಞಃ ಪೃಥೋರ್ವೈನ್ಯಸ್ಯ ಸತ್ತಮಾಃ ।
ದುಹಿತೃತ್ವಮನುಪ್ರಾಪ್ತಾ ದೇವೀ ಪೃಥ್ವೀತಿ ಚೋಚ್ಯತೇ ॥ ೭೭ ॥

---

೭೩. ಚರಾಚರಗಳೆಲ್ಲಕ್ಕೂ ನಿಲ್ಲುವಜಾಗ, ಉತ್ಪತ್ತಿಯೂ ಆಗಿದ್ದಾಳೆ. ಇವಳೇ ಮಹಾಲಕ್ಷ್ಮಿಯು, ಇವಳೇ ವಿದ್ಯೆಯು, ಸಮಸ್ತ ಪ್ರಪಂಚಾತ್ಮಕಳು.

೭೪. ಈ ಭೂಮಿಯು ಸರ್ವಕಾಮಗಳನ್ನೂ ಕೊಡುತ್ತದೆ. ಸರ್ವಬೀಜಗಳನ್ನೂ ಬೆಳೆಯುತ್ತದೆ. ಸರ್ವಶ್ರೇಯಸ್ಸಿಗೂ ತಾಯಿ, ಸರ್ವಲೋಕಗಳನ್ನೂ ಧರಿಸಿದೆ.

೭೫. ಪಂಚಭೂತಗಳಿಗೂ ಪ್ರಕಾಶವೆಂಬುದೇ ರೂಪವು, ಅದನ್ನು ಕೊಡತಕ್ಕದು, ಭೂಮಿ. ಈ ಭೂಮಿಯು ಅವುಗಳಿಗೆಲ್ಲಾ ರೂಪಕೊಟ್ಟುಕೊಂಡು ಸಮುದ್ರವನ್ನೇ ಮೇರೆಯಾಗುಳ್ಳದಾದುದರಿಂದ ಮೇದಿನೀ ಎಂದು ಹೆಸರುಬಂದಿದೆ.

೭೬. ಮಧುಕೈಟಭರೆಂಬ ರಾಕ್ಷಸರ ಮೇದಸ್ಸಿನಿಂದ ಕೂಡಿರುವುದರಿಂದ ಮೇದಿನೀ ಎಂದು ಬ್ರಹ್ಮವಾದಿಗಳು ಹೇಳುತ್ತಾರೆ.

೭೭. ವೇನನ ಮಗನಾದ ಪೃಥುವಿಗೆ ಪ್ರೀತಿಪಾತ್ರವಾಗಿ ಧರ್ಮದಿಂದ ಮಗಳಾದುದರಿಂದ ಅವನ ಹೆಸರಿನಲ್ಲಿ ಪೃಥ್ವೀ ಎಂದು ಹೇಳಲ್ಪಡುತ್ತದೆ.

ತೇನ ರಾಜ್ಞಾ ದ್ವಿಜಶ್ರೇಷ್ಠಾಃ ಪಾಲಿತೇಯಂ ವಸುಂಧರಾ ।
ಗ್ರಾಮಾಧಾರಂ ಗೃಹಾಣಾಂ ಚ ಪುರಪತ್ತನಮಾಲಿನೀ ॥ ೭೮ ॥

ಸಸ್ಯಾಕರವತೀ ಸ್ಫೀತಾ ಸರ್ವತೀರ್ಥಮಯೀ ದ್ವಿಜಾಃ ।
ಏವಂ ವಸುಮತೀ ದೇವೀ ಸರ್ವಲೋಕಮಯೀ ಸದಾ ॥ ೭೯ ॥

ಏವಂ ಪ್ರಭಾವೋ ರಾಜೇಂದ್ರಃ ಪುರಾಣೇ ಪರಿಪಠ್ಯತೇ ।
ಪೃಥುರ್ವೈನ್ಯೋ ಮಹಾಭಾಗಃ ಸರ್ವಧರ್ಮಪ್ರಕಾಶಕಃ ॥ ೮೦ ॥

ಯಥಾ ವಿಷ್ಣುರ್ಯಥಾ ಬ್ರಹ್ಮಾ ಯಥಾ ರುದ್ರಸ್ಸನಾತನಃ ।
ನಮಸ್ಕಾರ್ಯಾಸ್ತ್ರಯೋ ದೇವಾ ದೇವಾದ್ಯೈರ್ಬ್ರಹ್ಮವಾದಿಭಿಃ ॥ ೮೧ ॥

ಬ್ರಾಹ್ಮಣೈಋಷಿಭಿಸ್ಸರ್ವೈರ್ನಮಸ್ಕಾರ್ಯೋ ನೃಪೋತ್ತಮಃ ।
ವರ್ಣಾನಾಮಾಶ್ರಮಾಣಾಂ ಚ ಸ್ಥಾಪಕಃ ಸರ್ವಲೋಕಧೃತ್ ॥ ೮೨ ॥

ಪಾರ್ಥಿವೈಶ್ಚ ಮಹಾಭಾಗೈಃ ಪಾರ್ಥಿವತ್ವಮಿಹೇಪ್ಸುಭಿಃ ।
ಆದಿರಾಜೋ ನಮಸ್ಕಾರ್ಯಃ ಪೃಥುರ್ವೈನ್ಯಃ ಪ್ರತಾಪವಾನ್ ॥ ೮೩ ॥

---

೭೮. ಈ ರೀತಿಯಾಗಿ ಗ್ರಾಮ ಗೃಹಗಳೂ, ಪುರಪತ್ತನಗಳೂ ಮೊದಲಾದವುಗಳು ಆಧಾರವಾಗಿ ಪ್ರಕಾಶಿಸುವ ಈವಸುಂಧರೆಯು ಆರಾಜನಿಂದ ಪಾಲಿಸಲ್ಪಟ್ಟಿತು.

೭೯. ಸುವರ್ಣಮೊದಲಾದ ಲೋಹಗಳಿಗೆ ಗಣಿಯಾಗಿಯೂ ಉತ್ಕೃಷ್ಟವಾದದ್ದಾಗಿಯೂ, ತೀರ್ಥಗಳಿಂದ ಕೂಡಿಯೂ ಇರುವ ಈ ವಸುಮತಿಯು ಸರ್ವಲೋಕಮಯವಾದವಳು.

೮೦. ಈ ರೀತಿಯಾದ ಆ ಪೃಥುವು, ಪ್ರಾಭಾವಶಾಲಿಯೆಂದು ಪುರಾಣದಲ್ಲಿ ಹೇಳಿದೆ. ಆ ಪೃಥುವು ಸರ್ವಧರ್ಮಗಳಿಗೂ ಪ್ರಕಾಶಕನು.

೮೧-೮೨. ಬ್ರಹ್ಮ, ವಿಷ್ಣು, ರುದ್ರರನ್ನು ಎಲ್ಲರೂ ಹೇಗೆ ನಮಸ್ಕರಿಸುತ್ತಾರೆಯೋ, ಹಾಗೆ ವರ್ಣಾಶ್ರಮಗಳ ಸ್ಥಾಪಕನೂ, ಸರ್ವಲೋಕಧಾರಿಯೂ ಆದ ಆ ಪೃಥುವನ್ನು ಬ್ರಾಹ್ಮಣರೂ, ಋಷಿಗಳೂ, ನಮಸ್ಕರಿಸಬೇಕು.

೮೩. ರಾಜರಾಗಿರುವವರಿಂದಲೂ, ರಾಜರಾಗಬೇಕೆಂದಿರುವವರಿಂದಲೂ ಆದಿರಾಜನಾದ ಪೃಥುವು ನಮಸ್ಕರಿಸಲ್ಪಡಲು ಅರ್ಹನು.

ಧನುರ್ವೇದಾರ್ಥಿಭಿರ್ನ್ನೋ ವೈ ಸದೈವ ಜಯಕಾಂಕ್ಷಿಭಿಃ ।
ನಮಸ್ಕಾರ್ಯ್ಯೋ ಮಹಾರಾಜೋ ವೃತ್ತಿದಾತಾ ಮಹೀಭೃತಾಂ ॥ ೮೪ ॥

ಏವಂ ಪಾತ್ರವಿಶೇಷಾಶ್ಚ ಮಯಾ ಖ್ಯಾತಾ ದ್ವಿಜೋತ್ತಮಾಃ ।
ವತ್ಸಾನಾಂ ಸುವಿಶೇಷಾಶ್ಚ ದೋಗ್ಧೄಣಾಂ ಭವದಗ್ರಜಃ ॥ ೮೫ ॥

ಕ್ಷೀರಸ್ಯಾಪಿ ವಿಶೇಷಂ ತು ಯಥೋದ್ದಿಷ್ಟಂ ಹಿ ಭೂಭುಜಃ ।
ಸಮಾಖ್ಯಾತಂ ತಥಾಗ್ರೇ ಚ ಭವತಾಂ ವೈ ಯಥಾರ್ಥತಃ ॥ ೮೬ ॥

ಧನ್ಯಂ ಯಶಸ್ಯಮಾರೋಗ್ಯಂ ಪುಣ್ಯಂ ಪಾಪಪ್ರಣಾಶನಂ ।
ಯಃ ಶೃಣೋತಿ ಚರಿತ್ರಂ ತು ಪೃಥೋಸ್ತಸ್ಯ ದ್ವಿಜೋತ್ತಮಾಃ ॥ ೮೭ ॥

ತಸ್ಯ ಭಾಗೀರಥೀಸ್ನಾನಮಹನ್ಯಹನಿ ಜಾಯತೇ ।
ಸರ್ವಪಾಪವಿಶುದ್ಧಾತ್ಮಾ ವಿಷ್ಣುಲೋಕಂ ಪ್ರಗಚ್ಛತಿ ॥ ೮೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ಪೃಥೂ
ಪಾಖ್ಯಾನಂ ನಾಮ ಅಷ್ಟಾವಿಂಶೋಽಧ್ಯಾಯಃ

---

೮೪. ಅದೇರೀತಿ ಧನುರ್ವೇದವನ್ನು ಅಪೇಕ್ಷಿಸುವವರಿಂದಲೂ, ಜಯಾಪೇಕ್ಷಿಗಳಿಂದಲೂ, ರಾಜರಿಗೆ ವೃತ್ತಿಯನ್ನು ಕಲ್ಪಿಸಿದ ಆ ದೊರೆಯು ನಮಸ್ಕಾರ್ಯನು.

೮೫. ಈ ರೀತಿಯಾಗಿ ಕರೆಯುವ ಪಾತ್ರೆಗಳೂ, ಕರುಗಳೂ, ಕರೆಯುವವರೂ, ಮುಂತಾದ ಎಲ್ಲಾ ವಿಷಯಗಳನ್ನೂ ನಿಮಗೆ ಹೇಳಿದ್ದೇನೆ.

೮೬. ಹಸುವು ಕರೆದ ಹಾಲಿನ ವ್ಯತ್ಯಾಸಗಳನ್ನೂ, ರಾಜರುಗಳನ್ನೂ ನಿಮಗೆ ಕ್ರಮವಾಗಿ ಹೇಳಿದ್ದೇನೆ.

೮೭-೮೮. ಈ ಚರಿತ್ರೆಯನ್ನು ಕೇಳಿದವನಿಗೆ ಪವಿತ್ರತೆ ಯಶಸ್ಸು, ಆರೋಗ್ಯ, ಪುಣ್ಯ ಇವುಗಳು ಲಭಿಸುವುದಲ್ಲದೆ ಅವನ ಪಾಪಗಳೆಲ್ಲವೂ ಪರಿಹಾರವಾಗಿ, ಭಾಗೀರಥೀ ನದಿಯಲ್ಲಿ ಸ್ನಾನಮಾಡಿದ ಪುಣ್ಯವೂ ಉಂಟಾಗುತ್ತದೆ. ಈ ರೀತಿ ಅವನು ಸಮಸ್ತ ಪಾಪಗಳಿಂದ ನಿರ್ಮುಕ್ತನಾಗಿ ಕಡೆಗೆ ಪರಮಪದವಾದ ವಿಷ್ಣುಲೋಕವನ್ನು ಹೊಂದುವನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದ ಪೃಥುಚರಿತೆಯಲ್ಲಿ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ಏ ಕೋ ನ ತ್ರಿಂ ಶೋಽ ಧ್ಯಾ ಯಃ

॥ ಋಷಯ ಊಚುಃ ॥

ಯೋಽಸೌ ವೇನಸ್ಸಮಾಖ್ಯಾತಃ ಪಾಪಾಚಾರೇಣ ವರ್ತಿತಃ ।
ತಸ್ಯ ಪಾಪಸ್ಯ ಕಾ ವೃತ್ತಿಃ ಕಿಂ ಫಲಂ ಪ್ರಾಪ್ತವಾನ್ದ್ವಿಜ ॥ ॥೧॥

ಚರಿತಂ ತಸ್ಯ ವೇನಸ್ಯ ಸಮಾಖ್ಯಾಹಿ ಯಥಾ ಪುರಾ ।
ವಿಸ್ತರೇಣ ವಿದಾಂ ಶ್ರೇಷ್ಠ ತನ್ನೋ ವದ ಮಹಾಮತೇ ॥ ೨ ॥

॥ ಸೂತ ಉವಾಚ ॥

ಚರಿತ್ರಂ ತಸ್ಯ ವೈನ್ಯಸ್ಯ ವೇನಸ್ಯಾಪಿ ಮಹಾತ್ಮನಃ ।
ಪ್ರವಕ್ಷ್ಯಾಮಿ ಸುಪುಣ್ಯಂ ಚ ಯಥಾನ್ಯಾಯಂ ಯಥಾಶ್ರುತಂ ॥ ೩ ॥

---

## ಇಪ್ಪತ್ತೊಂಭತ್ತನೆಯ ಅಧ್ಯಾಯ

೧. ಋಷಿಗಳು ಹೇಳಿದರು :—ಪಾಪಕಾರ್ಯವನ್ನು ಮಾಡುತ್ತಿದ್ದ ವೇನನೆಂಬುವನು ಪಾಪವೃತ್ತಿಯಲ್ಲಿ ಯಾವ ನಡೆಯುತ್ತಿದ್ದನು? ಅದಕ್ಕೆ ಹೇಗೆ ಫಲಪ್ರಾಪ್ತವಾಯಿತು ?

೨. ಪೂರ್ವದಲ್ಲಿದ್ದ ಆ ವೇನನ ಚರಿತ್ರೆಯನ್ನು ವಿಸ್ತಾರವಾಗಿ ನಮಗೆ ಹೇಳು ಎಂದರು.

೩. ಸೂತನು ಹೇಳಿದನು :—ಆ ವೇನನ ಮತ್ತು ಪೃಥುವಿನ ಚರಿತ್ರೆಯನ್ನು ನಾನು ಹಿಂದೆ ಕೇಳಿದಂತೆ ಸ್ವಲ್ಪವೂ ಬಿಡದೇ ಹೇಳುತ್ತೇನೆ.

ಜಾತೇ ಪೃಥೌ ಮಹಾಭಾಗೇ ತಸ್ಮಿನ್ಪುತ್ರೇ ಮಹಾತ್ಮನಿ ।
ನಿಮಲತ್ವಂ ಗತೋ ರಾಜಾ ಧರ್ಮತ್ವಂ ಗತವಾನ್ ಪುನಃ ॥ ೪ ॥

ಮಹಾಪಾಪಾನಿ ಸರ್ವಾಣಿ ಚಾರ್ಜಿತಾನಿ ನರಾಧಿಪೈಃ ।
ತೀರ್ಥಸಂಗಪ್ರಸಂಗೇನ ತೇಷಾಂ ಪಾಪಂ ಪ್ರಯಾತಿ ಚ ॥ ೫ ॥

ಸತಾಂ ಸಂಗಾತ್ಪ್ರಜಾಯೇತ ಪುಣ್ಯಮೇವ ನ ಸಂಶಯಃ ।
ಪಾಪಾನಾಂ ತು ಪ್ರಸಂಗೇನ ಪಾಪಂ ಸಿಧ್ಯತಿ ನಾನ್ಯಥಾ ॥ ೬ ॥

ಸಂಭಾಷಾದ್ದರ್ಶನಾತ್ ಸ್ಪರ್ಶಾದಾಸನಾದ್ಭೋಜನಾತ್ಕಿಲ ।
ಪಾಪಿನಾಂ ಸಂಗಮಾಚ್ಚೈವ ಕಿಲ್ಬಿಷಂ ಪರಿಸಂಚರೇತ್ ॥ ೭ ॥

ತಥಾ ಪುಣ್ಯಾತ್ಮಕಾನಾಂ ಚ ಪುಣ್ಯಮೇವ ಪ್ರಸಂಚರೇತ್ ।
ಮಹಾತೀರ್ಥಪ್ರಸಂಗೇನ ಪಾಪಾಶ್ಶುಧ್ಯಂತಿ ನಾನ್ಯಥಾ ॥ ೮ ॥

---

೪. ಮಹಾತ್ಮನಾದ ಮಗನು ಹುಟ್ಟಲು ಬಳಿಕ ಆ ವೇನನು ಅಷ್ಟು ಪಾಪಿಯಾದರೂ ಪಾಪವೆಲ್ಲಾ ಹೋಗಿ ಧರ್ಮಿಷ್ಠನಾದನು.

೫. ರಾಜರು ಎಷ್ಟು ಮಹಾಪಾಪಗಳನ್ನು ಮಾಡಿದ್ದರೂ ತೀರ್ಥಗಳ ಸಹವಾಸ ಸಿಕ್ಕಿದರೆ ಅವೆಲ್ಲವೂ ಹೋಗುತ್ತವೆ.

೬. ಸತ್ಪುರುಷರ ಸಹವಾಸದಿಂದ ಪುಣ್ಯವೂ, ಪಾಪಿಗಳ ಸಹವಾಸದಿಂದ ಪಾಪವೂ ಉಂಟಾಗುತ್ತದೆ. ಸಂಶಯವಿಲ್ಲ.

೭. ಪಾಪಿಗಳೊಡನೆ, ಮಾತು, ನೋಡುವಿಕೆ, ಮುಟ್ಟುವಿಕೆ, ಕೂತುಕೊಳ್ಳುವುದು, ಊಟ, ಸೇರುವಿಕೆ, ಇವನ್ನು ಮಾಡುವುದರಿಂದ ಪಾಪವು ಸಂಘಟಿಸುತ್ತದೆ.

೮. ಅದರಂತೆಯೇ ಪುಣ್ಯಾತ್ಮರೊಡನೆ, ಸಂಭಾಷಣೆ ಮೊದಲಾದ ವ್ಯವಹಾರಗಳಿಂದ ಪುಣ್ಯವೇಬರುತ್ತದೆ. ಮಹಾತೀರ್ಥಗಳ ಸಹವಾಸದಿಂದಲೂ, ಪಾಪಗಳು ಹೋಗುತ್ತವೆ. ಸಮಸ್ತ ಪಾಪಗಳೂ ಹೋದನಂತರ ಅವರು ಪುಣ್ಯವಾದ ಗತಿಯನ್ನು ಹೊಂದುತ್ತಾರೆ.

ಪುಣ್ಯಾಂ ಗತಿಂ ಪ್ರಯಾನ್ತ್ಯೇವ ನಿರ್ಧೂತಾಶೇಷಕಲ್ಮಷಾಃ ।

॥ ಋಷಯ ಊಚುಃ ॥

ತತ್ಕಥಂ ಯಾನ್ತಿ ತೇ ಪಾಪಾಃ ಪರಾಂ ಸಿದ್ಧಿಂ ಮಹಾಮತೇ ।
ತನ್ನೋ ವಿಸ್ತರತೋ ಬ್ರೂಹಿ ಶ್ರೋತುಂ ಶ್ರದ್ಧಾ ಪ್ರವರ್ತತೇ ॥ ೯ ॥

॥ ಸೂತ ಉವಾಚ ॥

ಲುಬ್ಧಕಾಶ್ಚ ಮಹಾಪಾಪಾಃ ಸಂಜಾತಾ ದಾಶಧೀವರಾಃ ।
ರೇವಾ ಚ ಯಮುನಾ ಗಂಗಾ ತಾಸಾಮಂಭಸಿ ಸಂಸ್ಥಿತಾಃ ॥ ೧೦ ॥

ಜ್ಞಾನತೋಽಜ್ಞಾನತಃ ಸ್ನಾತಾಃ ಸಂಕ್ರೀಡನ್ತಿ ಚ ವೈ ಜಲೇ ।
ಮಹಾನದೀಪ್ರಸಂಗೇನ ತೇ ಯಾಂತಿ ಪರಮಾಂ ಗತಿಂ ॥ ೧೧ ॥

ಸದಾ ಸ್ನಾತಾಶ್ಚ ವೈ ಪಾಪಸಂಘಂ ಪರಿತ್ಯಜನ್ತಿ ತೇ ।
ಪುಣ್ಯತೋಯಪ್ರಸಂಗಾಚ್ಚ ಹ್ಯಾಪ್ಲುತಾಃ ಸರ್ವ ಏವ ತೇ ॥ ೧೨ ॥

---

೯. ಋಷಿಗಳು ಹೇಳುತ್ತಾರೆ:—ಮಹಾಪಾಪಿಗಳಾದವರು ಹೇಗೆ ಶುದ್ಧವಾಗಿ ಸಿದ್ಧಿಯನ್ನು ಹೊಂದುತ್ತಾರೆ. ಅದನ್ನು ನಮಗೆ ಕೊಂಚ ವಿಸ್ತಾರವಾಗಿ ಹೇಳು. ಕೇಳಬೇಕೆಂಬಾಸೆ ಇದೆ. ಎನ್ನಲು,

೧೦. ಸೂತನು ಹೇಳಿದನು:—ಬೇಡರು, ಬೆಸ್ತರು, ಇವರೆಲ್ಲ ಮಹಾಪಾಪಿಗಳು. ಇವರು ಯಾವಾಗಲೂ, ರೇವಾ, ಯಮುನೆ, ಗಂಗೆಗಳ ನೀರಿನಲ್ಲೇ ಇರುತ್ತಾರೆ.

೧೧. ಬುದ್ಧಿಪೂರ್ವಕವಾಗಿಯಾಗಲಿ, ಬುದ್ಧಿಯಿಲ್ಲದೇ ಆಗಲಿ, ಆ ನೀರಿನಲ್ಲಿ, ಸ್ನಾನಮಾಡುತ್ತಾ ಆಟವಾಡುತ್ತಾರೆ. ಆ ಮಹಾನದಿಯ ಸಹವಾಸದಿಂದ ಅವರು ಉತ್ತಮವಾದ ಗತಿಯನ್ನು ಹೊಂದುತ್ತಾರೆ.

೧೨. ಅಂತಹ ನೀರಿನಲ್ಲಿ ಸದಾ ಸ್ನಾನಮಾಡುವುದರಿಂದ ಅವರು ಪಾಪವನ್ನು ಕಳೆದುಕೊಳ್ಳುತ್ತಾರೆ. ಪುಣ್ಯತೀರ್ಥದ ನೀರಿನಲ್ಲಿ ವಾಸಿಸುವುದರಿಂದಲೂ ಸ್ನಾನದಿಂದಲೂ ಅವರು ಹಾಗೆ ಶುದ್ಧರಾಗುತ್ತಾರೆ.

ಮಹಾನದ್ಯಾಃ ಪ್ರಸಂಗಾಚ್ಚ ತ್ವನ್ಯಾಸಾಂ ದ್ವಿಜಸತ್ತಮಾಃ ।
ಮಹಾಪುಣ್ಯಂ ಜನಸ್ಯಾಪಿ ಪಾಪಂ ನಶ್ಯತಿ ಪಾಪಿನಾಂ ॥ ೧೩ ॥

ಪ್ರಸಂಗಾದ್ದರ್ಶನಾತ್ ಸ್ಪರ್ಶಾನ್ನಾತ್ರ ಕಾರ್ಯಾ ವಿಚಾರಣಾ ।
ಅತ್ರಾರ್ಥೇ ಶ್ರೂಯತೇ ವಿಪ್ರಾ ಇತಿಹಾಸಂ ಪುರಾತನಂ ।
ತದ್ವೋ ಹ್ಯಹಂ ಪ್ರವಕ್ಷ್ಯಾಮಿ ಬಹುಪುಣ್ಯಪ್ರದಾಯಕಂ ॥ ೧೪ ॥

ಕಶ್ಚಿದಸ್ತಿ ಮೃಗವ್ಯಾಧಃ ಸತು ಲುಬ್ಧೋ ಮಹಾಮತಿಃ ।
ಶ್ವಭಿರ್ವಾಗುರಜಾಲೈಶ್ಚ ಧನುರ್ಬಾಣೈಸ್ತಥೈವ ಚ ॥ ೧೫ ॥

ಮೃಗಾನ್ ಘಾತಯತೇ ನಿತ್ಯಂ ಪಿಶಿತಸ್ವಾದಲಂಪಟಃ ।
ಏಕದಾ ಸ ತು ದುಷ್ಟಾತ್ಮಾ ಬಾಣಪಾಣಿರ್ಧನುರ್ಧರಃ ॥ ೧೬ ॥

ಶ್ವಾನೈಃ ಪರಿವೃತೋ ದುರ್ಗಂ ವನಂ ಚ ಪ್ರವಿವೇಶ ಸಃ ।
ಮೃಗಾನ್ ರುರೂನ್ ವರಾಹಾಂಶ್ಚ ಭೀತಾನ್ ಸೂದಿತವಾನ್ ಬಹೂನ್ ॥ ೧೭ ॥

---

೧೩. ಮಹಾನದಿಯ ಸಹವಾಸದಿಂದ ಇತರರಿಗೂ ಪುಣ್ಯವು ಬರುತ್ತದೆ. ಪಾಪವೂ ನಾಶವಾಗುತ್ತದೆ. ಸ್ನಾನ ಒಂದರಿಂದಲೇ ಅಲ್ಲ. ಅದರ ನೋಡುವಿಕೆ, ಮಾತು, ಮುಟ್ಟುವುದು, ಇವುಗಳಿಂದಲೂ ಪಾಪವು ಹೋಗಿ ಪುಣ್ಯ ಬರುತ್ತದೆ. ಸಂಶಯವಿಲ್ಲ.

೧೪. ಈ ವಿಷಯದಲ್ಲಿ ಒಂದು ಇತಿಹಾಸವಿದೆ. ಅದು ಬಹು ಹಿಂದಿನಿಂದ ಬಂದುದು. ಅದನ್ನು ನಿಮಗೆ ಹೇಳುತ್ತೇನೆ ಕೇಳಿರಿ. ಅದರಿಂದ ಪುಣ್ಯ ಬರುತ್ತದೆ.

೧೫. ಒಬ್ಬಾನೊಬ್ಬ ಮೃಗಗಳನ್ನು ಕೊಂದು ತಿನ್ನುವ ಬೇಡನಿದ್ದನು. ಅವನು ಬಹುಬುದ್ಧಿವಂತನು. ಆದರೂ ಲೋಭಿಯು. ನಾಯಿ, ದೊಡ್ಡಬಲೆ, ಚಿಕ್ಕಬಲೆ, ಧನಸ್ಸು, ಬಾಣ ಇವುಗಳಿಂದ ಮೃಗಗಳನ್ನು ಯಾವಾಗಲೂ ಹೊಡೆಯುತ್ತಿದ್ದನು. ಅವನು ಮಾಂಸದಲ್ಲಿ ಅಷ್ಟು ಆಶೆಯುಳ್ಳವನಾಗಿದ್ದನು.

೧೬. ಒಂದು ಸಾರಿ ಆ ದುಷ್ಟಾತ್ಮನು ಬಾಣಗಳನ್ನೂ, ಧನುಸ್ಸನ್ನೂ ತೆಗೆದುಕೊಂಡು ನಾಯಿಗಳೊಡನೆ ಗಹನವಾದ ಒಂದು ಕಾಡಿಗೆ ಬೇಟೆಗೆ ಹೋದನು.

೧೭. ಜಿಂಕೆ, ಹಂದಿ ಮೊದಲಾದವುಗಳನ್ನು ಹೆದರಿಸಿ ಕೊಂದನು.

**ರೇವಾತೀರಂ ಸಮಾಸಾದ್ಯ ಕಶ್ಚಿಚ್ಛಫರಘಾತಕಃ ।**
**ಶಫರಂ ಸೂದಯಿತ್ವಾ ಸ ನಿರ್ಜಗಾಮ ಬಹಿರ್ಜಲಾತ್ ॥ ೧೮ ॥**

**ಮೃಗವ್ಯಾಧಸ್ಯ ಲುಬ್ಧಸ್ಯ ಭಯತ್ರಸ್ತಾ ತತೋ ಮೃಗೀ ।**
**ಜೀವತ್ರಾಣಪರಾ ಸಾ ಚ ಭೀತಾ ಚಲಿತಚೇತನಾ ॥ ೧೯ ॥**

**ತ್ವರಮಾಣಾ ಪಲಾಯಂತೀ ರೇವಾತೀರಂ ಸಮಾಶ್ರಿತಾ ।**
**ಶ್ವಭಿಃ ಸಂಚಾಲಿತಾ ಸಾ ತು ಬಾಣಘಾತಕ್ಷತಾತುರಾ ॥ ೨೦ ॥**

**ಶ್ವಸಮಾನಾಪಿ ವೇಗೇನ ಸ ಲುಬ್ಧೋ ಮೃಗಘಾತುಕಃ ।**
**ಪೃಷ್ಠ ಏವ ಸಮಾಯಾತಿ ಪುರತೋ ಯಾತಿ ಸಾ ಮೃಗೀ ॥ ೨೧ ॥**

**ದೃಷ್ಟವಾಂಸ್ತಾಂಶಫರಹಾ ಬಾಣಪಾಣಿಸ್ಸಮುದ್ಯತಃ ।**
**ದುರ್ಬಾಣಸ್ಯ ಚ ವೇಗೇನ ಹ್ಯವರುಧ್ಯ ಚ ತಾಂ ಮೃಗೀಂ ॥ ೨೨ ॥**

**ತಾವಲ್ಲುಬ್ಧೋ ಮೃಗವ್ಯಾಧಃ ಶ್ವಭಿಸ್ಸಾರ್ಧಂ ಸಮಾಗತಃ ।**
**ಹನ್ತವ್ಯಾ ಸಾ ಮಯ್ಯೈವೇಯಂ ಮೃಗಯಾ ಮೇ ಸಮಾಗತಾ ॥ ೨೩ ॥**

---

೧೮. ರೇವಾನದಿಯ ತೀರದಲ್ಲಿ ಒಬ್ಬ ಬೆಸ್ತನು ಮೀನಿನ ಬೇಟೆಯಾಡಿ ಒಂದು ಮೀನನ್ನು ಕೊಂದು ಮೇಲೆ ಬಂದನು.

೧೯. ಇಷ್ಟರೊಳಗೆ ಮೃಗಬೇಟೆಯಾಡುತ್ತಿದ್ದ ಬೇಡನಿಂದ ಹೆದರಿಂದ ಒಂದು ಜಿಂಕೆಯು ಜೀವವನ್ನುಳಿಸಿಕೊಳ್ಳಲು, ಅವಸರಪಡುತ್ತಾ, ಹೆದರಿಕೊಂಡು ಓಡುತ್ತಾ ರೇವಾತೀರಕ್ಕೆ ಬಂದಿತು. ಮತ್ತು ಒಂದು ಜಾಗದಲ್ಲಿ ಅನಿತುಕೊಂಡಿತು.

೨೦-೨೧. ನಾಯಿಗಳು ಬಂದು ಅದನ್ನು ಹೊರಡಿಸಲು ಬಾಣದ ಏಟಿಗೆ ಹೆದರಿ ನಿಟ್ಟುಸಿರುಬಿಡುತ್ತಾ ಓಡಾಡುತ್ತಿದ್ದಿತು. ಈ ಬೇಡನೂ ಕೂಡ ಅದನ್ನು ಬೆನ್ನಟ್ಟಿಕೊಂಡೇ ಓಡಿಬರುತ್ತಿದ್ದನು.

೨೨. ಈ ಮೀನು ಹಿಡಿಯುತ್ತಿದ್ದು ಮೇಲೆ ಬಂದ ಬೆಸ್ತನು ಆ ಜಿಂಕೆಯನ್ನು ನೋಡಿ ಬಾಣವನ್ನು ತೆಗೆದುಕೊಂಡು ಹೊಡೆಯಲು ಸಿದ್ಧನಾಗಿ ಕೂಡಲೇ ಆ ಜಿಂಕೆಯನ್ನು ಅಡ್ಡಗಟ್ಟಿದನು.

೨೩. ಅಷ್ಟರೊಳಗೆ ಆ ಬೇಡನು ನಾಯಿಗಳೊಡನೆ ಬಂದು "ಇದು ನಾನು ಓಡಿಸಿಕೊಂಡುಬಂದ ಮೃಗವು ನನ್ನ ಬೇಟೆ, ಇದನ್ನು ನಾನು ಕೊಲ್ಲಬೇಕು, ಎಂದನು.

ತಸ್ಯ ವಾಕ್ಯಂ ಸಮಾಕರ್ಣ್ಯ ಮೀನಹಾ ಮಾಂಸಲಂಪಟಃ ।
ಬಾಣಂ ಮುಮೋಚ ದುಷ್ಟಾತ್ಮಾ ತಾಮುದ್ದಿಶ್ಯ ಮಹಾಬಲಃ ॥ ೨೪ ॥

ನಿಹತಾ ಮೃಗಲುಬ್ಧೇನ ಬಾಣೇನ ನಿಶಿತೇನ ಚ ।
ಪ್ರಮೃತಾ ಸಾ ಮೃಗೀ ತತ್ರ ಬಾಣಾಭ್ಯಾಂ ಪಾಪಚಿತ್ತಯೋಃ ॥ ೨೫ ॥

ಶ್ವಭಿರ್ದಕ್ಷೈಃ ಸಮಾಕ್ರಾಂತಾ ತ್ವರಮಾಣಾ ಪಪಾತ ಸಾ ।
ಶಿಖರಾಚ್ಚ ಹ್ರದೇ ಪುಣ್ಯೇ ರೇವಾಯಾಃ ಪಾಪನಾಶನೇ ॥ ೨೬ ॥

ಶ್ವಾನಶ್ಚ ತ್ವರಮಾಣಾಸ್ತೇ ಪತಿತಾ ವಿಮಲೇ ಹ್ರದೇ ।
ಮೃಗವ್ಯಾಧೇ ವದತ್ಯೇವಂ ಧೀವರಃ ಕ್ರೋಧಮೂರ್ಚ್ಛಿತಃ ॥ ೨೭ ॥

ಮದೀಯೇಯಂ ಮೃಗೀ ದುಷ್ಟ ಕಸ್ಮಾದ್ಬಾಣೈರ್ಹತಾ ತ್ವಯಾ ।
ತಮುವಾಚ ಪುನಃ ಸೋಽಪಿ ಮೀನಹಾ ಮೃಗಘಾತಕಂ ॥ ೨೮ ॥

ಮದೀಯೇಯಂ ನ ಸಂದೇಹೋ ಹ್ಯವಲಿಪ್ತಃ ಪ್ರಭಾಷಸೇ ।
ಯುದ್ಧ್ಯಮಾನೌ ತತಸ್ತೌ ತು ದ್ವಾವಪ್ಯೇತೌ ಪರಸ್ಪರಂ ॥ ೨೯ ॥

---

೨೪. ಆ ಬೇಡನ ಮಾತನ್ನು ಕೇಳಿ ಬೆಸ್ತನು ಮಾಂಸದ ಆಶೆಯಿಂದ ಆ ಮೃಗದಮೇಲೆ ಬಾಣವನ್ನು ಬಿಟ್ಟನು.

೨೫. ಇತ್ತ ಈ ಬೇಡನೂ ಕೂಡ ಬಾಣ ಬಿಡಲು ಆ ಇಬ್ಬರ ಬಾಣದ ಪೆಟ್ಟಿನಿಂದಲೂ ಆ ಜಿಂಕೆಯು ಸತ್ತಿತು.

೨೬. ಸಮರ್ಥವಾದ ಆ ನಾಯಿಗಳಿಂದ ಆಕ್ರಮಿಸಲ್ಪಟ್ಟು ಆ ಜಿಂಕೆಯು ಸಾಯುವಾಗ ಓಡಲಾರದೆ ಮೇಲಿನಿಂದ ಕೆಳಗಿದ್ದ ರೇವಾನದಿಯ ಮಡುವಿಗೆ ಬಿದ್ದಿತು. ನಾಯಿಗಳೂ ಕೂಡ ಓಡಿಬರುತ್ತಾ ಆ ಮಡುವಿಗೆ ಬಿದ್ದವು.

೨೭-೨೮. ಬೇಡನು ಹೀಗೆ ಹೇಳುತ್ತಿರಲು ಬೆಸ್ತನು ಕೋಪಗೊಂಡು, ಎಲೈ ದುಷ್ಟನೇ, ಈ ಮೃಗವನ್ನು ನೀನು ಏತಕ್ಕೆ ಹೊಡೆದೆ ? ಇದು ನನ್ನದೇ, ನೀನು ಹುಚ್ಚನಂತೆ ಮಾತಾಡುತ್ತೀಯೇ ಎಂದನು.

೨೯. ಅನಂತರ ಒಬ್ಬರಿಗೊಬ್ಬರು ಹೊಡೆದಾಡುತ್ತಾ, ಇಬ್ಬರೂ ಕೆಳಗಡೆಯಿದ್ದ ಆಮಡುವಿಗೆ ಬಿದ್ದರು.

ಕ್ರೋಧಲೋಭಾನ್ಮಹಾಭಾಗೌ ಪತಿತೌ ವಿಮಲೇ ಜಲೇ ।
ತಸ್ಮಿನ್ಕಾಲೇ ಮಹಾಪರ್ವ ವರ್ತಿತಂ ಗತಿದಾಯಕಂ ।
ಅಮಾವಾಸ್ಯಾಸಮಾಯೋಗಂ ಮಹಾಪುಣ್ಯಫಲಪ್ರದಂ ॥ ೩೦ ॥

ವೇಲಾಯಾಂ ಪತಿತಾಸ್ಸರ್ವೇ ಪರ್ವಣಸ್ತಸ್ಯ ಸತ್ತಮಾಃ ।
ಜ್ಞಾನಧ್ಯಾನವಿಹೀನಾಸ್ತೇ ಭಾವಸತ್ಯವಿವರ್ಜಿತಾಃ ॥ ೩೧ ॥

ತೀರ್ಥಸ್ನಾನಪ್ರಸಂಗೇನ ಮೃಗೀ ಶ್ವಾನಶ್ಚ ಲುಬ್ಧಕಾಃ ।
ಸರ್ವಪಾಪವಿನಿರ್ಮುಕ್ತಾಸ್ತೇ ಗತಾಃ ಪರಮಾಂ ಗತಿಂ ॥ ೩೨ ॥

ತೀರ್ಥಾನಾಂ ಚ ಪ್ರಭಾವೇನ ಸತಾಂ ಸಂಗಾದ್ದ್ವಿಜೋತ್ತಮಾಃ ।
ನಾಶಯೇತ್ಪಾಪಿನಾಂ ಪಾಪಂ ದಹೇದಗ್ನಿರಿವೇಂಧನಂ ॥ ೩೩ ॥

ಯಸ್ಮಾತ್ತೇಷಾಂ ತು ಸಂಸರ್ಗಾದೃಷೀಣಾಂ ಸುಮಹಾತ್ಮನಾಂ ।
ಸಂಭಾಷಾದ್ದರ್ಶನಾನ್ನಷ್ಟಂ ಸ್ಪರ್ಶಾಚ್ಚೈವ ನೃಪಸ್ಯ ಚ ।
ವೇನಸ್ಯ ಕಲ್ಮಷಂ ಸರ್ವಂ ಸತಾಂ ಸಂಗಾತ್ಪುರಾ ಕಿಲ ॥ ೩೪ ॥

---

೩೦. ಆ ಸಮಯದಲ್ಲಿ ಮಹಾಪುಣ್ಯಪ್ರದವೂ, ಗತಿದಾಯಕವೂ ಆದ ಅಮಾವಾಸ್ಯೆಯೆಂಬ ಪರ್ವಕಾಲವಿದ್ದಿತು.

೩೧-೩೨. ಇವರೆಲ್ಲರೂ ಆ ಪರ್ವದವೇಳೆಯಲ್ಲಿ ನೀರಿನಲ್ಲಿ ಬಿದ್ದರು. ಅವರಿಗೆ ಜ್ಞಾನ, ಧ್ಯಾನ, ಸತ್ಯ ಮೊದಲಾದ ಗುಣಗಳೊಂದೂ ಇರಲಿಲ್ಲ. ಆದರೂ ಈ ಪರ್ವ ಕಾಲದಲ್ಲಿ ತೀರ್ಥಸ್ನಾನಮಾಡಿದ ಪ್ರಸಂಗದಿಂದ, ಜಿಂಕೆ, ನಾಯಿ, ಬೇಡ, ಬೆಸ್ತರು ಈ ನಾಲ್ವರೂ ಸರ್ವಪಾಪದಿಂದಲೂ ಬಿಡುಗಡೆಹೊಂದಿ ಉತ್ತಮಗತಿಯನ್ನು ಹೊಂದಿದರು.

೩೩. ತೀರ್ಥಗಳ ಪ್ರಭಾವವೂ, ಸತ್ಪುರುಷರ ಸಹವಾಸವೂ ಈ ಎರಡೂ ಬೆಂಕಿಯು ಕಟ್ಟಿಗೆಯನ್ನು ಸುಡುವಂತೆ ಪಾಪವನ್ನು ನಾಶಮಾಡುತ್ತದೆ.

೩೪. ಮಹಾತ್ಮರಾದ ಋಷಿಗಳ ಸಂಸರ್ಗದಿಂದಲೂ, ಮಾತಿನಿಂದಲೂ, ದರ್ಶನದಿಂದಲೂ, ಸ್ಪರ್ಶನದಿಂದಲೂ ಆ ವೇನನ ಮಗನಾದ ಪೃಥುವಿನ ಸಂಸರ್ಗದಿಂದಲೂ ಆವೇನನ ಪಾಪವೆಲ್ಲವೂ ನಾಶವಾಯಿತು.

ಅತ್ಯುಗ್ರಂ ಪುಣ್ಯಸಂಸರ್ಗಾತ್ಪಾಪಮೇವ ನ ಸಂಚರೇತ್ ।
ಮಾತಾಮಹಸ್ಯ ದೋಷೇಣ ಸಂಲಿಪ್ತೋ ವೇನ ಏವ ಸಃ ॥ ೩೫ ॥

॥ ಋಷಯಊಚುಃ ॥
ಮಾತಾಮಹಸ್ಯ ಕೋ ದೋಷಸ್ತನ್ನೋ ವಿಸ್ತರತೋ ವದ ।
ಸ ಮೃತ್ಯುಃ ಸ ಚ ವೈ ಕಾಲಃ ಸ ಯಮೋ ಧರ್ಮ ಏವ ಚ ॥ ೩೬ ॥

ನ ಹಿಂಸಕೋ ಹಿ ಕಸ್ಯಾಪಿ ತಸ್ಮಿನ್ಪಾಪೇ ಪ್ರತಿಷ್ಠಿತಃ ।
ಚರಾಚರಾಶ್ಚ ಯೇ ಲೋಕಾಸ್ಸ್ವಕರ್ಮವಶವರ್ತಿನಃ ॥ ೩೭ ॥

ಜೀವಂತಿ ಚ ಮ್ರಿಯಂತೇ ಚ ಭುಂಜಂತ್ಯೇವ ಸ್ವಕರ್ಮಭಿಃ ।
ಪಾಪಾಃ ಪಶ್ಯಂತಿ ತಂ ಘೋರಂ ತೇಷಾಂ ಕರ್ಮ ಪ್ರವಿಶ್ಯ ಸಃ ॥ ೩೮ ॥

ಘೋರೇಷ್ವೇವ ಚ ಸರ್ವೇಷು ಕರ್ಮಸ್ವೇವ ಚ ಪಾತಕಾ ।
ಯೋಜಯೇನ್ನಾಶಯೇತ್ಸೂತ ಪ್ರಶಸ್ತಶ್ಚ ದಿನೇ ದಿನೇ ॥ ೩೯ ॥

---

೩೫. ಪುಣ್ಯವಂತರ ಸಂಸರ್ಗವಿದ್ದರೆ ಪಾಪಕಾರ್ಯಗಳಲ್ಲಿ ಮನಸ್ಸೇ ಉಂಟಾಗುವುದಿಲ್ಲ.. ವೇನನು ತಾಯಿಯ ತಂದೆಯ (ಅಜ್ಜನ) ದೋಷದಿಂದ ಕೂಡಿದ್ದನು. ಅದು ಈಗ ಹೋಯಿತು.

೩೬. ಋಷಿಗಳು ಹೇಳಿದರು :— ತಾಯಿಯ ತಂದೆಯ ಎಂದರೆ ಮಾತಾಮಹನ ದೋಷವಾವುದೆಂಬುದನ್ನು ಹೇಳು. ಅವನೇನೇ ಮೃತ್ಯುಸ್ವರೂಪನು, ಕಾಲಸ್ವರೂಪನು, ಯಮಧರ್ಮಸ್ವರೂಪನೂ ಅವನೇ.

೩೭. ಆ ಪಾಪಿಯಲ್ಲಿರತಕ್ಕ ಪರಾತ್ಪರವಸ್ತುವು ಯಾರಿಗೂ ಹಿಂಸಕವಲ್ಲವಷ್ಟೆ? ಸ್ಥಾವರಜಂಗಮರೂಪವಾದ ಈ ಲೋಕವು ತನ್ನ ಪೂರ್ವಜನ್ಮದ ಕರ್ಮದಂತೆ ನಡೆಯುತ್ತದೆ. ಆ ಕರ್ಮಗಳಿಂದಲೇ ಅವುಗಳು ಜೀವಿಸುತ್ತವೆ, ಸಾಯುತ್ತವೆ, ತಿನ್ನುತ್ತವೆ.

೩೮-೩೯. ಪಾಪಿಗಳು ಘೋರಕೃತ್ಯಗಳನ್ನು ನೋಡುತ್ತಾರೆ. ಆ ಪರಾತ್ಪರವಸ್ತುವು ಅವರಲ್ಲಿದ್ದುಕೊಂಡು ಅದಕ್ಕನುಸಾರವಾಗಿ ಕ್ರೂರವಾದ ಕರ್ಮಗಳಲ್ಲೇ ಅವರನ್ನು ನಿಯಮಿಸುತ್ತದೆ ಮತ್ತು ನಾಶಮಾಡುತ್ತದೆ. ಕರ್ಮಕ್ಕನುಸಾರವಾಗಿ ಆ ಪರಾತ್ಪರವಸ್ತುವೂ ಅವರನ್ನು ಆರೀತಿ ಪ್ರೇರಿಸುತ್ತದೆ.

ಸರ್ವೇಷ್ವೇವ ಸುಪುಣ್ಯೇಷು ಕರ್ಮಸ್ವೇವ ಚ ಪುಣ್ಯಕಾನ್ ।
ಯೋಜಯೇತ್ಸತ್ಯಧರ್ಮಾತ್ಮಾ ತಸ್ಯ ದೋಷೋ ನ ದೃಶ್ಯತೇ ।
ಸ ಮೃತ್ಯೋಃ ಕೇನ ದೋಷೇಣ ಪಾಪೀ ವೇನಸ್ತ್ವಜಾಯತ ॥ ೪೦ ॥

॥ ಸೂತ ಉವಾಚ ॥

ಸ ಮೃತ್ಯುಶ್ಶಾಸಕೋ ನಿತ್ಯಂ ಪಾಪಾನಾಂ ದುಷ್ಟಚೇತಸಾಂ ।
ವರ್ತತೇ ಕಾಲರೂಪೇಣ ತೇಷಾಂ ಕರ್ಮ ವಿಮೃಶ್ಯತಿ ॥ ೪೧ ॥

ದುಷ್ಕೃತಾತ್ಮಾ ದುಷ್ಕೃತೇನ ಕರ್ಮಣಾ ನರಕಂ ಲಭೇತ್ ।
ತಸ್ಯ ಪಾಪಂ ವಿದಿತ್ವಾ ತು ತಪತ್ಯೇವ ಹಿ ತಂ ಯಮಃ ॥ ೪೨ ॥

ಸುಕೃತಾತ್ಮಾ ಲಭೇತ್ಸ್ವರ್ಗಂ ಕರ್ಮಣಾ ಸುಕೃತೇನ ವೈ ।
ಯೋಜಯತ್ಯೇವ ತಾನ್ಸರ್ವಾನ್ ಮೃತ್ಯುರೇಕೋ ಮಹಾಬಲಃ ॥ ೪೩ ॥

ಮಹತಾ ಸೌಖ್ಯಭಾವೇನ ಗೀತಮಂಗಳಕಾರಿಣಾ ।
ದಾನಭೋಗಾದಿಭಿಶ್ಚೈವ ಯೋಜಯೇತ್ಸುಕೃತಾತ್ಮಕಾನ್ ॥ ೪೪ ॥

---

೪೦. ಸತ್ಯವೂ, ಧರ್ಮವೂ, ಅಡಕವಾಗಿರುವ ಆ ವಸ್ತುವು ಪುಣ್ಯವಂತರನ್ನು ಪುಣ್ಯಕರ್ಮದಲ್ಲೇ ನಿಯಮಿಸುತ್ತದೆ. ಆದುದರಿಂದ ಆ ಪರಾತ್ಪರವಸ್ತುವಿನ ದೋಷವೇನೂ ಇಲ್ಲ. ಹೀಗಿರುವಾಗ ಮೃತ್ಯುವಿನ ಯಾವ ದೋಷದಿಂದ ವೇನನು ಪಾಪಿಯಾಗಿ ಹುಟ್ಟಿದನು ? ಇದನ್ನು ನಮಗೆ ಹೇಳು ಎಂದರು.

೪೧. ಸೂತನು ಹೇಳಿದನು :—ಆ ಮೃತ್ಯುವೇ ದುಷ್ಟಬುದ್ಧಿಯುಳ್ಳ ಪಾಪಿಗಳಿಗೆ ಶಿಕ್ಷಕನು. ಅವನೇ ಕಾಲರೂಪದಿಂದ ಅವರ ಕರ್ಮವನ್ನು ವಿಮರ್ಶಿಸುತ್ತಿರುತ್ತಾನೆ.

೪೨. ಪಾಪಿಯಾದವನು ತನ್ನ ಪಾಪಕರ್ಮದಿಂದ ನರಕಭಾಗಿಯಾಗುತ್ತಾನೆ. ಅವನ ಪಾಪವನ್ನು ನೋಡಿ ತಿಳಿದುಕೊಂಡು ಯಮನು ಅವನನ್ನು ಶಿಕ್ಷಿಸುತ್ತಾನೆ.

೪೩. ಪುಣ್ಯಮಾಡಿದವನು ತನ್ನ ಪುಣ್ಯಕರ್ಮದಿಂದ ಸ್ವರ್ಗವನ್ನು ಹೊಂದುತ್ತಾನೆ. ಈರೀತಿ ಮಹಾಬಲಿಷ್ಠನಾದ ಮೃತ್ಯುವು ಅವರೆಲ್ಲರನ್ನೂ ಅದದರಲ್ಲಿ ಸೇರಿಸುತ್ತಾನೆ.

೪೪. ಪುಣ್ಯವಂತರನ್ನು ಆ ಕಾಲನು ಗೀತ, ವಾದ್ಯ, ಮಂಗಳವಾದ್ಯ ಮೊದಲಾದ ಹೆಚ್ಚು ಸೌಖ್ಯದಿಂದಲೂ, ದಾನಭೋಗಗಳಿಂದಲೂ, ಕೂಡಿರುವಂತೆ ಮಾಡುತ್ತಾನೆ.

ಪೀಡಾಭಿರ್ವಿವಿಧಾಭಿಶ್ಚ ಕ್ಲೇಶೈಃ ಕಷ್ಟೈಶ್ಚ ದಾರುಣೈಃ ।
ಶಾಸಯೇತ್ತಾಡಯೇದ್ವಿಪ್ರಾಃ ಸಕ್ರೋಧೋ ಮೃತ್ಯುರೇವ ತಾನ್ ॥ ೪೫ ॥

ಕರ್ಮಣೈವ ಹಿ ತಸ್ಯಾಪಿ ವ್ಯಾಪಾರಂ ಪರಿವರ್ತಯೇತ್ ।
ಮೃತ್ಯೋಶ್ಚಾಪಿ ಮಹಾಭಾಗಾ ಲೋಭಾತ್ಪುಣ್ಯಾ ಪ್ರಜಾಯತೇ ॥ ೪೬ ॥

ಸುನೀಥಾ ನಾಮ ವೈ ಕನ್ಯಾ ಸಂಜಾತೈಷಾ ಮಹಾತ್ಮನಃ ।
ಪಿತುಃ ಕರ್ಮವಿಪಾಕೇನ ಕ್ರೀಡಮಾನಾ ಸದೈವ ಸಾ ॥ ೪೭ ॥

ಪ್ರಜಾನಾಂ ಶಾಸ್ತಿ ಕರ್ತಾರಂ ಪಾಪಪುಣ್ಯನಿದರ್ಶನಂ ।
ಸಾ ತು ಕನ್ಯಾ ಮಹಾಭಾಗಾ ಸುನೀಥಾ ನಾಮ ತಸ್ಯ ಸಾ ।
ರಮಮಾಣಾ ವನಂ ಪ್ರಾಪ್ತಾ ಸಖೀಭಿಃ ಪರಿವಾರಿತಾ ॥ ೪೮ ॥

ತತ್ರಾಪಶ್ಯನ್ಮಹಾಭಾಗಂ ಗಂಧರ್ವತನಯಂ ವರಂ ।
ಗೀತಕೋಲಾಹಲಸ್ಯಾಪಿ ಸುಶಂಖಂ ನಾಮ ಸಾ ತದಾ ॥ ೪೯ ॥

---

೪೫. ಪಾಪಿಗಳನ್ನು ಆ ಮೃತ್ಯುವೇನೇ ನಾನಾಬಗೆಯಾದ, ಪೀಡೆ, ಕ್ಲೇಶ, ಅತಿಕಷ್ಟಗಳಲ್ಲಿ ಸೇರಿಸಿ ಕೋಪಗೊಂಡು ಹೊಡೆಯುತ್ತಾನೆ.

೪೬. ಆ ಮೃತ್ಯುವಿನ ಕರ್ಮದಿಂದಲೇ ಪ್ರಾಣಿಯ ವ್ಯಾಪಾರವೂ ವ್ಯತ್ಯಾಸವಾಗುತ್ತದೆ. ಮೃತ್ಯುವಿನ ಆ ಲೋಭದಿಂದಲೇ ಪುಣ್ಯವೂ ಉಂಟಾಗುತ್ತದೆ.

೪೭. ಮಹಾತ್ಮನಾದ ಮೃತ್ಯುವಿಗೆ ಸುನೀಥೆಯೆಂಬ ಮಗಳು ಹುಟ್ಟಿದಳು. ತಂದೆಯ ಕರ್ಮದ ದೆಸೆಯಿಂದ ಅವಳು ಯಾವಾಗಲೂ ಆಟವಾಡುತ್ತ ಪ್ರಜೆಗಳ ಒಡೆಯನಾದ ಆ ಮೃತ್ಯುವನ್ನೂ ಆಜ್ಞೆಯಲ್ಲಿಟ್ಟುಕೊಳ್ಳುವವಳಾದಳು.

೪೮. ಒಂದು ದಿನ ಆ ಮೃತ್ಯುವಿನ ಮಗಳಾದ ಸುನೀಥೆಯು ಹೀಗೆಯೇ ಆಟವಾಡುತ್ತಾ ಸಖಿಯರೊಂದಿಗೆ ಕಾಡಿಗೆ ಹೋದಳು.

೪೯. ಆಕೆಯು ಅಲ್ಲಿ ಗೀತಕೋಲಾಹಲನೆಂಬ ಗಂಧರ್ವನ ಮಗನಾದ ಸುಶಂಖನೆಂಬವನನ್ನು ನೋಡಿದಳು.

**ದದರ್ಶ ಚಾರುಸರ್ವಾಂಗಂ ಸಂತಪಸ್ತಂ ಮಹತ್ತಪಃ ।**
**ಗೀತವಿದ್ಯಾಸುಸಿದ್ಧ್ಯರ್ಥಂ ಧ್ಯಾಯಮಾನಂ ಸರಸ್ವತೀಂ ॥ ೫೦ ॥**

**ತಸ್ಯಾಪರಾಧಮೇವಾಸೌ ಸಂಚಕಾರ ದಿನೇ ದಿನೇ ।**
**ಸುಶಂಖಃ ಕ್ಷಮತೇ ನಿತ್ಯಂ ಗಚ್ಛಗಚ್ಛೇತಿ ಸೋಽಬ್ರವೀತ್ ॥ ೫೧ ॥**

**ಪ್ರೇಷಿತಾ ನೈವ ಗಚ್ಛೇತ್ಸಾ ವಿಘ್ನಮೇವ ಸಮಾಚರೇತ್ ।**
**ತೇನೈವ ಮುಕ್ತಾ ಸಾ ಕ್ರುದ್ಧಾಽತಾಡಯತ್ತಪಸಿ ಸ್ಥಿತಮ್ ॥ ೫೨ ॥**

**ತಾಮುವಾಚ ತತಃ ಕ್ರುದ್ಧಃ ಸುಶಂಖಃ ಕ್ರೋಧಮೂರ್ಛಿತಃ ।**
**ದುಷ್ಟೇ ಪಾಪಸಮಾಚಾರೇ ಕಸ್ಮಾದ್ವಿಘ್ನಂ ತ್ವಯಾ ಕೃತಂ ॥ ೫೩ ॥**

**ತಾಡನಾತ್ತಾಡನಂ ಭದ್ರೇ ನ ಕುರ್ವಂತಿ ಮಹಾಜನಾಃ ।**
**ಆಕ್ರುಷ್ಟಾ ನೈವ ಕ್ರುಧ್ಯಂತಿ ಚೇತಿ ಧರ್ಮಸ್ಯ ಸಂಸ್ಥಿತಿಃ ॥ ೫೪ ॥**

---

೫೦. ಆ ಗಂಧರ್ವನು ಗೀತವಿದ್ಯೆಯ ಸಿದ್ಧಿಗೋಸ್ಕರ ಸರಸ್ವತಿಯನ್ನು ಕುರಿತು ಮಹಾತಪಸ್ಸುಮಾಡುತ್ತಿದ್ದನು. ಅವನು ಬಹುಸುಂದರನಾಗಿದ್ದನು.

೫೧. ಪ್ರತಿದಿನವೂ ಸುನೀಥೆಯು ಆ ಸುಶಂಖನಿಗೆ ತೊಂದರೆಕೊಡುತ್ತಾ ತಪ್ಪು ಮಾಡುತ್ತಲೇ ಇದ್ದಳು. ಆತನೂ ಕೂಡ ಕ್ಷಮಿಸುತ್ತ ಹೋಗು ಹೋಗು ಎಂದೇ ಹೇಳುತ್ತಿದ್ದನು.

೫೨. ಕಳುಹಿಸಿದರೂ ಹೋಗದೇನೇ ವಿಘ್ನವನ್ನು ಮಾಡುತ್ತಿದ್ದಳು. ಅವನೂ ಹಾಗೆಯೇ ಕಳುಹಿಸುತ್ತಿದ್ದನು. ಒಂದುಸಾರಿ ಹಾಗೆ ಹೇಳುತ್ತಲೂ, ಈಕೆಗೆ ಕೋಪ ಬಂದು ತಪಸ್ಸಿನಲ್ಲಿದ್ದ ಈತನನ್ನು ಹೊಡೆದಳು.

೫೩. ಆತನು ಕ್ರೋಧಪರವಶನಾಗಿ ಆಕೆಯನ್ನು ಕುರಿತು ಎಲೈ ದುಷ್ಟೇ, ಪಾಪಿನಿ, ನನಗೆ ವಿಘ್ನವನ್ನೇಕೆ ಮಾಡಿದೆ ?

೫೪. ಯೋಗ್ಯರಾದವರು, ಮತ್ತೊಬ್ಬರು ಹೊಡೆದರೆ ತಾವೂ ಪ್ರತಿಯಾಗಿ ಹೊಡೆಯುವುದಿಲ್ಲ. ಮತ್ತೊಬ್ಬರು ಕೋಪಮಾಡಿದರೆ ತಾವೂ ಕೋಪಮಾಡುವುದಿಲ್ಲ. ಇದು ಧರ್ಮದ ರೀತಿಯು.

ತ್ವಯಾಹಂ ಘಾತಿತಃ ಪಾಪೇ ನಿರ್ದೋಷಸ್ತಪಸಿ ಸ್ಥಿತಃ ।
ಏವಮುಕ್ತ್ವಾ ಸ ಧರ್ಮಾತ್ಮಾ ಸುನೀಥಾಂ ಪಾಪಚಾರಿಣೀಂ ॥ ೫೫ ॥

ವಿರರಾಮ ಮಹಾಕ್ರೋಧಾತ್ ಜ್ಞಾತ್ವಾ ನಾರೀಂ ನಿವರ್ತಿತಃ ।
ತತಃ ಸಾ ಪಾಪಮೋಹಾದ್ವಾ ಬಾಲ್ಯಾದ್ವಾ ತಮಿಹೈವ ಚ ॥ ೫೬ ॥

ತಮುವಾಚ ಮಹಾತ್ಮಾನಂ ಸುಶಂಖಂ ತಪಸಿ ಸ್ಥಿತಂ ।
ತ್ರೈಲೋಕ್ಯವಾಸಿನಾಂ ತಾತೋ ಮಮೈವ ಪರಿಘಾತಕಃ ॥ ೫೭ ॥

ಅಸತೋ ಘಾತಯೇನ್ನಿತ್ಯಂ ಸತೋ ನ ಪರಿತಾಪಯೇತ್ ।
ನೈವ ದೋಷೋ ಭವೇತ್ತಸ್ಯ ಮಹಾಪುಣ್ಯೇನ ವರ್ತಯೇತ್ ॥ ೫೮ ॥

ಏವಮುಕ್ತ್ವಾ ಸುನೀಥಾ ತು ಪಿತರಂ ವಾಕ್ಯಮಬ್ರವೀತ್ ।
ಮಯಾ ಹಿ ತಾಡಿತಸ್ತಾತ ಗಂಧರ್ವತನಯೋ ವನೇ ॥ ೫೯ ॥

ತಪಸ್ತಪನ್ಸ ವೈ ತಾತ ಕಾಮಕ್ರೋಧವಿವರ್ಜಿತಃ ।
ಮಾಮುವಾಚ ಸ ಧರ್ಮಾತ್ಮಾಽಕಾಮರಾಗಸಮಾಸ್ಥಿತಃ ॥ ೬೦ ॥

---

೫೫. ಕೆಡಕನ್ನು ಮಾಡದೇ ತಪಸ್ಸಿನಲ್ಲಿದ್ದ ನನ್ನನ್ನು ನೀನು ಕಾರಣವಿಲ್ಲದೆ ಹೊಡದಿದ್ದೀಯೆ. ಈರೀತಿ ಹೇಳಿ, ಈಕೆಯು ಹೆಂಗಸೆಂಬ ಭಾವದಿಂದ ಆಕೆಯನ್ನು ಕ್ಷಮಿಸಿದನು. ಕೋಪವನ್ನು ಬಿಟ್ಟನು.

೫೬. ಆಮೇಲೆ ಆಕೆಯು ಪಾಪಕರ್ಮದ ಆಸೆಯಿಂದಲೋ, ಸ್ವಭಾವವಾದ ಹುಡುಗತನದಿಂದಲೋ ತಪಸ್ವಿಯಾದ ಸುಶಂಖನನ್ನು ಕುರಿತು,

೫೭-೫೮. ನನ್ನ ತಂದೆಯು ಮೂರು ಲೋಕದಲ್ಲಿರುವವರನ್ನೂ ಹೊಡೆಯುತ್ತಾನೆ. ಅಯೋಗ್ಯರನ್ನು ನಿತ್ಯವೂ ಹೊಡೆಯುತ್ತಾನೆ. ಯೋಗ್ಯರನ್ನು ತೊಂದರೆ ಪಡಿಸುವುದಿಲ್ಲ. ಅವನಿಗೆ ದೋಷವೇ ಇಲ್ಲ. ಮಹಾಪುಣ್ಯವೇ ಅವನಿಗೆ ಬರುತ್ತದೆ.

೫೯-೬೦. ಹೀಗೆಂದು ಹೇಳಿ, ಸುನೀಥೆಯು ತಂದೆಯ ಬಳಿಗೆ ಹೋಗಿ ಹೀಗೆಂದಳು. ಎಲೈ ತಂದೆಯೇ! ಕಾಮಕ್ರೋಧಗಳಿಂದ ವರ್ಜಿತನಾದ, ತಪಸ್ವಿಯಾದ, ಗಂಧರ್ವನ ಮಗನಾದ ಸುಶಂಖನನ್ನು ನಾನು ಹೊಡೆದೆನು. ಆ ಧರ್ಮಾತ್ಮನು ಅನಂತರ ನನಗೆ ಹೀಗೆ ಹೇಳಿದನು.

ನ ತಾಡಯೇತ್ತಾಡಯಂತಂ ಕ್ರೋಶಂತ ನ್ನೈವ ಕ್ರೋಶಯೇತ್ ।
ಇತ್ಯುವಾಚ ಸ ಮಾಂ ತಾತ ತನ್ಮೇ ತ್ವಂ ಕಾರಣಂ ವದ ॥ ೬೧ ॥

ಏವಮುಕ್ತಸ್ಸ ವೈ ಮೃತ್ಯುಃ ಸುನೀಥಾಂ ದ್ವಿಜಸತ್ತಮಾಃ ।
ಕಿಂಚಿನ್ನೋವಾಚ ಧರ್ಮಾತ್ಮಾ ಪ್ರಶ್ನಪ್ರತ್ಯುತ್ತರಂ ತತಃ ॥ ೬೨ ॥

ವನಂ ಪ್ರಾಪ್ತಾ ಪುನಃ ಸಾ ಹಿ ಸುಶಂಖಂ ತಪಸಿ ಸ್ಥಿತಂ ।
ಕಶಾಘಾತೈಸ್ತತೋ ದುಷ್ಟಾ ಜಘಾನ ತಪತಾಂ ವರಂ ॥ ೬೩ ॥

ಸುಶಂಖಸ್ತಾಡಿತೋ ವಿಪ್ರಾ ಮೃತ್ಯೋಶ್ಚೈವ ಹಿ ಕನ್ಯಯಾ ।
ತತಃ ಕ್ರುದ್ಧೋ ಮಹಾತೇಜಾಃ ಶಶಾಪ ತಾಂ ಸುಮಧ್ಯಮಾಂ ॥ ೬೪ ॥

ನಿರ್ದೋಷೋಽಪಿ ಚ ವೈ ಭದ್ರೇ ಯಸ್ಮಾತ್ತ್ವಯೈವ ತಾಡಿತಃ ।
ಅಹಮೇವ ತಪಸ್ಸಂಸ್ಥಸ್ತಸ್ಮಾಚ್ಛಾಪಂ ದದಾಮ್ಯಹಂ ॥ ೬೫ ॥

ಗಾರ್ಹಸ್ಥ್ಯಂ ಹಿ ಸಮಾಸ್ಥಾಯ ಸಂಗೋ ಭರ್ತ್ರಾ ಯದಾ ತದಾ ।
ಪಾಪಾಚಾರಮಯಃ ಪುತ್ರೋ ದೇವಬ್ರಾಹ್ಮಣನಿಂದಕಃ ॥ ೬೬ ॥

---

೬೧. ಹೊಡೆದವನನ್ನು ಪ್ರತಿಯಾಗಿ ಹೊಡಯಬಾರದು. ಕೋಪಮಾಡಿಕೊಂಡವನಮೇಲೆ ಕೋಪಿಸಬಾರದು ಎಂದು ಆ ಋಷಿಯು ಹೇಳಿದನಲ್ಲ, ಅದರ ಕಾರಣವನ್ನು ದಯವಿಟ್ಟು ತಿಳಿಸು.

೬೨. ಸುನೀಥೆಯು ಹೀಗೆ ಹೇಳುತ್ತಲೂ ಆ ಮೃತ್ಯುವು ಅದಕ್ಕೆ ಉತ್ತರವನ್ನೇನೂ ಹೇಳಲೇ ಇಲ್ಲ.

೬೩. ಆಮೇಲೆ ಆಕೆಯು ಪುನಃ ಆ ಕಾಡಿಗೆ ಹೋಗಿ ಆ ತಪಸ್ವಿಯಾದ ಸುಶಂಖನನ್ನು ಚಾವಟಿಯಿಂದ ಚೆನ್ನಾಗಿ ಹೊಡೆದಳು.

೬೪. ಆ ಮೃತ್ಯುವಿನ ಮಗಳಿಂದ ಹೊಡೆಯಲ್ಪಟ್ಟ ಸುಶಂಖನು ಕೋಪಗೊಂಡು ಆಕೆಯನ್ನು ಶಪಿಸಿದನು.

೬೫. ನನ್ನಲ್ಲಿ ತಪ್ಪಿಲ್ಲದಿದ್ದರೂ ನನ್ನನ್ನು ನೀನು ಹೊಡೆದೆಯಾದುದರಿಂದ ಶಾಪವನ್ನು ಕೊಡುತ್ತೇನೆ.

೬೬-೬೭. ನೀನು ಮದುವೆಯಾದಮೇಲೆ ಗಂಡನೊಡನೆ ಸೇರಿದಾಗ

ಸರ್ವಪಾಪರತೋ ದುಷ್ಟಸ್ತ್ವಗರ್ಭಾದ್ಭವಿಷ್ಯತಿ ।
ಏವಂ ಶಪ್ತ್ವಾ ಗತಶ್ಚಾಸೌ ತಪ ಏವ ಸಮಾಶ್ರಿತಃ ॥ ೬೭ ॥

ಗತೇ ತಸ್ಮಿನ್ಮಹಾಭಾಗೇ ಸಾ ಸುನೀಥಾ ಗತಾ ಗೃಹಂ ।
ಸಮಾಚಷ್ಟೇ ಮಹಾತ್ಮಾನಂ ಪಿತರಂ ಪ್ರತಿ ಸಾ ದ್ವಿಜಾಃ ॥ ೬೮ ॥

ಯಥಾ ಶಪ್ತಾ ತದಾ ತೇನ ಗಂಧರ್ವತನಯೇನ ತು ।
ತತ್ಸರ್ವಂ ಸಂಶ್ರುತಂ ತೇನ ಮೃತ್ಯುನಾ ಪರಿಭಾಷಿತಂ ॥ ೬೯ ॥

ಕಸ್ಮಾತ್ತ್ವಯಾ ತಾಡಿತೋಽಸಿ ತಪಸ್ವೀ ದೋಷವರ್ಜಿತಃ ।
ಯುಕ್ತಂ ನೈವ ಕೃತಂ ಭದ್ರೇ ತಪತಸ್ತಸ್ಯ ತಾಡನಂ ॥ ೭೦ ॥

ಏವಮಾಭಾಷ್ಯ ಧರ್ಮಾತ್ಮಾ ಮೃತ್ಯುಃ ಪರಮದುಃಖಿತಃ ।
ಬಭೂವ ಸಹಿತಂ ತಸ್ಯಾ ದಿಷ್ಟಮೇವಂ ವಿಚಿಂತಯನ್ ॥ ೭೧ ॥

॥ ಸೂತ ಉವಾಚ ॥

ಅತ್ರಿಪುತ್ರೋ ಮಹಾತೇಜಾ ಅಂಗೋ ನಾಮ ಮಹೀಪತಿಃ ।
ಏಕದಾ ತು ಗತೋ ವಿಪ್ರಾಸ್ತದ್ವನಂ ಪ್ರತಿ ನಂದನಂ ॥ ೭೨ ॥

---

ಪಾಪಿಯೂ, ದೇವಬ್ರಾಹ್ಮಣನಿಂದಕನೂ ಆದ ದುಷ್ಟನಾದ ಮಗನು ನಿನ್ನ ಗರ್ಭದಲ್ಲಿ ಹುಟ್ಟಲಿ ಎಂದು ಶಾಪಕೊಟ್ಟು ಆತನು ಮತ್ತೆ ತಪಸ್ಸಿಗೆ ಕುಳಿತನು.

೬೮. ಆ ಋಷಿಯು ಹೊರಟುಹೋಗುತ್ತಲೂ, ಸುನೀಥೆಯು ಮನೆಗೆ ಹೋದಳು. ಮತ್ತು ಮಹಾತ್ಮನಾದ ತಂದೆಗೆ ಎಲ್ಲವನ್ನೂ ತಿಳಿಸಿದಳು.

೬೯. ಆ ಗಂಧರ್ವಕುಮಾರನು ಶಪಿಸಿದುದನ್ನೂ, ಅವರ ವಿಷಯಗಳೆಲ್ಲವನ್ನೂ ಆ ಮೃತ್ಯುವು ಕೇಳಿ, ತಿಳಿದುಕೊಂಡನು.

೭೦. ದೋಷರಹಿತನಾದ ಆ ತಪಸ್ವಿಯನ್ನು ಏಕೆ ಹೊಡೆದೆ ? ತಪಸ್ಸನ್ನು ಮಾಡುತ್ತಿದ್ದ ಅವನನ್ನು ಹೊಡೆದುದು ಒಳ್ಳೆಯದಲ್ಲ.

೭೧. ಆಕೆಗೆ ಆ ಮೃತ್ಯುವು ಹೀಗೆ ಹೇಳಿ ದುಃಖಗೊಂಡು, ಆಕೆಯ ಅದೃಷ್ಟವನ್ನು ಯೋಚಿಸುತ್ತ, ಮುಂದಾಗುವ ಹಿತವನ್ನು ಯೋಚಿಸಿದನು.

೭೨. ಸೂತನು ಹೇಳಿದನು :— ಮಹಾತೇಜಸ್ವಿಯಾದ ಅತ್ರಿಪುತ್ರನಾದ ಅಂಗನೆಂಬ ರಾಜನು ಒಂದುಸಾರಿ ನಂದನವನಕ್ಕೆ ಹೋದನು.

ತತ್ರ್ಯದೃಷ್ಟೋ ದೇವರಾಜಸ್ತೇನೇಂದ್ರಃ ಪಾಕಶಾಸನಃ ।
ಅಪ್ಸರಸಾಂ ಗಣೈರ್ಯುಕ್ತೋ ಗಂಧರ್ವೈಃ ಕಿನ್ನರೈಸ್ತಥಾ ॥ ೭೩ ॥

ಗೀಯಮಾನೋ ಮಹಾಸ್ತೋತ್ರೈರ್ಋಷಿಭಿರ್ದೇವಮಂಗಳೈಃ ।
ಗೀಯಮಾನೋ ಗೀತಕೈಶ್ಚ ಸುಸ್ವರೈಸ್ಸಪ್ತಕೈಸ್ತಥಾ ॥ ೭೪ ॥

ವೀಜ್ಯಮಾನಃ ಸುಗಂಧೈಶ್ಚ ವ್ಯಜನೈಸ್ಸರ್ವ ಏವ ಸಃ ।
ಯೋಷಿದ್ಭಿಃ ರೂಪಯುಕ್ತಾಭಿಶ್ಚಾಮರೈರ್ಹಂಸಗಾಮಿಭಿಃ ॥ ೭೫ ॥

ಛತ್ರೇಣ ಹಂಸವರ್ಣೇನ ಚಂದ್ರಬಿಂಬಾನುಕಾರಿಣಾ ।
ಏವಂ ವೈ ರಾಜಮಾನಂ ತು ಸಹಸ್ರಾಕ್ಷಂ ಮಹಾಬಲಂ ॥ ೭೬ ॥

ದೃಷ್ಟ್ವಾ ವಿಸ್ಮಯಮಾಪೇದೆ ವಾಸವಂ ಕಾಮಸಂಯುತಂ ।
ತಸ್ಯ ಪಾರ್ಶ್ವೇ ಮಹಾಭಾಗಾಂ ಪೌಲೋಮೀಂ ಚಾರುಲೋಚನಾಂ ॥

ರೂಪೇಣ ತೇಜಸಾ ಚೈವ ತಪಸಾ ಚ ಯಶಸ್ವಿನೀಂ ।
ಸೌಭಾಗ್ಯೇನ ವಿರಾಜನ್ತೀಂ ಪಾತಿವ್ರತ್ಯಯುತಾಂ ಸತೀಂ ॥ ೭೮ ॥

---

೭೩. ಅಲ್ಲಿ ಆ ಅಂಗರಾಜನು ಅಪ್ಸರಸ್ತ್ರೀಯರಿಂದಲೂ, ಗಂಧರ್ವರು, ಕಿನ್ನರರಿಂದಲೂ ಸೇವಿಸಲ್ಪಡುತ್ತಿದ್ದ ಇಂದ್ರನನ್ನು ನೋಡಿದನು.

೭೪-೭೬. ಅವನನ್ನು ಮಹರ್ಷಿಗಳು ದೇವಮಂಗಳಗಳಿಂದ ಹೊಗಳುತ್ತಿದ್ದರು. ಮತ್ತು ಅವರೇ ಸುಸ್ವರದಿಂದಲೂ ಸಪ್ತಸ್ವರಗಳಿಂದ ಕೂಡಿದ ಗೀತದಿಂದಲೂ ಸ್ತೋತ್ರಮಾಡುತ್ತಿದ್ದರು. ರೂಪವತಿಯರಾದ ಹೆಂಗಸರು ಹಂಸದಂತಿರುವ ಚಾಮರಗಳಿಂದಲೂ, ಸುಗಂಧದಿಂದ ಕೂಡಿರುವ ಬೀಸಣಿಗೆಗಳಿಂದಲೂ ಅವನನ್ನು ಬೀಸುತ್ತಿದ್ದರು. ಚಂದ್ರಬಿಂಬದಂತಿರುವ ಛತ್ರಿಯನ್ನು ಹಿಡಿದಿದ್ದರು. ಈರೀತಿಯಾಗಿ ಸೇವೆಯನ್ನು ಹೊಂದುತ್ತಿರುವ ಮಹಾ ಬಲಿಷ್ಠನೂ ಕಾಮಿಯೂ ಆದ ಆ ದೇವರಾಜನನ್ನು ನೋಡಿ ಈ ಅಂಗರಾಜನು ಆಶ್ಚರ್ಯಪಟ್ಟನು.

೭೭-೭೮. ಆ ಇಂದ್ರನ ಪಕ್ಕದಲ್ಲಿ ಮನೋಹರವಾದ ಕಣ್ಣುಗಳುಳ್ಳ, ರೂಪಿಣಿಯೂ, ತಪಸ್ವಿಯೂ, ಯಶಸ್ವಿನಿಯೂ ಆದ ಸೌಭಾಗ್ಯವತಿಯಾದ, ಪಾತಿವ್ರತ್ಯದಿಂದ ಕೂಡಿರುವ ಶಚಿಯನ್ನು ನೋಡಿದನು. ಸಹಸ್ರಾಕ್ಷನಾದ ಇಂದ್ರನು ನಂದನವನದಲ್ಲಿ ಅವಳೊಡನೆ ಕ್ರೀಡಿಸುತ್ತಿದ್ದನು.

**ತಯಾ ಸಹ ಸಹಸ್ರಾಕ್ಷಃ ಸ ರೇಮೇ ನಂದನೇ ವನೇ ।**
**ತಸ್ಯ ಲೀಲಾಂ ಸಮಾಲೋಕ್ಯ ಹ್ಯಂಗೋ ರಾಜಾ ದ್ವಿಜೋತ್ತಮಾಃ ॥ ೭೯ ॥**

**ಧನ್ಯೋ ವೈ ದೇವರಾಜೋಽಯಮಿಾದೃಶೈಃ ಪರಿವಾರಿತಃ ।**
**ಅಹೋಽಸ್ಯ ತಪಸೋ ವೀರ್ಯಂ ಯೇನ ಪ್ರಾಪ್ತಂ ಮಹತ್ಪದಂ ॥ ೮೦ ॥**

**ಯದಾಸ್ಯ ಸದೃಶಃ ಪುತ್ರಃ ಸರ್ವಲೋಕಪ್ರಧಾನಕಃ ।**
**ಸ್ಯಾನ್ಮೇ ತದಾ ಮಹತ್ಸೌಖ್ಯಂ ಪ್ರಾಪ್ಸ್ಯಾಮಿಾಹ ನ ಸಂಶಯಃ ॥ ೮೧ ॥**

**ಇತಿ ಚಿಂತಾಪರೋ ಭೂತ್ವಾ ತ್ವರಮಾಣೋ ಗೃಹಂ ಗತಃ ॥ ೮೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ**
**ವೇನೋಪಾಖ್ಯಾನೇ ಏಕೋನತ್ರಿಂಶೋಽಧ್ಯಾಯಃ**

---

೭೯. ಆ ರಾಜನು ಈ ಇಂದ್ರನನ್ನು ನೋಡಿ, ಈರೀತಿಯಾದ ಪರಿವಾರದಿಂದ ಕೂಡಿದ ಈತನು ಧನ್ಯನೆಂದುಕೊಂಡನು.

೮೦. ಈರೀತಿಯಾದ ಈ ಮಹತ್ಪದವಿಯನ್ನು ಹೊಂದಿರಬೇಕಾದರೆ ಈತನ ತಪಸ್ಸು ಎಷ್ಟು ಅದ್ಭುತವಾದುದು ಎಂದು ಆಶ್ಚರ್ಯಪಟ್ಟನು.

೮೧-೮೨. ಈತನಿಗೆ ಸಮನಾದ ಮಗನು ನನಗೆ ಹುಟ್ಟಿ ಸರ್ವಲೋಕಕ್ಕೂ ಮುಖ್ಯನಾದರೆ ಆಗ ನನಗೆ ಬಹಳ ಸಂತೋಷವಾಗುವುದು. ಸಂಶಯವಿಲ್ಲ. ಈರೀತಿಯಾಗಿ ಯೋಚಿಸುತ್ತ ಜಾಗ್ರತೆಯಾಗಿ ಮನೆಗೆ ಹೋದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನನ ಚರಿತ್ರೆಯಲ್ಲಿ
ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ತ್ರಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಅಥ ತ್ವಂಗೋ ಮಹಾತೇಜಾ ದೃಷ್ಟ್ವಾ ಚೇಂದ್ರಸ್ಯ ಸಂಪದಂ ।
ಭೋಗಾಂಶ್ಚೈವ ವಿಲಾಸಂ ಚ ಲೀಲಾಂ ತಸ್ಯ ಮಹಾತ್ಮನಃ ॥ ೧ ॥

ಕಥಂ ವಾ ಈದೃಶಃ ಪುತ್ರೋ ಮಮ ಸ್ಯಾದ್ಧರ್ಮಸಂಯುತಃ ।
ಚಿಂತಯಿತ್ವಾ ಕ್ಷಣಂ ಚೈವ ಸ ಚಾಂಗಃ ಖೇದಸಂಯುತಃ ॥ ೨ ॥

ಸ್ವಕಂ ಗೇಹಂ ಸಮಾಯಾತಃ ಸ ತ್ವಂಗಸ್ಸತ್ಯತತ್ಪರಃ ।
ಅತ್ರಿಂ ಪಪ್ರಚ್ಛ ಪಿತರಂ ಪ್ರಣತೋ ನಮ್ರಕಂಧರಃ ॥ ೩ ॥

ಕೋಽಯಂ ಪುಣ್ಯಸಮಾಚಾರಃ ಇಂದ್ರತ್ವಂ ಪ್ರಾಪ್ತವಾನ್ ಮಹಾನ್ ।
ಕಸ್ಯ ಧರ್ಮಸ್ಯ ವೈ ವ್ಯುಷ್ಟಿಃ ಕಿಂ ಕೃತಂ ಕರ್ಮ ಚೇದೃಶಂ ॥ ೪ ॥

ಕಃ ಕೃತೋ ಧರ್ಮ ಏತೇನ ಕಮಾರಾಧಿತವಾನ್ಮುನೇ ।
ತನ್ಮೇ ತ್ವಂ ವಿಸ್ತರೇಣಾಪಿ ವದ ಸತ್ಯವತಾಂ ವರ ॥ ೫ ॥

---

೧-೨. ಸೂತನು ಹೇಳಿದನು:— ಆಮೇಲೆ ಅಂಗರಾಜನು ಈರೀತಿಯಾದ ಇಂದ್ರನ ಸಂಪತ್ತನ್ನೂ, ಭೋಗಗಳನ್ನೂ, ವಿಲಾಸಗಳನ್ನೂ, ಲೀಲೆಗಳನ್ನೂ ನೋಡಿ ಈರೀತಿಯಾದ ಧರ್ಮದಿಂದಲೂ, ಐಶ್ವರ್ಯದಿಂದಲೂ ಕೂಡಿದ ಮಗನು ನನಗೆ ಹೇಗೆ ಹುಟ್ಟಿಯಾನು ಎಂದು ಯೋಚಿಸುತ್ತಾ ದುಃಖಗೊಂಡು ಮನೆಗೆ ಬಂದನು.

೩-೫. ಮನೆಗೆ ಹೋದನಂತರ ತಂದೆಯಾದ ಅತ್ರಿಯನ್ನು ಕುರಿತು ಇಂದ್ರ ಪದವಿಯನ್ನು ಹೊಂದಿರುವ ಈ ಮಹಾತ್ಮನಾದ ಪುಣ್ಯಸಮಾಚಾರವುಳ್ಳವನಾರು? ಇದು ಯಾವ ಧರ್ಮದ ಉತ್ಕರ್ಷವು? ಇವನು ಯಾವ ಧರ್ಮವನ್ನು ಮಾಡಿದನು? ಯಾರನ್ನು ಪೂಜಿಸಿದನು? ಅದನ್ನು ನನಗೆ ವಿಸ್ತಾರವಾಗಿ ಹೇಳು ಎಂದು ಕೇಳಿದನು.

॥ ಅತ್ರಿರುವಾಚ ॥

ಸಾಧು ಪೃಷ್ಟಂ ಮಹಾಭಾಗ ತ್ವಯಾ ವೈ ಧರ್ಮಕಾರಣಂ ।
ಚರಿತಂ ತಸ್ಯ ದೇವಸ್ಯ ತನ್ಮೇ ನಿಗದತಶ್ಶೃಣು ॥ ೬ ॥

ಸುವ್ರತೋ ನಾಮ ಮೇಧಾವೀ ಪುರಾ ಬ್ರಾಹ್ಮಣಸತ್ತಮಃ ।
ತೇನ ಕೃಷ್ಣೋ ಹೃಷೀಕೇಶಸ್ತಪಸಾ ಚೈವ ತೋಷಿತಃ ॥ ೭ ॥

ಪುಣ್ಯಗರ್ಭಮತಃ ಪ್ರಾಪ್ತೋ ಅದಿತ್ಯಾಂ ಕಶ್ಯಪಾತ್ಕಿಲ ।
ವಿಷ್ಣೋಶ್ಚೈವ ಪ್ರಸಾದೇನ ದೇವರಾಜೋ ಬಭೂವ ಸಃ ॥ ೮ ॥

॥ ಅಂಗ ಉವಾಚ ॥

ಕಥಮಿಂದ್ರಸಮಃ ಪುತ್ರೋ ಮಮ ಸ್ಯಾತ್ಪುತ್ರವತ್ಸಲಃ ।
ತದುಪಾಯಂ ಸಮಾಚಕ್ಷ್ವ ಭವಾನ್ ಜ್ಞಾನವತಾಂ ವರಃ ॥ ೯ ॥

॥ ಅತ್ರಿರುವಾಚ ॥

ಸಮಾಸೇನಾಪಿ ತಸ್ಯೈವ ಸುವ್ರತಸ್ಯ ಮಹಾತ್ಮನಃ ।
ಚರಿತ್ರಮಖಿಲಂ ಪುಣ್ಯಂ ನಿಶಾಮಯ ಮಹಾಮತೇ ॥ ೧೦ ॥

---

೬. ಅತ್ರಿಯು ಹೇಳಿದನು ;—ಮಗುವೇ, ಧರ್ಮಕ್ಕೆ ಕಾರಣವನ್ನು ಕೇಳಿದುದು ಬಹು ಒಳ್ಳೆಯದಾಗಿದೆ. ಆ ದೇವನ ಚರಿತ್ರೆಯನ್ನು ಹೇಳುತ್ತೇನೆ ಕೇಳು.

೭. ಪೂರ್ವದಲ್ಲಿ ಬುದ್ಧಿವಂತನಾದ ಸುವ್ರತನೆಂಬ ಒಬ್ಬ ಬ್ರಾಹ್ಮಣಶ್ರೇಷ್ಠನಿದ್ದನು. ಆತನು ಕೃಷ್ಣನನ್ನು ತಪಸ್ಸಿನಿಂದ ಸಂತೋಷಪಡಿಸಿದನು.

೮. ಕಶ್ಯಪನಿಂದ ಅದಿತಿಯಲ್ಲಿ ಪುಣ್ಯವಾದ ಉತ್ಪತ್ತಿಯನ್ನು ಹೊಂದಿದನು. ವಿಷ್ಣುವಿನ ಪ್ರಸಾದದಿಂದ ಆತನು ದೇವರಾಜನಾದನು ಎಂದನು.

೯. ನೀನು ಪುತ್ರನಾದ ನನ್ನಲ್ಲಿ ಅಭಿಮಾನವನ್ನಿಟ್ಟುಕೊಂಡಿರುವಿಯಷ್ಟೆ ? ಆದುದರಿಂದ ನನಗೆ ಇಂದ್ರಸಮನಾದ ಪುತ್ರನು ಹೇಗೆ ಆಗುವನೆಂಬುದನ್ನು ಹೇಳು. ನೀನು ಜ್ಞಾನಿಯಾದುದರಿಂದ ಅಂತಹ ಮಗನಾಗುವುದಕ್ಕೆ ಉಪಾಯವನ್ನು ಹೇಳು ಎಂದು ಕೇಳಿದನು.

೧೦. ಅತ್ರಿಯು ಹೇಳಿದನು :—ಆ ಸುವ್ರತನ ಚರಿತ್ರೆಯನ್ನು ಸಂಗ್ರಹವಾಗಿ ಹೇಳುತ್ತೇನೆ. ಅದು ಪುಣ್ಯಪ್ರದವಾದುದು. ಅದೆಲ್ಲವನ್ನೂ ಕೇಳು.

**ಸುವ್ರತೋ ನಾಮ ಮೇಧಾವೀ ಪುರಾऽರಾಧಿತವಾನ್ ಹರಿಂ ।**
**ತಸ್ಯ ಭಾವಂ ಸುಭಕ್ತಿಂ ಚ ಧ್ಯಾನಂ ಚೈವ ಮಹಾತ್ಮನಃ ॥ ೧೧ ॥**

**ಸಮಾಲೋಚ್ಯ ಜಗನ್ನಾಥೋ ದತ್ತವಾನ್ ವೈ ಮಹತ್ಪದಂ ।**
**ಸ ಐಂದ್ರಂ ಸರ್ವಭೋಗಾಢ್ಯಂ ತ್ರೈಲೋಕ್ಯಂ ಸ ಚರಾಚರಂ ॥ ೧೨ ॥**

**ವಿಷ್ಣೋಶ್ಚೈವ ಪ್ರಸಾದಾದ್ಧಿ ಚಾನುಭುಂಕ್ತೇ ತ್ರಿಲೋಕಧೃಕ್ ।**
**ಏವಂ ತೇ ಸರ್ವಮಾಖ್ಯಾತಮಿಂದ್ರಸ್ಯಾಪಿ ವಿಚೇಷ್ಟಿತಂ ॥ ೧೩ ॥**

**ಭಕ್ತ್ಯಾ ತುಷ್ಯತಿ ಗೋವಿಂದೋ ಭಾವಧ್ಯಾನೇನ ಸತ್ತಮ ।**
**ಸರ್ವಂ ದದಾತಿ ಸತತಂ ಭಕ್ತ್ಯಾ ಸಂತೋಷಿತೋ ಹರಿಃ ॥ ೧೪ ॥**

**ತಸ್ಮಾದಾರಾಧ್ಯ ಗೋವಿನ್ದಂ ಸರ್ವದಂ ಸರ್ವಸಂಭವಂ ।**
**ಸರ್ವಜ್ಞಂ ಸರ್ವವೇತ್ತಾರಂ ಸರ್ವೇಶಂ ಪುರುಷಂ ಪರಂ**
**ತಸ್ಮಾತ್ಪ್ರಾಪ್ಸ್ಯಸಿ ಸರ್ವಂ ತ್ವಂ ಯದ್ಯದಿಚ್ಛಸಿ ನಂದನ । ॥ ೧೫ ॥**

---

೧೧. ಸುವ್ರತನೆಂಬ ಬುದ್ಧಿಶಾಲಿಯು ಪೂರ್ವದಲ್ಲಿ ಹರಿಯನ್ನು ಆರಾಧಿಸಿದನು. ಅವನ ಭಾವ, ಭಕ್ತಿ, ಧ್ಯಾನಗಳನ್ನು ಚೆನ್ನಾಗಿ ತಿಳಿದು ಹರಿಯು, ಆತನಿಗೆ ಮಹಾಪದವಿಯನ್ನು ಕೊಟ್ಟನು.

೧೨. ಆ ಸ್ವಾಮಿಯು ಸರ್ವಭೋಗಗಳಿಂದ ತುಂಬಿದ ಚರಾಚರಗಳಮೇಲಿನ ಅಧಿಕಾರರೂಪವಾದ ತ್ರೈಲೋಕಾಧಿಪತ್ಯವನ್ನೂ ಅವನಿಗೆ ಕೊಟ್ಟನು.

೧೩. ಆತನು ವಿಷ್ಣುವಿನ ಪ್ರಸಾದದಿಂದ ಮೂರು ಲೋಕದ ಅಧಿಕಾರವನ್ನೂ ಹೊಂದಿ ಈ ಭೋಗವನ್ನು ಅನುಭವಿಸುತ್ತಿರುವನು. ಇಂದ್ರನ ವಿಷಯಗಳು ಈ ರೀತಿಯಾದುವೆಂದು ನಿನಗೆ ಹೇಳಿದ್ದೇನೆ.

೧೪. ಗೋವಿಂದನು ಭಕ್ತಿಯಿಂದಲೂ, ಭಾವಧ್ಯಾನದಿಂದಲೂ ತುಷ್ಟನಾಗುತ್ತಾನೆ. ಭಕ್ತಿಯಿಂದ ತುಷ್ಟನಾದ ಹರಿಯು ಯಾವಾಗಲೂ ಎಲ್ಲವನ್ನೂ ಕೊಡುತ್ತಾನೆ.

೧೫. ಆ ಹರಿಯು ಸರ್ವವನ್ನೂ ಕೊಡುವವನು, ಸರ್ವಕ್ಕೂ ಒಡೆಯನಾದವನು, ಸರ್ವಜ್ಞನಾದವನು, ಎಲ್ಲವನ್ನೂ ಬಲ್ಲವನು, ಸರ್ವೇಶನೂ, ಪರಮಪುರುಷನೂ ಆದ ಇಂತಹ ಆ ಗೋವಿಂದನನ್ನು ಆರಾಧಿಸು. ಅವನಿಂದ ನಿನಗೆ ಬೇಕಾದುವನ್ನೆಲ್ಲಾ ಹೊಂದುತ್ತೀಯೆ.

ಸುಖಸ್ಯ ದಾತಾ ಪರಮಾರ್ಥದಾತಾ
ಮೋಕ್ಷಸ್ಯ ದಾತಾ ಜಗತಾಂ ಮಹೇಶಃ ।
ತಸ್ಮಾತ್ತಮಾರಾಧಯ ಗಚ್ಛ ಪುತ್ರ
ಸಂಪ್ರಾಪ್ಸ್ಯಸೇ ಹೀಂದ್ರಸಮಂ ಹಿ ಪುತ್ರಂ ॥ ೧೬ ॥

ಆಕರ್ಣ್ಯ ವಾಕ್ಯಂ ಪರಮಾರ್ಥಯುಕ್ತಂ
ಮಹಾತ್ಮನಾऽಸೌ ಋಷಿಣಾ ಹಿ ತೇನ ।
ಸಂಗೃಹ್ಯ ತತ್ತ್ವಂ ವಚನಂ ಹಿ ತಸ್ಯ
ಆರಾಧಿತುಂ ಶಾಶ್ವತಮವ್ಯಯಂ ಹಿ ಸಃ ॥ ೧೭ ॥

ಆಮಂತ್ರ್ಯ ಚಾಂಗಃ ಪಿತರಂ ಮಹಾತ್ಮಾ
ಬ್ರಹ್ಮಾತ್ಮಜಂ ಬ್ರಹ್ಮಸಮಾನಮೇವ ।
ಸಂಪ್ರಾಪ್ತವಾನ್ ಮೇರುಗಿರೇಸ್ತು ಶೃಂಗಂ
ತತ್ಕಾಂಚನೈ ರತ್ನಮಯೈಸ್ಸಮೇತಂ ॥ ೧೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ವೇನೋಪಾಖ್ಯಾನೇ ತ್ರಿಂಶೋऽಧ್ಯಾಯಃ

---

೧೬. ಆ ಸ್ವಾಮಿಯು ಸುಖವನ್ನು ಕೊಡತಕ್ಕವನು. ಪರಮಾರ್ಥವನ್ನು ಮೋಕ್ಷವನ್ನೂ ಕೊಡತಕ್ಕವನು. ಪ್ರಪಂಚಕ್ಕೆಲ್ಲಾ ಒಡೆಯನು. ಆದುದರಿಂದ ಆತನನ್ನು ಆರಾಧಿಸು, ಹೋಗು. ಅವನಿಂದ ಇಂದ್ರಸಮನಾದ ಪುತ್ರನನ್ನು ಹೊಂದುತ್ತೀಯೆ ಎಂದನು.

೧೭. ಹೀಗೆ ಆ ಅದ್ರಿಮಹರ್ಷಿಯು ಹೇಳಿದ ಪರಮಾರ್ಥಯುಕ್ತವಾದ ಮಾತನ್ನು ಕೇಳಿ, ಅವನ ಮಾತಿನ ತತ್ವವನ್ನು ಗ್ರಹಿಸಿ ಶಾಶ್ವತನೂ ಅವ್ಯಯನೂ ಆದ ಆ ಸ್ವಾಮಿಯನ್ನು ಆರಾಧಿಸಲು ಮನಸ್ಸುಮಾಡಿದನು.

೧೮. ಆಗ ಆ ಮಹಾತ್ಮನಾದ ಅಂಗರಾಜನು, ಬ್ರಹ್ಮನಿಗೆ ಪುತ್ರನೂ, ಬ್ರಹ್ಮಸಮಾನನೂ ಆದ ಆ ಅತ್ರಿಯ ಅನುಜ್ಞೆಯನ್ನು ಪಡೆದು ಸ್ವಾಮಿಯನ್ನು ಆರಾಧಿಸಲು ರತ್ನಮಯವಾದ ಮೇರುಪರ್ವತದ ಶಿಖರಕ್ಕೆ ಹೋದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನವೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ಏಕತ್ರಿಂಶೋಧ್ಯಾಯಃ

॥ ಸೂತ ಉವಾಚ ॥

ನಾನಾರತ್ನೈಸ್ಸುದೀಪ್ತಾಂಗೈರ್ಹಾಟಕೇನಾಪಿ ಸರ್ವತಃ ।
ರಾಜಮಾನೋ ಗಿರಿಶ್ರೇಷ್ಠೋ ಯಥಾ ಸೂರ್ಯಸ್ಸ್ವರಶ್ಮಿಭಿಃ ॥ ೧ ॥

ಛಾಯಾಮಶೋಕಾಂ ಸಂಪ್ರಾಪ್ಯ ಶೀತಲಾಂ ಸುಖದಾಯಿನೀಂ ।
ಧ್ಯಾಯಂತಿ ಯೋಗಿನಸ್ಸರ್ವೇ ಹ್ಯುಪವಿಷ್ಟಾ ದೃಢಾಸನೇ ॥ ೨ ॥

ಕ್ವಚಿತ್ತಪನ್ತಿ ಮುನಯಃ ಕ್ವಚಿದ್ಗಾಯನ್ತಿ ಕಿನ್ನರಾಃ ।
ಸಂತುಷ್ಟಾಶ್ಚೈವ ಗನ್ಧರ್ವಾಃ ಸುವೀಣಾತಾಲಧಾರಿಣಃ ॥ ೩ ॥

ತಾಳಮಾನಲಯೋಲೀನಾಃ ಸರ್ವೈಸ್ತೈಸ್ತ್ತಭಿರನ್ವಿತೈಃ ।
ಮೂರ್ಛನಾರತ್ನಿಸಂಯುಕ್ತೈರ್ವ್ಯಕ್ತಂ ಗೀತಂ ಮನೋರಂ ॥ ೪ ॥

---

### ಮೂವತ್ತೊಂದನೆಯ ಅಧ್ಯಾಯ

೧. ಆ ಮೇರುಪರ್ವತವು ನಾನಾರತ್ನಗಳಿಂದಲೂ, ಚಿನ್ನದಿಂದಲೂ, ಎಲ್ಲಾ ಕಡೆಯಲ್ಲೂ ಪ್ರಕಾಶಮಾನವಾದ, ತನ್ನ ಕಾಂತಿಯಿಂದ ಸೂರ್ಯನಂತೆ ಪ್ರಕಾಶಿಸುತ್ತದೆ.

೨-೪. ಇಂತಹ ಆ ಪರ್ವತದಲ್ಲಿ ತಣ್ಣಗಿರುವ ಅಶೋಕವೃಕ್ಷದ ನೆರಳನ್ನು ಆಶ್ರಯಿಸಿ, ದೃಢಾಸನದಲ್ಲಿ ಕುಳಿತು ಒಂದು ಕಡೆ ಯೋಗಿಗಳು ಧ್ಯಾನಮಾಡುತ್ತಾರೆ. ಒಂದು ಜಾಗದಲ್ಲಿ ಮುನಿಗಳು ತಪಸ್ಸುಮಾಡುತ್ತಾರೆ. ಮತ್ತೊಂದು ಕಡೆ ಕಿನ್ನರರು ಗಾನಮಾಡುತ್ತಾರೆ. ಸಂತೋಷಗೊಂಡ ಗಂಧರ್ವರು ವೀಣೆಯನ್ನು ಹಿಡಿದುಕೊಂಡು ತಾಳ, ತಾಲ, ಲಯಗಳಿಗನುಸಾರವಾಗಿ ತಾಳಹಾಕುತ್ತಾ ಏಳು ಸ್ವರಗಳಿಂದಲೂ, ಮೂರ್ಛನೆಗಳಿಂದಲೂ ಗೀತವನ್ನು ನುಡಿಸುತ್ತ ಮನೋಹರವಾಗಿ ಹಾಡುತ್ತಾರೆ.

ತಸ್ಮಿನ್ಹಿ ಪರ್ವತಶ್ರೇಷ್ಠೇ ಚಂದನಾಚ್ಛಾದಸಂಸ್ಥಿತಾಃ ।
ಗಂಧರ್ವಾ ಗೀತತತ್ತ್ವಜ್ಞಾ ಗೀತಂ ಗಾಯನ್ತಿ ತತ್ಪರಾಃ ॥ ೫ ॥

ನೃತ್ಯನ್ತಿ ಯೋಷಿತಸ್ತತ್ರ ದೇವಾನಾಂ ಪರ್ವತೋತ್ತಮೇ ।
ಪಾಪಘ್ನೀ ಪುಣ್ಯದಾ ದಿವ್ಯಾ ಸುಶ್ರೇಯಸ್ಸಪ್ರದಾಯಿನೀ ॥ ೬ ॥

ವೇದಧ್ವನಿಃ ಸುಪ್ರಚುರಾ ಶ್ರೂಯತೇ ಪರ್ವತೋತ್ತಮೇ ।
ಚಂದನಾಶೋಕಪುನ್ನಾಗೈಃ ಶಾಲೈಸ್ತಾಲೈಸ್ತಮಾಲಕೈಃ ॥ ೭ ॥

ವೃಕ್ಷೈಸ್ಸಮೇಘಸಂಕಾಶೈ ರಾಜತೇ ಪರ್ವತೋತ್ತಮಃ ।
ಸಂತಾನಕೈಃ ಕಲ್ಪವೃಕ್ಷೈರ್ಗಂಗಾಯಾಃ ಪಯಸಾಕುಲೈಃ ॥ ೮ ॥

ನಗ್ರೇಂದ್ರೋ ಭಾತಿ ಸರ್ವತ್ರ ನಾಗವೃಕ್ಷೈಸ್ಸುಪುಷ್ಪಿತೈಃ ।
ನಾನಾಧಾತುಸಮಾಕೀರ್ಣೋ ನಾನಾರತ್ನಮಯೋ ಗಿರಿಃ ॥ ೯ ॥

ನಾನಾಕೌತುಕಸಂಯುಕ್ತೋ ನಾನಾಮಂಗಳಸಂಯುತಃ ।
ದೇವವೃಂದೈಸ್ಸುಸಂಯುಕ್ತಶ್ಚಾಪ್ಸರೋಗಣಸಂಕುಲಃ ॥ ೧೦ ॥

---

೫. ಆ ಪರ್ವತದಲ್ಲ ಗಂಧರ್ವರು ಮೈಗೆ ದಿವ್ಯಗಂಧವನ್ನು ಲೇಪನಮಾಡಿಕೊಂಡು ಗೀತವನ್ನು ಹಾಡುತ್ತಾರೆ.

೬. ಅಪ್ಸರಸ್ತ್ರೀಯರು ಬಂದು ಆ ಪರ್ವತದಲ್ಲಿ ಉತ್ತಮವಾದ ನರ್ತನವನ್ನು ಮಾಡುತ್ತಾರೆ. ಪಾಪನಾಶಕವೂ, ಪುಣ್ಯಪ್ರದವೂ ಆದ ಮತ್ತು ದಿವ್ಯವಾದ, ಶ್ರೇಯಸ್ಸನ್ನು ಕೊಡುವ ವೇದಧ್ವನಿಯು ಕೇಳಿಬರುತ್ತದೆ.

೭. ಚಂದನ, ಅಶೋಕ, ಪುನ್ನಾಗ, ಸಾಲ, ತಾಲ, ತಮಾಲ ಮೊದಲಾದ ವೃಕ್ಷಗಳು ಮೇಘಮಂಡಲದವರೆಗೂ ಬೆಳೆದು ಅಲ್ಲಿ ಪ್ರಕಾಶಿಸುತ್ತವೆ.

೮. ಹೂ ಬಿಟ್ಟಿರುವ ಸಂತಾನಕ, ಕಲ್ಪವೃಕ್ಷಗಳು, ಗಂಗಾನೀರಿನಿಂದವ್ಯಾಪ್ತವಾಗಿ ಆ ಬೆಟ್ಟವನ್ನು ಪ್ರಕಾಶಿಸುವಂತೆ ಮಾಡುತ್ತವೆ.

೯-೧೦. ಆ ಪರ್ವತವು ನಾನಾಬಗೆಯಾದ ಧಾತುಗಳಿಂದ ನಾನಾಬಗೆಯಾಗಿ ಕಾಣುತ್ತ ಅತ್ಯಂತ ಆಶ್ಚರ್ಯಕರವಾಗಿರುವುದು. ದೇವತೆಗಳು, ಅಪ್ಸರಸ್ತ್ರೀಯರು ಮೊದಲಾದವರು ಅಲ್ಲಿ ವಿಹರಿಸುತ್ತಿರುವುದರಿಂದ ಆ ಪರ್ವತವು ಅತಿ ರಮಣೀಯವಾಗಿ ಶೋಭಿಸುತ್ತಿರ.ವುದು.

ಋಷಿಭಿರ್ಮುನಿಭಿಸ್ಸಿದ್ಧೈರ್ಗನ್ಧರ್ವೈಃ ಪರಿಭಾತಿ ಸಃ ।
ಗಜೈಶ್ಚಾಚಲಸಂಕಾಶೈಃ ಸಿಂಹನಾದೈರ್ವಿರಾಜತೇ ॥ ೧೧ ॥

ಶರಭೈರ್ಮತ್ತಶಾರ್ದೂಲೈರ್ಮೃಗಯೂಥೈರಲಂಕೃತಃ ।
ವಾಪೀಕೂಪತಟಾಗೈಶ್ಚ ಸಂಪೂರ್ಣಶ್ಶೀತಲೋದಕೈಃ ॥ ೧೨ ॥

ಹಂಸಕಾರಂಡವಾಕೀರ್ಣೈಃ ಪರ್ವತಃ ಪರಿಶೋಭತೇ ।
ಸ್ವರ್ಣೋತ್ಪಲೈಶ್ಚ ಶ್ವೇತೈಶ್ಚ ರಕ್ತೋತ್ಪಲೈರ್ವಿರಾಜತೇ ॥ ೧೩ ॥

ನದೀಸ್ರವಣಸಂಘಾತೈರ್ವಿಮಲೈಶ್ಶೋದಕೈಸ್ತಥಾ ।
ಶಾಲೈಸ್ತಾಲೈಸ್ತಮಾಲೈಸ್ತು ರೌಪ್ಯೈಶ್ಚ ಸ್ಫಾಟಿಕೈಸ್ತಥಾ ॥ ೧೪ ॥

ವಿಸ್ತೀರ್ಣೈಃ ಕಾಂಚನೈರ್ದಿವ್ಯೈಃ ಸೂರ್ಯವಹ್ನಿಸಮಪ್ರಭೈಃ ।
ಶಿಲಾತಲೈಶ್ಚ ಸಂಪೂರ್ಣಃ ಶೈಲರಾಜೋ ವಿರಾಜತೇ ॥ ೧೫ ॥

ವಿಮಾನೈರ್ದೇವತಾನಾಂ ಚ ಪ್ರಾಸಾದೈಃ ಪರ್ವತೋಪಮೈಃ ।
ಹಂಸಕೇಂದುಪ್ರತೀಕಾಶೈರ್ಹೇಮದಂಡೈರಲಂಕೃತಃ ॥ ೧೬ ॥

---

೧೧-೧೨. ಹಾಗೆಯೇ ಋಷಿಗಳು, ಮುನಿಗಳು, ಸಿದ್ಧರು, ಗಂಧರ್ವರು ಮೊದಲಾದವರಿಂದ ಆ ಪರ್ವತವು ಶೋಭಿಸುತ್ತದೆ. ಬೆಟ್ಟದಂತಿರುವ ಆನೆಗಳೂ ಅವುಗಳ ಸಿಂಹನಾದಗಳೂ, ಶರಭಗಳು, ಹುಲಿಗಳು, ಮೃಗಗಳಗುಂಪುಗಳು ಇವುಗಳಿಂದ ಆ ಬೆಟ್ಟವು ಅಲಂಕೃತವಾಗಿದೆ. ಅಲ್ಲಿ ತಣ್ಣನೆಯ ನೀರುಳ್ಳ ಬಾವಿ, ಕೊಳ, ಕೆರೆ ಮೊದಲಾದ ಅನೇಕ ಜಲಾಶ್ರಯಗಳರುವವು.

೧೩. ಹಂಸ ಕಾರಂಡವಗಳಿಂದಲೂ ಚಿನ್ನದ ಕನ್ನೈದಿಲೆಗಳಿಂದಲೂ, ಬೆಳ್ಳಗಿರುವ ಕಮಲಗಳಿಂದಲೂ, ಕೆಂಪುಕಮಲಗಳಿಂದಲೂ ಪ್ರಕಾಶಿಸುತ್ತದೆ.

೧೪-೧೫. ನಿರ್ಮಲವಾದ ನೀರುಳ್ಳ ಝರಿಗಳಿಂದಲೂ, ಸಾಲ, ತಮಾಲ ವೃಕ್ಷಗಳಿಂದಲೂ ಸ್ಫಟಿಕ, ಬೆಳ್ಳಿಗಳಿಂದಲೂ, ಸೂರ್ಯ ಬೆಂಕಿಗಳಂತಿರುವ ಚಿನ್ನಗಳಿಂದಲೂ, ಪ್ರಕಾಶಿಸುತ್ತದೆ. ಅಲ್ಲಲ್ಲೇ ಇರುವ, ಕುಳಿತುಕೊಳ್ಳಲುಯೋಗ್ಯವಾದ ಕಲ್ಲುಚಪ್ಪಡಿಗಳಿಂದ ಆ ಬೆಟ್ಟವು ಮನೋಹರವಾಗಿರುವುದು.

೧೬. ಇದಲ್ಲದೆ ದೇವಸ್ಥಾನಗಳೂ ಬೆಟ್ಟಗಳಂತಿರುವ ಉಪ್ಪರಿಗೆ ಮನೆಗಳೂ

ಕಲಶೈಶ್ಚಾಮರೈರ್ಯುಕ್ತೈಃ ಪ್ರಾಸಾದೈಃ ಪರಿಶೋಭಿತಃ ।
ನಾನಾಗುಣಪ್ರಮುದಿತದೇವವೃಂದೈಶ್ಚ ರಾಜತೇ ॥ ೧೭ ॥

ದೇವವೃಂದೈರನೇಕೈಶ್ಚ ಗಂಧರ್ವೈಶ್ಚಾರಣೈಸ್ತಥಾ ।
ಸರ್ವತ್ರ ರಾಜತೇ ಪುಣ್ಯೋ ಮೇರುರ್ಗಿರಿವರೋತ್ತಮಃ ॥ ೧೮ ॥

ತಸ್ಮಾದ್ಗಂಗಾನದೀ ಪುಣ್ಯಾ ಪುಣ್ಯಲಭ್ಯಾ ಮಹಾನದೀ ।
ಪ್ರಸೃತಾ ಪುಣ್ಯತೀರ್ಥಾಢ್ಯಾ ಹಂಸಪದ್ಮೈಸ್ಸಮಾಕುಲಾ ॥ ೧೯ ॥

ಮುನಿಭಿಸ್ಸೇವ್ಯಮಾನಾ ಸಾ ಋಷಿಸಂಘೈರ್ಮಹಾನದೀ ।
ಏವಂ ಗುಣಂ ಗಿರಿಶ್ರೇಷ್ಠಂ ಪುಣ್ಯಕೌತುಕಮಂಗಳಂ ॥ ೨೦ ॥

ಅಂಗಶ್ಚಾತ್ರಿಸುತಃ ಪುಣ್ಯಃ ಪ್ರವಿವೇಶ ಮಹಾಮುನಿಃ ।
ಗಂಗಾತೀರೇ ಸುಪುಣ್ಯೇ ಚ ತ್ವೇಕಾನ್ತೇ ರತ್ನಕಂದರೇ ॥ ೨೧ ॥

---

ಅಲ್ಲಿ ಕಂಗೊಳಿಸುತ್ತಿವೆ. ಆ ಮನೆಗಳಲ್ಲಿ ಚಂದ್ರನಂತೆ ಶುಭ್ರವಾದ ಹಂಸಗಳೂ ಸುವರ್ಣಮಯವಾದ ಧ್ವಜಪತಾಕೆಗಳೂ ಇರುವವು.

೧೭. ಚಾಮರಗಳಿಂದಲೂ, ಕಲಶಗಳಿಂದಲೂ ಆ ಉಪ್ಪರಿಗೆಯು ಪ್ರಕಾಶಿಸುತ್ತದೆ. ನಾನಾಬಗೆಯಾದ ಗುಣಗಳಿಂದ ಕೂಡಿರುವ ದೇವತಾಪ್ರತಿಮೆಗಳಿಂದ ಆ ಪ್ರಾಸಾದವು ಪ್ರಕಾಶಿಸುತ್ತದೆ.

೧೮. ಈ ರೀತಿಯಾಗಿ ದೇವತೆಗಳ ಗುಂಪಿನಿಂದಲೂ, ಗಂಧರ್ವಚಾರಣರಿಂದಲೂ, ಉತ್ತಮವಾದ ಆ ಮೇರುಪರ್ವತವು ಪ್ರಕಾಶಿಸುತ್ತದೆ.

೧೯. ಪುಣ್ಯತೀರ್ಥದಿಂದ ತುಂಬಿದ, ಹಂಸ, ಪದ್ಮಗಳಿಂದಕೂಡಿದ ಪುಣ್ಯಪ್ರದವೂ ಪುಣ್ಯಲಭ್ಯವೂ ಆದ ಗಂಗಾನದಿಯು ಇಲ್ಲಿಂದಲೇ ಹೊರಟಿದೆ.

೨೦. ಆ ನದಿಯು ಮುನಿಗಳಿಂದಲೂ, ಋಷಿಸಂಘದಿಂದಲೂ ಸೇವಿಸಲ್ಪಡುತ್ತದೆ. ಆ ನದಿಯು ಇಲ್ಲಿಂದ ಹೊರಟಿದೆ. ಈ ಬಗೆಯಾದ ಆಶ್ಚರ್ಯಗಳಿಂದ ಯುಕ್ತವಾನ ಪುಣ್ಯತಮವಾದ ಆ ಮೇರುಪರ್ವತವನ್ನು ಅತ್ರಿಮಗನಾದ ಅಂಗನು ಪ್ರವೇಶಿಸಿದನು.

೨೧-೨೩. ಆ ಪರ್ವತದಲ್ಲಿ, ಗಂಗಾತೀರದಲ್ಲಿ ಒಬ್ಬರೂ ಸಂಚರಿಸದ ರತ್ನದ ಗುಹೆಯಲ್ಲಿ ಕುಳಿತು ಕಾಮಕ್ರೋಧಗಳನ್ನು ಬಿಟ್ಟು ಇಂದ್ರಿಯಗಳನ್ನು ನಿಗ್ರಹಿಸಿ,

ತತ್ರೋಪವಿಶ್ಯ ಮೇಧಾವೀ ಕಾಮಕ್ರೋಧವಿವರ್ಜಿತಃ ।
ಸರ್ವೇಂದ್ರಿಯಾಣಿ ಸಂಯಮ್ಯ ಹೃಷೀಕೇಶಂ ಮನಃಕೃತಂ ॥ ೨೨ ॥

ಧ್ಯಾಯಮಾನಸ್ಸಧರ್ಮಾತ್ಮಾ ಕೃಷ್ಣಂ ಕ್ಲೇಶಾಪಹಂ ಪ್ರಭುಂ ।
ಆಸನೇ ಶಯನೇ ಯಾನೇ ಧ್ಯಾನೇ ಚ ಮಧುಸೂದನಂ ॥ ೨೩ ॥

ನಿತ್ಯಂ ಪಶ್ಯತಿ ಯುಕ್ತಾತ್ಮಾ ಯೋಗಯುಕ್ತೋ ಜಿತೇಂದ್ರಿಯಃ ।
ಚರಾಚರೇಷು ಜೀವೇಷು ತೇಷು ಪಶ್ಯತಿ ಕೇಶವಂ ॥ ೨೪ ॥

ಆರ್ದ್ರೇಷು ಚೈವ ಶುಷ್ಕೇಷು ಸರ್ವೇಷ್ವನ್ಯೇಷು ಸ ದ್ವಿಜಃ ।
ಏವಂ ವರ್ಷಶತಂ ಜಾತಂ ತಪ್ಯಮಾನಸ್ಯ ತಸ್ಯ ಚ ॥ ೨೫ ॥

ಬಹುವಿಘ್ನಾಶ್ಚ ಘೋರಾಶ್ಚ ದರ್ಶನಂ ಯಾನ್ತಿ ನಿತ್ಯಶಃ ।
ತೇಜಸಾ ತಸ್ಯ ದೇವಸ್ಯ ನೃಸಿಂಹಸ್ಯ ಮಹಾತ್ಮನಃ ॥ ೨೬ ॥

ನಿರಾತಂಕಃ ಸಧರ್ಮಾತ್ಮಾ ದಹನ್ತ್ಯಗ್ನಿರಿವೇಂಧನಂ ।
ನಿಯಮೈಸ್ಸಂಯಮೈಶ್ಚಾನ್ಯೈರುಪವಾಸೈರ್ದ್ವಿಜೋತ್ತಮಾಃ ॥ ೨೭ ॥

---

ಧರ್ಮಾತ್ಮನಾದ, ಕ್ಲೇಶಹಾರಕನಾದ ಕೃಷ್ಣನನ್ನು ಧ್ಯಾನಿಸುತ್ತ, ಕುಳಿತರೆ, ಮಲಗಿದರೆ, ನಡೆದರೆ, ಆ ಮಧುಸೂದನನನ್ನೇ ಧ್ಯಾನಿಸುತ್ತ, ಯೋಗದಿಂದ ನಿತ್ಯವೂ ಆ ಸ್ವಾಮಿಯನ್ನೇ ಆರಾಧಿಸುತ್ತಿದ್ದನು.

೨೪-೨೫. ಸ್ಥಾವರಜಂಗಮಗಳಲ್ಲೆಲ್ಲಾ ಕೇಶವನನ್ನೇ ನೋಡುವನು. ಹಸಿಯದು, ಒಣಗಿದುದು, ಉಳಿದವು, ಎಲ್ಲದರಲ್ಲೂ ಕೇಶವನನ್ನು ನೋಡುವನು. ಎಂದರೆ ಸಮಸ್ತ ಚರಾಚರವಸ್ತುಗಳೂ ಆ ಪರಮಾತ್ಮನ ಸ್ವರೂಪಗಳೇ ಎಂದು ಮನಸ್ಸಿನಲ್ಲಿ ಭಾವಿಸುವನು. ಹೀಗೆ ತಪಸ್ಸುಮಾಡುತ್ತಿರಲು ನೂರು ವರ್ಷಗಳು ಕಳೆದು ಹೋದವು.

೨೬. ಬಹಳವಾದ ವಿಘ್ನಗಳೂ, ಘೋರವಾದ ದರ್ಶನಗಳೂ ನಿತ್ಯವೂ ಅವನಿಗೆ ಕಾಣಿಸಿಕೊಳ್ಳುತ್ತಿದ್ದವು. ಆದರೂ ಆ ಸ್ವಾಮಿಯ ತೇಜಸ್ಸಿನಿಂದ ಅವೆಲ್ಲವನ್ನೂ ಶ್ರಮವಿಲ್ಲದೆ, ಬೆಂಕಿಯು ಕಟ್ಟಿಗೆಯನ್ನು ಸುಡುವಂತೆ ಸುಡುತ್ತಿದ್ದನು.

೨೭-೨೮. ನಿಯಮಗಳಿಂದಲೂ, ಇಂದ್ರಿಯನಿಗ್ರಹದಿಂದಲೂ, ಉಪವಾಸ

ಕ್ಷೀಯಮಾಣಸ್ತು ಸಂಜಾತೋ ದೀಪ್ಯಮಾನಸ್ಸ್ವತೇಜಸಾ ।
ಸೂರ್ಯಪಾವಕಸಂಕಾಶಸ್ತ್ವಂಗ ಏವಂ ಪ್ರದೃಶ್ಯತೇ ॥ ೨೮ ॥

ಏವಂ ತಪಸ್ಸುನಿರತಂ ಧ್ಯಾಯಮಾನಂ ಜನಾರ್ದನಂ ।
ಆವಿರ್ಭೂಯಾಬ್ರವೀದ್ದೇವೋ ವರಂ ವರಯ ಮಾನದ ॥ ೨೯ ॥

ತಂ ಚ ದೃಷ್ಟ್ವಾ ಹೃಷೀಕೇಶಮಂಗಃ ಪರಮನಿರ್ವೃತಃ ।
ತುಷ್ಟಾವ ಪ್ರಣತೋ ಭೂತ್ವಾ ವಾಸುದೇವಂ ಪ್ರಸನ್ನಧೀಃ ॥ ೩೦ ॥

॥ ಅಂಗ ಉವಾಚ ॥

ತ್ವಂ ಗತಿಸ್ಸರ್ವಭೂತಾನಾಂ ಭೂತಭಾವನ ಪಾವನ ।
ಭೂತಾತ್ಮಾ ಸರ್ವಭೂತೇಶೋ ನಮಸ್ತುಭ್ಯಂ ಗುಣಾತ್ಮನೇ ॥ ೩೧ ॥

ಗುಣರೂಗಾಯ ಗುಹ್ಯಾಯ ಗುಣಾತೀತಾಯ ತೇ ನಮಃ ।
ಗುಣಾಯ ಗುಣಕರ್ತ್ರೇ ಚ ಗುಣಾಢ್ಯಾಯ ಗುಣಾತ್ಮನೇ ॥ ೩೨ ॥

ಭವಾಯ ಭವಕರ್ತ್ರೇ ಚ ಭಕ್ತಾನಾಂ ಭವಹಾರಿಣೇ ।
ಭವಾಯ ಭವಗುಹ್ಯಾಯ ನಮೋ ಭವವಿನಾಶಿನೇ ॥ ೩೩ ॥

---

ದಿಂದಲೂ, ಆತನು ಕೃಶನಾಗುತ್ತ ಬಂದನು. ಆದರೆ ದೇಹದ ತೇಜಸ್ಸು ಹೆಚ್ಚಿ ಪ್ರಕಾಶಿಸುತ್ತ, ಸೂರ್ಯ ಅಗ್ನಿಯರಂತೆ ತೇಜೋವಂತನಾಗಿ ಕಾಣುತ್ತಿದ್ದನು.

೨೯. ಹೀಗೆ ತಪಸ್ಸಿನಲ್ಲಿದ್ದು ಜನಾರ್ದನನನ್ನು ಧ್ಯಾನಮಾಡುತ್ತಿರಲು, ಸ್ವಾಮಿಯು ಪ್ರತ್ಯಕ್ಷನಾಗಿ, ಎಲೈ ಮಾನಿಯೇ, ವರವನ್ನು ಕೇಳು ಎಂದನು.

೩೦. ಆ ಸ್ವಾಮಿಯನ್ನು ನೋಡಿ ಅಂಗನು ಬಹುಸಂತೋಷಗೊಂಡು, ಪ್ರಸನ್ನವಾದ ಮನಸ್ಸಿನಿಂದ ಆ ಸ್ವಾಮಿಯನ್ನು ನಮಸ್ಕರಿಸಿ ಸ್ತೋತ್ರಮಾಡಿದನು.

೩೧. ಅಂಗನು ಹೇಳಿದನು:—ಎಲೈ ಪಾವನನಾದ ಸ್ವಾಮಿಯೇ ನೀನೇ ಸರ್ವಪ್ರಾಣಿಗಳಿಗೂ ಗತಿಯು. ಭೂತಗಳೇ ನಿನ್ನ ಶರೀರದಲ್ಲಿವೆ. ನೀನೇ ಸರ್ವ ಭೂತೇಶ. ನಿನಗೆ ನಮಸ್ಕಾರವು.

೩೨-೩೩. ನೀನು ಗುಣರೂಪ, ಗುಹ್ಯ, ಗುಣಾತೀತ, ಇಂತಹ ನಿನಗೆ ನಮಸ್ಕಾರವು. ಗುಣರೂಪಿಯು, ಗುಣಕರ್ತೃವು, ಗುಣಾಢ್ಯನು, ಗುಣಾತ್ಮನು, ಆದ ನಿನಗೆ ನಮಸ್ಕಾರವು. ನೀನೇ ಭವನು, ಸಂಸಾನಕ್ಕೆ ಕರ್ತೃವು. ಭಕ್ತರಿಗೆ ಜನ್ಮ ಮರಣನಾಶಕನು. ಇಂತಹ ಸ್ವಾಮಿಯಾದ ನಿನಗೆ ನಮಸ್ಕಾರವು.

ಯಜ್ಞಾಯ ಯಜ್ಞರೂಪಾಯ ಯಜ್ಞೇಶಾಯ ನಮೋನಮಃ ।
ಯಜ್ಞಕರ್ಮಪ್ರಸಂಗಾಯ ನಮಃ ಶಂಖಧರಾಯ ಚ ॥ ೩೪ ॥

ನಮೋ ಹಿರಣ್ಯವರ್ಣಾಯ ನಮೋ ರಥಾಂಗಧಾರಿಣೇ ।
ಸತ್ಯಾಯ ಸತ್ಯಭಾವಾಯ ಸರ್ವಸತ್ಯಮಯಾಯ ಚ ॥ ೩೫ ॥

ಧರ್ಮಾಯ ಧರ್ಮಕರ್ತ್ರೇ ಚ ಸರ್ವಕರ್ತ್ರೇ ಚ ತೇ ನಮಃ ।
ಧರ್ಮಾಂಗಾಯ ಸುವೀರಾಯ ಧರ್ಮಾಧಾರಾಯ ತೇ ನಮಃ ॥ ೩೬ ॥

ನಮಃ ಪುಣ್ಯಾಯ ಪುತ್ರಾಯ ಹ್ಯಪುತ್ರಾಯ ಮಹಾತ್ಮನೇ ।
ಮಾಯಾಮೋಹವಿನಾಶಾಯ ಸರ್ವಮಾಯಾಕರಾಯತೇ ॥ ೩೭ ॥

ಮಾಯಾಧರಾಯ ಮೂರ್ತಾಯ ತ್ವಮೂರ್ತಾಯ ನಮೋ ನಮಃ ।
ಸರ್ವಮೂರ್ತಿಧರಾಯೈವ ಶಂಕರಾಯ ನಮೋ ನಮಃ ॥ ೩೮ ॥

ಬ್ರಹ್ಮಣೇ ಬ್ರಹ್ಮರೂಪಾಯ ಪರಬ್ರಹ್ಮಸ್ವರೂಪಿಣೇ ।
ನಮಸ್ತೇ ಸರ್ವಧಾಮ್ನೇ ಚ ನಮೋ ಧಾಮಧರಾಯ ಚ ॥ ೩೯ ॥

---

೩೪. ನೀನು ಯಜ್ಞನೂ, ಯಜ್ಞರೂಪನೂ, ಯಜ್ಞಕ್ಕೆ ಒಡೆಯನೂ ಆಗಿದ್ದೀಯೆ. ಯಜ್ಞಕರ್ಮಗಳೆಲ್ಲವೂ ನಿನ್ನ ರೂಪವಾದವು. ನೀನೇ ಶಂಖಧರ, ಇಂತಹ ನಿನಗೆ ನಮಸ್ಕಾರವು.

೩೫-೩೭. ಹಿರಣ್ಯವರ್ಣನೂ, ಚಕ್ರಧಾರಿಯೂ ಆದ ನಿನಗೆ ನಮಸ್ಕಾರವು. ಸತ್ಯರೂಪನೂ, ಸತ್ಯಭಾವನೂ, ಸತ್ಯಮಯನೂ ಆದ ನಿನಗೆ ನಮಸ್ಕಾರವು. ಧರ್ಮಸ್ವರೂಪ, ಧರ್ಮಕರ್ತೃ, ಸರ್ವಕರ್ತೃವಾದ ನಿನಗೆ ನಮಸ್ಕಾರವು. ಧರ್ಮಾಂಗ, ಸುವೀರ, ಧರ್ಮಕ್ಕೆ ಆಧಾರನಾದ ನಿನಗೆ ನಮಸ್ಕಾರವು. ಪುಣ್ಯರೂಪ, ನರಕತಾರಕ, ಪುತ್ರ, ಪುತ್ರರಿಲ್ಲದವನೂ ಆದ ನಿನಗೆ ನಮಸ್ಕಾರವು. ಮಾಯೆಯೆಂಬ ಮೋಹವನ್ನು ನಾಶಮಾಡುವ ಮತ್ತು ಸರ್ವಮಾಯೆಯನ್ನೂ ಉಂಟುಮಾಡುವ ನಿನಗೆ ನಮಸ್ಕಾರವು.

೩೮. ಮಾಯೆಯನ್ನು ಧರಿಸಿರುವವನೂ, ಮೂರ್ತಿಮತ್ತಾದವನೂ, ಮೂರ್ತಿಯನ್ನು ಧರಿಸದವನೂ, ಸರ್ವಮೂರ್ತಿಧರನೂ ಆದ ನಿನಗೆ ನಮಸ್ಕಾರವು.

೩೯. ಬ್ರಹ್ಮ, ಬ್ರಹ್ಮರೂಪವನ್ನು ಧರಿಸಿರುವವನು, ಪರಬ್ರಹ್ಮಸ್ವರೂಪಿ

ಶ್ರೀಮತೇ ಶ್ರೀನಿವಾಸಾಯ ಶ್ರೀಧರಾಯ ನಮೋ ನಮಃ ।
ಕ್ಷೀರಸಾಗರವಾಸಾಯ ಚಾಮೃತಾಯ ಚ ತೇ ನಮಃ ॥ ೪೦ ॥

ಮಹೌಷಧಾಯ ಘೋರಾಯ ಮಹಾಪ್ರಜ್ಞಾಪರಾಯ ಚ ।
ಅಕ್ರೂರಾಯ ಪ್ರಮೇಧ್ಯಾಯ ಮೇಧ್ಯಾನಾಂ ಪತಯೇ ನಮಃ ॥ ೪೧ ॥

ಅನಂತಾಯ ಹ್ಯಶೇಷಾಯ ಚಾನಘಾಯ ನಮೋ ನಮಃ ।
ಆಕಾಶಸ್ಯ ಪ್ರಕಾಶಾಯ ಪಕ್ಷಿರೂಪಾಯ ತೇ ನಮಃ ॥ ೪೨ ॥

ಹುತಾಯ ಹುತಭೋಕ್ತ್ರೇ ಚ ಹವೀರೂಪಾಯ ತೇ ನಮಃ ।
ಬುದ್ಧಾಯ ಬುಧರೂಪಾಯ ಸದಾ ಬುದ್ಧಾಯ ತೇ ನಮಃ ॥ ೪೩ ॥

ಸ್ವಾಹಾಕಾರಾಯ ಶುದ್ಧಾಯ ಹ್ಯವ್ಯಕ್ತಾಯ ಮಹಾತ್ಮನೇ ।
ವ್ಯಾಸಾಯ ವಾಸವಾಯೈವ ವಸುರೂಪಾಯ ತೇ ನಮಃ ॥ ೪೪ ॥

---

ಯಾದ ನಿನಗೆ ನಮಸ್ಕಾರವು. ಸರ್ವತೇಜೋವಂತನೂ, ಎಲ್ಲವನ್ನೂ ಧರಿಸಿರುವವನೂ ಆದ ನಿನಗೆ ನಮಸ್ಕಾರವು.

೪೦. ಶ್ರೀಮಂತ, ಶ್ರೀನಿವಾಸ, ಶ್ರೀಧರನಾದ ನಿನಗೆ ನಮಸ್ಕಾರವು. ಕ್ಷೀರಸಮುದ್ರದಲ್ಲಿ ಮಲಗುವ ಅಮೃತಸ್ವರೂಪನಾದ ನಿನಗೆ ನಮಸ್ಕಾರವು.

೪೧. ಮಹೌಷಧಿಸ್ವರೂಪನಾದ, ಘೋರನಾದ, ಬಹು ಬುದ್ಧಿವಂತನಾದ ಕ್ರೂರನಲ್ಲದ, ಪವಿತ್ರನಾದ, ಪವಿತ್ರಕ್ಕೂ ಒಡೆಯನಾದ ನಿನಗೆ ನಮಸ್ಕಾರವು.

೪೨. ಅಂತರರಹಿತನಾದ, ಪೂರ್ಣನಾದ, ನಿರ್ದುಷ್ಟನಾದ ನಿನಗೆ ನಮಸ್ಕಾರವು. ಆಕಾಶಕ್ಕೆಲ್ಲ ಪ್ರಕಾಶಕನಾದ ಪಕ್ಷಿರೂಪವನ್ನು ಹೊಂದಿರುವ ನಿನಗೆ ನಮಸ್ಕಾರವು,

೪೩. ಹವಿಸ್ಸಿನ ರೂಪ, ಹವಿಸ್ಸನ್ನು ಭಕ್ಷಿಸುಪ ಹೋಮಮಯನಾದ ಬುದ್ಧನೂ, ಬುಧರೂಪನೂ ಆದ, ಸದಾಕಾಲದಲ್ಲೂ ಎಚ್ಚರದಿಂದಿರುವ ನಿನಗೆ ನಮಸ್ಕಾರವು.

೪೪. ಸ್ವಾಹಾಕಾರನು, ಶುದ್ಧನು, ಅವ್ಯಕ್ತನು, ಮಹಾತ್ಮನು, ವ್ಯಾಸನು, ವಾಸವನು, ವಸುವೂ ಆದ ನಿನಗೆ ನಮಸ್ಕಾರವು.

ವಾಸುದೇವಾಯ ವಿಶ್ವಾಯ ವಹ್ನಿರೂಪಾಯ ತೇ ನಮಃ ।
ಹರಯೇ ಕೇವಲಾಯೈವ ವಾಮನಾಯ ನಮೋ ನಮಃ ॥ ೪೫ ॥

ನಮೋ ನೃಸಿಂಹದೇವಾಯ ಸತ್ತ್ವಪಾಲಾಯ ತೇ ನಮಃ ।
ನಮೋ ಗೋವಿಂದ ಗೋಪಾಯ ನಮ ಏಕಾಕ್ಷರಾಯ ಚ ॥ ೪೬ ॥

ನಮಸ್ಸರ್ವಾಕ್ಷರಾಯೈವ ಹಂಸರೂಪಾಯ ತೇ ನಮಃ ।
ತ್ರಿತತ್ತ್ವಾಯ ನಮಸ್ತುಭ್ಯಂ ಪಂಚತತ್ತ್ವಾಯ ತೇ ನಮಃ ॥ ೪೭ ॥

ಪಂಚವಿಂಶತಿತತ್ತ್ವಾಯ ತತ್ತ್ವಾಧಾರಾಯ ವೈ ನಮಃ ।
ಕೃಷ್ಣಾಯ ಕೃಷ್ಣರೂಪಾಯ ಲಕ್ಷ್ಮೀನಾಥಾಯ ತೇ ನಮಃ ॥ ೪೮ ॥

ನಮಃ ಪದ್ಮಪಲಾಶಾಕ್ಷ ಆನಂದಾಯ ಪರಾಯ ಚ ।
ನಮೋ ವಿಶ್ವಂಭರಾಯೈವ ಪಾಪನಾಶಾಯ ವೈ ನಮಃ ॥ ೪೯ ॥

ನಮಃ ಪುಣ್ಯಸುಪುಣ್ಯಾಯ ಸತ್ಯಧರ್ಮಾಯ ತೇ ನಮಃ ।
ನಮೋ ನಮಃ ಶಾಶ್ವತ ಅವ್ಯಯಾಯ
ನಮೋ ನಮಃ ಸರ್ವನಭೋಮಯಾಯ ।
ಶ್ರೀಪದ್ಮನಾಭಾಯ ಮಹೇಶ್ವರಾಯ
ನಮಾಮಿ ತೇ ಕೇಶವಪಾದಪದ್ಮಂ ॥ ೫೦ ॥

---

೪೫. ವಾಸುದೇವ, ವಿಶ್ವ, ವಹ್ನಿರೂಪ, ಹರಿ, ಕೇವಲ, ವಾಮನ, ಇಂತಹ ರೂಪಗಳುಳ್ಳ ನಿನಗೆ ನಮಸ್ಕಾರವು.

೪೬-೪೭. ನೃಸಿಂಹ, ಸತ್ವವನ್ನು ಪಾಲಿಸುವವನು, ಗೋವಿಂದ, ಗೋಪಾಲ, ಏಕಾಕ್ಷರರೂಪ, ಸರ್ವಾಕ್ಷರಮಯ, ಹಂಸರೂಪನಾದ ನಿನಗೆ ನಮಸ್ಕಾರವು. ಬ್ರಹ್ಮ ವಿಷ್ಣು ಶಿವಾತ್ಮಕ ಪೃಥಿವೀ-ಅಪ್ಪು-ತೇಜಸ್ಸು-ವಾಯು-ಆಕಾಶ ಎಂಬ ಪಂಚಭೂತಗಳ ರೂಪನಾದ ನಿನಗೆ ನಮಸ್ಕಾರವು.

೪೮. ಮಹದಹಂಕಾರಾದಿ ಇಪ್ಪತ್ತೈದು ತತ್ವಗಳ ರೂಪನಾದ, ತತ್ವಕ್ಕೆ ಆಧಾರನಾದ, ಕೃಷ್ಣನಾದ, ಕೃಷ್ಣವರ್ಣವುಳ್ಳ, ಲಕ್ಷ್ಮೀನಾಥನಾದ ನಿನಗೆ ನಮಸ್ಕಾರವು.

೪೯. ಪದ್ಮದ ದಳದಂತೆ ಕಣ್ಣುಳ್ಳ, ಆನಂದನಾದ, ಪರನಾದ, ನಿನಗೆ ನಮಸ್ಕಾರವು. ವಿಶ್ವಂಭರನೂ, ಪಾಪನಾಶಕನೂ, ಪುಣ್ಯನೂ, ಸತ್ಯನೂ, ಧರ್ಮರೂಪನೂ ಆದ ನಿನಗೆ ನಮಸ್ಕಾರವು.

೫೦. ಶಾಶ್ವತನಾದ, ಅವ್ಯಯನಾದ, ಆಕಾಶರೂಪಿಯಾದ, ಪದ್ಮನಾಭನಾದ, ಮಹೇಶ್ವರನಾದ ನಿನ್ನ ಪಾದಪದ್ಮಗಳನ್ನು ನಮಸ್ಕರಿಸುತ್ತೇನೆ.

ಆನಂದಕಂದಕ ಮಲಾಪ್ರಿಯ ವಾಸುದೇವ
ಸರ್ವೇಶ ಈಶ ಮಧುಸೂದನ ದೇಹಿ ದಾಸ್ಯಂ ।
ಪಾದೌ ನಮಾಮಿ ತವ ಕೇಶವ ಜನ್ಮ ಜನ್ಮ
ಕೃಪಾಂ ಕುರುಷ್ವ ಮಮ ಶಾನ್ತಿದ ಶಂಖಪಾಣೇ ॥ ೫೧ ॥

ಸಂಸಾರದಾರುಣಹುತಾಶನತಾಪದಗ್ಧಂ
ಪುತ್ರಾದಿಬಂಧುಮರಣೈರ್ಬಹುಶೋಕತಾಪೈಃ ।
ಜ್ಞಾನಾಂಬುದೇನ ಮಮ ಪ್ಲಾವಯ ಪದ್ಮನಾಭ
ದೀನಸ್ಯ ಮಚ್ಛರಣರೂಪ ಭವಸ್ವ ನಾಥ ॥ ೫೨ ॥

ಏವಂ ಸ್ತೋತ್ರಂ ಸಮಾಕರ್ಣ್ಯ ತ್ವಂಗಸ್ಯಾಪಿ ಮಹಾತ್ಮನಃ ।
ದರ್ಶಯಿತ್ವಾ ಸ್ವಕಂ ರೂಪಂ ಘನಶ್ಯಾಮಂ ಮಹೌಜಸಂ ॥ ೫೩ ॥

ಶಂಖಚಕ್ರಗದಾಪಾಣಿಂ ಪದ್ಮಹಸ್ತಂ ಮಹಾಪ್ರಭಂ ।
ವೈನತೇಯಸಮಾರೂಢಮಾತ್ಮರೂಪಂ ಪ್ರದರ್ಶಿತಂ ॥ ೫೪ ॥

---

೫೧. ಆನಂದದ ಮೊಳಕೆಯಾದ ಲಕ್ಷ್ಮೀಪ್ರಿಯನೇ, ವಾಸುದೇವ, ಸರ್ವೇಶನೇ, ಈಶನೇ, ಮಧುಸೂದನನೇ, ನನ್ನನ್ನು ದಾಸನನ್ನಾಗಿ ಮಾಡಿಕೋ. ಜನ್ಮಜನ್ಮದಲ್ಲಿಯೂ ನಿನ್ನ ಪಾದಗಳನ್ನು ನಮಸ್ಕರಿಸುತ್ತೇನೆ. ಶಾಂತಿಕೊಡತಕ್ಕವನೇ, ಶಂಖಪಾಣಿಯೇ, ಕೃಪೆಯನ್ನು ಮಾಡು.

೫೨. ನಾನು ಸಂಸಾರವೆಂಬ ಕ್ರೂರವಾದ ಅಗ್ನಿತಾಪದಿಂದ ಸುಡಲ್ಪಟ್ಟಿದ್ದೇನೆ. ಪುತ್ರನೇ ಮೊದಲಾದ ಬಂಧುಮರಣಗಳ ಬಹುಶೋಕದಿಂದ ಕೂಡಿದ್ದೇನೆ. ಜ್ಞಾನವೆಂಬ ನೀರಿನಿಂದ ನನ್ನನ್ನು ತೋಯಿಸು. ಓ ಪದ್ಮನಾಭನೇ ! ದೀನನಾದ ನನಗೆ ರಕ್ಷಕನಾಗು ಎಂದು ನಾನಾವಿಧವಾಗಿ ಸ್ತೋತ್ರಮಾಡಿದನು.

೫೩-೫೪. ಅಂಗನ ಈ ಸ್ತೋತ್ರವನ್ನು ಕೇಳಿ, ಮೇಘಶ್ಯಾಮದಂತಿರುವ ಒಳ್ಳೆಯ ಶಕ್ತಿಯುಳ್ಳ, ಶಂಖ, ಚಕ್ರ, ಗದಾಪಾಣಿಯಾದ, ಪದ್ಮವನ್ನು ಹಿಡಿದಿರುವ, ಗರುಡಾರೂಢನಾದ ಆತ್ಮರೂಪವನ್ನು ಅವನಿಗೆ ತೋರಿದನು.

ಸರ್ವಾಭರಣಶೋಭಾಂಗಂ ಹಾರಕಂಕಣಕುಂಡಲೈಃ ।
ರಾಜಮಾನಂ ಪರಂ ದಿವ್ಯಂ ನಿರ್ಮಲಂ ವನಮಾಲಯಾ ॥ ೫೫ ॥

ತುಂಗಸ್ಯಾಗ್ರೇ ಹೃಷೀಕೇಶಃ ಶೋಭಮಾನಂ ಮಹಾಪ್ರಭಂ ।
ಶ್ರೀವತ್ಸಾಂಕೇನ ಪುಣ್ಯೇನ ಕೌಸ್ತುಭೇನ ಜನಾರ್ದನಃ ॥ ೫೬ ॥

ದರ್ಶಯಿತ್ವಾ ಸ್ವಕಂ ದೇಹಂ ಸರ್ವದೇವಮಯೋ ಹರಿಃ ।
ಸರ್ವಾಲಂಕಾರಶೋಭಾಢ್ಯಂ ತುಂಗಸ್ಯಾಗ್ರೇ ಜನಾರ್ದನಃ ॥ ೫೭ ॥

ಸ ಉವಾಚ ಮಹಾತ್ಮಾನಂ ತಂ ತುಂಗಮೃಷಿಸತ್ತಮಂ ।
ಭೋ ಭೋ ವಿಪ್ರ ಮಹಾಭಾಗ ಶ್ರೂಯತಾಂ ವಚನಂ ಶುಭಂ ॥ ೫೮ ॥

ಮೇಘಗಂಭೀರಘೋಷೇಣ ಸಮಾಭಾಷ್ಯ ದ್ವಿಜೋತ್ತಮಂ ।
ತಪಸಾ ತೇನ ತುಷ್ಟೋऽಸ್ಮಿ ವರಂ ವರಯ ಶೋಭನಂ ॥ ೫೯ ॥

ತುಷ್ಟಮಾನಂ ಹೃಷೀಕೇಶಂ ತಂ ದೃಷ್ಟ್ವಾ ಕಮಲಾಪತಿಂ ।
ದೀಪ್ಯಮಾನಂ ವಿರಾಜಂತಂ ವಿಶ್ವರೂಪಂ ಜನೇಶ್ವರಂ ॥ ೬೦ ॥

ಪಾದಾಂಬುಜದ್ವಯಂ ತಸ್ಯ ಪ್ರಣಮ್ಯ ಚ ಪುನಃ ಪುನಃ ।
ಹರ್ಷೇಣ ಮಹತಾವಿಷ್ಟಸ್ತಮುವಾಚ ಜನಾರ್ದನಂ ॥ ೬೧ ॥

---

೫೫-೫೭. ಅವನಿಗೆ ತೋರಿಸಿದ ಆ ರೂಪವು ಹಾರ, ಕೈಬಳೆ, ಕುಂಡಲ ಮೊದಲಾದ ಸರ್ವಾಭರಣಗಳಿಂದ ಅಲಂಕೃತವಾಗಿದ್ದಿತು. ದಿವ್ಯವೂ ಉತ್ತಮವೂ ಆದ ವನಮಾಲೆಯನ್ನು ಕಂಠದಲ್ಲಿ ಧರಿಸಿದ್ದನು. ಎದೆಯಲ್ಲಿ ಶ್ರೀವತ್ಸವೆಂಬ ಪುಣ್ಯರೂಪವಾದ ಮಚ್ಚೆಯೂ, ಕೌಸ್ತುಭಮಣಿಯೂ, ಬೆಳಗುತ್ತಿದ್ದವು. ಇಂತಹ ಮನೋಹರವಾದ ದಿವ್ಯರೂಪವನ್ನು ಆತನಿಗೆ ತೋರಿಸಿ ಮೇಘದಂತೆ ದಿವ್ಯವಾದ ಗಂಭೀರಧ್ವನಿಯಿಂದ ಅವನನ್ನು ಕುರಿತು,

೫೮-೫೯. ಎಲೈ ಮಹಾನುಭಾವನಾದ ಬ್ರಾಹ್ಮಣನೇ ಕೇಳು, ನಿನ್ನ ತಪಸ್ಸಿನಿಂದ ನಾನು ಸಂತೋಷಗೊಂಡಿದ್ದೇನೆ. ನಿನಗೆ ಬೇಕಾದ ಉತ್ತಮವಾದ ವರವನ್ನು ಕೇಳಿಕೋ ಎಂದನು.

೬೦-೬೧. ಬಳಿಕ ಅಂಗನು ಸಂತುಷ್ಟನಾಗಿ ಎದುರಿಗೆ ನಿಂತಿರುವ ಆ ವಿಶ್ವರೂಪನಾದ ಕಮಲಾಪತಿಯ ಪಾದಾರವಿಂದಗಳಿಗೆ ನಮಸ್ಕರಿಸಿ ಸಂತೋಷದಿಂದ ಹೀಗೆಂದನು.

**ದಾಸೋಽಹಂ ತವ ದೇವೇಶ ಶಂಖಚಕ್ರಗದಾಧರ ।**
**ವರಂ ಮೇ ದಾತುಕಾಮೋಽಸಿ ದೇಹಿ ತ್ವಂ ವಂಶಜಂ ಸುತಂ ॥ ೬೨ ॥**

**ದಿವಿ ಚೇಂದ್ರೋ ಯಥಾ ಭಾತಿ ಸರ್ವತೇಜಸ್ಸಮನ್ವಿತಃ ।**
**ತಾದೃಶಂ ದೇಹಿ ಮೇ ಪುತ್ರಂ ಸರ್ವಲೋಕಸ್ಯ ರಕ್ಷಕಂ ॥ ೬೩ ॥**

**ಸರ್ವದೇವಪ್ರಿಯಂ ದೇವ ಬ್ರಹ್ಮಣ್ಯಂ ಧರ್ಮಪಂಡಿತಂ ।**
**ದಾತಾರಂ ಜ್ಞಾನಸಂಪನ್ನಂ ಧರ್ಮತೇಜಸ್ಸಮನ್ವಿತಂ ॥ ೬೪ ॥**

**ತ್ರೈಲೋಕ್ಯರಕ್ಷಕಂ ಕೃಷ್ಣ ಸತ್ಯಧರ್ಮಾನುಪಾಲಕಂ ।**
**ಯಜ್ವನಾಮುತ್ತಮಂ ಚೈಕಂ ಶೂರಂ ತ್ರೈಲೋಕ್ಯಭೂಷಣಂ ॥ ೬೫ ॥**

**ಬ್ರಹ್ಮಣ್ಯಂ ವೇದಸಿದ್ಧಾಂಶಂ ಸತ್ಯಸಂಧಂ ಜಿತೇಂದ್ರಿಯಂ ।**
**ಅಜಿತಂ ಸರ್ವಜೇತಾರಂ ವಿಷ್ಣುತೇಜಸ್ಸಮುಪ್ರಭಂ ॥ ೬೬ ॥**

---

೬೨. ಎಲೈ ಶಂಖಚಕ್ರಗದಾಧರನಾದ ದೇವೇಶನೆ, ನಿನಗೆ ದಾಸನಾಗಿದ್ದೇನೆ. ವರವನ್ನು ಕೊಡಲು ಮನಸ್ಸಿದ್ದರೆ ವಂಶವರ್ಧಕನಾದ ಮಗನನ್ನು ಕೊಡು.

೬೩. ಸ್ವರ್ಗದಲ್ಲಿರುವ ಇಂದ್ರನು ಹೇಗೆ ಪ್ರಕಾಶಮಾನನಾಗಿದ್ದಾನೋ ಅಂತಹ ಸರ್ವಲೋಕಕ್ಕೂ ರಕ್ಷಕನಾದ ಮಗನನ್ನು ಕೊಡು.

೬೪-೬೫. ಆತನು ಎಲ್ಲ ದೇವರಲ್ಲೂ ಪ್ರೀತಿಯುಳ್ಳವನಾಗಿರಬೇಕು. ಬ್ರಹ್ಮನಿಷ್ಠನಾಗಿರಬೇಕು, ಧರ್ಮದಲ್ಲಿ ಜ್ಞಾನಿಯಾಗಿರಬೇಕು. ದಾನಿಯೂ, ಜ್ಞಾನಸಂಪನ್ನನೂ ಆಗಿರಬೇಕು. ಧರ್ಮವೂ, ತೇಜಸ್ಸೂ ಆತನಲ್ಲಿರಬೇಕು. ಮೂರು ಲೋಕಕ್ಕೂ ರಕ್ಷಕನಾಗಿರಬೇಕು. ಸತ್ಯ, ಧರ್ಮಗಳನ್ನು ಪಾಲಿಸಬೇಕು. ಯಾಜ್ಞಿಕರಲ್ಲಿ ಉತ್ತಮನಾಗಿರಬೇಕು. ಶೂರನೂ, ತ್ರೈಲೋಕ್ಯಭೂಷಣನೂ ಆಗಿರಬೇಕು. ಇಂತಹ ಪುತ್ರನನ್ನು ಅನುಗ್ರಹಿಸು.

೬೬-೬೮. ಮತ್ತು ಆ ಪುತ್ರನು ಬ್ರಹ್ಮವಾದಿ, ವೇದದಲ್ಲಿ ಸಿದ್ಧಿಪಡೆದವನು, ಸತ್ಯಸಂಧ, ಜಿತೇಂದ್ರಿಯ, ಜಯಿಸಲಸಾಧ್ಯ, ಎಲ್ಲರನ್ನೂ ಜಯಿಸುವವನು, ವಿಷ್ಣುವಿನ

ವೈಷ್ಣವಂ ಪುಣ್ಯಕರ್ತಾರಂ ಪುಣ್ಯಜಂ ಪುಣ್ಯಲಕ್ಷಣಂ ।
ಶಾಂತಂ ತು ತಪಸೋಪೇತಂ ಸರ್ವಶಾಸ್ತ್ರವಿಶಾರದಂ ॥ ೬೭ ॥

ಸುಶೀಲಂ ಸರ್ವಧರ್ಮಜ್ಞಂ ಭವತೋ ಗುಣಸಂಯುತಂ ।
ಈದೃಶಂ ದೇಹಿ ಮೇ ಪುತ್ರಂ ದಾತುಕಾಮೋ ಯದಾ ವರಂ ॥ ೬೮ ॥

॥ ವಾಸುದೇವ ಉವಾಚ ॥

ಏಭಿರ್ಗುಣೈಸ್ಸಮೋಪೇತಸ್ತವ ಪುತ್ರೋ ಭವಿಷ್ಯತಿ ।
ಅತ್ರಿವಂಶಸ್ಯ ವೈ ಧರ್ತಾ ವಿಶ್ವಸ್ಯಾಸ್ಯ ಮಹಾಮತೇ ॥ ೬೯ ॥

ತೇಜಸಾ ಯಶಸಾ ಪುಣ್ಯೈಃ ಪಿತರಂ ಚೋದ್ಧರಿಷ್ಯತಿ ।
ಉದ್ಧರಿಷ್ಯತಿ ಯಸ್ಸತ್ಯೈಃ ಪಿತರಂ ಚ ಪಿತಾಮಹಂ ॥ ೭೦ ॥

ಭರ್ವಾ ಪ್ರಾಪ್ಸ್ಯಸಿ ಮೇ ಸರ್ವಂ ತದ್ವಿಷ್ಣೋಃ ಪರಮಂ ಪದಂ ।
ಇತ್ಯುಕ್ತ್ವಾ ದೇವದೇವೇಶಸ್ತಮಂಗಂ ಪ್ರತಿ ಸ ದ್ವಿಜಃ ॥ ೭೧ ॥

---

ತೇಜಸ್ಸುಳ್ಳವನು, ವಿಷ್ಣುಭಕ್ತ, ಪುಣ್ಯಮಾಡುವವನು, ಶಾಂತ, ತಪಸ್ವಿ, ಶಾಸ್ತ್ರಜ್ಞ, ಮೊದಲಾದ ಗುಣಗಳುಳ್ಳವವಾಗಿರಬೇಕು. ನನ್ನನ್ನು ಅನುಗ್ರಹಿಸಬೇಕೆಂದು ನಿನಗೆ ಇಚ್ಛೆಯಿದ್ದರೆ ಒಳ್ಳೆಯ ಶೀಲವುಳ್ಳ, ಸರ್ವಧರ್ಮವನ್ನೂ ಬಲ್ಲ, ನಿನ್ನ ಗುಣಗಳಿಂದ ಕೂಡಿದ ಅಂತಹ ಪುತ್ರನನ್ನು ಕೊಡು ಎಂದನು.

೬೯. ವಾಸುದೇವನು ಹೇಳಿದನು :—ಎಲೈ ಅಂಗನೇ, ನಿನಗೆ ಅತ್ರಿವಂಶವನ್ನು ಉದ್ಧಾರಮಾಡುವ, ಪ್ರಪಂಚವನ್ನು ಧರಿಸುವ, ನೀನು ಕೋರಿದ ಗುಣಗಳಿಂದ ಗಳಿಂದ ಕೂಡಿದ ಮಗನು ಆಗುತ್ತಾನೆ.

೭೦. ಶಕ್ತಿಯಿಂದಲೂ, ಯಶಸ್ಸಿನಿಂದಲೂ, ಪುಣ್ಯದಿಂದಲೂ, ತಂದೆಯನ್ನು ಉದ್ಧಾರಮಾಡುತ್ತಾನೆ. ಯಾವನು ಸತ್ಯದಿಂದ ತಂದೆಯನ್ನೂ, ತಾತನನ್ನೂ ಉದ್ಧಾರಮಾಡುತ್ತಾನೋ ಅಂತಹ ಪುತ್ರನನ್ನೇ ಹೊಂದುತ್ತೀಯೆ.

೭೧. ನನ್ನ ಎಲ್ಲಾ ಗುಣಗಳುಳ್ಳ ಮಗನನ್ನು ಹೊಂದಿ ಕೊನೆಗೆ ನನ್ನ ಸ್ಥಾನವನ್ನು ನೀನು ಹೊಂದುತ್ತೀಯೆ.

**ಕಸ್ಯಚಿತ್ಪುಣ್ಯವೀರ್ಯಸ್ಯ ಪುಣ್ಯಾಂ ಕನ್ಯಾಂ ವಿವಾಹಯ ।**
**ತಸ್ಯಾಮುತ್ಪಾದಯ ಸುತಂ ಪುಣ್ಯಂ ಪುಣ್ಯಾವಹಂ ಪ್ರಿಯಂ ॥ ೭೨ ॥**

**ಸ ಭವಿಷ್ಯತಿ ಧರ್ಮಾತ್ಮಾ ಮತ್ಪ್ರಸಾದಾನ್ಮಹಾಮುನೇ ।**
**ಸರ್ವಜ್ಞಃ ಸರ್ವವೇತ್ತಾ ಚ ಯಾದೃಶೋ ವಾಂಛಿತಸ್ತ್ವಯಾ ।**
**ಏವಂ ವರಂ ತತೋ ದತ್ವಾ ತ್ವಂತರ್ಧಾನಂ ಗತೋ ಹರಿಃ ॥ ೭೩ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಅಂಗವರಪ್ರದಾನಂ ನಾಮ ಏಕತ್ರಿಂಶೋಽಧ್ಯಾಯಃ**



---

೭೨. ಈರೀತಿ ಹೇಳಿ ಸ್ವಾಮಿಯು ಮತ್ತೆ ಆ ಅಂಗನನ್ನು ಕುರಿತು ನೀನು ಪುಣ್ಯವಂತಳಾದ ಓರ್ವ ಕನ್ಯೆಯನ್ನು ಮದುವೆಯಾಗು. ಆಕೆಯಲ್ಲಿ ಪುಣ್ಯವಂತನಾದ ಮತ್ತು ಪುಣ್ಯವನ್ನು ಮಾಡುವ ಮಗನನ್ನು ಉತ್ಪತ್ತಿಮಾಡು.

೭೩. ಆ ಮಗನು ನನ್ನ ಅನುಗ್ರಹದಿಂದ ಧರ್ಮಾತ್ಮನಾಗುತ್ತಾನೆ. ನೀನು ಎಂತಹವನನ್ನು ಅಪೇಕ್ಷಿಸಿದೆಯೋ ಅಂತಹ ಸರ್ವಜ್ಞನೂ, ಸರ್ವವೇತ್ತನೂ ಆದ ಮಗನನ್ನು ಹೊಂದುತ್ತೀಯೆ ಎಂದು ವರವನ್ನು ಕೊಟ್ಟು ಅನಂತರ ಹರಿಯು ಅಂತ ರ್ಧಾನನಾದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನನ ಚರಿತ್ರೆಯಲ್ಲಿ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ದ್ವಾತ್ರಿಂಶೋಽಧ್ಯಾಯಃ

॥ ಋಷಯ ಊಚುಃ ॥

ಶಪ್ತಾ ಗಂಧರ್ವಮುಖ್ಯೇನ ಸುಶಂಖೇನ ಮಹಾತ್ಮನಾ ।
ತಸ್ಯಾಶ್ಶಾಪಂ ಕಥಂ ಜಾತಃ ಕಿಂ ಕಿಂ ಕರ್ಮ ಕೃತಂ ತಯಾ ॥ ೧ ॥

ಸಾ ಲೇಭೇ ಕೀದೃಶಂ ಪುತ್ರಂ ತಸ್ಯ ಶಾಪಾದ್ದ್ವಿದಾಂ ವರ ।
ಸುನೀಥಾಯಾಶ್ಚರಿತ್ರಂ ತು ತ್ವಂ ನೋ ವಿಸ್ತರತೋ ವದ ॥ ೨ ॥

॥ ಸೂತ ಉವಾಚ ॥

ಸುಶಂಖೇನಾಪಿ ತೇನೈವ ಸಾ ಶಪ್ತಾ ತನುಮಧ್ಯಮಾ ।
ಪಿತುಃ ಸ್ಥಾನಂ ಗತಾ ಸಾ ತು ಸುನೀಥಾ ದುಃಖಪೀಡಿತಾ ॥ ೩ ॥

---

## ಮೂವತ್ತೆರಡನೆಯ ಅಧ್ಯಾಯ

೧. ಋಷಿಗಳು ಹೇಳಿದರು:—ಸುನೀಥೆಯು ಸುಶಂಖನಿಂದ ಶಾಪಹೊಂದಿದ ಮೇಲೆ ಆ ಶಾಪದಿಂದೇನಾದಳು? ಹೇಗೆ ಹುಟ್ಟಿದಳು? ಅಂತೆಯೇ ಏನು ಮಾಡಿದಳು.

೨. ಅವನ ಶಾಪದಿಂದ ಎಂಥ ಮಗನನ್ನು ಸುನೀಥೆಯು ಪಡೆದಳು? ಸುನೀಥೆಯ ಚರಿತ್ರೆಯನ್ನು ನಮಗೆ ವಿಸ್ತಾರವಾಗಿ ಹೇಳು ಎಂದು ಕೇಳಲು,

೩. ಸೂತನು ಹೇಳಿದನು:—ಎಲೈ ಋಷಿಗಳೇ ಕೇಳಿ, ಸುಶಂಖನಿಂದ ಶಾಪ ಹೊಂದಿದ ಆ ಸುನೀಥೆಯು ದುಃಖದಿಂದ ತಂದೆಯಬಳಿಗೆ ಹೋಗಿ,

ಸ್ವಚರಿತ್ರಂ ತದಾ ಸರ್ವಂ ಪಿತರಂ ಪ್ರತಿ ಚಾಬ್ರವೀತ್ ।
ಶ್ರುತವಾನ್ ಸೋऽಪಿ ಧರ್ಮಾತ್ಮಾ ಮೃತ್ಯುರ್ಧರ್ಮವತಾಂ ವರಃ ॥ ೪ ॥

ತಾಮುವಾಚ ಸುನೀಥಾಂ ತು ಸುತಾಂ ಶಪ್ತಾಂ ಮಹಾತ್ಮನಾ ।
ಭವತೀ ದುಷ್ಕೃತಂ ಪಾಪಂ ಧರ್ಮತೇಜಃಪ್ರಣಾಶನಂ ॥ ೫ ॥

ಕಸ್ಮಾತ್ಕೃತವತೀ ಭದ್ರೇ ಮುನೇಸ್ತಸ್ಯ ಹಿ ತಾಡನಂ ।
ವಿರುದ್ಧಂ ಸರ್ವಲೋಕಸ್ಯ ಭವತ್ಯಾ ಪರಿಕಲ್ಪಿತಂ ॥ ೬ ॥

ಕಾಮಕ್ರೋಧವಿಹೀನಂ ತಂ ಸುಶಾಂತಂ ಧರ್ಮವತ್ಸಲಂ ।
ತಪೋಮಾರ್ಗವಿಲಗ್ನಂ ಚ ಪರಬ್ರಹ್ಮಣಿ ಸಂಸ್ಥಿತಂ ॥ ೭ ॥

ತಮೇವ ಘಾತಯೇದ್ಯೋ ವೈ ತಸ್ಯ ಪಾಪಂ ಶೃಣುಷ್ವ ಹಿ ।
ಪಾಪಾತ್ಮಾ ಜಾಯತೇ ಪುತ್ರಿ ಕಲ್ಬಿಷಂ ಭುಂಜತೇ ಸ ಹಿ ॥ ೮ ॥

ತಾಡಯಂತಂ ತಾಡಯೇದ್ಯಃ ಕ್ರೋಶನ್ತಂ ಕ್ರೋಶಯೇತ್ಪುನಃ ।
ತಸ್ಯ ಪಾಪಂ ಸ ವೈ ಭುಂಕ್ತೇ ತಾಡಿತಸ್ಯ ನ ಸಂಶಯಃ ॥ ೯ ॥

---

೪-೬. ತಾನು ಮಾಡಿದುದೆಲ್ಲವನ್ನೂ ತಂದೆಗೆ ಹೇಳಿದಳು. ಧರ್ಮವಂತನಾದ ಆತನು ಅದೆಲ್ಲವನ್ನೂ ಕೇಳಿ ಮಹಾತ್ಮನಿಂದ ಶಾಪಹೊಂದಿದ ಆಕೆಯನ್ನು ಕುರಿತು ನೀನು ಆತನನ್ನು ಹೊಡೆದು ತೊಂದರೆಪಡಿಸಿರುವೆ. ಆ ಹಿಂಸೆಯು ಧರ್ಮನಾಶಕವೂ ಸರ್ವಲೋಕವಿರುದ್ಧವೂ ಆಗಿದೆ,

೭-೮. ಕಾಮಕ್ರೋಧರಹಿತನಾಗಿ, ಶಾಂತನೂ, ಧರ್ಮಿಯೂ ಆಗಿ ತಪಸ್ಸಿನಲ್ಲಿ ಆಸಕ್ತನಾಗಿ, ಪರಬ್ರಹ್ಮನಲ್ಲಿ ಲೀನನಾಗಿರುವ ಮನುಷ್ಯನನ್ನು ಹೊಡೆದರೆ ಅವನಿಗೆ ಬರುವ ಪಾಪವನ್ನು ಹೇಳುತ್ತೇನೆ, ಕೇಳು ၊. ಅವನು ಪಾಪಿಯಾಗಿ ಹುಟ್ಟಿ ಪಾಪಕರ್ಮದ ಫಲವನ್ನು ಅನುಭವಿಸುತ್ತಾನೆ.

೯. ಹೊಡೆದವನನ್ನು ಹೊಡೆದರೆ, ಬೈದವನನ್ನು ಬೈದರೆ, ಹೊಡೆದವನ, ಬೈಯಿಸಿಕೊಂಡವನ ಪಾಪವನ್ನು, ಹೊಡೆದವನು, ಬೈಯಿಸಿಕೊಂಡವನು ಅನುಭವಿಸುತ್ತಾನೆ ಸಂಶಯವಿಲ್ಲ.

ಸ ವೈ ಶಾಂತಃ ಸಂಜಿತಾತ್ಮಾ ತಾಡಯಂತಂ ಚ ತಾಡಯೇತ್ ।
ನಿರ್ದೋಷಂ ಪ್ರತಿ ಯೇನಾಪಿ ತಾಡನಂ ಚ ಕೃತಂ ಸುತೇ ॥ ೧೦ ॥

ಪಶ್ಚಾನ್ಮೋಹೇನ ಪಾಪೇನ ನಿರ್ದೋಷೋಪಿ ನ ತಾಡಯೇತ್ ।
ಪಾಪಂ ಕರ್ತುಶ್ಚ ಯತ್ಪಾಪಂ ನಿರ್ದೋಷಂ ಪ್ರತಿ ಗಚ್ಛತಿ ॥ ೧೧ ॥

ತಾಡನಂ ನೈವ ತಸ್ಮಾದ್ಧಿ ಕಾರ್ಯಂ ದೋಷವತೋಪಿ ಚ ।
ದುಷ್ಕೃತಂ ಚ ಮಹತ್ಪುತ್ರಿ ತ್ವಯೈವಂ ಪರಿಪಾಲಿತಂ ॥ ೧೨ ॥

ಶಪ್ತಾ ತೇನಾಪಿ ಪಶ್ಚಾಚ್ಚ ತಸ್ಮಾತ್ಪುಣ್ಯಂ ಸಮಾಚರ ।
ಸತಾಂ ಸಂಗಮಮಾಸಾದ್ಯ ಸದೈವ ಪರಿವರ್ತಯ ॥ ೧೩ ॥

ಯೋಗಧ್ಯಾನೇನ ದಾನೇನ ಪರಿವರ್ತಯ ನಿತ್ಯಶಃ ।
ಸತಾಂ ಸಂಗೋ ಮಹಾಪುಣ್ಯೋ ಬಹುಕ್ಷೇಮಪ್ರದಾಯಕಃ ॥ ೧೪ ॥

---

೧೦-೧೧. ಅಲ್ಲದೆ ಆತನು ಶಾಂತನು, ಜಿತೇಂದ್ರಿಯನು, ಹೊಡೆಯುವವನನ್ನು ಹೊಡೆಯುವುದಿಲ್ಲ. ದೋಷಿಯಲ್ಲದವನನ್ನು ಯಾವನಾದರೂ ಹೊಡೆದರೆ ಬದಲಾಗಿ ಅವನನ್ನೂ ಹೊಡೆಯಬಾರದು. ಹಾಗೆ ಹೊಡೆದರೆ ದೋಷವಿಲ್ಲದಿದ್ದರೂ ಅವನಿಗೆ ದೋಷಿಯ ಪಾಪವು ಬರುತ್ತದೆ.

೧೨. ಆದುದರಿಂದ ಹೊಡೆದವನು ದೋಷಿಯಾಗಿ ತಾನು ನಿರ್ದೋಷಿಯಾಗಿದ್ದರೂ ಹೊಡೆದವನನ್ನು ಪ್ರತಿಯಾಗಿ ಹೊಡೆಯಬಾರದು. ಆದರಿಂದ ಬಹುಪಾಪ ಬರುತ್ತದೆ. ನೀನು ಅದನ್ನು ನೋಡದೆ ಹೊಡದೆ.

೧೩. ಕಡೆಗೆ ಅವನು ಸಹಿಸಲಾರದೆ ನಿನ್ನನ್ನು ಶಪಿಸಿದನು. ಅದುದರಿಂದ ಪುಣ್ಯವನ್ನು ಆಚರಿಸು. ಯಾವಾಗಲೂ ಸತ್ಪುರುಷರ ಸಹವಾಸದಲ್ಲಿರು. ಅವರಂತೆ ಮಾಡು.

೧೪. ನಿತ್ಯವೂ ಯೋಗದಿಂದಲೂ, ಧ್ಯಾನಮಾಡುವುದರಿಂದಲೂ, ದಾನ ಮಾಡುವುದರಿಂದಲೂ ಪುಣ್ಯಸಂಪಾದನೆ ಮಾಡು. ಸತ್ಪುರುಷರ ಸಹವಾಸವು ಮಹಾ ಪುಣ್ಯವನ್ನು ಮಾಡುತ್ತದೆ. ಹೆಚ್ಚಾದ ಕ್ಷೇಮವನ್ನು ಕೊಡುತ್ತದೆ. ಸತ್ಪುರುಷರ ಸಹವಾಸದ ಗುಣದ ಮಹಿಮೆಯನ್ನು ಹೇಳುವೆನು, ಕೇಳು.

**ಬಾಲೇ ಪಶ್ಯ ಸುದೃಷ್ಟಾನ್ತಂ ಸತಾಂ ಸಂಗಸ್ಯ ಯದ್ಗುಣಂ ।**
**ಅಪಾಂ ಸಂಸ್ಪರ್ಶನಾತ್ ಸ್ನಾನಾತ್ಪಾನಾದ್ದರ್ಶನತೋಽಪಿ ವಾ ॥ ೧೫ ॥**

**ಮುನಯಸ್ಸಿದ್ಧಿಮಾಯಾಂತಿ ಬಾಹ್ಯಾಭ್ಯಾನ್ತರಕ್ಷಾಳಿತಾಃ ।**
**ಆಯುಷ್ಮಂತೋ ಭವಂತ್ಯೇತೇ ಲೋಕಾಸ್ಸರ್ವೇ ಚರಾಚರಾಃ ॥ ೧೬ ॥**

**ಅಪಿ ಸಂತೋಷಶೀಲಶ್ಚ ಮೃದುಗಾಮೀ ಪ್ರಿಯಂಕರಃ ।**
**ನಿರ್ಮಲೋ ರಸವಾಂಶ್ಚಾಸೌ ಪುಣ್ಯವೀರ್ಯೋ ಮಲಾಪಹಃ ॥ ೧೭ ॥**

**ತಥಾ ಶಾಂತೋ ಭವೇತ್ಪುತ್ರೀ ಸರ್ವಸೌಖ್ಯಪ್ರದಾಯಕಃ ।**
**ಯಥಾ ವಹ್ನಿಪ್ರಸಂಗಾಚ್ಚ ಮಲಂ ತ್ಯಜತಿ ಕಾಂಚನಂ ॥ ೧೮ ॥**

**ತಥಾ ಸತಾಂ ಹಿ ಸಂಸರ್ಗಾತ್ಪಾಪಂ ತ್ಯಜತಿ ಮಾನವಃ ।**
**ಸತ್ಯವಹ್ನಿಪ್ರದೀಪ್ತಶ್ಚ ಪ್ರಜ್ವಲೇತ್ಪುಣ್ಯತೇಜಸಾ ॥ ೧೯ ॥**

---

೧೫-೧೬. ತೀರ್ಥದ ಸ್ಪರ್ಶ, ಸ್ನಾನ, ಪಾನ, ದರ್ಶನ ಇವುಗಳಿಂದ ಋಷಿಗಳು ಒಳಗೂ, ಹೊರಗೂ ಮಲವನ್ನು (ಕೊಳೆ) ಕಳೆದುಕೊಂಡು ಶುದ್ಧರೂ ಆಯುಷ್ಮಂತರೂ ಆಗುತ್ತಾರೆ. ಅವರೇ ಅಲ್ಲ. ಚರಾಚರಗಳಲ್ಲಿ ಯಾರೇ ಆದರೂ ಹಾಗೆಯೇ ಆಗುತ್ತಾರೆ.

೧೭. ತೀರ್ಥಸ್ನಾನಾದಿಗಳನ್ನು ಮಾಡುವ ಮನುಷ್ಯನು ಸಂತೋಷವುಳ್ಳವನೂ ಯೋಚನೆಮಾಡಿ ಕೆಲಸಮಾಡುವವನೂ, ಪ್ರೀತಿಯಿಂದ ಕೆಲಸಮಾಡುವವನೂ, ನಿರ್ಮಲನೂ, ಪುಷ್ಟಿಕಾಯನೂ, ಪುಣ್ಯಶಾಲಿಯೂ, ಪಾಪನಾಶಕನೂ, ಶಾಂತನೂ ಸೌಖ್ಯದಾಯಕನೂ ಆಗುತ್ತಾನೆ.

೧೮. ಬೆಂಕಿಯಲ್ಲಿ ಚಿನ್ನವನ್ನು ಕರಗಿಸುವುದರಿಂದ ತನ್ನ ಕೊಳೆಯನ್ನು ಅದು ಹೇಗೆ ಬಿಡುತ್ತದೆಯೋ ಹಾಗೆ ಸತ್ಪುರುಷರ ಸಂಸರ್ಗದಿಂದ ಮನುಜನು ಪಾಪವನ್ನು ತ್ಯಜಿಸಿ ಶುದ್ಧನಾಗುತ್ತಾನೆ.

೧೯-೨೦. ಸತ್ಯವೆಂಬ ಬೆಂಕಿಯಿಂದ ಪ್ರಕಾಶಮಾನನಾಗಿ ಪುಣ್ಯವೆಂಬ ತೇಜಸ್ಸಿನಿಂದ ಉರಿಯುತ್ತಾನೆ. ಸತ್ಯದಿಂದ ಕಾಂತಿಯುಳ್ಳವನಾಗುತ್ತಾನೆ. ಜ್ಞಾನ

ಸತ್ಯೇನ ದೀಪ್ತಿಮಾಂಶ್ಚೈವ ಜ್ಞಾನೇನಾಪಿ ಸುನಿರ್ಮಲಃ ।
ಅತ್ಯುಷ್ಣೋ ಧ್ಯಾನಭಾವೇನ ಹ್ಯಸ್ಪೃಶ್ಯಃ ಪಾಪಜೈರ್ನರೈಃ ॥ ೨೦ ॥

ಸತ್ಯವಹ್ನೇಃ ಪ್ರಸಂಗಾಚ್ಚ ಪಾಪೇಂಧನಂ ದಿಧಕ್ಷತಿ ।
ತಸ್ಮಾತ್ಸತ್ಯಸ್ಯ ಸಂಸರ್ಗಃ ಕರ್ತವ್ಯೋ ನಾನ್ಯಥಾ ತ್ವಯಾ ॥ ೨೧ ॥

ತಸ್ಮಾತ್ಪುತ್ರಿ ಮಹಾಭಾಗೇ ಚಿಂತಯಾಧೋಕ್ಷಜಂ ಹರಿಂ ।
ಪಾಪಭಾವಂ ಪರಿತ್ಯಜ್ಯ ಪುಣ್ಯಮೇವ ಸಮಾಶ್ರಯ ॥ ೨೨ ॥

॥ ಸೂತ ಉವಾಚ ॥

ಏವಂ ಪಿತ್ರಾ ಸುನೀಥಾ ಸಾ ದುಃಖಿತಾ ಪ್ರವಿಬೋಧಿತಾ ।
ನಮಸ್ಕೃತ್ಯ ಪಿತುಃ ಪಾದೌ ಸಾ ಗತಾ ನಿರ್ಜನಂ ವನಂ ॥ ೨೩ ॥

ಕಾಮಕ್ರೋಧೌ ಪರಿತ್ಯಜ್ಯ ಬಾಲ್ಯಭಾವಂ ತಪಸ್ವಿನೀ ।
ಮೋಹದ್ರೋಹೌ ಚ ಮಾಯಾಂ ಚ ತ್ಯಕ್ತ್ವಾ ಚೈಕಾಂತಮಾಸ್ಥಿತಾ ॥೨೪॥

ತಸ್ಯಾಸ್ಸಖ್ಯಸ್ಸಮಾಜಗ್ಮೂ ರಂಭಾದ್ಯಾಸ್ತಾಸ್ತಪೋನ್ವಿತಾಃ ।
ದದೃಶುಸ್ತಾಂ ವಿಶಾಲಾಕ್ಷ್ಯಃ ಸುನೀಥಾಂ ದುಃಖಭಾಗಿನೀಂ ॥ ೨೫ ॥

---

ದಿಂದ ನಿರ್ಮಲನಾಗುತ್ತಾನೆ. ಧ್ಯಾನದಿಂದ ಅತ್ಯುಷ್ಣನಾಗಿ ಪಾಪಿಗಳಿಂದ ಮುಟ್ಟಲು ಅಸಾಧ್ಯನಾಗುತ್ತಾನೆ.

೨೧. ಸತ್ಯವೆಂಬ ಬೆಂಕಿಯಿಂದದೆಶೆಯಿಂದ ಪಾಪವೆಂಬ ಕಟ್ಟಿಗೆಯನ್ನು ಸುಡುತ್ತಾನೆ. ಆದುದರಿಂದ ಯಾವಾಗಲೂ ಸತ್ಯವನ್ನು ಆಚರಿಸು. ಬೇರೆಯದನ್ನು ಮಾಡಬೇಡ.

೨೨. ಆದುದರಿಂದ ಅಮ್ಮಾ, ಶ್ರೀಹರಿಯನ್ನು ಧ್ಯಾನಿಸು. ಪಾಪಕೆಲಸವನ್ನು ಬಿಟ್ಟು, ಪುಣ್ಯಕೆಲಸವನ್ನು ಮಾಡು. ಎಂದು ಉಪದೇಶಮಾಡಿದನು.

೨೩-೨೪. ಸೂತನು ಹೇಳುತ್ತಾನೆ:—ತಂದೆಯು ಹೀಗೆ ಬುದ್ಧಿಹೇಳಲು ದುಃಖಗೊಂಡ ಆ ಸುನೀಥೆಯು ಆತನಿಗೆ ನಮಸ್ಕರಿಸಿ, ಜನಸಂಚಾರವಿಲ್ಲದ ವನಕ್ಕೆ ಹೋಗಿ, ಕಾಮಕ್ರೋಧಗಳನ್ನೂ, ಬಾಲಚಾಪಲ್ಯವನ್ನೂ, ಮೋಹದ್ರೋಹಗಳನ್ನೂ ಮಾಯೆಯನ್ನೂ ಬಿಟ್ಟು, ತಪಸ್ಸುಮಾಡುತ್ತಾ ಏಕಾಂತದಲ್ಲಿದ್ದಳು.

೨೫-೨೬. ತಪಸ್ವಿನಿಯರಾದ ರಂಭಾದಿಗಳಾದ ಆಕೆಯ ಸಖಿಯರು ಬಂದು, ದುಃಖಭಾಗಿನಿಯಾದ ಆಕೆಯನ್ನು ನೋಡಿ, ಆವಳ ಸಮೀಪವನ್ನೈದಿ ಅಮ್ಮ, ನಿನಗೆ

**ಧ್ಯಾಯಂತೀಂ ಚಿಂತಯಾನಾಂ ತಾಮೂಚುಸ್ತಾಸ್ಸಮುಪಾಗತಾಃ ।**
**ಕಸ್ಮಾಚ್ಚಿಂತಸಿ ಭದ್ರಂ ತೇ ತ್ವನಯಾ ಚಿಂತಯಾನ್ವಿತಾ ॥ ೨೬ ॥**

**ಸಂತಾಪಕಾರಣಂ ಬ್ರೂಹಿ ಚಿಂತಾ ದುಃಖಪ್ರದಾಯಿನೀ ।**
**ಏಕೈವ ಸಾರ್ಥಕಾ ಚಿಂತಾ ಧರ್ಮಸ್ಯಾರ್ಥೇ ವಿಚಿಂತ್ಯತೇ ॥ ೨೭ ॥**

**ದ್ವಿತೀಯಾ ಸಾರ್ಥಕಾ ಚಿಂತಾ ಯೋಗಿನಾಂ ಧರ್ಮನಂದಿನೀ ।**
**ಅನ್ಯಾ ಚಾನರ್ಥಕಾ ಚಿಂತಾ ತಾಂ ನೈವ ಪರಿಕಲ್ಪಯೇತ್ ॥ ೨೮ ॥**

**ಕಾಮನಾಶಕರೀ ಚಿಂತಾ ಬಲತೇಜಃಪ್ರಣಾಶಿನೀ ।**
**ನಾಶಯೇತ್ಸರ್ವಸೌಖ್ಯಂ ತು ರೂಪಹಾನಿಂ ವಿದರ್ಶಯೇತ್ ॥ ೨೯ ॥**

**ತೃಷ್ಣಾಮೋಹೌ ತಥಾ ಲೋಭಮೇತಾಂಶ್ಚಿಂತಾ ಹಿ ಸ್ರಾಪಯೇತ್ ।**
**ಪಾಪಮುತ್ಪಾದಯೇಚ್ಚಿಂತಾ ಚಿಂತಿತಾ ಚ ದಿನೇ ದಿನೇ ॥ ೩೦ ॥**

**ಚಿಂತಾ ವ್ಯಾಧಿಪ್ರಕಾಶಾಯ ನರಕಾಯ ಪ್ರಕಲ್ಪಯೇತ್ ।**
**ತಸ್ಮಾಚ್ಚಿಂತಾಂ ಪರಿತ್ಯಜ್ಯ ಚಾನುವರ್ತಸ್ವ ಶೋಭನೇ ॥ ೩೧ ॥**

---

ಮಂಗಳವಾಗಲಿ. ನೀನು ಚಿಂತೆಯಿಂದ ಕೂಡಿರುವಂತಿದೆ ಏನುಕಾರಣ. ಧ್ಯಾನಮಾಡುತ್ತಿರುವೆ?

೨೭. ನಿನ್ನ ಸಂತಾಪಕ್ಕೆ ಕಾರಣವನ್ನು ಹೇಳು, ಚಿಂತೆಯು ದುಃಖವನ್ನು ಕೊಡುತ್ತದೆ. ಧರ್ಮದ ವಿಷಯದಲ್ಲಿ ಮಾಡುವ ಚಿಂತೆ ಮಾತ್ರ ಸಾರ್ಥಕವಾದುದು.

೨೮. ಎರಡನೆಯ ಚಿಂತೆಯು ಯೋಗಿಗಳಗೆ ಸೇರಿದ್ದು. ಅದು ಪರಮಾತ್ಮನ ಸಂಬಂಧವಾದದ್ದು. ಅವುಗಳಹೊರತು ಮಿಕ್ಕಚಿಂತೆಗಳು ಅಯೋಗ್ಯವಾದವು. ಅವನ್ನು ಮಾಡಬಾರದು.

೨೯. ಪರಮಾತ್ಮಜ್ಞಾನವಲ್ಲದ ಎಂದರೆ, ಸಂಬಂಧವಲ್ಲದ ಇಷ್ಟಾಪೂರ್ತಿಮಾಡಿಕೊಳ್ಳಬೇಕೆಂಬ ಚಿಂತೆಗಳು ಬಲ, ತೇಜಸ್ಸುಗಳನ್ನು ನಾಶಮಾಡುತ್ತವೆ. ಸರ್ವ ಸೌಖ್ಯವನ್ನೂ ನಾಶಮಾಡಿ, ರೂಪಹಾನಿಯನ್ನೂ ಉಂಟುಮಾಡುತ್ತವೆ.

೩೦. ಈ ಚಿಂತೆಗಳು ಆಸೆ, ಮೋಹ, ಲೋಭಗಳನ್ನುಂಟುಮಾಡುತ್ತವೆ. ದಿನ ದಿನವೂ ಆ ಚಿಂತೆಮಾಡುತ್ತಿದ್ದರೆ ಪಾಪವನ್ನೂ ಹುಟ್ಟಿಸುತ್ತವೆ.

೩೧. ಚಿಂತೆಯು ವ್ಯಾಧಿಯನ್ನುಂಟುಮಾಡಿ, ನರಕವನ್ನು ಹೊಂದಿಸುತ್ತದೆ. ಆದುದರಿಂದ ಚಿಂತೆಯನ್ನು ಬಿಟ್ಟು, ಇಚ್ಛೆಯಾದುದನ್ನು ಅನುಭವಿಸಿಕೊಂಡು ಸುಖವಾಗಿರು.

ಅರ್ಜಿತಂ ಕರ್ಮಣಾ ಪೂರ್ವಂ ಸ್ವಯಮೇವ ನರೇಣ ತು ।
ತದೇವ ಭುಂಕ್ತೇಽಸೌ ಜಂತುರ್ಜ್ಞಾನವಾನ್ನ ವಿಚಿಂತಯೇತ್ ॥ ೩೨ ॥

ತಸ್ಮಾಚ್ಚಿಂತಾಂ ಪರಿತ್ಯಜ್ಯ ಸುಖದುಃಖಾದಿಕಂ ವದ ।
ತಾಸಾಂ ತದ್ವಚನಂ ಶ್ರುತ್ವಾ ಸುನೀಥಾ ವಾಕ್ಯಮಬ್ರವೀತ್ ॥ ೩೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಸುನೀಥಾಚರಿತಂ ನಾಮ ದ್ವಾತ್ರಿಂಶೋಽಧ್ಯಾಯಃ



---

೩೨. ಮನುಷ್ಯನು ಪೂರ್ವದಲ್ಲಿ ಮಾಡಿದುದನ್ನೇ ಅನುಭವಿಸುತ್ತಾನೆ. ಜ್ಞಾನಿಯಾದವನು ಚಿಂತಿಸಬಾರದು.

೩೩. ಆದುದರಿಂದ ಚಿಂತೆಯನ್ನು ಬಿಟ್ಟು, ನಿನ್ನ ಸುಖದುಃಖಗಳನ್ನು ನಮಗೆ ಹೇಳು, ಎಂದರು. ಅವರ ಮಾತನ್ನು ಕೇಳಿ ಸುನೀಥೆಯು ಹೇಳುತ್ತಾಳೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುನೀಥಾಚರಿತೆಯೆಂಬ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ತ್ರಯಸ್ತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಯಥಾ ಶಪ್ತಾ ವನೇ ಪೂರ್ವಂ ಸುಶಂಖೇನ ಮಹಾತ್ಮನಾ ।
ತಾಸು ಸರ್ವಂ ಯಥಾಖ್ಯಾತಂ ಸಖೀಷ್ವೇವಂ ವಿಚೇಷ್ಟಿತಂ ।
ಆತ್ಮನಶ್ಚ ಮಹಾಭಾಗಾ ದುಃಖೇನಾಪಿ ಪ್ರಪೀಡಿತಾ ॥ ೧ ॥

॥ ಸುನೀಥೋವಾಚ ॥

ಅನ್ಯಚ್ಚಾಹಂ ಪ್ರವಕ್ಷ್ಯಾಮಿ ಸಖ್ಯಶ್ಶೃಣ್ವಂತು ಸಾಂಪ್ರತಂ ॥ ೨ ॥

ಮದೀಯಾಂ ರೂಪಸಂಪತ್ತಿಂ ವಯಸೋ ಗುಣಸಂಪದಂ ।
ವಿಪಶ್ಯನ್ಮಾಂ ಪಿತುಶ್ಚಿನ್ತಾ ಸಂಜಾತಾ ಮಮ ಕಾರಣಾತ್ ॥ ೩ ॥

---

## ಮೂವತ್ತಮೂರನೆಯ ಅಧ್ಯಾಯ

೧. ಸೂತನು ಹೇಳುತ್ತಾನೆ:—ಕಾಡಿನಲ್ಲಿ ಸುಶಂಖನಿಗೆ ತಾನು ಮಾಡಿದ ಹಿಂಸೆಯನ್ನೂ, ಅವನು ತನಗೆ ಕೊಟ್ಟ ಶಾಪವನ್ನೂ, ತಾನು ದುಃಖಗೊಂಡಿರುವುದನ್ನೂ ಸಖಿಯರಲ್ಲಿ ಹೇಳಿದಳು.

೨. ಸುನೀಥೆಯು ಹೇಳಿದಳು:—ಎಲೈ ಸಖಿಯರೇ, ಮತ್ತೊಂದನ್ನು ಹೇಳುತ್ತೇನೆ, ಅದನ್ನು ಕೇಳಿ.

೩. ನನ್ನ ರೂಪವನ್ನೂ, ವಯಸ್ಸನ್ನೂ, ಗುಣಗಳನ್ನೂ ನೋಡಿ ನನ್ನ ತಂದೆಯು ನನ್ನ ವಿಚಾರವಾಗಿ ಚಿಂತೆಗೊಳಗಾಗಿದಾನೆ.

ದೇವೇಭ್ಯೋ ದಾತುಕಾಮೋಽಸೌ ಮುನಿಭ್ಯಸ್ತು ಮಹಾಯಶಾಃ ।
ಸ್ವಹಸ್ತೇ ತು ನಿಗೃಹ್ಯೈವ ದೇವಾನಿದಮುದಾಹರತ್ ॥ ೪ ॥

ಗುಣಾಢ್ಯೇಯಂ ಸುತಾ ಬಾಲಾ ಮಮೈವಂ ಚಾರುಲೋಚನಾ ।
ದಾತುಕಾಮೋಽಸ್ಮಿ ಭದ್ರಂ ವೋ ಗುಣಿನೇ ವೈ ಮಹಾತ್ಮನೇ ॥ ೫ ॥

ಮೃತ್ಯೋರ್ವಾಕ್ಯಂ ತತೋ ದೇವಾ ಋಷಯಃ ಶುಶ್ರುವುಸ್ತಥಾ ।
ತಮೂಚುರ್ಭಾಷಮಾಣಂ ತೇ ದೇವಾ ಇಂದ್ರಪುರೋಗಮಾಃ ॥ ೬ ॥

ತವ ಕನ್ಯಾ ಗುಣಾಢ್ಯೇಯಂ ಸತ್ಯಾನಾಂ ಪರಮಾವಧಿಃ ।
ದೋಷೇಣೈಕೇನ ಸಂದುಷ್ಟಾ ಋಷಿಶಾಪೇನ ತೇನ ವೈ ॥ ೭ ॥

ಅಸ್ಯಾಮುತ್ಪದ್ಯತೇ ಪುತ್ರೋ ದುಷ್ಟವೀರ್ಯಃ ಪುಮಾನ್ಕಿಲ ।
ಭವಿತಾಸೌ ಮಹಾಪಾಪೀ ಪುಣ್ಯವಂಶವಿನಾಶಕಃ ॥ ೮ ॥

ಗಂಗಾತೋಯೇನ ಸಂಪೂರ್ಣೋ ಯಥಾ ಕುಂಭಃ ಪ್ರದೃಶ್ಯತೇ ।
ಸುರಾಯಾ ಬಿಂದುನಾ ಲಿಪ್ತೋ ಮದ್ಯಕುಂಭಃ ಪ್ರಜಾಯತೇ ॥ ೯ ॥

---

೪-೫. ನನಗೆ ಮದುವೆಮಾಡುವುದಕ್ಕೋಸ್ಕರ ದೇವತೆಗಳನ್ನೂ, ಮುನಿಗಳನ್ನೂ ನನ್ನ ತಂದೆಯು ಕರೆದು ನನ್ನ ಈ ಮಗಳು, ಗುಣಾಢ್ಯಳು, ಮನೋಹರವಾದ ಕಣ್ಣುಳ್ಳವಳು, ನಿಮ್ಮಲ್ಲಿ ಗುಣವಂತನಾದವನಿಗೆ ಇವಳನ್ನು ಮದುವೆಮಾಡಿಕೊಡಬೇಕೆಂದಿದ್ದೇನೆ. ಎಂದನು.

೬-೭. ಇಂದ್ರನೇ ಮೊದಲಾದ ದೇವತೆಗಳೂ, ಋಷಿಗಳೂ, ಮೃತ್ಯುವಿನ ಆ ಮಾತನ್ನು ಕೇಳಿ ನಿನ್ನ ಮಗಳು ಗುಣಾಢ್ಯಳು. ಸತ್ಯಸಂಧಳು. ಆದರೆ ಆ ಋಷಿ ಶಾಪರೂಪವಾದ ದೋಷದಿಂದ ದುಷ್ಟಳೆನಿಸಿರುವಳು. ಈ ವಿಧವಾದ ಕಳಂಕವಿರುವ ಇವಳನ್ನು ನಾವು ಹೇಗೆ ಮದುವೆಮಾಡಿಕೊಳ್ಳಲಾದೀತು ?

೮. ಏಕೆಂದರೆ ದುಷ್ಟನೂ, ಅಯೋಗ್ಯನೂ ಆದ ಮಗನು ಇವಳಲ್ಲಿ ಹುಟ್ಟುತ್ತಾನೆ. ಅವನು ಮಹಾಪಾಪಿಯೂ, ಪುಣ್ಯವಂಶಕ್ಕೆ ನಾಶಕನೂ ಆಗುತ್ತಾನೆ.

೯. ಬಿಂದಿಗೆಯ ತುಂಬ ಗಂಗೆಯತೀರ್ಥವು ತುಂಬಿದ್ದರೂ, ಒಂದೇ ಒಂದು ತೊಟ್ಟು ಹೆಂಡವು ಅದಕ್ಕೆ ಬಿದ್ದರೆ ಅದು ಹೆಂಡದ ಬಿಂದಿಗೆಯಾಗುತ್ತದೆ, ಗಂಗೆಯ ಪವಿತ್ರತೆಯು ನಾಶವಾಗುವುದು.

ಪಾಪಸ್ಯ ಪಾಪಸಂಸರ್ಗಾತ್ಕುಲಂ ಪಾಪಿ ಪ್ರಜಾಯತೇ ।
ಆರನಾಳಸ್ಯ ವೈ ಬಿಂದುಃ ಕ್ಷೀರಮಧ್ಯೇ ಪ್ರಯಾತಿ ಚೇತ್ ॥ ೧೦ ॥

ಪಶ್ಚಾನ್ನಾಶಯತೇ ಕ್ಷೀರತದ್ರೂಪಂ ಪ್ರಕಾಶಯೇತ್ ।
ತಸ್ಮಾದ್ವಿನಾಶಯೇತ್ಪುಣ್ಯಂ ಪಾಪಪುತ್ರೋ ನ ಸಂಶಯಃ ॥ ೧೧ ॥

ಅನೇನೈವ ಹಿ ದೋಷೇಣ ತವೇಯಂ ಪಾಪಭಾಗಿನೀ ।
ಅನ್ಯಸ್ಮೈ ದೀಯತಾಂ ಗಚ್ಛ ದೇವೈರುಕ್ತಃ ಪಿತಾ ಮಮ ॥ ೧೨ ॥

ದೇವೈಶ್ಚಾಪಿ ಸಗಂಧರ್ವೈರ್ಋಷಿಭಿಶ್ಚ ಮಹಾತ್ಮಭಿಃ ।
ತೈಶ್ಚಾಪಿ ಸ ಪರಿತ್ಯಕ್ತಃ ಪಿತಾ ಮೇ ದುಃಖಪೀಡಿತಃ ॥ ೧೩ ॥

ಮಮಾಪ್ಯೇವಂ ಪ್ರತೀಕಾರಂ ನ ಕುರ್ವಂತಿ ಹಿ ಮಜ್ಜನಾಃ ।
ಏವಂ ಪಾಪಮಯಂ ಕರ್ಮ ಮಯಾ ಚೈವ ಪುರಾ ಕೃತಂ ॥ ೧೪ ॥

ತತಶ್ಚಾಹಂ ಸ್ವಯತ್ನೇನ ವನಮೇವ ಸಮಾಶ್ರಿತಾ ।
ತಪ ಏವ ಕರಿಷ್ಯಾಮಿ ಕರಿಷ್ಯೇ ಕಾಯಶೋಷಣಂ ॥ ೧೫ ॥

---

೧೦-೧೧. ಪಾಪಿಯ ಪಾಪದ ಸ್ಪರ್ಶದಿಂದ ಕುಲವೂ ದುಷ್ಟವಾಗಿ, ಮಕ್ಕಳೂ ಪಾಪಿಯಾಗಿ ಹುಟ್ಟುತ್ತಾರೆ. ಗಂಜಿಯ ಒಂದು ತೊಟ್ಟು ಹಾಲಿನಲ್ಲಿ ಬಿದ್ದರೂ, ಆ ಹಾಲಿನ ರುಚಿಯನ್ನು ಹಾಳುಮಾಡಿ ತನ್ನ ರೂಪವನ್ನೇ ತೋರಿಸುತ್ತದೆ. ಆದ್ದರಿಂದ ಪಾಪಿಯಾದಮಗನು ಪುಣ್ಯವನ್ನು ನಾಶಮಾಡುತ್ತಾನೆ.

೧೨. ಈ ದೋಷದಿಂದ ಪಾಪಿನಿಯಾಗಿರುವ ನಿನ್ನ ಮಗಳನ್ನು ಬೇರೆಯಾರಿಗಾದರೂ ಕೊಡು. ಹೋಗು. ನಮಗೆ ಬೇಡ ಎಂದು ಆ ದೇವತೆಗಳು ನಮ್ಮ ತಂದೆಗೆ ಹೇಳಿದರು.

೧೩. ಹೀಗೆ ದೇವತೆಗಳು, ಗಂಧರ್ವರು, ಋಷಿಗಳು, ಮಹಾತ್ಮರು, ಇವರುಗಳೆಲ್ಲರೂ ತಿರಸ್ಕರಿಸಲು, ನಮ್ಮ ತಂದೆಯು ದುಃಖಪೀಡಿತನಾದನು.

೧೪. ನಮ್ಮ ಈ ಪಾಪಗಳಿಗೆ ನಮ್ಮ ಜನರೇ ಪ್ರತೀಕಾರಮಾಡುವುದಿಲ್ಲ. ಈ ರೀತಿಯಾದ ಪಾಪಕರ್ಮವು ಪೂರ್ವದಲ್ಲಿ ನನ್ನಿಂದ ಮಾಡಲ್ಪಟ್ಟಿತು.

೧೫. ಆದುದರಿಂದ, ಆಮೇಲೆ ನನ್ನ ಪ್ರಯತ್ನದಿಂದಲೇ ನಾನೇ ಕಾಡಿಗೆ ಬಂದೆನು. ತಪಸ್ಸನ್ನು ಮಾಡುತ್ತೇನೆ. ಅದರಿಂದ ದೇಹವನ್ನು ಶೋಷಿಸುತ್ತೇನೆ.

ಭವತೀಭಿಸ್ಸುಪುಷ್ಟಾಹಂ ಕಾರ್ಯಕಾರಣಮೇವ ಹಿ ।
ಮಮ ಚಿಂತಾನುಗಂ ಕರ್ಮ ಮಯಾ ಸಖ್ಯಃ ಪ್ರಕಾಶಿತಂ ॥ ೧೬ ॥

ಏವಮುಕ್ತ್ವಾ ಸುಗೀಥಾ ಚ ಮೃತ್ಯೋಃ ಕನ್ಯಾ ಯಶಸ್ವಿನೀ ।
ವಿರರಾಮ ಸುದುಃಖಾರ್ತಾ ಕಿಂಚಿನ್ನೋವಾಚ ವೈ ಪುನಃ ॥ ೧೭ ॥

॥ ಸಖ್ಯ ಊಚುಃ ॥

ದುಃಖಮೇವ ಮಹಾಭಾಗೇ ತ್ಯಾಜ್ಯಂ ಕಾಯವಿನಾಶನಂ ।
ನಾಸ್ತಿ ಕಸ್ಯ ಕುಲೇ ದೋಷೋ ದೇವೈಃ ಪ್ರೋಕ್ತಸ್ಸಮಾಶ್ರಿತಃ ॥ ೧೮ ॥

ಕ್ಷಿಪ್ರಮುಕ್ತಂ ಪುರಾ ತೇನ ಬ್ರಹ್ಮಣಾ ಹರಿಸನ್ನಿಧೌ ।
ದೇವೈಶ್ಚಾಪಿ ನ ಹಿ ತ್ಯಕ್ತೋ ಬ್ರಹ್ಮಾ ಪೂಜ್ಯತನೋಽಭವತ್ ॥ ೧೯ ॥

---

೧೬-೧೭. ನೀವು ನನ್ನನ್ನು ಪೋಷಣೆಮಾಡಿ ಬೆಳೆಸಿದ್ದೀರಿ, ನಾನು ಮಾಡುವ ಕೆಲಸವನ್ನು ಅದರ ಕಾರಣವನ್ನೂ ಹೇಳಿದೆನು. ನನ್ನ ಚಿಂತೆಗೆ ಕಾರಣ ವೇನೆಂಬ ವಿಷಯವನ್ನು ನಿಮಗೆ ಹೇಳಿದೆದು. ಎಂದು ಹೇಳಿ ಮಾತನಾಡದೆ ಸುಮ್ಮ ನಾದಳು.

೧೮. ಸಖಿಯರು ಹೇಳಿದರು :—ಈ ಚಿಂತೆಯೂ, ತಪಸ್ಸೂ, ದೇಹವನ್ನು ಶೋಷಿಸುತ್ತ ದುಃಖವನ್ನು ಕೊಡುತ್ತವೆ. ದೇವತೆಗಳು ಹೇಳಿದ ದೋಷವು ಯಾವನ ಕುಲದಲ್ಲಿತಾನೇ ಇರುವುದಿಲ್ಲ?

೧೯. ಪೂರ್ವದಲ್ಲಿ ಬ್ರಹ್ಮನೂ ಕೂಡ ಜಾಗ್ರತೆ ಬರುವೆನೆಂದಾಗ ಸುಳ್ಳನ್ನು ವಿಷ್ಣುವಿನೊಡನೆ ಹೇಳಿದ್ದರೂ ಆತನನ್ನು ತಪ್ಪಿತಸ್ಥನೆಂದು ದೇವತೆಗಳು ತ್ಯಜಿಸಲಿಲ್ಲ. ಮತ್ತು ಅತಿಶಯವಾಗಿ ಪೂಜ್ಯನೇ ಆದನು.

ಬ್ರಹ್ಮನು ಸಾಯಂಕಾಲದ ಸಂಧ್ಯಾವಂದನೆಗೋಸ್ಕರ ಸಮುದ್ರಕ್ಕೆ ಹೋದಾಗ, ಅಲ್ಲಿ ವಿಷ್ಣುವನ್ನು ನೋಡಿದನು. ವಿಷ್ಣುವು ತನಗಿಂತ ಚಿಕ್ಕವನೆಂಬ ಭಾವನೆಯಿಂದ ನಮಸ್ಕಾರವನ್ನೇಕೆ ಮಾಡಲಿಲ್ಲವೆನಲು, ಆತನೂ ತಾನೇ ದೊಡ್ಡವನೆಂದು ಹೇಳಿ ದನು. ನಾನು ದೊಡ್ಡವನು ತಾನು ದೊಡ್ಡವನೆಂಬ ವಾದವು ಇಬ್ಬರಿಗೂ ಉಂಟಾ ಗಲು, ಈಶ್ವರನು ಬಂದು, ಇಲ್ಲಿ ಬೆಳೆಯುವ ಲಿಂಗದ ತಲೆಯನ್ನು ಜಾಗ್ರತೆ ನೋಡಿ ಬರುವವರು ದೊಡ್ಡವರೆಂದನು. ಅಂತೆಯೇ ಈಶ್ವರನು ಲಿಂಗರೂಪವಾಗಿ ಬೆಳೆಯಲು ಇಬ್ಬರೂ ನೋಡಲು ಹೊರಟರು. ಬ್ರಹ್ಮನು ಲಿಂಗದ ತುದಿಯನ್ನೂ ವಿಷ್ಣುವು

**ಬ್ರಹ್ಮಹತ್ಯಾಪ್ರಯುಕ್ತೋಽಸೌ ದೇವರಾಜೋಽಪಿ ಪಶ್ಯತೇ ।**
**ದೇವೈಸ್ಸಾರ್ಧಂ ಮಹಾಭಾಗೈಸ್ತ್ರೈಲೋಕ್ಯಂ ಪರಿಭುಂಜತಿ ॥ ೨೦ ॥**

**ಗೌತಮಸ್ಯ ಪ್ರಿಯಾಂ ಭಾರ್ಯಾಮಹಲ್ಯಾಂ ಗತವಾನ್ ಪುರಾ ।**
**ಪರದಾರಾಭಿಗಾಮಿತ್ವಂ ದೇವತ್ವೇ ಪರಿವರ್ತತೇ ॥ ೨೧ ॥**

**ಬ್ರಹ್ಮಹತ್ಯೋಪಮಂ ಕರ್ಮ ದಾರುಣಂ ಕೃತವಾನ್ ಹರಃ ।**
**ಬ್ರಹ್ಮಣಸ್ತು ಕಪಾಲೇನ ಚಾದ್ಯಾಪಿ ಪರಿವರ್ತತೇ ॥ ೨೨ ॥**

---

ಲಿಂಗದ ಮೂಲವನ್ನೂ ನೋಡಿಬರಬೇಕೆಂದೂ, ಯಾರು ಮೊದಲು ನೋಡಿಕೊಂಡು ಬರುವರೋ ಅವರೇ ದೊಡ್ಡವರೆಂದೂ ನಿರ್ಣಯಮಾಡಿಕೊಂಡು ಹೊರಟರು. ಬ್ರಹ್ಮನು ಸ್ವಲ್ಪದೂರ ಹೋಗಿ ನೋಡಿ ಸಾಧ್ಯವಾಗುವುದಿಲ್ಲವೆಂದು ತಿಳಿದುಕೊಂಡನು. ಶಿವನತಲೆಯಿಂದ ಬಿದ್ದು ಬರುತ್ತಿದ್ದ ತಾಳೆಯಹೂವನ್ನು ಕೇಳಲು, ನಾನು ತಲೆಯಿಂದ ಬಿದ್ದು ಕೋಟ್ಯಂತರ ವರ್ಷಗಳಾದವು. ಇನ್ನೂ ಬೀಳುತ್ತಲೇ ಇರುವೆನು. ಹೀಗಿರುವಾಗ ನೀನು ಲಿಂಗದ ತುದಿಯನ್ನು ನೋಡಿಬರುವುದೆಂತು? ನೀನು ನೋಡಲಾರೆ ಎನ್ನಲು, ಅದನ್ನು ತಾನು ತಲೆಯಬಳಿಗೆ ಹೋದುದನ್ನು, ಕಂಡಂತೆ ಸಾಕ್ಷಿಯನ್ನು ಹೇಳಬೇಕೆಂದು ಒಪ್ಪಿಸಿ, ಅದರ ಜೊತೆಯಲ್ಲಿ ಬಂದು ಇಳಿದನು. ವಿಷ್ಣುವು ತಾನು ತಲೆಯನ್ನು ನೋಡಲಿಲ್ಲವೆಂದು ನಿಜವನ್ನು ಹೇಳಿದನು. ಬ್ರಹ್ಮನು ತಲೆಯನ್ನು ನೋಡಿದೆನು ಎಂದನು. ಆದುದರಿಂದ ಬ್ರಹ್ಮನು ದೋಷಿ ಎಂಬುದನ್ನು ಇಲ್ಲಿ ಸೇರಿಸಿಕೊಳ್ಳಬೇಕು. ಈ ವಿವರವು ದೇವೀಭಾಗವತ ಮೊದಲಾದ ಪುರಾಣಗಳಲ್ಲಿ ವಿಶದವಾಗಿ ವಿವರಿಸಲ್ಪಟ್ಟಿದೆ.

೨೦. ದೇವರಾಜನಾದ ಇಂದ್ರನು ವೃತ್ರನನ್ನು ಕೊಂದು ಬ್ರಹ್ಮಹತ್ಯೆಯನ್ನು ಮಾಡಿದ್ದರೂ ದೇವತೆಗಳಿಗೆ ರಾಜನಾಗಿಯೇ ಇದ್ದಾನೆ, ಮೂರು ಲೋಕವನ್ನೂ ಅನುಭವಿಸುತ್ತಾನೆ.

೨೧. ಪೂರ್ವದಲ್ಲಿ ಗೌತಮನ ಹೆಂಡತಿ ಅಹಲ್ಯೆಯಲ್ಲಿ ಗಮಿಸಿ ದೇವೇಂದ್ರನು ಹಾದರದ ದೋಷವನ್ನು ಹೊಂದಿದನು. ಆದರೂ ದೇವನಾಗಿಯೇ ಇದ್ದಾನೆ.

೨೨. ಈಶ್ವರನು ಬ್ರಹ್ಮಹತ್ಯೆಯನ್ನು ಮಾಡಿದನು. ಅದೂ ಸಾಕ್ಷಾತ್ ಬ್ರಹ್ಮನ ತಲೆಯೇ. ಅದನ್ನು ಹಿಡಿದು ಈಗಲೂ ಕೂಡ ಸಂಚರಿಸುತ್ತಾನೆ. ಆದರೂ ದೇವದೇವನಾಗಿದ್ದಾನೆ. ದೇವತೆಗಳು ಅವನನ್ನು ತ್ಯಜಿಸಿಲ್ಲ.

ದೇಹೋ ನಿಪತಿತಃ ಪಶ್ಯ ನಿಮಿಶಾಪೇನ ವಾ ಪುನಃ ।
ಅಗಸ್ತ್ಯಃ ಕುಂಭಸಂಭೂತಸ್ತ್ರೈಲೋಕ್ಯಂ ಪರಿಕಲ್ಪಯೇತ್ ॥ ೨೩ ॥

ಲೋಕಸ್ಥಾಶ್ಚ ಪ್ರಜಾ ಯಸ್ಯ ದೇವಾದ್ಯಾಶ್ಚ ಚರಾಚರಾಃ ।
ಕೃಷ್ಣೋ ಭುಂಕ್ತೇ ಮಹಾಶಾಪಂ ಭಾರ್ಗವೇಣ ಕೃತಂ ಪುರಾ ॥ ೨೪ ॥

ಗುರುದಾರಾನ್ ಗತಶ್ಚಂದ್ರಃ ಕ್ಷೀಣಶ್ಚೈವ ಪ್ರದೃಶ್ಯತೇ ।
ಭವಿಷ್ಯತಿ ಮಹಾತೇಜಾ ರಾಜರಾಜಃ ಪ್ರತಾಪವಾನ್ ॥ ೨೫ ॥

ಪಾಂಡುಪುತ್ರೋ ಮಹಾಪ್ರಾಜ್ಞೋ ಧರ್ಮಾತ್ಮಾ ಸ ಯುಧಿಷ್ಠಿರಃ ।
ಗುರೋಶ್ಚೈವ ವಧಾರ್ಥಾಯ ತ್ವನೃತಂ ಸ ವದಿಷ್ಯತಿ ॥ ೨೬ ॥

ಏತೇಷ್ವೇವ ಮಹತ್ಪಾಪಂ ವರ್ತಿತಂ ಚ ಮಹತ್ಸುಚ ।
ನೈಗುಣ್ಯಂ ಕಸ್ಯ ನೈ ನಾಸ್ತಿ ಕಸ್ಯ ನಾಸ್ತಿ ಕಿಲಾಂಜನಂ ॥ ೨೭ ॥

---

೨೩. ನಿಮಿಯ ಶಾಪದಿಂದ ಆದೇ ಶಿವನ ವೃಷಣವೆಂಬ ದೇಹಭಾಗವು ಬಿದ್ದು ಹೋಗಿದೆ. ಆದರೂ ಅವನು ಪೂಜ್ಯನು. ಅಗಸ್ತ್ಯನು ಗಡಿಗೆಯಲ್ಲಿ ಹುಟ್ಟಿದ್ದಾನೆ. ಇಂದ್ರಿಯ ಸ್ಖಲನವು ದೋಷವು. ಆದರೂ ಅಗಸ್ತ್ಯನು ಮೂರುಲೋಕವನ್ನೂ ಒಳಗೊಂಡಿರುವನೆಂದು ಭಾವಿಸಿದ್ದಾರೆ.

೨೪. ಲೋಕದಲ್ಲಿರುವ ಚರಾಚರಪ್ರಾಣಿಗಳೂ ಕೂಡ ಯಾವ ಕೃಷ್ಣನಿಗೆ ಸಂಬಂಧಿಸಿವೆಯೋ ಆ ಕೃಷ್ಣನು ಭಾರ್ಗವನಿಂದ ಶಾಪಹೊಂದಿದರೂ ಪೂಜ್ಯನಾಗಿದ್ದಾನೆ. ಚಂದ್ರನು ಗುರುವಿನ ಹೆಂಡತಿಯಲ್ಲಿ ರಮಿಸಿದ ಪಾಪದ ಜೊತೆಗೆ ಕ್ಷಯ ರೋಗಿಯಾದರೂ ಪೂಜ್ಯನಾಗಿದ್ದಾನೆ.

೨೫-೨೬. ಮುಂದೆ ಪ್ರತಾಪಶಾಲಿಯೂ, ಚಕ್ರವರ್ತಿಯೂ, ಆದ ಪಾಂಡು ಪುತ್ರನಾದ, ಧರ್ಮರಾಜನು ಹುಟ್ಟುತ್ತಾನೆ. ಆತನು ತನ್ನ ಗುರುವನ್ನು ಕೊಲ್ಲುವುದಕ್ಕೆ ಸುಳ್ಳನ್ನು ಹೇಳುತ್ತಾನೆ. ಆದರೂ ಪೂಜ್ಯನಾಗುತ್ತಾನೆ.

೨೭. ಇಂತಹ ದೊಡ್ಡವರಿಂದ ಮಹಾಪಾಪವು ಅನೇಕವಾಗಿ ಮಾಡಲ್ಪಟ್ಟಿರುವುದು. ದೋಷವು ಯಾರಲ್ಲಿಲ್ಲ? ಯಾರಲ್ಲಿ ತಾನೇ ಕಳಂಕವಿಲ್ಲ?

ಭವತೀ ಸ್ವಲ್ಪದೋಷೇಣ ಲಿಪ್ತಾನೇನ ವರಾನನೇ ।
ಉಪಕಾರಂ ಕರಿಷ್ಯಾಮಸ್ತ್ವನ್ಯೈವ ವರವರ್ಣಿನಿ ॥ ೨೮ ॥

ತವಾಂಗೇ ಯೇ ಗುಣಾಸ್ಸಂತಿ ಸತಾಂ ಸ್ತ್ರೀಣಾಂ ಯಥಾ ಶುಭೇ ।
ಅನ್ಯತ್ರಾಪಿ ನ ಪಶ್ಯಾಮಸ್ತಾನ್ ಗುಣಾನ್ ಚಾರುವಲ್ಲಭೇ ॥ ೨೯ ॥

ರೂಪಮೇವ ವರಸ್ತ್ರೀಣಾಂ ಪ್ರಥಮಂ ಭೂಷಣಂ ಶುಭೆ ।
ಶೀಲಮೇವ ದ್ವಿತೀಯಂ ಚ ತೃತೀಯಂ ಸತ್ಯಮೇವ ಚ ॥ ೩೦ ॥

ಆರ್ಯತ್ವಂ ಚ ಚತುರ್ಥಂ ಚ ಪಂಚಮಂ ಧರ್ಮಮೇವ ಹಿ ।
ಷಷ್ಠಂ ಸತೀತ್ವಂ ದೃಢತಾ ಸಪ್ತಮಂ ಸಾಹಸೋಽಷ್ಟಮಂ ॥ ೩೧ ॥

ನವಮಂ ಮಂಗಳಂ ಗಾನಂ ದಶಮಂ ವ್ಯವಸಾಯತಾ ।
ಏಕಾದಶಸ್ತಥಾ ಸ್ತ್ರೀಣಾಂ ಕಾಮಾಧಿಕ್ಯಂ ಪ್ರಕೀರ್ತಿತಂ ॥ ೩೨ ॥

ಮಧುರಂ ವಚನಂ ಪ್ರೋಕ್ತಂ ದ್ವಾದಶಂ ವರವರ್ಣಿನಿ ।
ತೈಸ್ತ್ವಂ ಸಂಭಾವಿತಾ ಬಾಲೇ ಮಾಭೈರ್ದೇವಿ ವರಾನನೇ ॥ ೩೩ ॥

---

೨೮. ನೀನು ಕೊಂಚ ದೋಷದಿಂದ ಕೂಡಿದ್ದೀಯೆ. ಅಷ್ಟೇ. ನಾವು ನಿನಗೆ ಉಪಕಾರಮಾಡುತ್ತೇವೆ.

೨೯. ನಿನ್ನ ಅವಯವದಲ್ಲಿ ಉತ್ತಮವಾದ ಸತ್ಪುರುಷರಲಕ್ಷಣಗಳಿವೆ. ಅವು ಮತ್ತಾರಲ್ಲೂ ಕಾಣುತ್ತಿಲ್ಲ.

೩೦-೩೩. ಉತ್ತಮ ಸ್ತ್ರೀಯರಿಗೆ ಮೊದಲನೆಯ ಗುಣವೆಂದರೆ, ರೂಪವು. ಎರಡನೇದು ಶೀಲ, ಮೂರನೆಯದು ಸತ್ಯವು. ಆರ್ಯಳಾಗಿರುವುದು ನಾಲ್ಕನೆಯದು. ಧರ್ಮವು ಐದನೆಯದು. ಪಾತಿವ್ರತ್ಯವು ಆರನೆಯದು. ದೃಢಮನಸ್ಸು ಏಳನೆಯದು. ಸಾಹಸವು ಎಂಟನೆಯದು. ಚೆನ್ನಾಗಿ ಹಾಡುವಿಕೆಯು ಒಂಭತ್ತನೆಯದು. ಕೆಲಸಮಾಡುವಿಕೆಯು ಹತ್ತನೇದು. ಕಾಮಾಧಿಕ್ಯವು ಹನ್ನೊಂದನೆಯದು. ಮಧುರವಾದ ಮಾತನಾಡುವಿಕೆಯು ಹನ್ನೆರೆಡನೆಯದು. ಈ ಎಲ್ಲ ಗುಣಗಳೂ ನಿನ್ನಲ್ಲಿವೆ. ನೀನು ಹೆದರಬೇಕಾಗಿಲ್ಲ.

ಯೇನೋಪಾಯೇನ ತೇ ಭರ್ತಾ ಭವಿಷ್ಯತಿ ಸುಧರ್ಮಕೃತ್ ।
ತಮುಪಾಯಂ ಪ್ರಪ್ರಶ್ಯಾಮಸ್ತ್ವಾರ್ಥಂ ವಯಮೇವ ಹಿ ।
ಸ್ವಸ್ಥಾ ಭವ ಮಹಾಭಾಗೇ ಮಾ ವೈ ತ್ವಂ ಸಾಹಸಂ ಕುರು ॥ ೩೪ ॥

॥ ಸೂತ ಉವಾಚ ॥

ಏವಮುಕ್ತಾ ಸುನೀಥಾ ತು ಪುನರೂಚೇ ಸಖೀಸ್ತು ತಾಃ ।
ಕಥಯಧ್ವಂ ಮಮೋಪಾಯಂ ಯೇನ ಭರ್ತಾ ಭವಿಷ್ಯತಿ ॥ ೩೫ ॥

ತಾಮೂಚುಸ್ತಾ ವರಾನಾರ್ಯೋ ರಂಭಾದ್ಯಾಶ್ಚಾರುಲೋಚನಾಃ ।
ರೂಪಮಾಧುರ್ಯಸಂಯುಕ್ತಾ ಭವತೀ ಭೂತವರ್ಧಿನೀ ॥ ೩೬ ॥

ಬ್ರಹ್ಮಶಾಪೇನ ಸಂಭೀತಾ ವಯಮತ್ರ ಸಮಾಗತಾಃ ।
ತಾಂ ಪ್ರೋಚುರ್ಹಿ ವಿಶಾಲಾಕ್ಷೀಂ ಮೃತ್ಯುಕನ್ಯಾಂ ಸುಲೋಚನಾಂ ॥ ೩೭ ॥

ವಿದ್ಯಾಮೇಕಾಂ ಪ್ರದಾಸ್ಯಾಮಃ ಪುರುಷಾಣಾಂ ಪ್ರಮೋಹಿನೀಂ ।
ಸರ್ವಮಾಯಾವಿದಾಂ ಭದ್ರೇ ಸರ್ವಭದ್ರಪ್ರದಾಯಿನೀಂ ॥ ೩೮ ॥

---

೩೪. ಏನು ಮಾಡಿದರೆ ನಿನ್ನ ಗಂಡನು ಧರ್ಮವಂತನಾಗುತ್ತಾನೋ ಆ ಉಪಾಯವನ್ನು ನಿನಗೋಸ್ಕರ ನಾವು ಯೋಚಿಸಿ ತಿಳಿಯುತ್ತೇವೆ. ನೀನು ಸ್ವಸ್ಥ ವಾಗಿರು. ಸಾಹಸವನ್ನು ಮಾಡಬೇಡ ಎಂದರು.

೩೫. ಸೂತನು ಹೇಳುತ್ತಾನೆ:—ಸಖಿಯರು ಹೀಗೆ ಹೇಳಲು, ಸುನೀಥೆಯು ಅವರನ್ನು ಕುರಿತು ನನ್ನ ಗಂಡನು ಹೇಗೆ ಒಳ್ಳೆಯವನಾಗುತ್ತಾನೋ ಅದನ್ನು ನೀವು ಹೇಳಿ ಎಂದಳು.

೩೬-೩೮. ಆಗ ಅವರು ರೂಪವೂ, ಮಾಧುರ್ಯವೂ ನಿನ್ನಲ್ಲಿದೆ. ಹೀಗಿದ್ದರೂ ನೀನು ಬ್ರಹ್ಮಶಾಪದಿಂದ ಬಳಲುತ್ತಿರುವುದನ್ನು ನೋಡಿ ನಾವು ಇಲ್ಲಿಗೆ ಬಂದಿದ್ದೇವೆ. ಪುರುಷಪ್ರಮೋಹಿನಿಯಾದ ಒಂದು ವಿದ್ಯೆಯು ನಮ್ಮಲ್ಲಿರುವುದು. ಸರ್ವ ಮಂಗಳವನ್ನೂ ಉಂಟುಮಾಡುವ ಮತ್ತು ಸರ್ವಮಾಯೆಯನ್ನು ತಿಳಿಯುವ ಆ ವಿದ್ಯೆಯನ್ನು ನಿನಗೆ ಕೊಡುತ್ತೇವೆಂದರು.

ವಿದ್ಯಾಬಲಂ ತತೋ ದದ್ಯುಸ್ತಸ್ಯೈ ತಾಸ್ಸುಖದಾಯಕಂ ।
ಯಂ ಯಂ ಮೋಹಯಿತುಂ ಭದ್ರ ಇಚ್ಛಸ್ಯೇವಂ ಸುರಾದಿಕಂ ॥ ೩೯ ॥

ತಂ ತಂ ಸದ್ಯೋ ಮೋಹಯ ತ್ವಾ ಇತ್ಯುಕ್ತ್ವಾ ಸಾ ತಥಾಕರೋತ್ ।
ವಿದ್ಯಾಯಾಂ ಹಿ ಸುಸಿದ್ಧಾಯಾಂ ಸಾ ಸುನೀಥಾ ಸುನಂದಿತಾ ॥ ೪೦ ॥

ಸಮೇತ್ಯೈವ ಸಖೀಭಿಸ್ತು ಪುರುಷಾನ್ ಸಾ ವಿಪಶ್ಯತಿ ।
ಅಟಮಾನಾ ಗತಾ ಪುಣ್ಯಂ ನಂದನಂ ವನಮುತ್ತಮಂ ॥ ೪೧ ॥

ಗಂಗಾತೀರೇ ತತೋ ದೃಷ್ಟ್ವಾ ಬ್ರಾಹ್ಮಣಂ ರೂಪಸಂಯುತಂ ।
ಸರ್ವಲಕ್ಷಣಸಂಪನ್ನಂ ಸೂರ್ಯತೇಜಸ್ಸಮಪ್ರಭಂ ॥ ೪೨ ॥

ರೂಪೇಣಾಪ್ರತಿಮಂ ಲೋಕೇ ದ್ವಿತೀಯಮಿವ ಮನ್ಮಥಂ ।
ದೇವರೂಪಂ ಮಹಾಭಾಗಂ ಭಾಗ್ಯವಂತಂ ಸುಭಾಗ್ಯದಂ ॥ ೪೩ ॥

ಅನೌಪಮ್ಯಂ ಮಹಾತ್ಮಾನಂ ವಿಷ್ಣುತೇಜಸ್ಸಮನ್ವಿತಂ ।
ವೈಷ್ಣವಂ ಸರ್ವಪಾಪಘ್ನಂ ವಿಷ್ಣುತುಲ್ಯಪರಾಕ್ರಮಂ
ಕಾಮಕ್ರೋಧವಿಹೀನಂ ತಮತ್ರಿವಂಶವಿಭೂಷಣಂ ॥ ೪೪ ॥

---

೩೯. ಆ ಮೇಲೆ ಸುಖದಾಯಕವಾದ ವಿದ್ಯೆಯನ್ನು ಅವರು ಅವಳಿಗೆ ಕೊಟ್ಟರು. ದೇವತೆಗಳೇ ಮೊದಲಾದವರನ್ನು ಮೋಹಪಡಿಸುವುದಕ್ಕೆ ಯಾರು ಯಾರನ್ನು ಇಚ್ಛಿಸುತ್ತೀಯೋ ಅವರವರನ್ನು ಮೋಹಿಸೆಂದು ಹೇಳಲು ಆಕೆಯು ಹಾಗೆಯೇ ಮಾಡಿದಳು.

೪೦. ವಿದ್ಯೆಯು ಸಿದ್ಧಿಯಾಗಲು, ಆ ಸುನೀಥೆಯು ಸಖಿಯರೊಡಗೂಡಿ ವಿಹರಿಸುತ್ತಾ ತನಗೆ ಬೇಕಾದ ಪುರುಷರನ್ನು ಕಾಮದೃಷ್ಟಿಯಿಂದ ನೋಡುತ್ತಿದ್ದಳು.

೪೧-೪೪. ಹೀಗೆ ಅಲ್ಲಲ್ಲಿ ಸುತ್ತುತ್ತ ಪುಣ್ಯಪ್ರದವಾದ ನಂದನವನಕ್ಕೆ ಹೋಗಿ ಬರುತ್ತಿದ್ದಳು. ಹೀಗೆ ಹೋಗಿ ಬರುತ್ತಿರುವಾಗ ಗಂಗಾತೀರದಲ್ಲಿ ರೂಪಯೌವನ ಸಂಪನ್ನನೂ, ಸರ್ವಲಕ್ಷಣಗಳಿಂದ ಕೂಡಿದವನೂ, ಸೂರ್ಯನಂತೆ ಕಾಂತಿಯುಳ್ಳವನೂ ಆದ ಒಬ್ಬ ಪುರುಷನನ್ನು ಕಂಡಳು. ಆ ಪುರುಷನು ರೂಪಸೌಂದರ್ಯಗಳಲ್ಲಿ ಅದ್ವಿತೀಯನಾಗಿ ಎರಡನೆಯ ಮನ್ಮಥನಂತಿದ್ದನು. ದೇವತೆಗಳಂತೆ ಸುಂದರವಾದ ಆಕಾರ, ವಿಷ್ಣುವಿನಂತೆ ಬೆಳಗುವ ತೇಜಸ್ಸು, ಅಸದೃಶವಾದ ಪರಾಕ್ರಮ ಇವುಗಳಿಂದ ಒಪ್ಪುತ್ತಿರುವ, ಆ ಬ್ರಾಹ್ಮಣನು ಕಾಮಕ್ರೋಧರಹಿತನಾಗಿ ಅತ್ರಿವಂಶಕ್ಕೆ ತಿಲಕಪ್ರಾಯನಾಗಿದ್ದನು. ಇಂತಹ ಬ್ರಾಹ್ಮಣನನ್ನು ಆ ಸುನೀಥೆಯು ನೋಡಿದಳು.

**ದೃಷ್ಟ್ವಾ ಸ್ವರೂಪಂ ತಪಸಾ ತಪಂತಂ**
**ದಿವ್ಯಪ್ರಭಾವಂ ಪರಿತಪ್ಯಮಾನಂ ।**
**ಪಪ್ರಚ್ಛ ರಂಭಾಂ ಸ್ವಸಖೀಂ ಸುಮೋಹಾತ್**
**ಕೋಽಯಂ ದಿವಿಷ್ಠಪ್ರವರೋ ಮಹಾತ್ಮಾ ॥ ೪೫ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ**
**ವೇನೋಪಾಖ್ಯಾನೇ ತ್ರಯಸ್ತ್ರಿಂಶೋಽಧ್ಯಾಯಃ**

---

೪೫. ಆ ಪುರುಷನಾದರೋ ದಿವ್ಯವಾದ ತೇಜಸ್ಸಿನಿಂದ ಬೆಳಗುತ್ತ ತಪಸ್ಸನ್ನು ಮಾಡುತ್ತಿದ್ದನು. ಆತನ ತಪಸ್ಸು ಸಮಸ್ತವನ್ನೂ ದಹಿಸುವಷ್ಟು ಸಮರ್ಥವಾಗಿದ್ದಿತು. ಇಂತಹ ಸುಂದರಾಕಾರನಾದ ಪುರುಷನನ್ನು ನೋಡಿ ಆ ಸುನೀಥೆಯು ಮೋಹಪರವಶಳಾಗಿ, ತನ್ನ ಸಖಿಯಾದ ರಂಭೆಯನ್ನು ಕುರಿತು ದೇವನಂತೆ ತೇಜಸ್ವಿಯಾದ ಈ ಮಹಾತ್ಮನಾರು ? ಎಂದು ಕೇಳಿದಳು.

ಇಲ್ಲಿಗೆ ಪದ್ಮಮಹಾಪುರಾಣದಲ್ಲಿ ಭೂಮಿಖಂಡದ ವೇನೋಪಾಖ್ಯಾನದಲ್ಲಿ
ಮೂವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ಚ ತು ಸ್ತ್ರಿಂ ಶೋಽ ಧ್ಯಾ ಯಃ

॥ ರಂಭೋವಾಚ ॥

ಬ್ರಹ್ಮಾ ಹ್ಯವ್ಯಕ್ತಸಂಭೂತಸ್ತಸ್ಮಾಜ್ಜಾತಂ ಪ್ರಜಾಪತಿಃ ।
ಅತ್ರಿರ್ನಾಮ ಸ ಧರ್ಮಾತ್ಮಾ ತಸ್ಯ ಪುತ್ರೋ ಮಹಾಮನಾಃ ॥ ೧ ॥

ಅಂಗೋ ನಾಮ ಅಯಂ ಭದ್ರೇ ನಂದನಂ ವನಮಾಗತಃ ।
ಇಂದ್ರಸ್ಯ ಸಂಪದಂ ದೃಷ್ಟ್ವಾ ನಾನಾತೇಜಸ್ಸಮನ್ವಿತಾಂ ॥ ೨ ॥

ಕೃತಾ ಸ್ಪೃಹಾ ತ್ವನೇನಾಪಿ ಇಂದ್ರಸ್ಯ ಸದೃಶೇ ಪದೇ ।
ಈದೃಶೋ ಹಿ ಯದಾ ಪುತ್ರೋ ಮಮ ಸ್ಯಾದ್ವಂಶವರ್ಧನಃ ॥ ೩ ॥

---

## ಮೂವತ್ತನಾಲ್ಕನೆಯ ಅಧ್ಯಾಯವು.

೧. ರಂಭೆಯು ಹೇಳಿದಳು :—ಬ್ರಹ್ಮನು ಅವ್ಯಕ್ತಸಂಭೂತನು ಎಂದರೆ ಆತನ ಉತ್ಪತ್ತಿಯನ್ನು ತಿಳಿಯಲಾಗುವುದಿಲ್ಲ. ಅವನಿಂದ ಉತ್ಪನ್ನನಾದವನು ಅತ್ರಿ ಎಂಬ ಪ್ರಜಾಪತಿಯು. ಈ ಮಹಾನುಭಾವನು ಆ ಅತ್ರಿಯ ಮಗನು.

೨-೩. ಅಂಗನೆಂದು ಈತನ ಹೆಸರು. ಈ ಮನುಷ್ಯನು ನಂದನವನಕ್ಕೆ ಸಂಚರಿಸುತ್ತಾ ಬಂದು ಇಂದ್ರನ ಸಂಪತ್ತನ್ನು ನೋಡಿ ಈತನೂ ಕೂಡ ಅದಕ್ಕೆ ಸಮಾನಸ್ಥಾನವನ್ನು ಪಡೆಯಬೇಕೆಂದು ಆಶೆಪಟ್ಟು ಈರೀತಿಯಾದ ಮಗನು ನನಗೆ ಹುಟ್ಟಿ ವಂಶವರ್ಧನನಾದರೆ ಯಶಸ್ಸು ಕೀರ್ತಿಯಿಂದ ಕೂಡಿದ ನನ್ನ ಜನ್ಮವು ಯಶಸ್ಕರ ವಾಗುತ್ತದೆ ಎಂದು ಯೋಚಿಸಿದನು.

ಸುಶ್ರೇಯೋ ಮೇ ಭವೇಜ್ಜನ್ಮ ಯಶಃಕೀರ್ತಿಸಮನ್ವಿತಂ ।
ಆರಾಧಿತೋ ಹೃಷೀಕೇಶಸ್ತಪೋಭಿರ್ನಿಯಮೈಸ್ತತಃ ॥ ೪ ॥

ಸುಪ್ರಸನ್ನೇ ಹೃಷೀಕೇಶೇ ವರಂ ಯಾಚಿತವಾನಯಂ ।
ಇಂದ್ರಸ್ಯ ಸದೃಶಂ ಪುತ್ರಂ ವಿಷ್ಣುತೇಜಃಪರಾಕ್ರಮಂ ॥ ೫ ॥

ವೈಷ್ಣವಂ ಸರ್ವಪಾಪಘ್ನಂ ದೇಹಿ ಮೇ ಮಧುಸೂದನ ।
ದತ್ತ ಏವಂ ಮಯಾ ಪುತ್ರ ಈದೃಶಃ ಪರಿಪಾಲಕಃ ॥ ೬ ॥

ತದಾಪ್ರಭೃತಿ ವಿಪ್ರೇಂದ್ರಃ ಪುಣ್ಯಾಂ ಕನ್ಯಾಂ ಪ್ರವಿಶ್ಯತಿ ।
ಯಥಾ ತ್ವಂ ಚಾರುಸರ್ವಾಂಗೀ ತಥಾಯಂ ಪರಿಪಶ್ಯತಿ ॥ ೭ ॥

ಏನಂ ಗಚ್ಛ ವರತ್ವೇನ ಅಸ್ಮಾತ್ಪುತ್ರೋ ಭವಿಷ್ಯತಿ ।
ಪುಣ್ಯಾತ್ಮಾ ಸರ್ವಧರ್ಮಜ್ಞೋ ವಿಷ್ಣುತೇಜಃಪರಾಕ್ರಮಃ ॥ ೮ ॥

---

೪. ಆಮೇಲೆ ನಿಯಮಗಳಿಂದಲೂ, ತಪಸ್ಸಿನಿಂದಲೂ ವಿಷ್ಣುವನ್ನು ಆರಾಧಿಸಿದನು. ಹೃಷೀಕೇಶನು ಪ್ರಸನ್ನನಾಗಲು ವರವನ್ನು ಯಾಚಿಸಿದನು.

೫. ಎಲೈ ಮಧುಸೂದನನೇ, ನನಗೆ ಇಂದ್ರಸದೃಶನೂ, ವಿಷ್ಣುವಿನಂತೆ ತೇಜಸ್ಸೂ, ಪರಾಕ್ರಮವುಳ್ಳವನೂ, ವಿಷ್ಣುಭಕ್ತನೂ, ಸರ್ವಸಾಹಸನೂ ಆದ ಒಬ್ಬ ಪುತ್ರನನ್ನು ಅನುಗ್ರಹಿಸು ಎಂದು ಪ್ರಾರ್ಥಿಸಲು,

೬-೭. ನಾನು ಆ ಇಂದ್ರನಂತಹ ಪಾಲಕನಾದ ಮಗನನ್ನು ಕೊಟ್ಟೆನೆಂದು ಹೇಳಿದನು. ಅದು ಮೊದಲುಗೊಂಡು ಆತನು ಯೋಗ್ಯಳಾದ ಕನ್ಯೆಯನ್ನು ಹುಡುಕುತ್ತಿದ್ದಾನೆ. ಬಹುಶಃ ನೀನು ಚೆನ್ನಾಗಿರುವಂತೆ ಅವನಿಗೆ ಕಾಣುತ್ತದೆ.

೮. ಇವನನ್ನು ವರನೆಂಬುದಾಗಿ ವರಿಸು. ಈತನಿಂದ ನಿನಗೆ ಒಬ್ಬ ಮಗನು ಹುಟ್ಟುತ್ತಾನೆ. ಅವನು ಪುಣ್ಯಾತ್ಮನಾದ ವಿಷ್ಣುವಿನಂತೆ ತೇಜಸ್ಸೂ, ಪರಾಕ್ರಮವೂ ಉಳ್ಳವನಾಗುತ್ತಾನೆ.

ಏತತ್ತೇ ಸರ್ವಮಾಖ್ಯಾತಂ ಯಥಾ ತ್ವಂ ಪರಿಪೃಚ್ಛಸಿ ।
ಅಯಂ ಭರ್ತಾ ತವ ಶ್ರೇಷ್ಠೋ ಭವಿಷ್ಯತಿ ನ ಸಂಶಯಃ ॥ ೯ ॥

ಸು ಶಂಖಸ್ಯಾಪಿ ಯಶ್ಶಾಪೋ ವೃಥಾ ಸೋಽಪಿ ಭವಿಷ್ಯತಿ ।
ಏವಂ ಜಾತೇ ಮಹಾಭಾಗೇ ಪುತ್ರೇ ಧರ್ಮಪ್ರಚಾರಿಣಿ ॥ ೧೦ ॥

ಭವಿಷ್ಯತಿ ಸುಖಂ ಭದ್ರೇ ಸತ್ಯಂ ಸತ್ಯಂ ವದಾಮ್ಯಹಂ ।
ಸುಕ್ಷೇತ್ರೇ ಕರ್ಷಕೋ ಯಾದೃಗ್ಬೀಜಂ ವಪತಿ ತತ್ಪರಃ ॥ ೧೧ ॥

ಸ ತಥಾ ಭುಂಜತೇ ದೇವಿ ಯಥಾ ಬೀಜಂ ತಥಾ ಫಲಂ ।
ಅನ್ಯಥಾ ನೈವ ಜಾಯೇತ ತತ್ಸರ್ವಂ ಸದೃಶಂ ಭವೇತ್ ॥ ೧೨ ॥

ಅಯಮೇವ ಮಹಾಭಾಗಸ್ತಪಸ್ವೀ ಪುಣ್ಯವೀರ್ಯವಾನ್ ।
ಅಸ್ಯ ವೀರ್ಯಾತ್ಸಮುತ್ಪನ್ನೋ ಹ್ಯಸ್ಯೈವ ಗಣಸಂಪದಾ ॥ ೧೩ ॥

ಯುಕ್ತಃ ಪುತ್ರೋ ಮಹಾತೇಜಾಃ ಸರ್ವಧರ್ಮಭೃತಾಂ ವರಃ ।
ಭವಿಷ್ಯತಿ ಮಹಾಭಾಗೋ ಯುಕ್ತಾತ್ಮಾ ಯೋಗತತ್ತ್ವವಿತ್ ॥ ೧೪ ॥

---

೯. ನೀನು ಅಪೇಕ್ಷಿಸಿದಂತೆ ಎಲ್ಲವನ್ನೂ ಹೇಳಿದ್ದೇನೆ. ಈತನು ನಿನಗೆ ಉತ್ತಮನಾದ ಪತಿಯಾಗುತ್ತಾನೆ, ಸಂಶಯವಿಲ್ಲ. ಸುಶಂಖನಿಂದ ಬಂದಿರುವ ಶಾಪವೂ ವ್ಯರ್ಥವಾಗಿ ಹೋಗುತ್ತದೆ.

೧೦. ಧರ್ಮಿಷ್ಠನಾದ ಮಗನು ಹುಟ್ಟಿದರೆ ನಿನಗೆ ಖಂಡಿತವಾಗಿಯೂ ಸುಖವು ಉಂಟಾಗುತ್ತದೆ. ಇದು ಸತ್ಯವೆಂದು ಖಂಡಿತವಾಗಿಯೂ ಹೇಳುತ್ತೇನೆ.

೧೧.೧೨. ಒಳ್ಳೆಯ ಭೂಮಿಯಲ್ಲಿ ರೈತನು ಬೀಜವನ್ನು ಬಿತ್ತಿದರೆ ಉತ್ತಮವಾದ ಫಲವನ್ನೇ ಹೊಂದಿ ಸುಖಿಸುತ್ತಾನೆ. ಬೇರೆರೀತಿಯಾಗಿ ಆಗುವುದೇ ಇಲ್ಲ. ಅದರಂತೆಯೇ ಎಲ್ಲವೂ ನೆರವೇರುವುದು.

೧೩. ಈತನು ಮಹಾನುಭಾವನು, ತಪಸ್ವಿಯು, ಬಹು ಪುಣ್ಯಶಾಲಿಯು. ಈತನ ವೀರ್ಯದಿಂದ ಹುಟ್ಟಿದವನು ಇವನ ಗುಣಗಳಿಂದಲೇ ಕೂಡಿರುತ್ತಾನೆ.

೧೪. ಅವನಂತೆ ಮಹಾ ತೇಜಸ್ವಿಯಾಗಿ, ಧರ್ಮಿಷ್ಠರೊಳಗೆ ಉತ್ತಮನಾಗುತ್ತಾನೆ. ಜಿತೇಂದ್ರಿಯನೂ, ಯೋಗತತ್ತ್ವವನ್ನು ಬಲ್ಲವನೂ ಆಗುತ್ತಾನೆ.

ಏವಂ ಹಿ ವಾಕ್ಯಂ ಸುನಿಶಮ್ಯ ಬಾಲಾ
ರಂಭಾಪ್ರಯುಕ್ತಂ ಶಿವದಾಯಕಂ ತತ್ ।
ವಿಚಿಂತ್ಯ ಬುದ್ಧ್ಯಾ ಹಿ ಸಖೀಮುಖೋದ್ಗತಂ
ಮೇನೇಽಥ ಸರ್ವಂ ಪರಿಸತ್ಯಮೇವ ಹಿ ॥ ೧೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ವೇನೋಪಾಖ್ಯಾನೇ ಚತುಸ್ತ್ರಿಂಶೋಽಧ್ಯಾಯಃ

---

೧೫. ಈರೀತಿಯಾಗಿ ಸಖಿಯಾದ ರಂಭೆಯ ಮಂಗಳಕರವಾದ ಮಾತನ್ನು ಯೋಚಿಸಿನೋಡಿ ಸರ್ವವೂ ಸತ್ಯವಾಗಿದೆಯೆಂದು ತಿಳಿದಳು.

ಇಲ್ಲಿಗೆ ಪದ್ಮಮಹಾಪುರಾಣದಲ್ಲಿ ಭೂಮಿಖಂಡದಲ್ಲಿ ವೇನನ ಚರಿತ್ರೆಯಲ್ಲಿ
ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ಪಂ ಚ ತ್ರಿಂ ಶೋ ಧ್ಯಾ ಯಃ

ಸುನೀಥೋವಾಚ

ಸತ್ಯಮುಕ್ತಂ ತ್ವಯಾ ಭದ್ರೇ ಏವಮೇತತ್ಕರೋಮ್ಯಹಂ ।
ಅನಯಾ ವಿದ್ಯಯಾ ವಿಪ್ರಂ ಮೋಹಯಿಷ್ಯಾಮಿ ನಾನ್ಯಥಾ ॥ ೧ ॥

ಸ್ವಾಹಾಯ್ಯಂ ದೇಹಿ ಮೇ ಪುಣ್ಯಂ ಯೇನ ಗಚ್ಛಾಮಿ ಸಾಂಪ್ರತಂ ।
ಏವಮುಕ್ತಾ ತಯಾ ರಂಭಾ ತಾಮುವಾಚ ಯಶಸ್ವಿನೀ ॥ ೨ ॥

ಕೀದೃಶಂ ದದ್ಮಿ ಸಾಹಾಯ್ಯಂ ತತ್ತ್ವ ಕಥಯ ಭಾಮಿನಿ ।
ದೂತತ್ವಂ ಗಚ್ಛ ಮೇ ಭದ್ರೇ ಏನಂ ಪ್ರತಿ ಸುಸಾಂಪ್ರತಂ ॥ ೩ ॥

ಏವಮುಕ್ತ್ವಾ ತು ಸಾ ರಂಭಾಂ ವಿರರಾಮ ಸುಲೋಚನಾ ।
ಏವಮೇತತ್ಪ್ರತಿಜ್ಞಾತಂ ರಂಭಯಾ ದೇವಭಾರ್ಯಯಾ ॥ ೪ ॥

---

### ಮೂವತ್ತೈದನೆಯ ಅಧ್ಯಾಯವು.

೧. ಸುನೀಥೆಯು ಹೇಳುತ್ತಾಳೆ :—ಅಮ್ಮ! ನೀನು ಹೇಳಿದುದು ಸತ್ಯವಾಗಿದೆ. ನಾನು ಹಾಗೆಯೇ ಮಾಡುತ್ತೇನೆ. ಈ ನನ್ನ ಮೋಹಕವಿದ್ಯೆಯಿಂದ ಈ ಬ್ರಾಹ್ಮಣ ನನ್ನು ಹಾಗೆ ಮಾಡದೆ ಬಿಡುವುದೇ ಇಲ್ಲ.

೨. ಆದಕ್ಕಾಗಿ ನಾನು ಈಗಲೇ ಹೋಗುತ್ತೇನೆ. ನನಗೆ ಕೊಂಚ ಸಹಾಯ ಮಾಡು ಎಂದಳು. ಈ ಮಾತನ್ನು ಕೇಳಿ ರಂಭೆಯು ನಿನಗೆ ಯಾವರೀತಿಯಾಗಿ ಸಹಾಯಮಾಡಬೇಕೆಂದನ್ನು ತಿಳಿಸು ಎಂದಳು.

೩-೪. ನನಗೆ ನೀನು ಈಗ ದೂತಿಯಾಗಿ ಆತನ ಬಳಿಗೆ ಹೋಗೆನ್ನಲು

ಕರಿಷ್ಯೇ ತವ ಸಾಹಾಯ್ಯಮಾದೇಶೋ ಮಮ ದೀಯತಾಂ ।
ಸದ್ಭಾವೇನ ವಿಶಾಲಾಕ್ಷೀ ರೂಪಯೌವನಶಾಲಿನೀ ॥ ೫ ॥

ಮಾಯಯಾ ದಿವ್ಯರೂಪಾ ಸಾ ಸಂಬಭೂವ ವರಾನನಾ ।
ರೂಪೇಣಾಪ್ರತಿಮಾ ಲೋಕೇ ಮೋಹಯಂತೀ ಜಗತ್ತ್ರಯಂ ॥ ೬ ॥

ಮೇರೋಶ್ಚೈವ ಮಹಾಪುಣ್ಯೇ ಶಿಖರೇ ಚಾರುಕಂದರೇ ।
ನಾನಾಧಾತುಸಮಾಕೀರ್ಣೇ ನಾನಾರತ್ನೋಪಶೋಭಿತೇ ॥ ೭ ॥

ದೇವವೃಕ್ಷೈಸ್ಸಮಾಕೀರ್ಣೇ ಬಹುಪುಷ್ಪೋಪಶೋಭಿತೇ ।
ದೇವವೃಂದಸಮಾಕೀರ್ಣೇ ಗಂಧರ್ವಾಪ್ಸರಸೇವಿತೇ ॥ ೮ ॥

ಮನೋಹರೇ ಸುರಮ್ಯೇ ಚ ಶೀತಚ್ಛಾಯಾಸಮಾಕುಲೇ ।
ಚಂದನಾನಾಮಶೋಕಾನಾಂ ತರೂಣಾಂ ಚಾರುಹಾಸಿನೀ ॥ ೯ ॥

ಡೋಲಾಯಾಂ ಸಾ ಸಮಾರೂಢಾ ಸರ್ವಶೃಂಗಾರಶೋಭಿತಾ ।
ಕೌಶೇಯೇನ ಸುನೀಲೇನ ರಾಜಮಾನಾ ವರಾನನಾ ॥ ೧೦ ॥

---

ಹಾಗೆಯೇ ಆಗಲೆಂದು ಒಪ್ಪಿ ನಿನಗೆ ಖಂಡಿತವಾಗಿಯೂ ಸಹಾಯಮಾಡುತ್ತೇನೆ ಎಂದು ಪ್ರತಿಜ್ಞೆಮಾಡಿ, ನಾನು ಏನುಮಾಡಬೇಕೆಂಬುದನ್ನು ತಿಳಿಸು ಎಂದಳು.

೫. ಆಮೇಲೆ ಸುನೀಥೆಯು ತನ್ನ ಮಾಯಾವಿದ್ಯದಿಂದ ರೂಪಯೌವನಸಂಪನ್ನಳಾದ ಓರ್ವ ಕನ್ಯೆಯಾದಳು.

೬-೧೦. ಆ ಕನ್ಯೆಯಾದರೋ ತನ್ನ ಮಾಯೆಯಿಂದ ಅಸದೃಶವಾದ ರೂಪಲಾವಣ್ಯಗಳಿಂದ ಮೂರು ಲೋಕವನ್ನೂ ಮೋಹಗೊಳಿಸುವಂತಿದ್ದಳು. ಈರೀತಿ ಸುಂದರರೂಪವನ್ನಾಂತು ಮೇರುವಿನ ತಪ್ಪಲಲ್ಲಿ ವಿಹರಿಸುತ್ತಿದ್ದಳು. ಆಮೇರುಪರ್ವತವು ಬಗೆಬಗೆಯ ಧಾತುಗಳಿಂದಲೂ ನಾನಾ ರತ್ನಗಳಿಂದಲೂ ಫಲಪುಷ್ಪಭರಿತಗಳಾದ ಕಲ್ಪವೃಕ್ಷಗಳಿಂದಲೂ ಕಂಗೊಳಿಸುತ್ತಿತ್ತು. ದೇವಗಂಧರ್ವರಿಗೆ ಆಶ್ರಯವಾಗಿರುವ ಇಂತಹ ಮೇರುಪರ್ವತದ ಮನೋಹರವಾದ ಒಂದು ಗುಹೆಯಬಳಿ ತಂಪಾದ ಸ್ಥಳದಲ್ಲಿ ಆ ಕನ್ಯೆಯು ನೀಲಿಬಣ್ಣದ ರೇಷ್ಮೆಯಸೀರೆಯನ್ನುಟ್ಟು, ಸರ್ವಾಲಂಕಾರಭೂಷಿತೆಯಾಗಿ ಉಯ್ಯಾಲೆಯಲ್ಲಿ ಕುಳಿತು ತೂಗಿಕೊಳ್ಳುತ್ತಿದ್ದಳು.

ಅತೀವ ಶೋಭಮಾನೇನ ಕಂಚುಕೇನ ದ್ವಿಜೋತ್ತಮಾಃ ।
ಸರ್ವಾಂಗಸುಂದರೀ ಬಾಲಾ ವೀಣಾವಾದನತತ್ಪರಾ ॥ ೧೧ ॥

ಗಾಯಮಾನಾ ವರಂ ಗೀತಂ ಸುಸ್ವರಂ ಸುವಿಮೋಹನಂ ।
ತಾಭಿಃ ಪರಿವೃತಾ ಬಾಲಾ ಸಖೀಭಿಃ ಸುಮನೋಹರಾ ॥ ೧೨ ॥

ಅಂಗಸ್ತು ಕಂದರೇ ಪುಣ್ಯೇ ಏಕಾಂತೇ ಧ್ಯಾನಮಾಸ್ಥಿತಃ ।
ಕಾಮಕ್ರೋಧವಿಹೀನಸ್ತು ಧ್ಯಾಯಮಾನೋ ಜನಾರ್ದನಂ ॥ ೧೩ ॥

ಸ ಶ್ರುತ್ವಾ ಸುಸ್ವರಂ ಗೀತಂ ಮಧುರಂ ಸುಮನೋಹರಂ ।
ತಾಲಮಾನಕ್ರಿಯೋಪೇತಂ ಸರ್ವಸತ್ತ್ವವಿಕರ್ಷಣಂ ॥ ೧೪ ॥

ಧ್ಯಾನಾಚ್ಚಲಿತಚಿತ್ತಸ್ತು ಮಾಯಾಗೀತೇನ ಮೋಹಿತಃ ।
ಸಮುತ್ಥಾಯಾಸನಾತ್ತೂರ್ಣಂ ಪಶ್ಯಮಾನೋ ಮುಹುರ್ಮುಹುಃ ॥ ೧೫ ॥

ಜಗಾಮ ತತ್ರ ವೇಗೇನ ಮಾಯಾಚಲಿತಮಾನಸಃ ।
ಡೋಲಾಸಂಸ್ಥಾಂ ವಿಪಶ್ಯೈವ ವೀಣಾದಂಡಕಧಾರಿಣೀಂ ॥ ೧೬ ॥

ಹಾಸ್ಯಮಾನಾಂ ಸುಗಾಯಂತೀಂ ಪೂರ್ಣಚಂದ್ರನಿಭಾನನಾಂ ।
ಮೋಹಿತಸ್ತೇನ ಗೀತೇನ ರೂಪೇಣಾಽಪಿ ಮಹಾಯಶಾಃ ॥ ೧೭ ॥

---

೧೧-೧೨. ಬಹು ರಮ್ಯವಾದ ರವಿಕೆಯನ್ನು ಹಾಕಿಕೊಂಡು, ವೀಣೆಯನ್ನು ನುಡಿಸುತ್ತ ಸುಸ್ವರವಾಗಿ ಮೋಹನರಾಗವನ್ನು ಹಾಡುತ್ತಿದ್ದಳು, ಸಖಿಯರು ಅವಳ ಸುತ್ತಲೂ ನೆರೆದು ಕುಳಿತಿದ್ದರು.

೧೩. ಇತ್ತ ಅಂಗನು ಕಾಮಕ್ರೋಧಗಳನ್ನು ಬಿಟ್ಟು ಜನಾರ್ದನನ್ನು ಧ್ಯಾನಿಸುತ್ತ ಸಮೀಪದಲ್ಲಿರುವ ಒಂದು ಗುಹೆಯಲ್ಲಿ ಧ್ಯಾನಮಗ್ನನಾಗಿದ್ದನು.

೧೪. ಸುಸ್ವರವಾಗಿಯೂ, ಮಧುರವಾಗಿಯೂ, ಮನೋಹರ ತಾಳಕ್ಕೆ ಸರಿಯಾಗಿಯೂ ಸಮಸ್ತ ಪ್ರಾಣಿಗಳನ್ನೂ ಆಕರ್ಷಿಸುವಂತಹ ಈ ಸಂಗೀತವನ್ನು ಕೇಳಿ ಧ್ಯಾನದಿಂದ ಮನಸ್ಸನ್ನು ಹಿಂದಿರುಗಿಸಿ ಮಾಯಾಗೀತದಿಂದ ಮೋಹಿತನಾದನು.

೧೫. ಆಸನದಿಂದ ಬೇಗನೆದ್ದು, ಪದೇಪದೇ ಅತ್ತಿತ್ತ ನೋಡುತ್ತಾ ಮಾಯೆಯಿಂದ ಮನಸ್ಸು ಚಲಿಸಿದವನಾಗಿ ಅಲ್ಲಿಗೆ ವೇಗದಿಂದ ಹೋದನು.

೧೬-೧೭. ಕೈಯಲ್ಲಿ ವೀಣೆ ಹಿಡಿದು, ಮುಗುಳ್ನಗೆಯನ್ನು ಸೂಸುತ್ತಾ ಹಾಡುತ್ತಿರುವ ಆ ಪೂರ್ಣಚಂದ್ರಮುಖಿಯನ್ನು ನೋಡಿ ಆಕೆಯ ರೂಪಿನಿಂದಲೂ, ಗಾನದಿಂದಲೂ ಮೋಹಿತನಾದನು.

ತಸ್ಯಾ ಲಾವಣ್ಯಭಾವೇನ ಮನ್ಮಥಸ್ಯ ಶರಾಹತಃ ।
ಆಕುಲವ್ಯಾಕುಲೋ ಜಾತೋ ಮುನಿಪುತ್ರೋ ದ್ವಿಜೋತ್ತಮಾಃ ॥ ೧೮ ॥

ಪ್ರಲಪತ್ಯತಿಮೋಹೇನ ಜೃಂಭತೇ ಚ ಪುನಃ ಪುನಃ ।
ಸ್ವೇದಃ ಕಂಪೋಽಥ ಸಂತಾಪಸ್ತಸ್ಯಾಂಗೇ ಜಾಯತೇ ಕ್ಷಣಾತ್ ॥ ೧೯ ॥

ಮುಹ್ಯತೇ ಚ ಮಹಾಮೋಹೈರ್ಗ್ಲಾನಃ ಸ್ಖಲಿತಮಾನಸಃ ।
ವೇಪಮಾನಸ್ತತಶ್ಚುಕ್ಷೋ ದೂಯಮಾನಃ ಸಮಾಗತಃ ॥ ೨೦ ॥

ತಾಮಾಲೋಕ್ಯ ವಿಶಾಲಾಕ್ಷೀಂ ಮೃತ್ಯೋಃ ಕನ್ಯಾಂ ಯಶಸ್ವಿನೀಂ ।
ಅಥೋವಾಚ ಮಹಾತ್ಮಾ ಸ ಸುನೀಥಾಂ ಚಾರುಹಾಸಿನೀಂ ॥ ೨೧ ॥

ಕಾ ತ್ವಂ ಕಸ್ಯ ವರಾರೋಹೇ ಸಖೀಭಿಃ ಪರಿವಾರಿತಾ ।
ಕೇನ ಕಾರ್ಯೇಣ ಸಂಪ್ರಾಪ್ತಾ ಕೇನ ತ್ವಂ ಪ್ರೇಷಿತಾ ವನಂ । ॥ ೨೨ ॥
ತವಾಂಗಂ ಸುಂದರಂ ಸರ್ವಂ ಸಮಾಭಾತಿ ವರಾನನೇ ।
ಸಮಾಚಕ್ಷ್ವ ಮಾಮಾದ್ಯೈವ ಪ್ರಸಾದಸುಮುಖೀ ಭವ ॥ ೨೩ ॥

---

೧೮. ಆಕೆಯ ಲಾವಣ್ಯದಿಂದ ಮನ್ಮಥನ ಬಾಣಪರವಶನಾಗಿ ಆ ಮುನಿ ಪುತ್ರನು ದುಃಖಿತನಾದನು.

೧೯. ಅತಿಯಾದ ಮೋಹದಿಂದ ತನಗೆತಾನೇ ಮಾತಾಡಿಕೊಳ್ಳುವನು. ಬಾರಿ ಬಾರಿಗೂ ಆಕಳಿಸುವನು. ಬೆವರು, ನಡುಕ, ಉಷ್ಣಗಳು ಆತನ ದೇಹದಲ್ಲಿ ಕ್ಷಣ ಕಾಲದಲ್ಲೇ ಉಂಟಾದವು.

೨೦. ಮೋಹದಿಂದ ಆಗಾಗ ಮೂರ್ಛೆಹೋಗುವನು. ದೇಹದಲ್ಲಿ ಬಳಲಿಕೆ, ಬಡವಾಗುವಿಕೆಗಳುಂಟಾದುವು. ಆಮೇಲೆ ನಡುಗುತ್ತಾ, ಬಳಲುತ್ತಾ, ಪರಿತಾಪ ಪಡುತ್ತಾ ಅಲ್ಲಿಗೆ ಬಂದು,

೨೧. ಆ ವಿಶಾಲಾಕ್ಷಿಯಾದ, ಮೃತ್ಯುವಿನ ಕನ್ಯೆಯಾದ ಸುನೀಥೆಯನ್ನು ಕುರಿತು

೨೨. ಅಮ್ಮ, ನೀನಾರು, ಯಾರಸಂಬಂಧಿ? ಸಖಿಯರಿಂದೊಡಗೂಡಿ ಇಲ್ಲಿಗೆ ಬಂದಿರುವೆಯಲ್ಲ? ಏತಕ್ಕೋಸ್ಕರ ಬಂದಿರುವೆ? ಇಲ್ಲಿಗೆ ಯಾರು ಕಳುಹಿಸಿದರು?

೨೩. ನಿನ್ನ ಅವಯವಗಳೆಲ್ಲವೂ ಬಹು ಸುಂದರವಾಗಿ ಕಾಣುತ್ತವೆ. ನೀನು ಬಹುಚಲುವೆ. ಇವೆಲ್ಲವನ್ನೂ ಈಗಲೇ ಹೇಳಿ, ನನ್ನ ವಿಷಯದಲ್ಲಿ ಅನುಗ್ರಹವನ್ನು ತೋರಿಸು ಎಂದನು.

**ಮಾಯಾಮೋಹೇನ ಸಂಮುಗ್ಧಸ್ತಸ್ಯಾಃ ಕರ್ಮ ನ ವಿಂದತಿ ।**
**ಮಾರ್ಗಣೈರ್ಮನ್ಮಥಸ್ಯಾಪಿ ಪರಿವಿದ್ಧೋ ಮಹಾಮುನಿಃ ॥ ೨೪ ॥**

**ಏವಂ ವಿಧಂ ಮಹದ್ವಾಕ್ಯಂ ಸಮಾಕರ್ಣ್ಯ ಮಹಾಮತೇಃ ।**
**ನೋವಾಚ ಕಿಂಚಿತ್ಸಾ ವಿಪ್ರಂ ಸಮಾಲೋಕ್ಯ ಸಖೀಮುಖಂ ॥ ೨೫ ॥**

**ರಂಭಾಯಾಃ ಸಾ ಸುನೀಥಾ ತು ಸಂಜ್ಞಯಾ ಪರಿತೋಷಿತಾ ।**
**ಸಮುವಾಚ ತತೋ ರಂಭಾ ಸಾದರಂ ತಂ ದ್ವಿಜೋತ್ತಮಂ ॥ ೨೬ ॥**

**ಇಯಂ ಕನ್ಯಾ ಮಹಾಭಾಗ ಮೃತ್ಯೋಶ್ಚೈವ ಮಹಾತ್ಮನಃ ।**
**ಸುನೀಥಾ ಸುಪ್ರಸಿದ್ಧೇಯಂ ಸರ್ವಲಕ್ಷಣಸಂಯುತಾ ॥ ೨೭ ॥**

**ಪತಿಮನ್ವೇಷತೇ ಬಾಲಾ ಧರ್ಮವಂತಂ ತಪೋನಿಧಿಂ ।**
**ಶಾಂತಂ ದಾಂತಂ ಮಹಾಪ್ರಾಜ್ಞಂ ವೇದವಿದ್ಯಾವಿಶಾರದಂ ॥ ೨೮ ॥**

---

೨೪. ಆಕೆಯ ಮಾಯಾಮೋಹದಿಂದ ಮೋಹಿತನಾಗಿ, ಕಾಮಪರವಶನಾಗಿ ಏನುಮಾಡಬೇಕೆಂದು ತಿಳಿಯದವನಾದನು.

೨೫. ಆತನ ಈರೀತಿಯಾದ ಮಾತನ್ನು ಕೇಳಿ ಸುನೀಥೆಯು ಸಖಿಯರ ಮುಖವನ್ನು ನೋಡುತ್ತ ಆತನಿಗೆ ಏನೊಂದುತ್ತರವನ್ನೂ ಕೊಡಲಿಲ್ಲ.

೨೬. ಆ ಸುನೀಥೆಯು ಪುನಃ ರಂಭೆಯ ಮುಖವನ್ನು ನೋಡಿದಳು. ಆ ಸಂಜ್ಞೆಯಿಂದ ರಂಭೆಯೂ ಕೂಡ ಸಂತೋಷಪಟ್ಟು, ಆ ಬ್ರಾಹ್ಮಣನನ್ನು ಕುರಿತು ಹೇಳಿದಳು.

೨೭. ಈಕೆಯು ಮೃತ್ಯುವಿನ ಮಗಳು. ಈಕೆಯು ಸುನೀಥೆಯೆಂದು ಪ್ರಸಿದ್ಧಳಾಗಿದ್ದಾಳೆ. ಸರ್ವಲಕ್ಷಣದಿಂದ ಕೂಡಿದ್ದಾಳೆ.

೨೮. ಈಕೆಯು ಧರ್ಮಿಷ್ಠ, ತಪೋನಿಧಿ, ಶಾಂತ, ದಾಂತ, ಮಹಾಪ್ರಾಜ್ಞ, ವೇದವಿದ್ಯೆಯಲ್ಲಿ ನಿಷ್ಣಾತ ಇಂತಹನಾದ ಗಂಡನನ್ನು ಹುಡುಕುತ್ತಿದ್ದಾಳೆ ಎನ್ನಲು,

ತಾಮುವಾಚ ತತಸ್ತ್ವಂಗೋ ರಂಭಾಮಪ್ಸರಸಾಂ ವರಾಂ ।
ಮಯಾ ಚಾರಾಧಿತೋ ವಿಷ್ಣುಃ ಸರ್ವವಿಶ್ವಮಯೋ ಹರಿಃ ॥ ೨೯ ।

ತೇನ ದತ್ತೋ ವರೋ ಮಹ್ಯಂ ಪುತ್ರಾಖ್ಯಃ ಸರ್ವಸಿದ್ಧಿದಃ ।
ತನ್ನಿಮಿತ್ತಮಹಂ ಭದ್ರೇ ಸುತಾರ್ಥಂ ನಿತ್ಯಮೇವ ಚ ॥ ೩೦ ॥

ಕಸ್ಯಚಿತ್ಪುಣ್ಯವೀರ್ಯಸ್ಯ ಕನ್ಯಾಮೇಕಾಮಚಿಂತಯಂ ।
ಸದೃಶಾಹಂ ನ ಪಶ್ಯಾಮಿ ಸುಶುಭಾಮಾತ್ಮನಃ ಕ್ವಚಿತ್ ॥ ೩೧ ॥

ಇಯಂ ಧರ್ಮಸ್ಯ ವೈ ಕನ್ಯಾ ಧರ್ಮಾಚಾರಾ ವರಾನನಾ ।
ಮಾಮೇವ ಹಿ ಭಜತ್ವೇಷಾ ಯದಿ ಕಾಂತಮಿಹೇಚ್ಛತಿ ॥ ೩೨ ॥

ಯಂ ಯಮಿಚ್ಛೇದಿಯಂ ಬಾಲಾ ತಂ ತಂ ದದ್ಮಿ ನ ಸಂಶಯಃ ।
ದೇಯಂ ವಾಽದೇಯಮೇವಾಪಿ ತ್ವಸ್ಯಾಃ ಸಂಗಮಕಾರಣಾತ್ ॥ ೩೩ ॥

ಏವಮೇವ ತ್ವಯಾ ದೇಯಂ ರಂಭೋವಾಚ ದ್ವಿತೋತ್ತಮಂ ।
ವಿಪ್ರೇಂದ್ರ ತ್ವಂ ಶೃಣುಷ್ವೈವ ಮಮ ವಾಕ್ಯಂ ಚ ಸಾಂಪ್ರತಂ ॥ ೩೪ ॥

---

೨೯. ಆಗ ಅಂಗನು ಸರ್ವಲೋಕಾತ್ಮಕನಾದ ವಿಷ್ಣುವನ್ನು ನಾನು ಆರಾಧಿಸುತ್ತೇನೆ. ಆ ಹರಿಯು ಸರ್ವಸಿದ್ಧನಾದ ಮಗನನ್ನು ನಿನಗೆ ಕೊಡುತ್ತೇನೆಂದು ವರವನ್ನು ಕೊಟ್ಟಿರುವನು.

೩೦-೩೧. ಆದರಿಂದಲೇ ಪುತ್ರಪ್ರಾಪ್ತಿಗಾಗಿ ನಿತ್ಯವೂ, ಯಾವನಾದರೂ ಪುಣ್ಯ ಪುರುಷನ ಮಗಳು ಇರುವಳೋ ಎಂದು ಯೋಚಿಸುತ್ತಿರುವೆನು. ಎಷ್ಟುನೋಡುತ್ತಿದ್ದರೂ ನನಗೆ ಯೋಗ್ಯಳಾದವಳು ಇರುವಂತೆಯೇ ಕಾಣಲಿಲ್ಲ.

೩೨. ಧರ್ಮವಾದ ಆಕಾರವುಳ್ಳ ಮೃತ್ಯುವಿನ ಕನ್ಯೆಯಾದ ಈಕೆಯು ಗಂಡನನ್ನು ವರಿಸುವಪಕ್ಷದಲ್ಲಿ ನನ್ನನ್ನೆ ವರಿಸಲಿ.

೩೩. ಈಕೆಯನ್ನು ಹೊಂದಬೇಕೆಂಬ ಆಸೆಯು ನನಗಿರುವುದರಿಂದ ಕೊಡುವುದಕ್ಕೆ ಸಾಧ್ಯವಾಗಲಿ, ಅಸಾಧ್ಯವಾಗಲಿ, ಇವಳು ಅಪೇಕ್ಷಿಸಿದುದೆಲ್ಲವನ್ನೂ ತಂದುಕೊಡುತ್ತೇನೆ ಎಂದನು.

೩೪. ಅದನ್ನು ಕೇಳಿ ಆ ರಂಭೆಯು ಹಾಗೇ ಆಗಲಿ, ನೀನು ಕೊಡಬೇಕಾದುದೇನೆಂಬುದನ್ನು ಹೇಳುವೆನು. ಎಲೈ ಬ್ರಾಹ್ಮಣೋತ್ತಮನೆ, ಈಗ ನನ್ನ ಮಾತೊಂದನ್ನು ಕೇಳು.

ಏಷಾ ನೈವ ತ್ವಯಾ ತ್ಯಾಜ್ಯಾ ಧರ್ಮಪತ್ನೀ ಸದೈವ ಹಿ ।
ಅಸ್ಯಾ ದೋಷಗುಣೌ ಚೈವ ಗ್ರಾಹ್ಯೌ ನೈವ ಕದಾ ತ್ವಯಾ ॥ ೩೫ ॥

ಇತ್ಯರ್ಥೇ ಪ್ರತ್ಯಯಂ ವಿಪ್ರ ಪ್ರತ್ಯಕ್ಷಂ ಪರಿದರ್ಶಯ ।
ಸ್ವಹಸ್ತಂ ದೇಹಿ ವಿಪ್ರೇಂದ್ರ ಸತ್ಯಪ್ರತ್ಯಯದಾಯಕಂ ॥ ೩೬ ॥

ಏವಮಸ್ತು ಮಯಾ ದತ್ತೋ ಹ್ಯಸ್ಯಾ ಹಸ್ತೋ ನ ಸಂಶಯಃ ।

॥ ಸೂತ ಉವಾಚ ॥

ಏವಂ ಸಂಬಂಧಿಕಂ ಕೃತ್ವಾ ಸತ್ಯಪ್ರತ್ಯಯಕಾರಕಂ ।
ಗಾಂಧರ್ವೇಣ ವಿವಾಹೇನ ಸುನೀಥಾಮುಪಯೇಮಿವಾನ್ ॥ ೩೭ ॥

ತಸ್ಮೈ ದತ್ವಾ ಸುನೀಥಾಂ ತಾಂ ರಂಭಾ ಹೃಷ್ಟೇನ ಚೇತಸಾ ।
ಸಾ ತಾಂ ಚಾಮಂತ್ರಯಿತ್ವಾ ವೈ ಗತಾ ಗೇಹಂ ಸ್ವಕಂ ಪುನಃ ॥ ೩೮ ॥

ಪ್ರಹೃಷ್ಟಚೇತಸಸ್ಸಖ್ಯಃ ಸ್ವಸ್ಥಾನಂ ಪ್ರತಿಜಗ್ಮಿರೇ ।
ಗತಾಸು ತಾಸು ಸರ್ವಾಸು ಸಖೀಷು ದ್ವಿಜಸತ್ತಮಃ ॥ ೩೯ ॥

---

೩೫. ಇವಳು ನಿನಗೆ ಧರ್ಮಪತ್ನಿಯಾಗುವಳು. ಈಕೆಯನ್ನು ನೀನು ಯಾವಾಗಲೂ ಬಿಡಕೂಡದು. ಅಲ್ಲದೆ ಇವಳ ಗುಣದೋಷಗಳನ್ನು ನೀನು ಯಾವಾಗಲೂ ಮನಸ್ಸಿಗೆ ತಂದುಕೊಳ್ಳಲೇ ಕೂಡದು. ಈ ವಿಷಯದಲ್ಲಿ ನಮಗೆ ಪ್ರತ್ಯಕ್ಷವಾದ ನಂಬುಗೆಯನ್ನು ತೋರಿಸಿಕೊಡಬೇಕು.

೩೬. ಕೈಮೇಲೆ ಕೈ ಹಾಕಿ ಭಾಷೆಯನ್ನು ಕೊಡು. ಅದು ನಂಬುಗೆಗೆ ಕಾರಣವೆಂದಳು. ಈತನು ಹಾಗೇ ಆಗಲೆಂದು ಹೇಳಿ ಇಗೋ ಕೈಯಲ್ಲಿ ಕೈ ಹಾಕಿರುವೆನು ಸಂಶಯವಿಲ್ಲ ಎಂದನು.

೩೭. ಸೂತನು ಹೇಳುತ್ತಾನೆ :—ಈ ರೀತಿ ಭಾಷೆಯನ್ನು ಕೊಟ್ಟು ಕೈಮುಟ್ಟಿ ಗಾಂಧರ್ವ ವಿವಾಹದಿಂದ ಆ ಸುನೀಥೆಯನ್ನು ಮದುವೆಯಾದನು.

೩೮. ರಂಭೆಯು ಆಕೆಯನ್ನು ಸಂತೋಷದಿಂದ ಅಂಗನಿಗೆ ಕೊಟ್ಟು ಆಕೆಯ ಅನುಮತಿಯಿಂದ ಮನೆಗೆ ಹೋದಳು.

೩೯. ಸಖಿಯರೂ ಸಂತೋಷಗೊಂಡು ಅವರವರ ಮನೆಗಳಿಗೆ ಹೋದರು. ಹಾಗೆ ಅವರು ಹೋದಮೇಲೆ ಆ ಅಂಗನು ಆ ಪ್ರಿಯೆಯಾದ ಹೆಂಡತಿಯೊಡನೆ ರಮಿಸುತ್ತಿದ್ದನು.

ರೇಮೇ ತ್ವಂಗಸ್ತಯಾ ಸಾರ್ಧಂ ಪ್ರಿಯಯಾ ಭಾರ್ಯಯಾ ಸಹ ।
ತಸ್ಯಾಮುತ್ಪಾದ್ಯ ಪುತ್ರೈಕಂ ಸರ್ವಲಕ್ಷಣಸಂಯುತಂ ॥ ೪೦ ॥

ಚಕಾರ ನಾಮ ತಸ್ಯೈವಂ ವೇನಾಖ್ಯಂ ತನಯಸ್ಯ ಹಿ ।
ವವೃಧೇ ಸ ಮಹಾತೇಜಾಃ ಸುನೀಥಾತನಯಸ್ತದಾ ॥ ೪೧ ॥

ವೇದಶಾಸ್ತ್ರಮಧೀತ್ಯೈವ ಧನುರ್ವೇದಂ ಗುಣಾನ್ವಿತಂ ।
ಸರ್ವಾಸಾಂ ಸೋಽಪಿ ಮೇಧಾವೀ ವಿದ್ಯಾನಾಂ ಪಾರಮೇಯಿವಾನ್ ॥೪೨॥

ಸ ತಸ್ಯ ತನಯೋ ವೇನಃ ಶಿಷ್ಟಾಚಾರೇಣ ವರ್ತತೇ ।
ಸ ವೇನೋ ಬ್ರಾಹ್ಮಣಶ್ರೇಷ್ಠಾಃ ಕ್ಷತ್ರಾಚಾರಪರೋಽಭವತ್ ॥ ೪೩ ॥

ದಿವಿ ಚೇಂದ್ರೋ ಯಥಾ ಭಾತಿ ಸರ್ವತೇಜಸ್ಸಮನ್ವಿತಃ ।
ಸ ಭಾತ್ಯೇವಂ ಮಹಾಪ್ರಾಜ್ಞಃ ಸ್ವಬಲೇನ ಪರಾಕ್ರಮೈಃ ॥ ೪೪ ॥

ನಾಹುಷಸ್ಯಾಂತರೇ ಪ್ರಾಪ್ತೇ ವೈವಸ್ವತಸಮಾಗತೇ ।
ಪ್ರಜಾಪಾಲಂ ವಿನಾ ಲೋಕೇ ಪ್ರಜಾಸ್ಸೀದಂತಿ ವೈ ಸದಾ ॥ ೪೫ ॥

---

೪೦. ಆಕೆಯಲ್ಲಿ ಲಕ್ಷಣವಂತನಾದ ಒಬ್ಬ ಮಗನು ಹುಟ್ಟಲು, ಅವನಿಗೆ ವೇನನೆಂದು ಹೆಸರಿಟ್ಟನು.

೪೧-೪೨. ಆ ಸುನೀಥೆಯ ಮಗನು ಮಹಾತೇಜಸ್ವಿಯಾಗಿ ಬೆಳೆದನು. ವೇದಶಾಸ್ತ್ರಗಳನ್ನು ಓದಿ, ಧನುರ್ವಿದ್ಯೆಯನ್ನು ಕಲಿತು, ಎಲ್ಲರಿಗಿಂತಲೂ ಬುದ್ಧಿವಂತನಾಗಿ ಸಕಲ ವಿದ್ಯೆಗಳಲ್ಲಿಯೂ ಪಾರಂಗತನಾದನು.

೪೩. ಆ ವೇನನು ಶಿಷ್ಟಾಚಾರವನ್ನು ಅನುಸರಿಸುತ್ತಾ, ಕ್ಷತ್ರಿಯಾಚಾರದಲ್ಲಿ ಬಹು ಆಸಕ್ತನಾದನು.

೫೪. ಚಂದ್ರನು ಆಕಾಶದಲ್ಲಿ ತನ್ನ ತೇಜಸ್ಸಿನಿಂದ ಪ್ರಕಾಶಿಸುವಂತೆ ಈ ವೇನನು ತನ್ನ ಬಲದಿಂದಲೂ, ಪರಾಕ್ರಮದಿಂದಲೂ ಪ್ರಕಾಶಿಸುತ್ತಿದ್ದನು.

೪೫. ನಹುಷಮನ್ವಂತರವು ಕೊನೆಗೊಂಡು, ವೈವಸ್ವತಮನ್ವಂತರವು ಪ್ರಾಪ್ತವಾಗಲು, ಲೋಕದಲ್ಲಿ ಪ್ರಜಾರಕ್ಷಕನಾದ ದೊರೆಯಿಲ್ಲದೆ ಪ್ರಜೆಗಳು ದುಃಖಿಸುತ್ತಿದ್ದನು.

**ಋಷಯೋ ಧರ್ಮತತ್ತ್ವಜ್ಞಾಃ ಪ್ರಜಾಹೇತೋಸ್ತಪೋಧನಾಃ ।**
**ಚಿಂತಯಂತಿ ಮಹೀಪಾಲಂ ಧರ್ಮಜ್ಞಂ ಸತ್ಯಪಂಡಿತಂ ॥ ೪೬ ॥**

**ತಂ ವೇನಮೇವ ದದೃಶುಃ ಸಂಪನ್ನಂ ಸರ್ವಲಕ್ಷಣೈಃ ।**
**ಪ್ರಾಜಾಪತ್ಯೇ ಪದೇ ಚೈನಮಭ್ಯಷಿಂಚನ್ದ್ವಿಜೋತ್ತಮಾಃ ॥ ೪೭ ॥**

**ಅಭಿಷಿಕ್ತೇ ಮಹಾಭಾಗೇ ತ್ವಂಗಪುತ್ರೇ ತದಾ ನೃಪೇ ।**
**ತೇ ಪ್ರಜಾಪತಯಸ್ಸರ್ವೇ ಜಗ್ಮುಸ್ತೇ ಚ ತಪೋವನಂ ॥ ೪೮ ॥**

**ಗತೇಷು ತೇಷು ಸರ್ವೇಷು ವೇನೋ ರಾಜ್ಯಂ ಕರೋತಿ ಸಃ ॥ ೪೯ ॥**

**॥ ಸೂತ ಉವಾಚ ॥**

**ಸಾ ಸುನೀಥಾ ಸುತಂ ದೃಷ್ಟ್ವಾ ಸರ್ವರಾಜ್ಯಪ್ರಸಾಧಕಂ ।**
**ವಿಶಂಕತೇ ಪ್ರಭಾವೇನ ಶಾಪಾತ್ತಸ್ಯ ಮಹಾತ್ಮನಃ ॥ ೫೦ ॥**

**ಮಮಾಪತ್ಯೋ ಮಹಾಭಾಗೋ ಧರ್ಮಾತ್ಮಾ ಸಂಭವಿಷ್ಯತಿ ।**
**ಇತ್ಯೇವಂ ಚಿಂತಯನ್ನಿತ್ಯಂ ಪೂರ್ವಪಾಪಾದ್ವಿಶಂಕಿತಾ ॥ ೫೧ ॥**

---

೪೬. ಧರ್ಮಿಷ್ಠರಾದ ಋಷಿಗಳು ಪ್ರಜೆಗಳಿಗೋಸ್ಕರ ಸತ್ಯವಂತನೂ, ಧರ್ಮಜ್ಞನೂ ಆದ ರಾಜನು ಎಲ್ಲಿರುವನೆಂದು ಯೋಚಿಸುತ್ತಿದ್ದರು.

೪೭. ಈ ವೇನನನ್ನು ನೋಡಿ ಈತನು ಧರ್ಮಜ್ಞನೂ, ಸತ್ಯಸಂಧನೂ, ಲಕ್ಷಣಾನ್ವಿತನೂ ಎಂದು ತಿಳಿದರು. ಮತ್ತು ಆ ಋಷಿಗಳು ಅವನನ್ನು ಚಕ್ರವರ್ತಿಯ ಸ್ಥಾನದಲ್ಲಿ ನಿಯಮಿಸಿದರು.

೪೮-೪೯. ಅಂಗಪುತ್ರನಾದ, ವೇನನು ಅಭಿಷಿಕ್ತನಾಗಲು, ಆ ಋಷಿಗಳೆಲ್ಲಾ ತಪೋವನಕ್ಕೆ ಹೋದರು. ಅನಂತರ ಅವನು ರಾಜ್ಯಭಾರಮಾಡುತ್ತಾ ಬಂದನು.

೫೦. ಸೂತನು ಹೇಳಿದನು :—ಹೀಗಿರಲು ಆ ಸುನೀಥೆಯು ಪ್ರಜಾಪ್ರೀತಿ ಪಾತ್ರನಾದ ಆ ಮಗನನ್ನು ನೋಡಿ ಹಿಂದೆ ತನಗೆ ಬಂದ ಆ ಮಹಾತ್ಮನ ಶಾಪದಿಂದ, ಈತನು ಎಲ್ಲಾದರೂ ಕೆಡುವನೋ ಅಥವಾ ಧರ್ಮವಂತನಾಗಿಯೇ ಇರುವನೋ ಎಂದು ಸಂಶಯ ಪಡುತ್ತಿದ್ದಳು.

೫೧. ಹೀಗೆ ತನ್ನ ಪೂರ್ವದ ಶಾಪದಿಂದ ಸಂದೇಹಪಡುತ್ತಾ ಯಾವಾಗಲೂ ಯೋಚಿಸುತ್ತಿರುವಳು.

ಧರ್ಮಾಂಗಾನಿ ಸುಪುಣ್ಯಾನಿ ಸುತಾಂಗೇ ಪರಿದರ್ಶಯೇತ್ ।
ಸತ್ಯಭಾವಾದಿಕಾನ್ಪುಣ್ಯಾನ್ ಗುಣಾನ್ಸಾನ್ವೈ ಪ್ರಕಾಶಯೇತ್ ॥ ೫೨ ॥

ಇತ್ಯುವಾಚ ಸುತಂ ಸಾ ಹಿ ಚಾಹಂ ಧರ್ಮಸುತಾ ಸುತ ।
ಪಿತಾ ತೇ ಧರ್ಮತತ್ತ್ವಜ್ಞಸ್ತಸ್ಮಾದ್ಧರ್ಮಂ ಸಮಾಚರ ॥ ೫೩ ॥

ಇತ್ಯೇವಂ ಬೋಧಯೇನ್ನಿತ್ಯಂ ಪುತ್ರಂ ವೇನಂ ತದಾ ಸತೀ ।
ಮಾತಾಪಿತ್ರೋಸ್ತಯೋರ್ವಾಕ್ಯಂ ಪ್ರಜಾಯುಕ್ತಂ ಸ ಪಾಲಯೇತ್ ॥೫೪॥

ಏವಂ ವೇನಃ ಪ್ರಜಾಪಾಲಃ ಸಂಜಾತಃ ಕ್ಷಿತಿಮಂಡಲೇ ।
ಲೋಕಾಸ್ಸುಖೇನ ಜೀವಂತಿ ಪ್ರಜಾ ಧರ್ಮೇಣ ರಂಜಿತಾಃ ॥ ೫೫ ॥

ಏವಂ ರಾಜ್ಯಪ್ರಭಾವಂ ತು ವೇನಸ್ಯಾಪಿ ಮಹಾತ್ಮನಃ ।
ಧರ್ಮಪ್ರಭಾವಾ ವರ್ತಂತೇ ತಸ್ಮಿನ್ ಶಾಸತಿ ಪಾರ್ಥಿವೇ ॥ ೫೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ವೇನೋಪಾಖ್ಯಾನೇ ಪಂಚತ್ರಿಂಶೋಽಧ್ಯಾಯಃ

---

೫೨. ಮಗನ ದೇಹದಲ್ಲಿರುವ ಒಳ್ಳೆಯ ಲಕ್ಷಣಗಳನ್ನು ಜನರಿಗೆ ತೋರಿಸುವಳು. ಸತ್ಯವೇ ಮೊದಲಾದ ಅವನ ಒಳ್ಳೆಯ ಗುಣಗಳನ್ನು ಬಣ್ಣಿಸುವಳು.

೫೩. ಮಗನನ್ನು ಕುರಿತು ನಾನು ಧರ್ಮರಾಜನ ಮಗಳು. ನನ್ನ ತಂದೆಯು ಧರ್ಮಸೂಕ್ಷ್ಮವನ್ನು ತಿಳಿದವನು. ನೀನೂ ಧರ್ಮವನ್ನು ಮಾಡು ಎನ್ನುವಳು.

೫೪. ಹೀಗೆ ಆಕೆಯು ನಿತ್ಯವೂ ಮಗನನ್ನು ಎಚ್ಚರಿಸುತ್ತಿದ್ದಳು. ಆ ವೇನನೂ ಆ ತಾಯಿತಂದೆಗಳ ಮಾತನ್ನು ಪ್ರಜೆಗಳಿಗೋಸ್ಕರ ಯಾವಾಗಲೂ ಪಾಲಿಸುತ್ತಿದ್ದನು.

೫೫. ಈ ರೀತಿ ವೇನನು ಭೂಮಿಯಲ್ಲಿ ರಾಜನಾದನು. ಜನರೂ ಕೂಡ ಧರ್ಮದಿಂದ ರಂಜಿತರಾಗಿ ಸುಖದಿಂದ ಜೀವಿಸುತ್ತಿದ್ದರು.

೫೬. ವೇನನ ರಾಜ್ಯದ ಪ್ರಭಾವವು ಈರೀತಿಯಾದುದು. ಅವನು ಆಳುತ್ತಿರುವಲ್ಲಿ ಪ್ರಜೆಗಳೂ ಕೂಡ ಧರ್ಮಪ್ರಭಾವದಿಂದಲೇ ಇರುತ್ತಿದ್ದರು.

ಇಲ್ಲಿಗೆ ಪದ್ಮಮಹಾಪುರಾಣದಲ್ಲಿ ಭೂಮಿಖಂಡದಲ್ಲಿ ವೇನನ ಚರಿತ್ರೆಯಲ್ಲಿ
ಮೂವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

## ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

### ಷಟ್ ತ್ರಿಂಶೋಽಧ್ಯಾಯಃ

---

॥ ಋಷಯ ಊಚುಃ ॥

**ಏವಂ ವೇನಸ್ಯ ವೈ ರಾಜ್ಞಃ ಸೃಷ್ಟಿರೇವ ಮಹಾತ್ಮನಃ ।**
**ಧರ್ಮಾಚಾರಂ ಪರಿತ್ಯಜ್ಯ ಕಥಂ ಪಾಪೇ ಮತಿರ್ಭವೇತ್ ॥ ೧ ॥**

॥ ಸೂತ ಉವಾಚ ॥

**ಜ್ಞಾನವಿಜ್ಞಾನಸಂಪನ್ನಾ ಮುನಯಸ್ತತ್ವವೇದಿನಃ ।**
**ಶುಭಾಶುಭಂ ವದಂತ್ಯೇನಂ ತನ್ನಸ್ಯಾದಿಹ ಚಾನ್ಯಥಾ ॥ ೨ ॥**

**ತಪ್ಯಮಾನೇನ ತೇನಾಽಪಿ ಸುಶಂಖೇನ ಮಹಾತ್ಮನಾ ।**
**ದತ್ತಃ ಶಾಪಃ ಕಥಂ ವಿಪ್ರಾ ನ ಯಥಾವಚ್ಚ ಜಾಯತೇ ॥ ೩ ॥**

---

### ಮೂವತ್ತಾರನೆಯ ಅಧ್ಯಾಯ

೧. ಋಷಿಗಳು ಕೇಳುತ್ತಾರೆ:—ಈಗ ನೀನು ವೇನನೆಂಬ ಮಹಾತ್ಮನ ಉತ್ಪತ್ತಿಯ ಕಥನವನ್ನು ಹೇಳಿದೆಯಷ್ಟೆ? ಆದರೆ ಆತನು ಧರ್ಮದ ಆಚಾರವನ್ನು ಬಿಟ್ಟು ಪಾಪಕಾರ್ಯದಲ್ಲಿ ಹೇಗೆ ಬುದ್ಧಿಯುಳ್ಳವನಾದನು? ಅದನ್ನು ತಿಳಿಸು ಎಂದರು.

೨. ಸೂತನು ಹೇಳಿದನು:—ಜ್ಞಾನಿಗಳೂ ಮತ್ತು ಕುಶಲಿಗಳೂ ಆದ ಋಷಿಗಳು ಇವನ ವಿಷಯದಲ್ಲಿ ಹೇಳಿರುವ ಶುಭಾಶುಭಗಳು, ಫಲಿಸುತ್ತವೆಯೇ ಹೊರತು ಬೇರೆಯಾಗುವುದಿಲ್ಲ.

೩. ತಪಸ್ವಿಯಾದ ಸುಶಂಖನು ಕೊಟ್ಟ ಶಾಪವು ಫಲಿಸದೇ ಹೋಗಲಿಲ್ಲ. ವೇನನು ಮಾಡುತ್ತಿದ್ದ ಪಾಪಕರ್ಮಗಳೆಲ್ಲವನ್ನೂ ಹೇಳುತ್ತೇನೆ, ಕೇಳಿ.

ವೇನಸ್ಯ ಪಾತಕಾಚಾರಂ ಸರ್ವಮೇವ ವದಾಮ್ಯಹಂ ।
ತಸ್ಮಿನ್ ಶಾಸತಿ ಧರ್ಮಜ್ಞೇ ಪ್ರಜಾಪಾಲೇ ಮಹಾತ್ಮನಿ ।
ಪುರುಷಃ ಕಶ್ಚಿದಾಯಾತೋ ಬ್ರಹ್ಮಲಿಂಗಧರಸ್ತದಾ ॥ ೪ ॥

ನಗ್ನರೂಪೋ ಮಹಾಕಾಯಃ ಸಿತಮುಂಡೋ ಮಹಾಪ್ರಭಃ ।
ಮಾರ್ಜನೀಂ ಶಿಖಿಪತ್ರಾಣಾಂ ಕಕ್ಷಾಯಾಂ ಸ ಹಿ ಧಾರಯನ್ ॥ ೫ ॥

ಗೃಹೀತ್ವಾ ಪಾನಪಾತ್ರಂ ಚ ನಾಲಿಕೇರಮಯಂ ಕರೇ ।
ಪಠಮಾನೋ ಮರುಚ್ಛಾಸ್ತ್ರಂ ವೇದಶಾಸ್ತ್ರವಿದೂಷಕಂ ॥ ೬ ॥

ಯತ್ರ ವೇನೋ ಮಹಾರಾಜಸ್ತತ್ರೋಪಾಯಾತ್ತ್ವರಾನ್ವಿತಃ ।
ಸಭಾಯಾಂ ತಸ್ಯ ವೇನಸ್ಯ ಪ್ರವಿವೇಶ ಸ ಪಾಪವಾನ್ ॥ ೭ ॥

ತಂ ದೃಷ್ಟ್ವಾ ಸಮನುಪ್ರಾಪ್ತಂ ವೇನಃ ಪಪ್ರಚ್ಛ ತದಾಕರೋತ್ ।
ಭವಾನ್ಕೋ ಹಿ ಸಮಾಯಾತ ಈದೃಗ್ರೂಪಧರೋ ಮಮ ॥ ೮ ॥

---

೪. ಆ ವೇನನು ಧರ್ಮದಿಂದ ಪ್ರಜೆಗಳನ್ನು ಪಾಲಿಸುತ್ತಿರಲಾಗಿ ಒಂದು ದಿನ ಬ್ರಾಹ್ಮಣವೇಷಧಾರಿಯಾದ ಒಬ್ಬ ಮನುಷ್ಯನು ಬಂದನು.

೫. ಅವನು ಬೆತ್ತಲೆಯೂ, ದೊಡ್ಡ ಶರೀರವುಳ್ಳವನಾಗಿಯೂ, ತಲೆನರೆತವನಾಗಿಯೂ ಇದ್ದು ಕಂಕುಳಲ್ಲಿ ನವಿಲುಗರಿಯ ಬರಲೊಂದನ್ನು ಹಿಡಿದಿದ್ದನು.

೬. ಕೈಯಲ್ಲಿ ಕುಡಿಯುವುದಕ್ಕೋಸ್ಕರ ತೆಂಗಿನ ಕರಟದ ಚಿಪ್ಪನ್ನು ಹಿಡಿದಿದ್ದನು. ಬಾಯಲ್ಲಿ ವೇದಶಾಸ್ತ್ರನಿಂದಕವಾದ ಮರುಚ್ಛಾಸ್ತ್ರವನ್ನು ಹೇಳುತ್ತಿದ್ದನು.

೭. ವೇನನು ರಾಜನಾಗಿರುವ ರಾಜಧಾನಿಗೆ ಜಾಗ್ರತೆಯಾಗಿ ಬಂದು ಆ ಪಾಪಿಯು ವೇನನ ಸಭೆಗೂ ಪ್ರವೇಶಿಸಿದನು.

೮-೧೧. ಬಂದ ಅವನನ್ನು ವೇನನು ನೋಡಿ, ನೀನಾರು ? ಇಂತಹ ನಿಂದ್ಯವಾದ ರೂಪವನ್ನು ಧರಿಸಿ ಇಲ್ಲಿಗೆ ಏಕೆ ಬಂದಿರುವೆ ? ಬೇಗ ಹೇಳು. ನಿನ್ನ ವೇಷವೇನು ? ನಿನ್ನ ಹೆಸರೇನು ? ನಿನ್ನ ಧರ್ಮವೇನು ? ನಿನ್ನ ಕೆಲಸವೇನು ? ನಿನ್ನ ವೇದವಾವುದು ? ನಿನ್ನ ಆಚಾರಯಾವುದು ? ನಿನ್ನ ನೀತಿಯೇನು ? ನಿನ್ನ ಉದ್ದೇಶ

ಸಭಾಯಾಂ ವದ ಮಾಮತ್ರ ತೂರ್ಣಂ ಕಸ್ಮಾತ್ಸಮಾಗತಃ ।
ಕೋ ವೇಷಃ ಕಿಂ ತು ತೇ ನಾಮ ಕೋ ಧರ್ಮಃ ಕರ್ಮ ಕಿಂ ತವ ॥ ೯ ॥

ಕೋ ವೇದಸ್ತೇ ಕ ಆಚಾರಃ ಕೋ ನಯಃ ಕಾ ಪ್ರಭಾವನಾ ।
ಕಿಂ ಜ್ಞಾನಂ ಕಃ ಪ್ರಭಾವಸ್ತೇ ಕಿಂ ಸತ್ಯಂ ಧರ್ಮಲಕ್ಷಣಂ ॥ ೧೦ ॥

ತತ್ತ್ವಂ ಸರ್ವಂ ಸಮಾಚಕ್ಷ್ವ ಮಮಾಗ್ರೇ ಸತ್ಯಮೇವ ಚ ।
ಶ್ರುತ್ವಾ ವೇನಸ್ಯ ತದ್ವಾಕ್ಯಂ ಪಾಪೋ ವಾಕ್ಯಮುದಾಹರತ್ ॥ ೧೧ ॥

॥ ಪಾಪ ಉವಾಚ ॥

ಕರೋಷ್ಯೇವಂ ವೃಥಾ ಭಾವಂ ಮಹಾಮೂಢೋ ನ ಸಂಶಯಃ ।
ಅಹಂ ಧರ್ಮಸ್ಯ ಸರ್ವಸ್ವಮಹಂ ಪೂಜ್ಯತಮಸ್ಸುರೈಃ ॥ ೧೨ ॥

ಅಹಂ ಜ್ಞಾನಮಹಂ ಸತ್ಯಮಹಂ ಧಾತಾ ಸನಾತನಃ ।
ಅಹಂ ಧರ್ಮ ಅಹಂ ಮೋಕ್ಷಃ ಸರ್ವದೇವಮಯೋ ಹ್ಯಹಂ ॥ ೧೩ ॥

ಬ್ರಹ್ಮದೇಹಾತ್ಸಮುದ್ಭೂತಃ ಸತ್ಯಸಂಧೋಽಸ್ಮಿ ನಾನ್ಯಥಾ ।
ಜಿನರೂಪಂ ವಿಜಾನೀಹಿ ಸತ್ಯಧರ್ಮಕಳೇಬರಂ ॥ ೧೪ ॥

---

ವೇನು? ನಿನ್ನ ಜ್ಞಾನವೇನು? ನಿನ್ನ ಪ್ರಭಾವವೆಂತಹದು? ನಿನ್ನಲ್ಲಿರುವ ಧರ್ಮ ಲಕ್ಷಣವೇನು? ನಿನ್ನ ಸತ್ಯವಾವುದು? ಇವೆಲ್ಲವನ್ನೂ ಸತ್ಯವಾಗಿ ನನ್ನೆದುರಿಗೆ ಹೇಳು ಎನ್ನಲು, ವೇನನ ಈ ಮಾತನ್ನು ಕೇಳಿ ಪಾಪಿಯಾದ ಆತನು ಇಂತೆಂದನು.

೧೨. ಆ ಪಾಪಿಯು ಹೇಳಿದನು:—ನೀನು ನನ್ನ ವಿಷಯದಲ್ಲಿ ಬಹು ತಪ್ಪಾದ ಅಭಿಪ್ರಾಯವನ್ನು ಹೊಂದಿದ್ದೀಯೆ. ನೀನು ಬಹು ಮೂಢನು. ಸಂಶಯ ವಿಲ್ಲ. ನಾನೇ ಧರ್ಮಕ್ಕೆ ಸರ್ವಸ್ವನು. ನಾನೇ ದೇವತೆಗಳಿಂದಲೂ ಪೂಜಿಸಲ್ಪ ಡಲು ಯೋಗ್ಯನು.

೧೩. ಜ್ಞಾನ, ಸತ್ಯ, ಬ್ರಹ್ಮ, ಧರ್ಮ, ಮೋಕ್ಷ ಇವುಗಳನ್ನು ಒಳಗೊಂಡಿರುವ ನಾನೇ ಸರ್ವದೇವಮಯನಾಗಿರುವೆನು.

೧೪. ನಾನು ಬ್ರಹ್ಮನ ದೇಹದಿಂದಲೇ ಹುಟ್ಟಿದ್ದೇನೆ. ಸತ್ಯವಾದಿಯೇ ಹೊರತು ಬೇರೆಯಲ್ಲ. ಸತ್ಯಧರ್ಮರೂಪವಾದ ಈ ಶರೀರವನ್ನು ಜಿನರೂಪವೆಂದು ತಿಳಿ. ಜ್ಞಾನಿಗಳಾದ ಯೋಗಿಗಳು ನನ್ನ ರೂಪವನ್ನು ಧ್ಯಾನಮಾಡುತ್ತಾರೆ. ಎಂದನು.

ಮ ಮರೂಪಂ ಹಿ ಧ್ಯಾಯಂತಿ ಯೋಗಿನೋ ಜ್ಞಾನತತ್ಪರಾಃ ।
॥ ವೇನ ಉವಾಚ ॥
ತಸ್ಯೈವ ಕೀದೃಶೋ ಧರ್ಮಃ ಕಿಂ ತೇ ದರ್ಶನಮೇವ ಚ
ಕಿಮಾಚಾರೋ ವದಸ್ವೈಹಿ ಇತ್ಯುಕ್ತಂ ತೇನ ಭೂಭುಜಾ ॥ ೧೫ ॥
॥ ಪಾಪ ಉವಾಚ ॥
ಅರ್ಹನ್ತೋ ದೇವತಾ ಯತ್ರ ನಿರ್ಗ್ರನ್ಥೋ ಗುರುರುಚ್ಯತೇ ।
ದಯಾ ವೈ ಪರಮೋ ಧರ್ಮಸ್ತತ್ರ ಮೋಕ್ಷಃ ಪ್ರದೃಶ್ಯತೇ ॥ ೧೬ ॥
ಈದೃಶೋಽಸ್ಮಿನ್ನಸಂದೇಹ ಆಚಾರಂ ಪ್ರವದಾಮ್ಯಹಂ ।
ಯಜನಂ ಯಾಜನಂ ನಾಪಿ ವೇದಾಧ್ಯಯನಮೇವ ಚ ॥ ೧೭ ॥
ನಾಸ್ತಿ ಸಂಧ್ಯಾ ತಪೋ ದಾನಂ ಸ್ವಧಾಸ್ವಾಹಾವಿವರ್ಜಿತಂ ।
ಹವ್ಯಕವ್ಯಾದಿಕಂ ನಾಸ್ತಿ ನಾಸ್ತಿ ಯಜ್ಞಾದಿಕಾ ಕ್ರಿಯಾ ॥ ೧೮ ॥
ಪಿತೄಣಾಂ ತರ್ಪಣಂ ನಾಸ್ತಿ ನಾತಿಥಿರ್ವೈಶ್ವದೈವಿಕಂ ।
ಕೃಷ್ಣಸ್ಯ ನ ತಥಾ ಪೂಜಾ ಹ್ಯರ್ಹಸ್ತಧ್ಯಾನಮುತ್ತಮಂ ॥ ೧೯ ॥
ಏವಂ ಧರ್ಮಸಮಾಚಾರೋ ಜೈನಮಾರ್ಗೇ ಪ್ರದೃಶ್ಯತೇ ।
ಏತತ್ತೇ ಸರ್ವಮಾಖ್ಯಾತಂ ಜೈನಧರ್ಮಸ್ಯ ಲಕ್ಷಣಂ ॥ ೨೦ ॥

---

೧೫. ವೇನನು ಪುನಃ ಅವನ್ನು ಕುರಿತು ನಿನ್ನ ಧರ್ಮವೆಂಥಾದ್ದು? ನಿನ್ನ ಶಾಸ್ತ್ರವಾವುದು? ಆಚಾರವೇನು? ಇದೆಲ್ಲವನ್ನೂ ಹೇಳೆಂದು ಕೇಳಿದನು.

೧೬. ಪಾಪಿಯು ಹೇಳಿದನು :—ನಮಗೆ ಅರ್ಹಂತನೇ ದೇವರು. ನಿರ್ಗ್ರಂಥನೇ ಗುರುವು. ದಯೆಯೇ ನಮ್ಮ ಧರ್ಮ. ಅದರಲ್ಲೇ ಮೊಕ್ಷಹೊಂದಬಹುದು.

೧೭-೨೦. ಈ ಜೈನಧರ್ಮದ ಆಚಾರವನ್ನು ಹೇಳುತ್ತೇನೆ. ಕೇಳು. ಯಜ್ಞಮಾಡುವುದಾಗಲಿ ಮಾಡಿಸುವುದಾಗಲೀ ಇಲ್ಲ. ವೇದಾಧ್ಯಯನವಿಲ್ಲ. ಸಂಧ್ಯಾವಂದನೆ, ತಪಸ್ಸು, ಧ್ಯಾನ, ದೇವಪಿತೃಗಳಿಗೆ ಹೋಮ, ಇವಿಲ್ಲ. ದೇವತೆಗಳಿಗೂ ಪಿತೃಗಳಿಗೂ ಹವಿರ್ದಾನಗಳಿಲ್ಲ. ಯಜ್ಞಾದಿ ಕ್ರಿಯೆಗಳಿಲ್ಲ. ಪಿತೃತರ್ಪಣವಿಲ್ಲ. ಅತಿಥಿಸತ್ಕಾರವಿಲ್ಲ. ವೈಶ್ವದೇವವಿಲ್ಲ. ಕೃಷ್ಣಣ ಪೂಜೆಯೂ ಇಲ್ಲ. ಅರ್ಹಂತನ ಧ್ಯಾನವೊಂದೇ ಉತ್ತಮವಾದುದು. ಈ ರೀತಿಯಾದ ಧರ್ಮಾಚಾರವು ಜೈನಮಾರ್ಗದಲ್ಲಿದೆ. ಜೈನಧರ್ಮದ ಲಕ್ಷಣವೆಲ್ಲವನ್ನೂ ಈ ರೀತಿ ನಿವರಿಸಿದ್ದೇನೆ. ಎಂದನು.

॥ ವೇನ ಉವಾಚ ॥

ವೇದೇ ಪ್ರೋಕ್ತೋ ಯಥಾ ಧರ್ಮೋ ಯತ್ರ ಯಜ್ಞಾದಿಕಾಃ ಕ್ರಿಯಾಃ ।
ಪಿತೄಣಾಂ ತರ್ಪಣಂ ಶ್ರಾದ್ಧಂ ವೈಶ್ವದೇವಂ ನ ದೃಶ್ಯತೇ ॥ ೨೧ ॥

ನ ದಾನಂ ನ ತಪೋ ನಾಸ್ತಿ ಕಿಂ ವೈ ಧರ್ಮಸ್ಯ ಲಕ್ಷಣಂ ।
ವದ ಸತ್ಯಂ ಮಮಾಗ್ರೇ ತ್ವಂ ದಯಾ ಧರ್ಮಶ್ಚ ಕೀದೃಶಃ ॥ ೨೨ ॥

॥ ಪಾಪ ಉವಾಚ ॥

ಪಂಚತತ್ತ್ವಪ್ರವೃದ್ಧೋಽಯಂ ಪ್ರಾಣಿನಾಂ ಕಾಯ ಏವ ಚ ।
ಆತ್ಮಾ ವಾಯುಸ್ವರೂಪೋಽಯಂ ತೇಷಾಂ ನಾಸ್ತಿ ಪ್ರಸಂಗತಃ ॥ ೨೩ ॥

ಯಥಾ ಜಲೇಷು ಭೂತಾನಾಮಪಿ ಸಂಗಮವೇಹಿ ತತ್ ।
ಜಾಯತೇ ಬುದ್ಬುದಾಕಾರಂ ತದ್ವದ್ಭೂತಸಮಾಗಮಃ ॥ ೨೪ ॥

ಪೃಥ್ವೀಭಾವೋ ರಜಸ್ಸ್ಥಸ್ತು ಚಾಪಸ್ತತ್ರೈವ ಸಂಸ್ಥಿತಾಃ ।
ಜ್ಯೋತಿಸ್ತತ್ರ ಪ್ರದೃಶ್ಯೇತ ವಾಯುರಾವರ್ತತೇ ಚ ತ್ರೀನ್ ॥ ೨೫ ॥

ಆಕಾಶಮಾವೃಣೋತ್ಪಶ್ಚಾತ್ ಬುದ್ಬುದತ್ವಂ ಪ್ರಜಾಯತೇ ।
ಅಪ್ಸು ಮಧ್ಯೇ ಪ್ರಭಾತ್ಯೇವ ಸುತೇಜೋ ವರ್ತುಲಂ ಪರಂ ॥ ೨೬ ॥

---

೨೧-೨೨. ವೇನನು ಹೇಳಿದನು:—ನಿನ್ನ ಮತದಲ್ಲಿ ವೇದೋಕ್ತವಾದ ಧರ್ಮವಾಗಲಿ, ಯಜ್ಞಾದಿಕ್ರಿಯೆಗಳಾಗಲಿ ಇಲ್ಲ. ಪಿತೃಗಳ ತರ್ಪಣ, ಶ್ರಾದ್ಧ, ವೈಶ್ವದೇವಾದಿಗಳೂ ಇಲ್ಲ. ದಾನ ತಪಸ್ಸುಗಳೂ ಇಲ್ಲ. ಹಾಗಾದರೆ, ಆ ಧರ್ಮದ ಲಕ್ಷಣವೇನು? ನೀನು ಹೇಳಿದ ಆ ದಯಾಧರ್ಮವೆಂಬುದು ಎಂಥಾದ್ದು? ಹೇಳು ಎಂದನು.

೨೩. ಪಾಪಿಯು ಹೇಳುತ್ತಾನೆ:—ಪಂಚಭೂತಾತ್ಮಕವಾದ ಎಂದರೆ ಪೃಥಿವ್ಯಪ್‌ತೇಜೋವಾಯುರಾಕಾಶರೂಪವಾದ ಐದು ತತ್ತ್ವಗಳಿಂದ ಈ ದೇಹವು ಕೂಡಿದೆ. ಆತ್ಮನೆಂಬುದು ವಾಯುಸ್ವರೂಪವಾದುದು. ಪ್ರಾಣಿಗಳಿಗೆ ಬೇರೆ ಯಾತರ ಸಂಪರ್ಕವೂ ಇಲ್ಲ.

೨೪. ನೀರಿನಲ್ಲುಂಟಾಗುವ ಗುಳ್ಳೆಗಳಂತೆ ಪ್ರಾಣಿಗಳ ಸೇರುವಿಕೆಯನ್ನು ತಿಳಿ.

೨೫-೨೬. ಆ ನೀರಿನಲ್ಲಿ ಪೃಥ್ವಿಯಕಣಗಳಿವೆ. ನೀರುಅಲ್ಲಿ ಇದ್ದೇ ಇದೆ. ಕಾಂತಿಯೂ ಅಲ್ಲಿ ಕಾಣುತ್ತದೆ. ಈ ಮೂರನ್ನೂ ಗಾಳಿಯು ಅಲ್ಲಾಡಿಸುತ್ತಲೇ ಇರುತ್ತದೆ. ಆಮೇಲೆ ಆಕಾಶದಿಂದ ಒಳಗೆ ಆವರಿಸಲ್ಪಟ್ಟು ಗುಳ್ಳೆಯಾಗುತ್ತದೆ. ಆ ನೀರಿನ ರೂಪವಾದ ಗುಳ್ಳೆಯ ಮಧ್ಯದಲ್ಲಿ ಆಕಾಶವು ವರ್ತುಲರೂಪವಾಗಿರುತ್ತದೆ.

**ಕ್ಷಣಮಾತ್ರಂ ಪ್ರದೃಶ್ಯೇತ ತತ್ಕ್ಷಣಂ ನೈವ ದೃಶ್ಯತೇ ।**
**ತದ್ವದ್ಭೂತಸಮಾಯೋಗಃ ಸರ್ವತ್ರ ಪರಿದೃಶ್ಯತೇ　　॥ ೨೭ ॥**

**ಅಂತಕಾಲೇ ಪ್ರಯಾತ್ಯಾತ್ಮಾ ಪಂಚ ಪಂಚಸು ಯಾಂತಿ ತೇ ।**
**ಮೋಹಮುಗ್ಧಾಸ್ತತೋ ಮರ್ತ್ಯಾ ವರ್ತಂತೇ ಚ ಪರಸ್ಪರಂ　　॥ ೨೮ ॥**

**ಶ್ರಾದ್ಧಂ ಕುರ್ವನ್ತಿ ಮೋಹೇನ ಕ್ಷಯಾಹೇ ಪಿತೃತರ್ಪಣಂ ।**
**ಕ್ವಾಸ್ತೇ ಮೃತಸ್ಸಮಶ್ನಾತಿ ಕೀದೃಶೋಽಸೌ ನರೋತ್ತಮಃ　　॥ ೨೯ ॥**

**ಕಿಂ ಜ್ಞಾನಂ ಕೀದೃಶಂ ಕಾರ್ಯಂ ಕೇನ ದೃಷ್ಟಂ ವದಸ್ವ ನಃ ।**
**ಮಿಷ್ಟಮನ್ನಂ ಪ್ರಭುಕ್ತ್ವಾತು ತೃಪ್ತಿಂ ಯಾನ್ತಿ ಚ ಬ್ರಾಹ್ಮಣಾಃ　　॥ ೩೦ ॥**

**ಕಸ್ಯ ಶ್ರಾದ್ಧಂ ಪ್ರದೀಯೇತ ಸಾ ತು ಶ್ರದ್ಧಾ ನಿರರ್ಥಿಕಾ ।**
**ಅನ್ಯದೇವಂ ಪ್ರವಕ್ಷ್ಯಾಮಿ ವೇದಾನಾಂ ಕರ್ಮ ದಾರುಣಂ　　॥ ೩೧ ॥**

---

೨೭. ಅದು ಕ್ಷಣಕಾಲಮಾತ್ರ ಕಾಣುತ್ತದೆ. ಮರುಕ್ಷಣವೇ ನಾಶವಾಗುತ್ತದೆ. ಅದರಂತೆಯೇ ಪಂಚಭೂತತತ್ವಗಳ ಸೇರುವಿಕೆಯು ಎಲ್ಲಾ ಕಡೆಯಲ್ಲೂ ಕಾಣುತ್ತದೆ.

೨೮. ಕೊನೆಯಲ್ಲಿ ಆತ್ಮನು ಹೋಗುತ್ತಾನೆ. ಪೃಥಿವ್ಯಾದಿ ಐದು ಭಾಗಗಳೂ ಆವವುಗಳಲ್ಲಿ ಸೇರಿಹೋಗುತ್ತವೆ. ಮನುಷ್ಯರು ಮೋಹದಿಂದ ಕೂಡಿ ಒಬ್ಬರಿಗೊಬ್ಬರು ಸೇರಿರುತ್ತಾರೆ.

೨೯. ಮೋಹದಿಂದ ಶ್ರಾದ್ಧವನ್ನು ಮಾಡುತ್ತಾರೆ. ಅಜ್ಞಾನದಿಂದಲೇ ಅಮಾವಾಸ್ಯೆಯಲ್ಲಿ ಪಿತೃತರ್ಪಣಮಾಡುತ್ತಾರೆ. ಸತ್ತವನು ಪುನಃ ಬಂದು ಹೇಗೆ ತಿನ್ನುವನು? ಪರಮಾತ್ಮನೆಂಬುವನು ಯಾವಬಗೆಯವನು? ಹೇಳು.

೩೦. ಜ್ಞಾನವೆಂದರೇನು? ಕರ್ಮವೆಂದರೇನು? ಎಂತಹದನ್ನು ಮಾಡಬೇಕು? ಇವೆಲ್ಲವನ್ನ ನೋಡಿರುವವನಾರು? ಬ್ರಾಹ್ಮಣರು ಮಾತ್ರ ಮೃಷ್ಟಾನ್ನವನ್ನುಂಡು ತೃಪ್ತಿಪಡುತ್ತಾರೆ. ಅಷ್ಟೇ!

೩೧. ಯಾವನಿಗೆ ಶ್ರಾದ್ಧಮಾಡುತ್ತೇವೋ ಆ ಶ್ರದ್ಧೆಯು ಸಾರ್ಥಕವಾದುದಲ್ಲ. ಇನ್ನು ವೇದದಲ್ಲಿ ಹೇಳಿರುವ ಕ್ರೂರಕರ್ಮಗಳನ್ನು ಹೇಳುತ್ತೇನೆ ಕೇಳು.

ಯದಾತಿಥಿರ್ಗೃಹಂ ಯಾತಿ ಭೋಜನಂ ಲಭತೇ ಧ್ರುವಂ ।
ತದಾ ಚಾಹತ್ಯ ರಾಜೇಂದ್ರ ಆತಿಥಿಂ ಪರಿಭೋಜಯೇತ್ ॥ ೩೨ ॥

ಅಶ್ವಮೇಧೇ ಮಖೇ ತ್ವಶ್ವಂ ಗೋಮೇಧೇ ವೃಷಮೇವ ಚ ।
ನರಮೇಧೇ ನರಂ ರಾಜನ್ ವಾಜಪೇಯೇ ತಥಾಹ್ಯಜಂ ॥ ೩೩ ॥

ರಾಜಸೂಯೇ ಮಹಾರಾಜ ಪ್ರಾಣಿನಾಂ ಘಾತನಂ ಬಹು ।
ಪುಂಡರೀಕೇ ಗಜಂ ಹನ್ಯಾದ್ಗಜಮೇಧೇ ತು ಕುಂಜರಂ ॥ ೩೪ ॥

ಸೌತ್ರಾಮಣ್ಯಾಂ ಪಶುಂ ಮೇಧ್ಯಮೇವಮೇವ ಪ್ರದೃಶ್ಯತೇ ।
ನಾನಾರೂಪೇಷು ಸರ್ವೇಷು ಶ್ರೂಯತಾಂ ನೃಪನಂದನ ॥ ೩೫ ॥

ನಾನಾಜಾತಿವಿಶೇಷಾಣಾಂ ಪಶೂನಾಂ ಘಾತನಂ ಸ್ಮೃತಂ ।
ಕಸ್ಮಾದ್ಧಿ ದೀಯತೆ ದಾನಂ ಕಿನ್ನು ದಾನಸ್ಯ ಲಕ್ಷಣಂ ॥ ೩೬ ॥

ನ ದತ್ತಮುತ್ಕಟಂ ಜ್ಞೇಯಂ ಕ್ರೀಯತೇ ಯದಿ ಭೋಜನಂ ।
ಅತ್ಯಂತದೋಷಹೀನಾಂಸ್ತಾನ್ ಹಿಂಸಂತಿ ಯಾನ್ ಮಹಾಮತೇ ॥ ೩೭ ॥

---

೩೨. ಅತಿಥಿಯು ಮನೆಗೆ ಬಂದರೆ ಊಟವು ಸಿಕ್ಕಿಯೇ ಸಿಕ್ಕುತ್ತದೆ. ಆಗ ಪ್ರಾಣಿಯನ್ನು ಕೊಂದು ಅತಿಥಿಯನ್ನು ಊಟಮಾಡಿಸಿಬೇಕು,

೩೩-೩೪. ಅಶ್ವಮೇಧಯಾಗದಲ್ಲಿ, ಕುದುರೆ, ಗೋಮೇಧದಲ್ಲಿ ಗೂಳಿ, ನರಮೇಧದಲ್ಲಿ ಮನುಜ, ವಾಜಪೇಯದಲ್ಲಿ ಹೋತ, ರಾಜಸೂಯದಲ್ಲಿ ಬಹುಪ್ರಾಣಿಗಳು, ಪುಂಡರೀಕದಲ್ಲಿ ಆನೆ, ಗಜಮೇಧದಲ್ಲಿ ಆನೆ, ಸೌತ್ರಾಮಣಿಯಲ್ಲಿ ಪಶು, ಈ ರೀತಿಯಾಗಿ ಯಾಗಗಳಲ್ಲೆಲ್ಲಾ ಪಶುಗಳ ವಧೆಯೇ ಕಂಡುಬರುತ್ತದೆ.

೩೫. ನಾನಾ ಬಗೆಯಾದ ಎಲ್ಲ ಕರ್ಮಗಳಲ್ಲಿ ಹೀಗೇನೇ ನಾನಾ ಬಗೆಯಾದ ಪಶುಗಳನ್ನು ಕೊಲ್ಲುವುದು ಎಲ್ಲರಿಗೂ ತಿಳಿದ ವಿಷಯ ತಾನೇ ?

೩೬-೩೭. ದಾನವನ್ನೇಕೆ ಮಾಡಬೇಕು ? ದಾನದ ಲಕ್ಷಣವೇನು ? ದಾನ ಮಾಡಿದರೆ ಅದು ದೊಡ್ಡದೆಂದು ತಿಳಿಯಬಾರದು. ದೋಷ ಸ್ವಲ್ಪವೂ ಇಲ್ಲದ ಆ ಪಶುಗಳನ್ನು ಕೊಲ್ಲುತ್ತಾರಲ್ಲ, ಅದು ಅಯೋಗ್ಯವಲ್ಲವೇ ? ಅದನ್ನು ದಾನಮಾಡಿದರೆ ಉತ್ತಮವಲ್ಲ.

ತತ್ರ ಕಿಂ ದೃಶ್ಯತೇ ಧರ್ಮಃ ಕಿಂ ಫಲಂ ತತ್ರ ಭೂಪತೇ ।
ಪಶೂನಾಂ ಮಾರಣಂ ಯತ್ರ ನಿರ್ದಿಷ್ಟಂ ವೇದಪಂಡಿತೈಃ ॥ ೩೮ ॥

ತಸ್ಮಾದ್ವಿನಷ್ಟಧರ್ಮಂ ಚ ನ ಪುಣ್ಯಂ ಮೋಕ್ಷದಾಯಕಂ ।
ದಯಾಂ ವಿನಾ ಹಿ ಯೋ ಧರ್ಮಃ ಸ ಧರ್ಮೋ ವಿಫಲಾಯತೇ ॥ ೩೯ ॥

ಜೀವಾನಾಂ ಪಾಲನಂ ಯತ್ರ ತತ್ರ ಧರ್ಮೋ ನ ಸಂಶಯಃ ।
ಸ್ವಾಹಾಕಾರಸ್ಸ್ವಧಾಕಾರಸ್ತಪಸ್ಸದ್ಯೋऽಭಿಜಾಯತೇ ॥ ೪೦ ॥

ದಯಾಹೀನಂ ನಿಷ್ಫಲಂ ಸ್ಯಾನ್ನಾಸ್ತಿ ಧರ್ಮಸ್ತು ತತ್ರ ಹಿ ।
ಏತೇ ವೇದಾ ಅವೇದಾಸ್ಸ್ಯುರ್ದಯಾ ಯತ್ರ ನ ವಿದ್ಯತೇ ॥ ೪೧ ॥

ದಯಾದಾನಪರೋ ನಿತ್ಯಂ ಜೀವಮೇವ ಪ್ರರಕ್ಷಯೇತ್ ।
ಚಂಡಾಲೋ ವಾ ಸ ಶೂದ್ರೋ ವಾ ಸ ವೈ ಬ್ರಾಹ್ಮಣ ಉಚ್ಯತೇ ॥ ೪೨ ॥

ಬ್ರಾಹ್ಮಣೋ ನಿರ್ದಯೋ ಯೋ ವೈ ಪಶುಘಾತಪರಾಯಣಃ ।
ಸು ವೈ ಸುನಿರ್ದಯಃ ಪಾಪೀ ಕಠಿಣಃ ಕ್ರೂರಚೇತನಃ ॥ ೪೩ ॥

---

೩೮. ವೇದಪಂಡಿತರು ಎಲ್ಲಿ ಪಶುಮಾರುಣವನ್ನು ಹೇಳಿದ್ದಾರೆಯೋ ಅಲ್ಲಿ ಏನು ಧರ್ಮವನ್ನು ತಿಳಿದಿದ್ದಾರೆ ? ಏನು ಫಲವನ್ನು ತಾನೆ ಕಂಡಿದ್ದಾರೆ ?

೩೯. ಆದುದರಿಂದ ಧರ್ಮವು ನಷ್ಟವಾಗಿದೆ. ಮೋಕ್ಷದಾಯಕವಾದ ಪುಣ್ಯವೂ ಅದರಲ್ಲಿಲ್ಲ. ದಯೆಯಿಲ್ಲದ ಧರ್ಮವು ಫಲರಹಿತವಾದುದು.

೪೦. ಪ್ರಾಣಿಗಳನ್ನು ಎಲ್ಲಿ ಕಾಪಾಡುತ್ತಾನೆಯೋ ಅಲ್ಲೇ ಧರ್ಮವಿರುವುದು. ಸಂಶಯವಿಲ್ಲ. ಸ್ವಾಹಾಕಾರಸ್ವಧಾಕಾರ, ತಪಸ್ಸು ಇವುಗಳೆಲ್ಲ ನಿಷ್ಫಲವೇ.

೪೧. ದಯಾಹೀನವಾದ ಕಾರ್ಯವು ನಿಷ್ಫಲ. ಸ್ವಾಹಾಕಾರಸ್ವಧಾಕಾರ ತಪಸ್ಸುಗಳಲ್ಲಿ ದಯೆಯಿಲ್ಲದುದರಿಂದ ಅದು ಧರ್ಮವೇ ಅಲ್ಲ. ಧರ್ಮವನ್ನು ಹೇಳದಿರುವ ವೇದಗಳು ವೇದಗಳೇ ಅಲ್ಲ.

೪೨. ದಯೆ, ಮತ್ತು ದಾನಗಳಿಂದ ಪ್ರಾಣಿಗಳನ್ನು ಕಾಪಾಡಬೇಕು. ಅಂತಹವನು ಶೂದ್ರನಾಗಲಿ, ಚಂಡಾಲನಾಗಲಿ ಬ್ರಾಹ್ಮಣನೆನಿಸಿಕೊಳ್ಳುತ್ತಾನೆ.

೪೩. ಬ್ರಾಹ್ಮಣನು ನಿರ್ದಯನಾಗಿ ಪಶುಗಳನ್ನು ಕೊಲ್ಲುವುದರಲ್ಲಿ ಆಸಕ್ತನಾದರೆ ಅವನು ನಿರ್ದಯನಾದ ಪಾಪಿಯು, ಕಠಿಣನು, ಕ್ರೂರಿಯು,

ವಚನೈಃ ಕಥ್ಯತೇ ವೇದಃ ಸ ವೇದೋ ಜ್ಞಾನವರ್ಜಿತಃ ।
ಯತ್ರ ಜ್ಞಾನಂ ಭವೇನ್ನಿತ್ಯಂ ಸ ವೈ ವೇದಃ ಪ್ರತಿಷ್ಠಿತಃ ॥ ೪೪ ॥

ದಯಾಹೀನೇಷು ವೇದೇಷು ವಿಪ್ರೇಷು ಚ ಮಹಾಮತೇ ।
ನಾಸ್ತಿ ಸತ್ಯಂ ಕ್ರಿಯಾ ತತ್ರ ವೇದವಿಪ್ರೇಷು ವೈ ಕದಾ ॥ ೪೫ ॥

ವೇದಾ ಅವೇದಾ ರಾಜೇಂದ್ರ ಬ್ರಾಹ್ಮಣಾಸ್ಸತ್ಯವರ್ಜಿತಾಃ ।
ದಾನಸ್ಯಾಪಿ ಫಲಂ ನಾಸ್ತಿ ತಸ್ಮಾದ್ದಾನಂ ನ ದೀಯತೇ ॥ ೪೬ ॥

ಯಥಾ ಶ್ರಾದ್ಧಸ್ಯ ವೈ ಚಿಹ್ನಂ ತಥಾ ದಾನಸ್ಯ ಲಕ್ಷಣಂ ।
ಜಿನಸ್ಯಾಪಿ ಚ ಯದ್ಧರ್ಮಂ ಭುಕ್ತಿಮುಕ್ತಿಪ್ರದಾಯಕಂ ॥ ೪೭ ॥

ತವಾಗ್ರೇಽಹಂ ಪ್ರವಕ್ಷ್ಯಾಮಿ ಬಹುಪುಣ್ಯಪ್ರದಾಯಕಂ ।
ಆದೌ ದಯಾ ಪ್ರಕರ್ತವ್ಯಾ ಶಾನ್ತಭೂತೇನ ಚೇತಸಾ ॥ ೪೮ ॥

---

೪೪. ಜ್ಞಾನವಿಲ್ಲದೆ ಸುಮ್ಮನೆ ಪಠಿಸುವ ಮಂತ್ರಗಳು ವೇದಗಳೇ ಅಲ್ಲ. ಅವು ವ್ಯರ್ಥವಾದ ವಾಕ್ಯಗಳು. ಯಾವುದರಲ್ಲಿ ಜ್ಞಾನವಿದೆಯೋ ಅದೇ ವೇದವು.

೪೫. ದಯೆಯಿಲ್ಲದ ವೇದದಲ್ಲಾಗಲೀ, ಬ್ರಾಹ್ಮಣರಲ್ಲಾಗಲಿ ಸತ್ಯವೆಂಬುದೇ ಇಲ್ಲ. ಅಂತಹ ವೇದದಲ್ಲೂ, ಬ್ರಾಹ್ಮಣರಲ್ಲೂ ಕ್ರಿಯೆಯೇ ಇಲ್ಲ.

೪೬. ಆರೀತಿ ದಯೆಯಿಲ್ಲದುದರಿಂದ ವೇದಗಳೆಲ್ಲಾ ಅವೇದಗಳು. ಬ್ರಾಹ್ಮಣರು ಸತ್ಯಹೀನರು. ದಾನಕ್ಕೂ ಕೂಡ ಫಲವಿಲ್ಲ. ಆದುದರಿಂದ ದಾನ ಮಾಡಬಾರದು.

೪೭. ಶ್ರಾದ್ಧದಲ್ಲಿ ಎಂತಹ ಉಪಯೋಗವಿಲ್ಲದ ಕಾರಣವಿದೆಯೋ ಅದೇ ಕಾರಣವು ದಾನದಲ್ಲಿಯೂ ಇದೆ. ಎಂದರೆ, ಶ್ರಾದ್ಧವು ಯಾವರೀತಿ ನಿಷ್ಫಲವೋ ದಾನವೂ ಅದರಂತೆಯೇ ನಿಷ್ಫಲವು. ಅವುಗಳಿಂದ ಏನೂ ಉಪಯೋಗವಿಲ್ಲ. ಜಿನ ಧರ್ಮವು ಭುಕ್ತಿಯನ್ನೂ, ಮುಕ್ತಿಯನ್ನೂ ಕೊಡುತ್ತದೆ.

೪೮. ನಿನ್ನ ಎದುರಿಗೆ ಮಹಾಪುಣ್ಯಕೊಡುವ ವಿಷಯವನ್ನು ಹೇಳುತ್ತೇನೆ. ಕೇಳು. ಶಾಂತವಾದ ಮನಸ್ಸಿನಿಂದ ಮೊದಲು ಪ್ರಾಣಿಗಳಲ್ಲಿ ದಯೆಯನ್ನು ತೋರಿಸ ಬೇಕು.

ಆರಾಧಯೇದ್ಧ್ರುದಾ ದೇವಂ ಜಿನಮೇಕಂ ಚರಾಚರಂ ।
ಮನಸಾ ಶುದ್ಧಭಾವೇನ ಜಿನಮೇಕಂ ಪ್ರಪೂಜಯೇತ್ ॥ ೪೯ ॥

ನಮಸ್ಕಾರಃ ಪ್ರಕರ್ತವ್ಯಸ್ತಸ್ಯ ದೇವಸ್ಯ ನಾನ್ಯಥಾ ।
ಮಾತಾಪಿತ್ರೋಸ್ತು ವೈ ಪಾದೌ ಕದಾ ನೈವಾಭಿವಂದಯೇತ್ ॥ ೫೦ ॥

ಅನ್ಯೇಷಾಮೇವ ಕಾ ವಾರ್ತಾ ಶ್ರೂಯತಾಂ ರಾಜಸತ್ತಮ ॥ ೫೧ ॥

॥ ವೇನ ಉವಾಚ ॥

ಏತೇ ವಿಪ್ರಾಶ್ಚ ಹ್ಯಾಚಾರ್ಯಾ ಗಂಗಾದ್ಯಾಸ್ಸರಿತಸ್ತಥಾ ।
ವದಂತಿ ಪುಣ್ಯತೀರ್ಥಾನಿ ಬಹುಪುಣ್ಯಪ್ರದಾನಿ ಚ ।
ತತ್ಕಿಂ ವದಸ್ವ ಸತ್ಯಂ ಮೇ ಯದಿ ಧರ್ಮಮಿಹೇಚ್ಛಸಿ ॥ ೫೨ ॥

॥ ಪಾಪ ಉವಾಚ ॥

ಆಕಾಶಾದ್ವೈ ಮಹಾರಾಜ ಸದ್ಯೋ ವರ್ಷಂತಿ ವೈ ಘನಾಃ ।
ಭೂಮೌ ಹಿ ಪರ್ವತೇಷ್ವೇವ ಸರ್ವತ್ರ ಪತತೇ ಜಲಂ ॥ ೫೩ ॥

---

೪೯. ಮನಃಪೂರ್ವಕವಾಗಿ ಚರಾಚರಾತ್ಮಕನಾದ ಜಿನನನ್ನು ಆರಾಧಿಸಬೇಕು. ಶುದ್ಧವಾದ ಮನಸ್ಸಿನಿಂದ ಜಿನನೊಬ್ಬನನ್ನೇ ಪೂಜಿಸಬೇಕು.

೫೦-೫೧. ಆ ಜಿನದೇವನಿಗೆ ನಮಸ್ಕಾರವನ್ನು ಮಾಡಿಯೇ ಮಾಡಬೇಕು. ತಾಯಿತಂದೆಗಳಿಗೂ ಕೂಡ ನಮಸ್ಕಾರ ಮಾಡಕೂಡದೆಂದಮೇಲೆ ಮಿಕ್ಕವರ ವಿಷಯದಲ್ಲಿ ಮಾಡಕೂಡದೆಂದು ಬೇರೆ ಹೇಳಬೇಕೇ ?

೫೨. ವೇನನು ಹೇಳಿದನು:—ಈ ಬ್ರಾಹ್ಮಣರೂ, ಆಚಾರ್ಯರೂ ಸಹ ಗಂಗಾದಿ ತೀರ್ಥಗಳು, ಬಹು ಪುಣ್ಯಪ್ರದವಾದ ತೀರ್ಥಗಳೆಂದು ಹೇಳುತ್ತಾರೆ. ಆದುದರಿಂದ ಧರ್ಮವನ್ನು ತಿಳಿದಿದ್ದರೆ ನಿಶ್ಚಯ ಹೇಳು.

೫೩. ಪಾಪನು ಹೇಳಿದನು :—ಆಕಾಶದಿಂದ ಮೇಘಗಳು ಮಳೆಯನ್ನು ಸುರಿಸುತ್ತವೆ. ಆ ನೀರು ಭೂಮಿಯಲ್ಲೂ, ಪರ್ವತಗಳಮೇಲೂ, ಎಲ್ಲಾ ಜಾಗದಲ್ಲೂ ಬೀಳುತ್ತದೆ.

ತದಾಸ್ಲಾವ್ಯ ತತಸ್ತಿಷ್ಠೇನ್ನದ್ಯಾಂ ಸರ್ವತ್ರ ಭಾವಯೇತ್ ।
ನದ್ಯೋ ಜಲಪ್ರವಾಹಾಸ್ತು ತಾಸು ತೀರ್ಥಂ ಶ್ರುತಂ ಕಥಂ ॥ ೫೪ ॥

ಜಲಾಶಯಾ ಮಹಾರಾಜ ತಡಾಗಾಃ ಸಾಗರಾಸ್ತಥಾ ।
ಪೃಥಿವ್ಯಾ ಧಾರಕಾಶ್ಚೈವ ಗಿರಯೋ ಹ್ಯಶ್ಮರಾಶಯಃ ॥ ೫೫ ॥

ನಾಸ್ತ್ಯೇತೇಷು ಚ ವೈ ತೀರ್ಥಂ ಜಲೈರ್ಜಲದಮುತ್ತಮಂ ।
ಸ್ನಾನೇ ದಾನೇ ಯಥಾ ಪುಣ್ಯಂ ಕಸ್ಮಾತ್ಸತ್ರೇಷು ನೈವ ಹಿ ॥ ೫೬ ॥

ದೃಷ್ಟ್ವಾ ಸ್ನಾನೇನ ವೈ ಸಿದ್ಧಿರ್ಮೀನಾಸ್ಸಿದ್ಧ್ಯಂತಿ ನಾನ್ಯಥಾ ।
ಯತ್ರ ಜೀವಸ್ತತ್ರ ತೀರ್ಥಂ ತತ್ರ ಧರ್ಮಸ್ಸನಾತನಃ ।
ತಪೋದಾನಾದಿಕಂ ಸರ್ವಂ ಪುಣ್ಯಂ ತತ್ರ ಪ್ರತಿಷ್ಠಿತಂ ॥ ೫೭ ॥

ಏಕೋ ಜಿನಃ ಸರ್ವಮಯೋ ನೃಪೇಂದ್ರ
ನಾಸ್ತ್ಯೇವ ಧರ್ಮಂ ಪರಮಂ ಹಿ ತೀರ್ಥಂ ।

---

೫೪. ಅದೆಲ್ಲವನ್ನೂ ನೆನೆಸಿ ಆಮೇಲೆ ನೀರು ನಿಲ್ಲುತ್ತದೆ. ನದಿಯಲ್ಲೂ ಅದೇರೀತಿ ನಿಲ್ಲುತ್ತದೆ. ಅನಂತರ ನದಿಯಿಂದ ಆ ನೀರು ಜಲಪ್ರವಾಹರೂಪವಾಗಿ ಹೊರಡುತ್ತದೆ. ಅಂತಹ ನೀರು ತೀರ್ಥವೆನಿಸಿಕೊಳ್ಳುತ್ತದೆ ಎಂಬುದು ಹೇಗೆ? ಆದ್ದರಿಂದ ಅವು ತೀರ್ಥಗಳಲ್ಲ.

೫೫. ಕೆರೆಗಳೂ, ಸಮುದ್ರಗಳೂ, ಜಲಾಶಯಗಳು ಮಾತ್ರ. ಭೂಮ್ಯಾಧಾರಕವಾಗಿರುವ ಬೆಟ್ಟಗಳು ಕಲ್ಲಿನರಾಸಿಗಳು.

೫೬. ಇವುಗಳೊಂದೂ ತೀರ್ಥಗಳಲ್ಲ. ನೀರಿನಲ್ಲಿ ಮೇಘವು ಉತ್ತಮವಾದುದು. ಸ್ನಾನದಲ್ಲೂ, ದಾನದಲ್ಲೂ ಪುಣ್ಯ ಹೇಗಿಲ್ಲವೋ ಹಾಗೆಯೇ ಯಾಗದಲ್ಲೂ ಇಲ್ಲ.

೫೭. ಸ್ನಾನದಿಂದ ಸಿದ್ಧಿಯನ್ನು ಪೊಂದುವಪಕ್ಷದಲ್ಲಿ ಮೀನುಗಳೂ ಸಿದ್ಧಿಯನ್ನು ಹೊಂದಬೇಕು. ಎಲ್ಲಿ ಜೀವಗಳಿವೆಯೋ ಅಲ್ಲೇ ತೀರ್ಥವು. ಅಲ್ಲೇ ಸನಾತನವಾದ ಧರ್ಮವು ಇರುವುದು. ಆ ಪ್ರಾಣಿಗಳಿರುವ ಜಾಗವೇ ತಪಸ್ಸು, ದಾನ ಮೊದಲಾದವುಗಳು. ಆಪ್ರಾಣಿಗಳಿರುವಲ್ಲಿಯೇ ಪುಣ್ಯವು ನಿಂತಿದೆ.

೫೮. ಜೀವನೊಬ್ಬನೇ ಸರ್ವರೂಪನು. ಅವನನ್ನು ಬಿಟ್ಟರೆ ಧರ್ಮವೂ,

**ಅಯಂ ತು ಲೋಕೇ ಪರಮಸ್ತು ತಸ್ಮಾತ್**
**ಧ್ಯಾಯಸ್ವ ನಿತ್ಯಂ ಸುಸುಖೋ ಭವಿಷ್ಯಸಿ** ॥ ೫೮ ॥

**ವಿನಿಂದ್ಯ ಧರ್ಮಂ ಸಕಲಂ ಸವೇದಂ**
**ದಾನಂ ಸುಪುಣ್ಯಂ ಪರಿಯಜ್ಞರೂಪಂ ।**
**ಪಾಪಸ್ಯ ಭಾವೈರ್ಬಹುಬೋಧಿತೋ ನೃಪ**
**ಸ್ತ್ವಂಗಸ್ಯ ಪುತ್ರೋ ಭುವಿ ತೇನ ಪಾಪಿನಾ** ॥ ೫೯ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ**
**ವೇನೋಪಾಖ್ಯಾನೇ ಷಟ್ತ್ರಿಂಶೋಽಧ್ಯಾಯಃ**

---

ತೀರ್ಥವೂ ಒಂದೂ ಇಲ್ಲ. ಈ ಜಿನನೊಬ್ಬನೇ ಲೋಕದಲ್ಲಿ ಉತ್ಕೃಷ್ಟನು. ಅವನನ್ನು ಧ್ಯಾನಿಸಿದರೆ ನೀನು ಸುಖಿಯಾಗಿ ಆಗುತ್ತೀಯೆ ಎಂದು ಬೋಧಿಸಿದನು.

೫೯. ಧರ್ಮ, ವೇದ, ದಾನ, ಪುಣ್ಯ, ಯಜ್ಞಗಳನ್ನು ಈರೀತಿ ನಿಂದಿಸಿ, ಆ ಪಾಪಿಯು ಅಂಗನಮಗನಾದ ವೇನನಿಗೆ ಈರೀತಿ ದುರ್ಬೋಧನೆಯನ್ನು ಮಾಡಿದನು.

ಇಲ್ಲಿಗೆ ಪದ್ಮಮಹಾಪುರಾಣದಲ್ಲಿ ಭೂಮಿಖಂಡದ ವೇನೋಪಾಖ್ಯಾನದಲ್ಲಿ
ಮೂವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ಸಪ್ತತ್ರಿಂಶೋಽಧ್ಯಾಯಃ

---

**॥ ಸೂತ ಉವಾಚ ॥**

**ಏವಂ ಸಂಬೋಧಿತೋ ವೇನಃ ಪಾಪಭಾವಂ ಗತಃ ಕಿಲ ।**
**ಪುರುಷೇಣ ತೇನ ಪಾಪೇನ ಮಹಾಪಾಪೇನ ಮೋಹಿತಃ ॥ ೧ ॥**

**ನಮಸ್ಕೃತ್ಯ ತತಃ ಪಾದೌ ತಸ್ಯೈವ ಚ ದುರಾತ್ಮನಃ ।**
**ವೇದಧರ್ಮಂ ಪರಿತ್ಯಜ್ಯ ಸತ್ಯಧರ್ಮಾದಿಕಾಂ ಕ್ರಿಯಾಂ ॥ ೨ ॥**

**ಸುಯಜ್ಞಾನಾಂ ನಿವೃತ್ತಿಸ್ಸ್ಯಾದ್ವೇದಾನಾಂ ಹಿ ತಥೈವ ಚ ।**
**ಪುಣ್ಯಶಾಸ್ತ್ರಮಯೋ ಧರ್ಮಸ್ತದಾ ತೈರಪ್ರವರ್ತಿತಃ ॥ ೩ ॥**

---

### ಮೂವತ್ತೇಳನೆಯ ಅಧ್ಯಾಯವು.

೧. ಸೂತನು ಹೇಳಿದನು :— ಹೀಗೆ ಆ ಪಾಪಿಯಾದ ಮನುಷ್ಯನಿಂದ ಬೋಧಿಸಲ್ಪಟ್ಟ ವೇನನು ಮೋಹಗೊಂಡು ಪಾಪವಾದ ಬುದ್ಧಿಯನ್ನೇ ಹೊಂದಿದನು.

೨. ಅನಂತರ ಆ ದುಷ್ಟನ ಪಾದಗಳನ್ನೇ ನಮಸ್ಕರಿಸಿ ವೇದೋಕ್ತವಾದ ಸತ್ಯ, ಧರ್ಮ, ಕ್ರಿಯೆ ಮೊದಲಾದ ಸತ್ಕರ್ಮಗಳನ್ನೂ ಬಿಟ್ಟುಬಿಟ್ಟನು.

೩. ಯಜ್ಞಕ್ರಿಯೆಗಳೆಲ್ಲವನ್ನೂ ಬಿಟ್ಟು ಬಿಟ್ಟು ವೇದಗಳನ್ನು ದೂರ ಮಾಡಿದನು, ಪುಣ್ಯಪ್ರದವಾದ ಶಾಸ್ತ್ರಧರ್ಮಗಳೆಲ್ಲವನ್ನೂ ತ್ಯಜಿಸಿದನು.

ಸರ್ವಪಾಪಮಯೋ ಲೋಕಸ್ಸಂಜಾತಸ್ತಸ್ಯ ಶಾಸನಾತ್ ।
ತೇನ ಯಜ್ಞಾಶ್ಚವೇದಾಶ್ಚ ಧರ್ಮಶಾಸ್ತ್ರಾರ್ಥಮುತ್ತಮಂ ॥ ೪ ॥

ನ ದಾನಾಧ್ಯಯನಂ ವಿಪ್ರಾಸ್ತಸ್ಮಿಂಚ್ಛಾಸತಿ ಪಾರ್ಥಿವೇ ।
ಏವಂ ಧರ್ಮಪ್ರಲೋಪೋಽಭೂನ್ಮಹತ್ಪಾಪಂ ಪ್ರವರ್ತಿತಂ ॥ ೫ ॥

ಅಂಗೇನ ವಾರ್ಯಮಾಣಸ್ತು ಚಾನ್ಯಥಾ ಕುರುತೇ ಭೃಶಂ ।
ಪಿತುಃ ಪಾದೌ ನನಾಮಾಥ ಮಾತುಶ್ಚೈವ ದುರಾತ್ಮವಾನ್ ॥ ೬ ॥

ಸನಕಸ್ಯಾಪಿ ವಿಪ್ರಸ್ಯ ಹ್ಯಹಮೇಕಃ ಪ್ರತಾಪವಾನ್ ।
ಪಿತ್ರಾ ನಿವಾರ್ಯಮಾಣಶ್ಚ ಮಾತ್ರಾಚೈವ ದುರಾತ್ಮವಾನ್ ॥ ೭ ॥

ನ ಕರೋತಿ ಶುಭಂ ಪುಣ್ಯಂ ತೀರ್ಥದಾನಾದಿಕಂ ತಥಾ ।
ಆತ್ಮಭಾವಂ ಸ್ವರೂಪಂ ಚ ಬಹುಕಾಲಂ ಮಹಾಯಶಾಃ ॥ ೮ ॥

---

೪. ಆ ರಾಜನ ಅಪ್ಪಣೆಯಂತೆ ಜನರೆಲ್ಲರೂ ಪಾಪಿಗಳಾದರು. ಯಜ್ಞ, ವೇದ ಧರ್ಮಶಾಸ್ತ್ರಗಳೆಲ್ಲವನ್ನೂ ಬಿಟ್ಟುಬಿಟ್ಟರು.

೫. ಆ ರಾಜನು ಆಳುತ್ತಿರುವಾಗ ಪ್ರಜೆಗಳು ದಾನ, ಅಧ್ಯಯನಗಳನ್ನು ಮಾಡುವುದನ್ನು ಬಿಟ್ಟರು. ಈ ರೀತಿಯಾಗಿ ಧರ್ಮಲೋಪವಾದುಲ್ಲದೆ ಮಹಾ ಪಾಪವನ್ನು ಮಾಡುತ್ತ ಬಂದರು.

೬. ತಂದೆಯಾದ ಅಂಗನು ಬೇಡವೆಂದರೂ, ಅವನ ಮಾತನ್ನು ಕೇಳದೆ ಬೇರೆರೀತಿಯಾಗಿಯೇ ಇರುತ್ತಿದ್ದನು. ತಾಯಿತಂದೆಗಳಿಗೆ ಆ ದುಷ್ಟನು ನಮಸ್ಕರಿಸಿದರೂ ಒಳ್ಳೆಯ ಕೆಲಸಗಳನ್ನು ಮಾಡುತ್ತಿರಲಿಲ್ಲ.

೭-೮. ಸನಕನೆಂಬ ಸ್ವಾಮಿಗಿಂತಲೂ ನಾನೇ ಪ್ರತಾಪಶಾಲಿಯು ಎನ್ನುತ್ತ ಬಂದನು. ತಾಯಿತಂದೆಗಳು ಎಷ್ಟು ತಡೆದರೂ ಶುಭ, ಪುಣ್ಯ, ತೀರ್ಥ, ದಾನಗಳನ್ನೂ ಮಾಡದೆ ಬಿಟ್ಟುಬಿಟ್ಟನು. ಮೊದಲಿನ ತನ್ನ ಒಳ್ಳೆಯ ಸ್ವಭಾವವನ್ನೂ, ಅಭಿಪ್ರಾಯವನ್ನೂ ತ್ಯಜಿಸಿದನು.

ಪುನಃ ಪುನರ್ವಿಚಾರ್ಯೈವ ಕಸ್ಮಾತ್ಪಾಪೀ ತ್ವಜಾಯತ ।
ತುಂಗಃ ಪ್ರಜಾಪತೇಃ ಪುತ್ರೋ ವಂಶಲಾಂಛನಮಾಗತಂ ॥ ೯ ॥

ತತಃ ಪಪ್ರಚ್ಛ ಧರ್ಮಾತ್ಮಾ ರಾಜಾ ಮಧುರಮೇವ ಚ ।
ಕಸ್ಮಾದ್ದೋಷಾತ್ಸಮುತ್ಪನ್ನೋ ವದ ಸತ್ಯಂ ಮಮ ಪ್ರಿಯೇ ॥ ೧೦ ॥

॥ ಸುನೀಥೋವಾಚ ॥

ಬಾಲ್ಯೇ ಕೃತಂ ಮಯಾ ಪಾಪಂ ಸುಶಂಖಸ್ಯ ಮಹಾತ್ಮನಃ ।
ತಪಸಿ ಸಂಸ್ಥಿತಸ್ಯಾಪಿ ನಾನ್ಯತ್ಕಿಂಚಿತ್ಕೃತಂ ಮಯಾ ॥ ೧೧ ॥

ಶಪ್ತಾಹಂ ಕುಪ್ಯತಾ ತೇನ ದುಷ್ಟಾ ತೇ ಸಂತತಿರ್ಭವೇತ್ ।
ಇತಿ ಜಾನೇ ಮಹಾಭಾಗ ತೇನಾಯಂ ದುಷ್ಟತಾಂ ಗತಃ ॥ ೧೨ ॥

ತಚ್ಛ್ರುತ್ವಾ ವಚನಂ ರಾಜಾ ದಿಷ್ಟಮೇವಾನ್ವಪದ್ಯತ ।
ಅಥ ಸಪ್ತರ್ಷಯಸ್ತತ್ರ ವೇನಪಾರ್ಶ್ವಂ ಸಮಾಗತಾಃ ।
ಸಮಾಶ್ವಾಸ್ಯ ತತಃ ಪ್ರೋಚುರಂಗಸ್ಯ ತನಯಂ ಪ್ರತಿ ॥ ೧೩ ॥

---

೯. ವಂಶಕಳಂಕೆಯಾದ ಈ ಮಗನು ಪಾಪಿಯಾಗಿ ಹುಟ್ಟಲು ಕಾರಣವೇನೆಂದು ಬ್ರಹ್ಮನ ಮಗನಾದ ಆ ಅಂಗನು ಬಾರಿಬಾರಿಗೂ ಯೋಚಿಸುತ್ತಿದ್ದನು.

೧೦. ಆಮೇಲೆ ಆ ಅಂಗರಾಜನು ಒಳ್ಳೆಯ ಮಾತಿನಿಂದ ಹೆಂಡತಿಯನ್ನು ಕುರಿತು ಯಾವ ದೋಷದಿಂದ ಈತನು ಪಾಪಿಯಾಗಿ ಹುಟ್ಟಿದನು ಹೇಳೆಂದನು.

೧೧. ಸುನೀಥೆಯು ಹೇಳಿದಳು :—ನಾನು ಬಾಲ್ಯದಲ್ಲಿ ತಪೋನಿಷ್ಠನಾದ ಸುಶಂಖನ ವಿಷಯದಲ್ಲಿ ಸ್ವಲ್ಪ ಅಪರಾಧ ಮಾಡಿದ್ದೆ. ಮತ್ತೇನೂ ಪಾಪಗಳನ್ನು ಮಾಡಿಲ್ಲ.

೧೨. ಆ ಸುಶಂಖನು ಕೋಪಗೊಂಡು ನಿನ್ನ ವಂಶದಲ್ಲಿ ಹುಟ್ಟುವವನು ದುಷ್ಟನಾಗಲಿ ಎಂದು ಶಪಿಸಿದನು. ಇದನ್ನು ಬಲ್ಲೆನು. ಆದುದರಿಂದ ಈತನು ದುಷ್ಟನಾಗಿದ್ದಾನೆ ಎಂದಳು.

೧೩. ಅದನ್ನು ಕೇಳಿ ರಾಜನು ಅದೃಷ್ಟವನ್ನು ಮೀರಲಾಗದೆಂದು ಸುಮ್ಮನಾದನು. ಆಮೇಲೆ ಸಪ್ತರ್ಷಿಗಳು ವೇನನ ಬಳಿಗೆ ಬಂದು ಆತನನ್ನು ಸಮಾಧಾನ ಮಾಡಿ ಅಂಗನ ಮಗನನ್ನು ಕುರಿತು ಹೇಳಿದರು.

॥ ಋಷಯ ಊಚುಃ ॥

ಮಾ ವೇನ ಸಾಹಸಂ ಕಾರ್ಷೀಃ ಪ್ರಜಾಪಾಲೋ ಭವಾನಿಹ ।
ತ್ವಯಿ ಸರ್ವಮಿದಂ ಲೋಕಂ ತ್ರೈಲೋಕ್ಯಂ ಸಚರಾಚರಂ ॥ ೧೪ ॥

ಧರ್ಮಾಧರ್ಮಾತ್ಮಕಂ ರಾಜನ್ ಸಕಲಂ ಹಿ ಪ್ರತಿಷ್ಠಿತಂ ।
ಪಾಪಕರ್ಮ ಪರಿತ್ಯಜ್ಯ ಧರ್ಮಕರ್ಮ ಸಮಾಚರ ॥ ೧೫ ॥

ಏವಮುಕ್ತೋ ತು ತೈರ್ವಾಕ್ಯೈಃ ಪ್ರಹಸನ್ವಾಕ್ಯಮಬ್ರವೀತ್ ॥ ೧೬ ॥

॥ ವೇನ ಉವಾಚ ॥

ಅಹಮೇವ ಪರೋ ಧರ್ಮೋಽಹಮೇವಾರ್ಹಸ್ಸನಾತನಃ ।
ಅಹಂ ಧಾತಾ ಹ್ಯಹಂ ಗೋಪ್ತಾ ತ್ವಹಂ ವೈ ಸತ್ಯಮೇವ ಚ ॥ ೧೭ ॥

ಅಹಂ ಧರ್ಮೋ ಮಹಾಪುಣ್ಯೋ ಜೈನಧರ್ಮಸ್ಸನಾತನಃ ।
ಮಾಮೇವ ಕರ್ಮಣಾ ವಿಪ್ರಾ ಭಜಧ್ವಂ ಧರ್ಮರೂಪಿಣಂ ॥ ೧೮ ॥

---

೧೪. ಋಷಿಗಳು ಹೇಳಿದರು:—ಎಲೈ ವೇನನೇ, ದುಡುಕಿನ ಕೆಲಸಗಳನ್ನು ಮಾಡಬೇಡ. ನೀನು ಪ್ರಜೆಗಳನ್ನು ಕಾಪಾಡಬೇಕಲ್ಲವೇ? ಮೂರು ಲೋಕದ ಚರಾಚರವಸ್ತುಗಳೂ ನಿನ್ನನೇ ಆಶ್ರಯಿಸಿಕೊಂಡಿಲ್ಲವೇ ?

೧೫-೧೬. ಧರ್ಮಾಧರ್ಮಗಳು ಸಕಲವೂ ನಿನ್ನನೇ ಆಶ್ರಯಿಸಿವೆ. ಆದುದರಿಂದ ಪಾಪಕರ್ಮವನ್ನು ಬಿಟ್ಟು ಧರ್ಮವನ್ನು ಮಾಡು ಎಂದು ಹೇಳಲು ಆ ವೇನನು ನಗುತ್ತ ಹೇಳಿದನು.

೧೭. ವೇನನು ಹೇಳಿದನು:—ನಾನೇ ಧರ್ಮವು. ನಾನೇ ಸನಾತನನಾದ ಅರ್ಹನು. ನಾನೇ ಬ್ರಹ್ಮನು. ನಾನೇ ಕಾಪಾಡುವವನು. ನಾನೇ ಸತ್ಯವು.

೧೮. ಮಹಾಪುಣ್ಯವಾದ ಧರ್ಮವು ನಾನೇ. ಸನಾತನನಾದ ಜೈನಧರ್ಮವೂ ನಾನೇ. ಧರ್ಮರೂಪಿಯಾದ ನನ್ನನ್ನೇ ಎಲ್ಲರೂ ಭಜಿಸಿರಿ ಎಂದನು.

॥ ಋಷಯ ಊಚುಃ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ತ್ರಯೋ ವರ್ಣಾ ದ್ವಿಜಾತಯಃ ।
ಸರ್ವೇಷಾಮೇವ ವರ್ಣಾನಾಂ ಶ್ರುತಿರೇಷಾ ಸನಾತನೀ ॥ ೧೯ ॥

ವೇದಾಚಾರೇಣ ವರ್ತಂತೇ ತೇನ ಜೀವಂತಿ ಜಂತವಃ ।
ಬ್ರಹ್ಮವಂಶಾತ್ಸಮಾದ್ಭೂತೋ ಭವಾನ್ ಬ್ರಾಹ್ಮಣ ಏವ ಚ ॥ ೨೦ ॥

ಪಶ್ಚಾದ್ರಾಜಾ ಪೃಥಿವ್ಯಾಂ ತು ಸಂಜಾತಃ ಖ್ಯಾತವಿಕ್ರಮಃ ।
ರಾಜ್ಞಃ ಪುಣ್ಯೇನ ರಾಜೇಂದ್ರ ಸುಖಂ ಜೀವಂತಿ ವೈ ಪ್ರಜಾಃ ॥ ೨೧ ॥

ರಾಜ್ಞಃ ಪಾಪೇನ ನಶ್ಯಂತಿ ತಸ್ಮಾತ್ಸತ್ಯಂ ಸಮಾಚರ ।
ಸಮಾದೃತಸ್ತ್ವಯಾ ಧರ್ಮಃ ಕೃತಶ್ಚಾಪಿ ನರಾಧಿಪ ॥ ೨೨ ॥

ತಸ್ಮಾತ್ತ್ರೇತಾಯುಗಸ್ಯಾಯಂ ದ್ವಾಪರಸ್ಯ ತಥಾ ನ ಹಿ ।
ಕಲೇಶ್ಚೈವ ಪ್ರದೇಶೇ ತು ವರ್ತಯಿಷ್ಯಂತಿ ಮಾನವಾಃ ॥ ೨೩ ॥

---

೧೯. ಋಷಿಗಳು ಹೇಳಿದರು:—ಎಲ್ಲ ವರ್ಣಗಳಲ್ಲಿಯೂ, ಬ್ರಾಹ್ಮಣ, ಕ್ಷತ್ರಿಯ. ವೈಶ್ಯ, ಈ ಮೂರು ವರ್ಣಗಳೇ ದ್ವಿಜರೆಂದು ವೇದದಲ್ಲಿ ಹೇಳಿದೆ.

೨೦. ಈ ಮೂರು ಜಾತಿಯವರೂ ವೇದೋಕ್ತನಾದ ಆಚಾರದಂತೆ ನಡೆಯುತ್ತಾರೆ. ನೀನೂ ಕೂಡ ಬ್ರಹ್ಮನ ವಂಶದವನಾದ್ದರಿಂದ ಬ್ರಾಹ್ಮಣನಾಗಿದ್ದೀಯೆ. ಇದಲ್ಲದೆ ನೀನು ಪರಾಕ್ರಮಶಾಲಿಯಾದುದರಿಂದ ಲೋಕದಲ್ಲಿ ರಾಜನಾದೆ.

೨೧. ರಾಜನ ಪುಣ್ಯದಿಂದ ಪ್ರಜೆಗಳು ಸುಖವಾಗಿ ಜೀವಿಸುತ್ತಾರೆ. ರಾಜನ ಪಾಪದಿಂದ ಪ್ರಜೆಗಳು ನಾಶವಾಗುತ್ತಾರೆ. ಆದ್ದರಿಂದ ಒಳ್ಳೆಯ ಆಚಾರವನ್ನು ಮಾಡು.

೨೨-೨೩. ನಿನ್ನಿಂದ ಧರ್ಮವೆಲ್ಲ ದೇಶದಲ್ಲಿ ಹರಡಲ್ಪಟ್ಟಿತು. ಅದರಂತೆ ಜನರು ಆಚರಿಸುವಂತೆಯೂ ಮಾಡಿದೆ. ಆದುದರಿಂದ ತ್ರೇತಾಯುಗ ದ್ವಾಪರಯುಗಗಳೂ ಈಗಿನಂತೆ ಇರಲಿಲ್ಲ. ಕಲಿಯು ಇರುವ ಜಾಗದಲ್ಲೂ ಕೂಡ ಜನರು ಧರ್ಮದಿಂದಲೇ ವರ್ತಿಸುತ್ತಿದ್ದರು.

ಜೈನಧರ್ಮಂ ಸಮಾಶ್ರಿತ್ಯ ಸರ್ವೇ ಪಾಪಪ್ರಮೋಹಿತಾಃ ।
ವೇದಾಚಾರಂ ಪರಿತ್ಯಜ್ಯ ಪಾಪಂ ಯಾಸ್ಯನ್ತಿ ಮಾನವಾಃ ॥ ೨೪ ॥

ಪಾಪಸ್ಯ ಮೂಲಮೇವಂ ವೈ ಜೈನಧರ್ಮಂ ನ ಸಂಶಯಃ ।
ಅನೇನ ಮುಗ್ಧಾ ರಾಜೇಂದ್ರ ಮಹಾಮೋಹೇನ ಪಾತಿತಾಃ ॥ ೨೫ ॥

ಮಾನವಾಃ ಪಾಪಸಂಘಾತಾಸ್ತೇಷಾಂ ನಾಶಾಯ ನಾನ್ಯಥಾ ।
ಭವಿಷ್ಯತ್ಯೇವ ಗೋವಿಂದಃ ಸರ್ವಪಾಪಾಪಹಾರಕಃ ॥ ೨೬ ॥

ಮ್ಲೇಚ್ಛರೂಪಂ ಸಮಾಶ್ರಿತ್ಯ ಸಂಹರಿಷ್ಯತಿ ಪಾತಕಾನ್ ।
ಪಾಪೇಷು ಸಂಗತೇಷ್ವೇವಂ ಮ್ಲೇಚ್ಛನಾಶಾಯ ವೈ ಪುನಃ ॥ ೨೭ ॥

ಕಲ್ಕಿರೇವ ಸ್ವಯಂ ದೇವೋ ಭವಿಷ್ಯತಿ ನ ಸಂಶಯಃ ।
ವ್ಯವಹಾರಂ ಕಲೇಶ್ಚೈವ ತ್ಯಜ ಪುಣ್ಯಂ ಸಮಾಶ್ರಯ ।
ವರ್ತಯಸ್ವ ಹಿ ದೇಹೇನ ಪ್ರಜಾಪಾಲೋ ಭವ ಸ್ವಯಂ ॥ ೨೮ ॥

---

೨೪. ಈಗ ಜೈನಧರ್ಮವನ್ನಾಚರಿಸಿ ಎಲ್ಲರೂ ಪಾಪದಲ್ಲಿ ಆಸಕ್ತರಾಗಿದ್ದಾರೆ. ವೇದಾಚಾರವನ್ನು ಬಿಟ್ಟು ಜನರೆಲ್ಲ ಪಾಪಿಗಳಾಗುತ್ತಿದ್ದಾರೆ.

೨೫. ಜೈನಧರ್ಮವು ಪಾಪಕ್ಕೆ ಮೂಲವಷ್ಟೆ? ಸಂಶಯವೇ ಇಲ್ಲ. ಜನರೆಲ್ಲರೂ ಈ ಜೈನಧರ್ಮದಿಂದ ಮೂಢರಾಗಿ ಅಜ್ಞಾನದಲ್ಲಿ ಬಿದ್ದಿದ್ದಾರೆ. ಮನುಷ್ಯರು ಪಾಪಿಗಳಾಗುವುದು ಅವರ ನಾಶಕ್ಕಾಗಿಯೇ. ಬೇರೇನೂ ಅಲ್ಲ.

೨೬. ಗೋವಿಂದನು ಸರ್ವ ಪಾಪಗಳನ್ನೂ ನಾಶಮಾಡಲು ಮ್ಲೇಚ್ಛಾವತಾರ ಮಾಡಿ ಪಾಪಿಗಳನ್ನು ಸಂಹರಿಸುತ್ತಾನೆ.

೨೭. ಆ ಮ್ಲೇಚ್ಛರೂಪಿಗಳಾದ ಪಾಪಿಗಳನ್ನು ನಾಶಮಾಡಲು ಕಲ್ಕಿಯ ಅವತಾರವನ್ನು ಮಾಡುತ್ತಾನೆ. ಸಂಶಯವಿಲ್ಲ.

೨೮. ಕಲಿಯ ವ್ಯವಹಾರವನ್ನು ಎಂದರೆ ಪಾಪಾಚಾರವನ್ನು ಬಿಟ್ಟು ಪುಣ್ಯವನ್ನಾಶ್ರಯಿಸು. ಸರಿಯಾದ ನಡವಳಿಕೆಯನ್ನಿಟ್ಟುಕೊಂಡು, ಪ್ರಜಾಪಾಲಕನಾಗು. ದೇಹರೂಪದಿಂದ ಕೆಲಸಮಾಡುತ್ತ ರಾಜ್ಯಭಾರಮಾಡು ಎಂದರು.

॥ವೇನ ಉವಾಚ ॥

ಅಹಂ ಜ್ಞಾನವತಾಂ ಶ್ರೇಷ್ಠೋ ವಿಶ್ವಜ್ಞಾನಂ ಚ ವೈ ದ್ವಿಜಾಃ ।
ಯೋಽನ್ಯಥಾ ವರ್ತತೇ ಚೈವ ಸ ದಂಡ್ಯೋ ಭವತಿ ಧ್ರುವಂ ॥ ೨೯ ॥

ಅತ್ಯರ್ಥಂ ಭಾಷಮಾಣಂ ತಂ ರಾಜಾನಂ ಪಾಪಚೇತಸಂ ।
ಕುಪಿತಾಸ್ತೇ ಮಹಾತ್ಮಾನಃ ಸರ್ವೇ ವೈ ಬ್ರಹ್ಮಣಸ್ಸುತಾಃ ॥ ೩೦ ॥

ಕುಪಿತೇಷ್ವೇವ ವಿಪ್ರೇಷು ವೇನೋ ರಾಜಾ ಮಹಾತ್ಮಸು ।
ತೇಷಾಂ ಶಾಪಭಯಾಚ್ಚೈವ ವಲ್ಮೀಕಂ ಪ್ರವಿವೇಶ ಹ ॥ ೩೧ ॥

ಅಥ ತೇ ಮುನಯಃ ಕ್ರುದ್ಧಾ ವೇನಂ ಪಶ್ಯಂತಿ ಸರ್ವತಃ ।
ತೈರ್ಜ್ಞಾತಂ ನ ಪ್ರನಷ್ಟಂ ತು ವಲ್ಮೀಕಸ್ಥಂ ತು ಸಾಂಪ್ರತಂ ॥ ೩೨ ॥

ಬಲಾದಾನಿನ್ಯುಸ್ತೇ ವಿಪ್ರಾ ಕ್ರೂರಂ ತಂ ಪಾಪಚೇತಸಂ ।
ದೃಷ್ಟ್ವಾ ಚ ಪಾಪಕರ್ಮಾಣಂ ಮುನಯಸ್ಸುಸಮಾಹಿತಾಃ ॥ ೩೩ ॥

---

೨೯. ವೇನನು ಹೇಳಿದನು :—ನಾನೇ ಉತ್ತಮ ಜ್ಞಾನಿಯು. ಸಮಸ್ತ ಜ್ಞಾನವೂ ನಾನೇ. ಇದಕ್ಕೆ ವ್ಯತಿರಿಕ್ತವಾಗಿ ನಡೆದರೆ ಶಿಕ್ಷಿಸುವೆನು ಎನ್ನಲು,

೩೦. ಧರ್ಮವನ್ನತಿಕ್ರಮಿಸಿ ಮಾತನಾಡುವ ಆ ಪಾಪಬುದ್ಧಿಯ ರಾಜನಮೇಲೆ ಈ ಬ್ರಹ್ಮಪುತ್ರರಾದ ಸಪ್ತಋಷಿಗಳಿಗೂ ಕೋಪಬಂದಿತು.

೩೧. ಆ ಋಷಿಗಳು ಕೋಪಗೊಳ್ಳಲು ವೇನನು ಅವರ ಶಾಪದ ಭಯದಿಂದ ಹುತ್ತವನ್ನು ಹೊಕ್ಕನು.

೩೨. ಆಮೇಲೆ ಆ ಋಷಿಗಳು ಕೋಪಗೊಂಡು ಸುತ್ತಲೂ ವೇನನನ್ನು ನೋಡಿದರು. ಅವನು ಸತ್ತಿಲ್ಲವೆಂದೂ ಸದ್ಯದಲ್ಲಿ ಹುತ್ತದಲ್ಲಿ ಅಡಗಿರುವನೆಂದೂ ತಿಳಿಯಿತು.

೩೩. ಆ ಕ್ರೂರಿಯೂ ಪಾಪಿಯೂ ಆದ ವೇನನನ್ನು ಬಲಾತ್ಕಾರದಿಂದ ಹೊರಗೆಳೆಸಿದರು. ಆ ಪಾಪಿಯನ್ನು ಬಲಾತ್ಕರಿಸಿ ಆ ಋಷಿಗಳು ವೇನನ ಎಡಗೈಯನ್ನು ಕೋಪದಿಂದ ಕಡೆದರು.

ಸವ್ಯಂ ಪಾಣಿಂ ಮಮಂಥುಸ್ತೇ ಭೂಪಸ್ಯ ಜಾತಮನ್ಯವಃ ।
ತಸ್ಮಾಜ್ಜಾತೋ ಮಹಾಹ್ರಸ್ವೋ ನೀಲವರ್ಣೋ ಭಯಂಕರಃ ॥ ೩೪ ॥

ಬರ್ಬರೋ ರಕ್ತನೇತ್ರಸ್ತು ಬಾಣಪಾಣಿರ್ಧನುರ್ಧರಃ ।
ಸರ್ವೇಷಾಮೇವ ಪಾಪಾನಾಂ ನಿಷದಾನಾಂ ಬಭೂವ ಹ ॥ ೩೫ ॥

ಧಾತಾ ಪಾಲಯಿತಾ ರಾಜಾ ಮ್ಲೇಚ್ಛಾನಾಂ ತು ವಿಶೇಷತಃ ।
ತಂ ದೃಷ್ಟ್ವಾ ಪಾಪಕರ್ಮಾಣಂ ಋಷಯಸ್ತು ಮಹಾಮತೇ ॥ ೩೬ ॥

ಮಮನ್ಥುರ್ದಕ್ಷಿಣಂ ಪಾಣಿಂ ವೇನಸ್ಯಾಪಿ ದುರಾತ್ಮನಃ ।
ತಸ್ಮಾಜ್ಜಜ್ಞೇ ಮಹಾತ್ಮಾಸೌ ಯೇನ ದುಗ್ಧಾ ವಸುಂಧರಾ ॥ ೩೭ ॥

ಪೃಥುರ್ನಾಮ ಮಹಾಪ್ರಾಜ್ಞೋ ರಾಜರಾಜೋ ಮಹಾಬಲಃ ।
ತಸ್ಯ ಪುಣ್ಯಪ್ರಸಾದಾಚ್ಚ ವೇನೋ ಧರ್ಮಾರ್ಥಕೋವಿದಃ ॥ ೩೮ ॥

ಚಕ್ರವರ್ತಿಪದಂ ಭುಕ್ತ್ವಾ ಪ್ರಸಾದಾತ್ತಸ್ಯ ಚಕ್ರಿಣಃ ।
ಜಗಾಮ ವೈಷ್ಣವಂ ಲೋಕಂ ತದ್ವಿಷ್ಣೋಃ ಪರಮಂ ಪದಂ ॥ ೩೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ವೇನೋಪಾಖ್ಯಾನೇ ಸಪ್ತತ್ರಿಂಶೋಽಧ್ಯಾಯಃ

---

೩೪. ಅವನ ಕೈಯಿಂದ ಬಹು ಕುಳ್ಳಾದ, ಕಪ್ಪಾದ, ಭಯಂಕರನಾದ ಕಣ್ಣು ಕೆಂಪಗಿರುವ ಬರ್ಬರನು ಕೈಯಲ್ಲಿ ಬಾಣಹಿಡಿದುಕೊಂಡು ಹುಟ್ಟಿದನು.

೩೫. ಆ ಪುರುಷನು ಪಾಪಿಗಳಾದ, ನಿಷಾದರಿಗೂ, ವಿಶೇಷವಾಗಿ ಮ್ಲೇಚ್ಛರಿಗೂ ಕಾಪಾಡತಕ್ಕವನೂ, ಕೊಡತಕ್ಕವನೂ ಆದನು. ಅವರಿಗೆ ರಾಜನೂ ಆದನು.

೩೬-೩೭. ಆ ಋಷಿಗಳು ಆ ಪಾಪಿಯನ್ನು ನೋಡಿ ವೇನನ ಬಲಗೈಯನ್ನು ಕಡೆಯಲು ಅದರಿಂದ ಭೂಮಿಯನ್ನು ಕರೆದ ಪ್ರಾಜ್ಞನೂ ಬಲಿಷ್ಠನೂ ಮಹಾತ್ಮನೂ ಆದ ಪೃಥುವೆಂಬ ಪುರುಷನು ಹುಟ್ಟಿದನು.

೩೮-೩೯. ಆ ಪೃಥುವಿನ ಪುಣ್ಯದಿಂದ ಆ ಧರ್ಮಾತ್ಮನಾದ ವೇನನು ಚಕ್ರವರ್ತಿಯಾಗಿದ್ದು ವಿಷ್ಣುವಿನ ಅನುಗ್ರಹದಿಂದ ವೈಕುಂಠವನ್ನು ಹೊಂದಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನನಚರಿತೆಯೆಂಬ
ಮೂವತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

## ಅ ಷ್ಟ ತ್ರಿಂ ಶೋ ಧ್ಯಾ ಯಃ

॥ ಋಷಯ ಊಚುಃ ॥

ಕಥಂ ವೇನೋ ಗತಸ್ಸ್ವರ್ಗಂ ಪಾಪಂ ಕೃತ್ವಾ ಸುದಾರುಣಂ ।
ತತ್ತ್ವತೋ ವಿಸ್ತರೇಣಾಪಿ ವದ ಸತ್ಯವತಾಂ ವರ ॥ ೧ ॥

॥ ಸೂತ ಉವಾಚ ॥

ಋಷೀಣಾಂ ಪುಣ್ಯಸಂಸರ್ಗಾತ್ಸಂಭಾಷಾಚ್ಚ ದ್ವಿಜೋತ್ತಮಾಃ ।
ಕಾಯಸ್ಯ ಮಥನಾತ್ಪಾಪಂ ವದಂತ್ಯಸ್ಯ ವಿನಿರ್ಗತಂ ॥ ೨ ॥

ಪಶ್ಚಾದ್ವೇನಸ್ಸುಪುಣ್ಯಾತ್ಮಾ ಜ್ಞಾನಂ ಲೇಭೇ ಚ ಶಾಶ್ವತಂ ।
ರೇವಾಯಾ ದಕ್ಷಿಣೇ ಕೂಲೇ ತಪಶ್ಚಚಾರ ಸ ದ್ವಿಜಃ ॥ ೩ ॥

---

## ಮೂವತ್ತೆಂಟನೆಯ ಅಧ್ಯಾಯ.

೧. ಋಷಿಗಳು ಹೇಳಿದರು :—ಎಲೈ ಸೂತನೇ, ವೇನನು ಪಾಪಿಯಾದರೂ ಸ್ವರ್ಗವನ್ನು ಹೇಗೆ ಹೊಂದಿದನೆಂಬುದನ್ನು ದಯವಿಟ್ಟು ವಿಸ್ತಾರವಾಗಿ ಹೇಳು.

೨. ಸೂತನು ಹೇಳಿದನು :—ಋಷಿಗಳ ಪವಿತ್ರವಾದ ಸ್ಪರ್ಶದಿಂದಲೂ, ಅವರೊಡನೆ ಮಾತನಾಡುವುದರಿಂದಲೂ, ದೇಹವನ್ನು ಕಡೆದುದರಿಂದಲೂ, ವೇನನ ಪಾಪವು ಹೋಯಿತೆಂದು ಹೇಳುತ್ತಾರೆ.

೩-೪. ಆಮೇಲೆ ವೇನನು ಶಾಶ್ವತವಾದ ಮತ್ತು ಉತ್ತಮವಾದ ಜ್ಞಾನವನ್ನು ಹೊಂದಿದನು. ಅನಂತರ ರೇವಾನದಿಯ ದಕ್ಷಿಣದಡದಲ್ಲಿರುವ ತೃಣಬಿಂದುವೆಂಬ

ತೃಣಬಿಂದೋರ್ಋಷೇಶ್ಚೈವ ಹ್ಯಾಶ್ರಮೇ ಪಾಪನಾಶನೇ ।
ವರ್ಷಾಣಾಂ ಚ ಶತಂ ಸಾಗ್ರಂ ಕಾಮಕ್ರೋಧವಿವರ್ಜಿತಃ ॥ ೪ ॥

ತಸ್ಯ ವೈ ತಪಸಾ ದೇವಃ ಶಂಖಚಕ್ರಗದಾಧರಃ ।
ಪ್ರಸನ್ನೋಽಭೂನ್ಮಹಾಭಾಗಾ ನಿಷ್ಪಾಪಸ್ಯ ನೃಪಸ್ಯ ವೈ ॥ ೫ ॥

ಉವಾಚ ಚ ಪ್ರಸನ್ನಾತ್ಮಾ ವ್ರಿಯತಾಂ ವರಮುತ್ತಮಂ ।
॥ ವೇನ ಉವಾಚ ॥
ಯದಿ ದೇವ ಪ್ರಸನ್ನೋಽಸಿ ದೇಹಿ ಮೇ ವರಮುತ್ತಮಂ ।
ಅನೇನಾಪಿ ಶರೀರೇಣ ಗನ್ತುಮಿಚ್ಛಾಮಿ ತ್ವತ್ಪದಂ ॥ ೬ ॥

ಪಿತ್ರಾ ಸಾರ್ಧಂ ಮಹಾಭಾಗ ಮಾತ್ರಾ ಚೈವ ಸುರೇಶ್ವರ ।
ತವೈವ ತೇಜಸಾ ದೇವ ತದ್ವಿಷ್ಣೋಃ ಪರಮಂ ಪದಂ ॥ ೭ ॥

॥ ಭಗವಾನುವಾಚ ॥
ಕ್ವ ಗತೋಽಸೌ ಮಹಾಮೋಹೋ ಯೇನ ತ್ವಂ ಮೋಹಿತೋ ನೃಪ ।
ಲೋಭೇನ ಮೋಹಯುಕ್ತೇನ ತಮೋಮಾರ್ಗೇ ನಿಪಾತಿತಃ ॥ ೮ ॥

---

ಋಷಿಯ ಆಶ್ರಮದಲ್ಲಿ ಕಾಮಕ್ರೋಧಗಳನ್ನು ಬಿಟ್ಟು ನೂರುವರ್ಷಗಳವರೆಗೂ ತಪಸ್ಸು ಮಾಡಿದನು.

೫. ಆ ವೇನನ ತಪಸ್ಸಿನಿಂದ ಪ್ರಸನ್ನನಾದ ವಿಷ್ಣುವು ಅವನಿಗೆ ಪ್ರತ್ಯಕ್ಷನಾಗಿ ವರವನ್ನು ಕೇಳಿಕೋ ಎಂದನು.

೬. ಸ್ವಾಮಿಯೇ, ನೀನು ಪ್ರಸನ್ನನಾಗಿರುವ ಪಕ್ಷದಲ್ಲಿ ಉತ್ತಮವಾದ ಒಂದು ವರವನ್ನು ಕೊಡು. ಇದೇ ಶರೀರದಿಂದ ನಿನ್ನ ಸ್ಥಾನವಾದ ವೈಕುಂಠಕ್ಕೆ ಹೋಗ ಬೇಕೆಂದಿದ್ದೇನೆ. ಈ ವರವನ್ನು ಕೊಡು.

೭. ನಿನ್ನ ತೇಜಸ್ಸಿನ ಪ್ರಭಾವದಿಂದ ನಮ್ಮ ತಾಯಿತಂದೆಗಳೂ ಕೂಡ ಇದೇ ಶರೀರದಿಂದ ನನ್ನೊಡನೆ ನಿನ್ನ ಸ್ಥಾನವಾದ ವೈಕುಂಠಕ್ಕೆ ಬರಬೇಕು ಎಂದನು.

೮. ಭಗವಂತನು ಹೇಳಿದನು :—ನೀನು ಯಾವನಿಂದ ಮೋಹಹೊಂದು ವಂತಾದೆಯೋ, ಲೋಭದಿಂದ ತಮೋಮಾರ್ಗದಲ್ಲಿ ಕೆಡವಲ್ಪಟ್ಟವೆಯೋ ಆ ಮಹಾ ಮೋಹವನೆಲ್ಲಿ ಹೋದನು ?

॥ ವೇನ ಉವಾಚ ॥

ಯಸ್ಮೇ ಪೂರ್ವಕೃತಂ ಪಾಪಂ ತೇನಾಹಂ ಮೋಹಿತೋ ವಿಭೋ ।
ಅತೋ ಮಾಮುದ್ಧರಾಸ್ಮಾತ್ತ್ವಂ ಪಾಪಾಚ್ಚೈವ ಸುದಾರುಣಾತ್ ॥ ೯ ॥

ಅಜಪ್ತವ್ಯಮಥೋಪವ್ಯಂ ತದ್ವದಾನುಗ್ರಹಾದ್ವಿಭೋ ।

॥ ಭಗವಾನುವಾಚ ॥

ಸಾಧು ಭೂಪ ಮಹಾಭಾಗ ಪಾಪಂ ತೇ ನಾಶಮಾಗತಂ ।
ಶುದ್ಧೋಽಸಿ ತಪಸಾ ಚ ತ್ವಂ ತತಃ ಪುಣ್ಯಂ ವದಾಮ್ಯಹಂ ॥ ೧೦ ॥

ಪುರಾ ವೈ ಬ್ರಹ್ಮಣಾ ತಾತ ಪೃಷ್ಟೋಽಹಂ ಭವತಾ ಯಥಾ ।
ತಸ್ಮೈ ಯದುದಿತಂ ವತ್ಸ ತತ್ತೇ ಸರ್ವಂ ವದಾಮ್ಯಹಂ ॥ ೧೧ ॥

ಏಕದಾ ಬ್ರಹ್ಮಣಾ ಧ್ಯಾನಸ್ಥಿತೇನ ನಾಭಿಪಂಕಜೇ ।
ಪ್ರಾದುರಾಸ ತದಾ ತಸ್ಯ ವರದಾನಾಯ ಸುವ್ರತ ॥ ೧೨ ॥

---

೯. ವೇನನು ಹೇಳಿದನು :—ನಾನು ಪೂರ್ವಜನ್ಮದಲ್ಲಿ ಮಾಡಿದ ಪಾಪದಿಂದ ಮೋಹಿತನಾದೆ. ಆದುದರಿಂದ ಆ ಕ್ರೂರವಾದ ಪಾಪದಿಂದ ನನ್ನನ್ನು ಉದ್ಧಾರ ಮಾಡು. ಜಪಮಾಡದೇ, ನಿನ್ನ ಅನುಗ್ರಹದಿಂದ ಉತ್ತಮವಾದ ಗತಿಯನ್ನು ಹೊಂದುವ ಮಂತ್ರವನ್ನು ಹೊಂದಬೇಕು. ಆರೀತಿ ಅನುಗ್ರಹಿಸು ಎನ್ನಲು,

೧೦. ಭಗವಂತನು ಹೇಳಿದನು—ಎಲೈ ರಾಜನೇ, ನೀನು ಹೇಳಿದುದು ಸರಿ. ನಿನ್ನ ಪಾಪವನ್ನು ನಾಶಮಾಡುತ್ತೇನೆ. ಈ ತಪಸ್ಸಿನಿಂದ ಶುದ್ಧನಾಗಿದ್ದೀಯೆ. ಆದ್ದರಿಂದ ಒಳ್ಳೆಯದನ್ನು ಹೇಳುತ್ತೇನೆ.

೧೧. ನೀನು ಕೇಳಿದಂತೆಯೇ ಪೂರ್ವದಲ್ಲಿ ಬ್ರಹ್ಮನೂ ಕೇಳಿದನು. ಅವನಿಗೆ ಏನನ್ನು ಹೇಳಿದೆನೋ ಅದನ್ನೇ ನಿನಗೂ ಹೇಳುತ್ತೇನೆ.

೧೨. ನಾಭಿಕಮಲದಲ್ಲಿದ್ದ ಬ್ರಹ್ಮನು ಧ್ಯಾನಮಾಡಲು, ಅವನಿಗೆ ವರಕೊಡಲು ಪ್ರತ್ಯಕ್ಷನಾದೆನು.

ತೇನ ಪೃಷ್ಟಂ ಮಹತ್ಪುಣ್ಯಂ ಸ್ತೋತ್ರಂ ಪಾಪಪ್ರಣಾಶನಂ ।
ವಾಸುದೇವಾಭಿಧಾನಂ ಚ ಸುಗತಿಪ್ರದಮಿಚ್ಛತಾ ॥ ೧೩ ॥

ಸ್ತೋತ್ರಾಣಾಂ ಪರಮಂ ತಸ್ಮೈ ವಾಸುದೇವಾಭಿದಂ ಮಹತ್ ।
ಸರ್ವಸೌಖ್ಯಪ್ರದಂ ನೃಣಾಂ ಪಠತಾಂ ಜಪತಾಂ ಸದಾ ॥ ೧೪ ॥

ಉಪಾದಿಶಂ ಮಹಾಭಾಗ ವಿಷ್ಣುಪ್ರೀತಿಕರಂ ಪರಂ ।
॥ ವಿಷ್ಣುರುವಾಚ ॥
ಏತತ್ಸರ್ವಂ ಜಗದ್ವ್ಯಾಪ್ತಂ ಮಯಾ ತ್ವವ್ಯಕ್ತಮೂರ್ತಿನಾ ।
ಅತೋ ಮಾಂ ಮುನಯಃ ಪ್ರಾಹುರ್ವಿಷ್ಣುಂ ವಿಷ್ಣುಪರಾಯಣಾಃ ॥ ೧೫ ॥

ವಸಂತಿ ಯತ್ರ ಭೂತಾನಿ ವಸತ್ಯೇಷು ಚ ಯೋ ವಿಭುಃ ।
ಸ ವಾಸುದೇವೋ ವಿಜ್ಞೇಯೋ ವಿದ್ವದ್ಭಿರಹಮಾದರಾತ್ ॥ ೧೬ ॥

---

೧೩. ಆ ಬ್ರಹ್ಮನು ಪಾಪನಾಶಕವಾದ, ಸುಗತಿಯನ್ನು ಕೊಡುವ, ವಾಸುದೇವನ ಹೆಸರುಳ್ಳ, ಪುಣ್ಯಪ್ರದವಾದ ಸ್ತೋತ್ರವನ್ನು ಉಪದೇಶಿಸಬೇಕೆಂದು ಕೇಳಿಕೊಂಡನು.

೧೪. ಸ್ತೋತ್ರಗಳಲ್ಲಿ ಶ್ರೇಷ್ಠವಾದ, ಪಠಿಸುವವರಿಗೂ, ಜಪಿಸುವವರಿಗೂ ಸರ್ವಸೌಖ್ಯವನ್ನೂ ಕೊಡುವ, ವಾಸುದೇವನೆಂಬ ಒಂದು ಮಂತ್ರವಿದೆ. ವಿಷ್ಣುವಿಗೆ ಬಹು ಪ್ರೀತಿಯನ್ನುಂಟುಮಾಡುವ ಆ ಮಂತ್ರವನ್ನು ಬ್ರಹ್ಮನಿಗೆ ಉಪದೇಶಮಾಡಿದೆನು.

೧೫. ಅವ್ಯಕ್ತವಾದ ನನ್ನ ಮೂರ್ತಿಯಿಂದ ಈ ಜಗತ್ತು ವ್ಯಾಪಿಸಲ್ಪಟ್ಟಿದೆ. ಆದ್ದರಿಂದ ವಿಷ್ಣುವಿನಲ್ಲಿ ಭಕ್ತಿಯುಳ್ಳವರು ವಿಷ್ಣುವೆಂದು ಅನ್ವರ್ಥವಾಗಿ ಹೇಳುತ್ತಾರೆ.

೧೬. ಯಾವ ಸ್ವಾಮಿಯಲ್ಲಿ ಪ್ರಾಣಿಗಳು ಅಡಕವಾಗಿವೆಯೋ ಯಾವ ವಿಭುವು ಎಲ್ಲ ಪ್ರಾಣಿಗಳಲ್ಲಿ ವಾಸಿಸುತ್ತಾನೋ ಅವನೇ ವಾಸುದೇವನೆಂಬ ಅನ್ವರ್ಥವನ್ನು ವಿದ್ವಾಂಸರು ಹೇಳುತ್ತಾರೆ.

**ಸಂಕರ್ಷತಿ ಪ್ರಜಾಶ್ಚಾಂತೇ ಹ್ಯವ್ಯಕ್ತಾಯ ಯತೋ ವಿಭುಃ ।**
**ತತಃ ಸಂಕರ್ಷಣೋ ನಾಮ್ನಾ ವಿಜ್ಞೇಯಶ್ಚರಣಾಗತೈಃ ॥ ೧೭ ॥**

**ಇಂಗಿತೇ ಕಾಮರೂಪೋಽಹಂ ಬಹು ಸ್ಯಾಮಿತಿ ಕಾಮ್ಯಯಾ ।**
**ಪ್ರದ್ಯುಮ್ನೋಽಹಂ ಬುಧೈಸ್ತಸ್ಮಾದ್ವಿಜ್ಞೇಯೋಽಸ್ಮಿ ಸುತಾರ್ಥಿಭಿಃ ॥ ೧೮ ॥**

**ಅತ್ರ ಲೋಕೇ ವಿನಾವೇಶೌ ಸರ್ವೇಶೌ ಹರಕೇಶವೌ ।**
**ನಿರುದ್ಧೋಽಹಂ ಯೋಗಬಲಾನ್ನ ಕೇನಾತೋಽನಿರುದ್ಧವತ್ ॥ ೧೯ ॥**

**ವಿಶ್ವಾಖ್ಯೋಽಹಂ ಪ್ರತಿ ಜಗಜ್ಜ್ಞಾನವಿಜ್ಞಾನಸಂಯುತಃ ।**
**ಅಹಮಿತ್ಯಭಿಮಾನೀ ಚ ಜಾಗ್ರಚ್ಚಿನ್ತಾಸಮಾಕುಲಃ ॥ ೨೦ ॥**

**ತೈಜಸೋಽಹಂ ಜಗಚ್ಚೇಷ್ಟಾಮಯಶ್ಚೇಂದ್ರಿಯರೂಪವಾನ್ ।**
**ಜ್ಞಾನಕರ್ಮಸಮುದ್ರಿಕ್ತಃ ಸ್ವಪ್ನಾವಸ್ಥಾಂ ಗತೋ ಹ್ಯಹಂ ॥ ೨೧ ॥**

---

೧೭. ಸ್ವಾಮಿಯು ಪ್ರಜೆಗಳನ್ನು ಪ್ರಳಯಾಂತದಲ್ಲಿ ಎಳೆದುಕೊಂಡು ತನ್ನ ಅವ್ಯಕ್ತರೂಪದಲ್ಲಿ ಸೇರಿಸಿಕೊಳ್ಳುವುದರಿಂದ ಸಂಕರ್ಷಣನೆಂಬ ಹೆಸರುಬಂದಿದೆ.

೧೮. ಮನಸ್ಸಿನ ಯೋಚನೆಯಲ್ಲಿ ಕಾಮನರೀತಿಯಲ್ಲಿದ್ದು ಅನಂತರ ಅದರ ಕಾರ್ಯರೂಪವು ಬಹು ದೊಡ್ಡದಾಗುವುದರಿಂದ ನನ್ನನ್ನು ಪ್ರದ್ಯುಮ್ನನೆಂದು ಹೇಳುತ್ತಾರೆ.

೧೯. ಈ ಲೋಕದಲ್ಲಿ ಸರ್ವೇಶರಾದ ಹರಕೇಶವರ ಆವೇಶವಿಲ್ಲದಿದ್ದಲ್ಲಿ ನಾನು ಯಾವನಿಂದಲೂ ತಡೆಯಲ್ಪಡುವುದಿಲ್ಲವಾದುದರಿಂದ ಅನಿರುದ್ಧನಾದೆ. ಆದುದರಿಂದ ಅನಿರುದ್ಧನೆಂದು ಹೆಸರುಬಂದಿದೆ.

೨೦. ಎಲ್ಲಾ ಪ್ರಪಂಚದ ಜ್ಞಾನವೂ ಕುಶಲತೆಯೂ ಇರುವುದರಿಂದ ನನ್ನನ್ನು ವಿಶ್ವನೆಂದು ಕರೆಯುತ್ತಾರೆ. ಜಾಗ್ರದವಸ್ಥೆಯಲ್ಲಿ ಚಿಂತೆಯಿಂದ ಕೂಡಿರುತ್ತೇನಾದ್ದರಿಂದ ಅಹಂ ಎಂಬ ಅಭಿಮಾನಯುಕ್ತವಾದ ಪದಾರ್ಥವನ್ನಾಗಿ ಹೇಳುತ್ತಾರೆ.

೨೧. ಜಗತ್ತಿಗೆ ಚೇಷ್ಟೆಯನ್ನುಂಟುಮಾಡುತ್ತಾ ಇಂದ್ರಿಯರೂಪವನ್ನು ಹೊಂದಿರುವುದರಿಂದ ನಾನು ತೈಜಸನು. ಜ್ಞಾನಕರ್ಮಗಳಿಂದ ಒಂದಾಗಿರುವಾಗ ಸ್ವಪ್ನಾವಸ್ಥೆಯನ್ನು ಹೊಂದಿರುತ್ತೇನೆ.

ಪ್ರಾಜ್ಞೋऽಹಮಧಿದೈವಾತ್ಮಾ ವಿಶ್ವಾಧಿಷ್ಠಾನಗೋಚರಃ ।
ಸುಷುಪ್ತ್ಯಾವಾಸ್ಥಿತೋ ಲೋಕಾದುದಾಸೀನೋ ವಿಕಲ್ಪಿತಃ ॥ ೨೨ ॥

ತುರೀಯೋऽಹಂ ನಿರ್ವಿಕಾರೀ ಗುಣಾವಸ್ಥಾವಿವರ್ಜಿತಃ ।
ನಿರ್ಲಿಪ್ತಃ ಸಾಕ್ಷಿವದ್ವಿಶ್ವಪ್ರತಿಬಿಂಬಿತವಿಗ್ರಹಃ ॥ ೨೩ ॥

ಚಿದಾಭಾಸಶ್ಚಿದಾನಂದಶ್ಚಿನ್ಮಯಶ್ಚಿತ್ಸ್ವರೂಪವಾನ್ ।
ನಿತ್ಯೋಽಕ್ಷರೋ ಬ್ರಹ್ಮರೂಪೋ ಬ್ರಹ್ಮನ್ನೇವಮವೇಹಿ ಮಾಂ ॥ ೨೪ ॥

॥ ಭಗವಾನುವಾಚ ॥

ಇತ್ಯುಕ್ತ್ವಾಂತರ್ದಧೇ ವಿಷ್ಣುಃ ಸ್ವರೂಪಂ ಬ್ರಹ್ಮಣೇ ಪುರಾ ।
ಸೋऽಪಿ ಜ್ಞಾತ್ವಾ ಜಗದ್ವ್ಯಾಪ್ತಿಂ ಕೃತಾತ್ಮಾ ಸಮಭೂತ್ಕ್ಷಣಾತ್ ॥ ೨೫ ॥

ರಾಜಂಸ್ತ್ವಮಪಿ ಶುದ್ಧಾತ್ಮಾ ಪೃಥೋರ್ಜನ್ಮನ ಏವ ಚ ।
ತಥಾಪ್ಯಾರಾಧಯ ವಿಭುಂ ಸ್ತೋತ್ರೇಣಾನೇನ ಸುವ್ರತ ॥ ೨೬ ॥

---

೨೨. ದೇವತೆಗಳಿಗೆ ದೊಡ್ಡವನಾದುದರಿಂದ ಪ್ರಾಜ್ಞನು. ಪ್ರಪಂಚದ ಸ್ಥಿತಿಯಲ್ಲವೂ ಗೊತ್ತಾಗುವುದರಿಂದ ಆತ್ಮನು ಎನ್ನುತ್ತಾರೆ. ಸುಷುಪ್ತಿಯಲ್ಲಿದ್ದು ಲೋಕದಲ್ಲಿ ಉದಾಸೀನನಾಗಿರುವುದರಿಂದ ಉದಾಸೀನನೆನ್ನುತ್ತಾರೆ.

೨೩. ನಾನು ಸತ್ತ್ವರಜಸ್ತಮೋಗುಣಗಳಿಗಿಂತ ಮೀರಿದ ನಾಲ್ಕನೆಯವನು. ಗುಣಗಳಾಗಲಿ, ಅವಸ್ಥೆಗಳಾಗಲಿ ನನಗಿಲ್ಲ. ಪಾಪಪುಣ್ಯಗಳೊಂದೂ ನನ್ನನ್ನು ಅಂಟುವುದಿಲ್ಲ. ನಾನು ಎಲ್ಲರೂ ಮಾಡುವುದನ್ನು ನೋಡುತ್ತಾ ಸಾಕ್ಷಿಯಾಗಿದ್ದೇನೆ. ಪ್ರಪಂಚವೇ ನನ್ನಲ್ಲಿ ಕಾಣುತ್ತಿರುವುದು.

೨೪. ಚಿತ್ತಿನಂತೆ ಪ್ರಕಾಶಮಾನನು. ಚಿತ್ತಿನ ಆನಂದವುಳ್ಳವನು. ಚಿತ್ ಸ್ವರೂಪನು. ಚಿತ್ತಿನಿಂದ ಕೂಡಿರುವವನು. ನಿತ್ಯನು. ನಾಶರಹಿತನು. ಬ್ರಹ್ಮ ಸ್ವರೂಪನು ಎಂದು ಎಲೈ ಬ್ರಹ್ಮನೇ ನನ್ನನ್ನು ತಿಳಿ.

೨೫. ಭಗವಂತನು ಹೇಳುತ್ತಾನೆ:—ವಿಷ್ಣುವು ತನ್ನ ಸ್ವರೂಪವನ್ನು ಹೇಳಿ ಅಂತರ್ಧಾನನಾದನು. ಆ ಬ್ರಹ್ಮನೂ ಕೂಡ ಜಗದ್ವ್ಯಾಪಕನಾದವನು ಸ್ವಾಮಿಯೆಂದು ತಿಳಿದು ಕ್ಷಣಕಾಲದಲ್ಲೇ ಕೃತಾರ್ಥನಾದನು.

೨೬-೨೭. ಎಲೈ ರಾಜನೇ, ಪೃಥುವಿಗೆ ಜನ್ಮದಾನಮಾಡಿರುವುದರಿಂದ ನೀನೂ

ತುಷ್ಟೋ ವಿಷ್ಣುಸ್ತಮುಭ್ಯಾಹ ವರಂ ವರಯ ಮಾನದ ॥ ೨೭ ॥

॥ ವೇನ ಉವಾಚ ॥

ಸುಗತಿಂ ದೇಹಿ ಮೇ ವಿಷ್ಣೋ ದುಷ್ಕೃತಾತ್ತ್ರಾರಯಸ್ವ ಮಾಂ ।
ಶರಣಂ ತ್ವಾಂ ಪ್ರಪನ್ನೋಽಸ್ಮಿ ಕಾರಣಂ ವದ ಸದ್ಗತೇಃ ॥ ೨೮ ॥

॥ ವಿಷ್ಣುರುವಾಚ ॥

ಪೂರ್ವಮೇವ ಮಹಾಭಾಗ ತ್ವಂಗೇನಾಪಿ ಮಹಾತ್ಮನಾ ।
ಅಹಮಾರಾಧಿತಸ್ತೇನ ತಸ್ಮೈ ದತ್ತೋ ವರೋ ಮಯಾ । ॥ ೨೯ ॥

ಪ್ರಯಾಸ್ಯಸೇ ಮಹಾಭಾಗ ವಿಷ್ಣೋರ್ಲೋಕಮನುತ್ತಮಂ ।
ಕರ್ಮಣಾ ಸ್ವೇನ ಪೂರ್ವೇಣ ಪುಣ್ಯೇನ ನೃಪನಂದನಂ ॥ ೩೦ ॥

ಆತ್ಮಾರ್ಥೇ ತ್ವಂ ಮಹಾಭಾಗ ವರಮೇಕಂ ಪ್ರಯಾಚಯ ।
ಶೃಣು ವೇನ ಮಹಾಭಾಗ ವೃತ್ತಾಂತಂ ಪೂರ್ವಸಂಭವಂ ॥ ೩೧ ॥

---

ಶುದ್ಧನಾದೆ. ಆದರೂ ಕೂಡ ಸ್ವಾಮಿಯನ್ನು ಈ ಸ್ತೋತ್ರಗಳಿಂದ ಆರಾಧಿಸು ಎಂದು ಹೇಳಿ, ಬೇಕಾದ ವರವನ್ನು ಕೇಳಿಕೋ ಎಂದನು.

೨೮. ವೇನನು ಹೇಳಿದನು:—ಎಲೈ ವಿಷ್ಣುವೇ, ನನಗೆ ಸದ್ಗತಿಯನ್ನು ಕೊಡು. ಪಾಪದಿಂದ ಉದ್ಧಾರಮಾಡು. ನಿನ್ನನ್ನು ಮರೆಹೊಕ್ಕಿದ್ದೇನೆ. ಸದ್ಗತಿ ಸಿಕ್ಕಲು ಏನು ಮಾಡಬೇಕೆಂಬುದನ್ನು ತಿಳಿಸು ಎಂದನು.

೨೯. ವಿಷ್ಣುವು ಹೇಳಿದನು:—ಪೂರ್ವದಲ್ಲಿ ಅಂಗನೂ ಕೂಡ ನನ್ನನ್ನು ಆರಾಧಿಸಿದನು. ಅವನಿಗೂ ವರವನ್ನು ಕೊಟ್ಟಿದ್ದೇನೆ.

೩೦. ಎಲೈ ಪುಣ್ಯಾತ್ಮನೇ, ಪೂರ್ವದ ನಿನ್ನ ಕರ್ಮದಿಂದಲೂ, ಪುಣ್ಯದಿಂದಲೂ, ರಾಜರನ್ನು ಸಂತೋಷಪಡಿಸುವ ಉತ್ತಮವಾದ ಲೋಕವನ್ನು ಹೊಂದುತ್ತೀಯೆ.

೩೧. ನಿನಗೋಸ್ಕರ ಒಂದು ವರವನ್ನು ಕೇಳಿಕೋ. ಕೊಡುತ್ತೇನೆ. ಅಲ್ಲದೆ ನಿನ್ನ ಪೂರ್ವ ಚರಿತ್ರೆಯನ್ನು ಹೇಳುತ್ತೇನೆ ಕೇಳು.

ತವ ಮಾತ್ರೇ ಪುರಾ ದತ್ತಃ ಶಾಪಃ ಕ್ರುದ್ಧೇನ ಭೂಪತೇ ।
ಸುಶಂಖೇನ ಸುನೀಥಾಯೈ ಬಾಲ್ಯೇ ಪೂರ್ವಂ ಮಹಾತ್ಮನಾ ॥ ೩೨ ॥

ತತಸ್ತ್ವಂಗೇ ವರೋ ದತ್ತೋ ಮಯೈವ ವಿದಿತಾತ್ಮನಾ ।
ತ್ವಾಂ ಸಮುದ್ಧರ್ತುಕಾಮೇನ ಸುಪುತ್ರಸ್ತೇ ಭವಿಷ್ಯತಿ ॥ ೩೩ ॥

ಏವಮುಕ್ತ್ವಾ ತು ಪಿತರಂ ತವಾಹಂ ಗುಣವತ್ಸಲ ।
ಭವದಂಗಾತ್ಸಮುದ್ಭೂತಃ ಕರಿಷ್ಯೇ ಲೋಕಪಾಲನಂ ॥ ೩೪ ॥

ದಿವೀಂದ್ರೋ ಹಿ ಯಥಾ ಭಾತಿ ತಥಾಹಂ ಭೂತಲೇ ಸ್ಥಿತಃ ।
ಆತ್ಮಾ ವೈ ಜಾಯತೇ ಪುತ್ರ ಇತಿ ಸತ್ಯವತೀ ಶ್ರುತಿಃ ॥ ೩೫ ॥

ಅತಸ್ತ್ವಂ ಸುಗತಿಂ ವತ್ಸ ಲಭಿಷ್ಯಸಿ ವರಾನ್ಮಮ ।
ಗತ್ಯರ್ಥಮಾತ್ಮನೋ ರಾಜನ್ ದಾನಮೇಕಂ ಸಮಾಚರ ॥ ೩೬ ॥

---

೩೨. ನಿನ್ನ ತಾಯಿಯಾದ ಸುನೀಥೆಗೆ ಸುಶಂಖನೆಂಬ ತಪಸ್ವಿಯು, ಅವಳ ಬಾಲ್ಯತನದಲ್ಲಿ ಶಾಪ ಕೊಟ್ಟಿರುವನು.

೩೩. ನನಗೆ ಈ ವಿಷಯವೆಲ್ಲವೂ ಗೊತ್ತಿರುವುದರಿಂದ ನಿನ್ನನ್ನು ಉದ್ಧಾರ ಮಾಡಲೋಸುಗ ನಿನ್ನ ತಂದೆಯಾದ ಅಂಗನಿಗೆ, ನಿನಗೆ ಸುಪುತ್ರನು ಹುಟ್ಟುವನು ಎಂದು ವರವನ್ನು ಕೊಟ್ಟಿದ್ದೇನೆ.

೩೪. ನಿನ್ನ ಅವಯವದಲ್ಲೇ ಹುಟ್ಟಿ ಲೋಕಪಾಲನೆ ಮಾಡುತ್ತೇನೆಂಬುದಾಗಿ ನಿನ್ನ ತಂದೆಗೆ ಹೇಳಿದೆನು.

೩೫. ಸ್ವರ್ಗದಲ್ಲಿ ಇಂದ್ರನು ಅಧಿಕಾರಮಾಡುವಂತೆ ನಾನು ಭೂತಳದಲ್ಲಿ ಅಧಿಕಾರಮಾಡಿದೆನು. ತಾನೇ ಪುತ್ರರೂಪದಿಂದ ಹುಟ್ಟುತ್ತಾನೆಂಬ ಸತ್ಯವಾದ ವೇದವಾಕ್ಯವಿಲ್ಲವೇ? (ಆತ್ಮಾ ವೈ ಪುತ್ರನಾಮಾಸಿ—ಯಜುರ್ವೇದ).

೩೬. ನನ್ನ ವರದಿಂದ ನೀನು ಒಳ್ಳೆಯ ಗತಿಯನ್ನು ಹೊಂದುತ್ತೀಯೆ. ಆದರೆ ನಿನ್ನ ಸದ್ಗತಿಗೋಸ್ಕರ ಒಂದು ದಾನವನ್ನು ಮಾಡು.

**ಯಸ್ತ್ವಾಂ ಪಾತಕರೂಪೋಽಹಂ ಸುನೀಥಾಯಾಃ ಪರಂತಪ ।**
**ಅಬ್ರುವಂ ನಗ್ನರೂಪೇಣ ಕರ್ತುಂ ತ್ವಾಂ ತು ವಿಧರ್ಮಗಂ ॥ ೩೭ ॥**

**ಅನ್ಯಥಾ ತು ಸುಶಂಖಸ್ಯ ವಾಕ್ಯಮೇವಾನ್ಯಥಾ ಭವೇತ್ ।**
**ಅತೋ ವಿಧಿನಿಷೇಧಶ್ಚ ಹ್ಯಹಮೇವ ನೃಪೋತ್ತಮ ॥ ೩೮ ॥**

**ಕರ್ಮಾನುರೂಪಫಲದೋ ಬುದ್ಧ್ಯತೀತೋ ಗುಣಾಗ್ರಹ ।**
**ದಾನಮೇವ ಪರಂ ಶ್ರೇಷ್ಠಂ ದಾನಂ ಸರ್ವಪ್ರಭಾವಕಂ ॥ ೩೯ ॥**

**ತಸ್ಮಾದ್ದಾನಂ ದದಸ್ವ ತ್ವಂ ದಾನಾತ್ಪುಣ್ಯಂ ಪ್ರವರ್ತತೇ ।**
**ದಾನೇನ ನಶ್ಯತೇ ಪಾಪಂ ತಸ್ಮಾದ್ದಾನಂ ದದಸ್ವ ಹಿ ॥ ೪೦ ॥**

**ಅಶ್ವಮೇಧಾದಿಗ್ಯರ್ಯಜ್ಞೈರ್ಯಜಸ್ವ ನೃಪನಂದನ ।**
**ಭೂಮಿದಾನಾದಿಕಂ ದಾನಂ ಬ್ರಾಹ್ಮಣೇಭ್ಯಶ್ಶುಭಾವಹಂ ॥ ೪೧ ॥**

**ಸುದಾನಾತ್ಪ್ರಾಪ್ಯತೇ ಭೋಗಃ ಸುದಾನಾತ್ಪ್ರಾಪ್ಯತೆ ಯಶಃ ।**
**ಸುದಾನಾಜ್ಜಾಯತೇ ಕೀರ್ತಿಃ ಸುದಾನಾತ್ಪ್ರಾಪ್ಯತೇಸುಖಂ ॥ ೪೨ ॥**

---

೩೭. ಸುನೀಥೆಯ ಪಾಪರೂಪನಾದ ನಾನು, ಬೆತ್ತಲೆಯ ರೂಪದಿಂದ ನಿನ್ನನ್ನು ಧರ್ಮವಿವರ್ಜಿತನನ್ನಾಗಿ ಮಾಡಲು ಹೇಳಿದೆನು.

೩೮. ಹಾಗೆ ಮಾಡದಿದ್ದರೆ ಸುಶಂಖನ ಮಾತು ವ್ಯರ್ಥವಾಗುತ್ತಿತ್ತು. ಆದುದರಿಂದ ವಿಧಿ, ನಿಷೇಧರೂಪನಾದವನು ನಾನೇ ಎಂದು ತಿಳಿ.

೩೯. ಗುಣಗ್ರಾಹಿಯಾದ ಎಲೈ ರಾಜನೇ, ನಾನೇ ಕರ್ಮಕ್ಕೆ ಅನುರೂಪವಾದ ಫಲವನ್ನು ಕೊಡತಕ್ಕವನು. ಬುದ್ಧಿಗೆ ನಿಲಕದವನು. ದಾನವೆಂಬುದು ಬಹು ಉತ್ತಮವಾದುದು. ಎಲ್ಲಲ್ಲೂ ಮಾಡತಕ್ಕದು.

೪೦. ಆದುದರಿಂದ ದಾನಮಾಡು. ದಾನದಿಂದ ಪುಣ್ಯ ಬರುವುದು. ದಾನದಿಂದ ಪಾಪವು ನಾಶವಾಗುತ್ತದೆ.

೪೧. ಅಶ್ವಮೇಧಾದಿ ಯಾಗಗಳನ್ನು ಮಾಡು. ಭೂಮಿದಾನವೇ ಮೊದಲಾದವುವನ್ನು ಬ್ರಾಹ್ಮಣರಿಗೆ ಕೊಡು.

೪೨. ಒಳ್ಳೆಯ ದಾನದಿಂದ ಭೋಗವೂ, ಯಶಸ್ಸೂ, ಕೀರ್ತಿಯೂ, ಸುಖವೂ ಲಭಿಸುತ್ತವೆ.

ದಾನೇನ ಸ್ವರ್ಗಮಾಪ್ನೋತಿ ಫಲಂ ತತ್ರ ಭುನಕ್ತಿ ಚ ।
ದತ್ತಸ್ಯಾಪಿ ಸುದಾನಸ್ಯ ಶ್ರದ್ಧಾಯುಕ್ತಸ್ಯ ಸರ್ವದಾ ॥ ೪೩ ॥

ಕಾಲೇ ಪ್ರಾಪ್ತೇ ಭಜೇತ್ತೀರ್ಥಂ ಪುಣ್ಯಸ್ಯಾಪಿ ಫಲಂ ತ್ವಿದಂ ।
ಪಾತ್ರಭೂತಾಯ ವಿಪ್ರಾಯ ಶ್ರದ್ಧಾಯುಕ್ತೇನ ಚೇತಸಾ ॥ ೪೪ ॥

ಯೋ ದದಾತಿ ಮಹಾದಾನಂ ಗೋಭೂಸ್ವರ್ಣಾನ್ನಪೂರ್ವಕಂ ।
ತಸ್ಯಾಹಂ ಸಕಲಂ ದದ್ಮಿ ಮನಸಾ ಯಾದ್ಯದಿಚ್ಛತಿ ॥ ೪೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ವೇನೋಪಾಖ್ಯಾನೇ ಅಷ್ಟಾತ್ರಿಂಶೋಽಧ್ಯಾಯಃ



---

೪೩. ದಾನದಿಂದ ಸ್ವರ್ಗವನ್ನು ಹೊಂದುತ್ತಾರೆ. ಅಲ್ಲಿ ಒಳ್ಳೆಯ ಫಲವನ್ನು ಅನುಭವಿಸುತ್ತಾರೆ. ಸಮಯಬಂದಾಗ ತೀರ್ಥವನ್ನೂ ಸೇವಿಸಬೇಕು. ಪುಣ್ಯಕ್ಕೆ ಇದೇ ಫಲವು.

೪೪-೪೫. ಶ್ರದ್ಧೆಯಿಂದ ಯೋಗ್ಯನಾದವನಿಗೆ ಅತಿಶಯವಾಗಿ ಗೋವು, ಭೂಮಿ, ಸ್ವರ್ಣ, ಅನ್ನ ಇವನ್ನು ಯಾವನು ದಾನಮಾಡುತ್ತಾನೋ ಆತನಿಗೆ, ಅವನು ಮನಸ್ಸಿನಲ್ಲಿ ಅಪೇಕ್ಷಿಸುವುದನ್ನೆಲ್ಲಾ ಕೊಡುತ್ತೇನೆ ಎಂದನು.

ಇಲ್ಲಿಗೆ ಪದ್ಮಮಹಾಪುರಾಣದಲ್ಲಿ ಭೂಮಿಖಂಡದಲ್ಲಿ ವೇನನ ಚರಿತ್ರೆಯಲ್ಲಿ
ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

### ಏ ಕೋ ನ ಚ ತ್ವಾ ರಿಂ ಶೋ ಧ್ಯಾ ಯಃ

---

॥ ವೇನ ಉವಾಚ ॥

ಕಾಲಸ್ಯ ತಸ್ಯ ಮೇ ಬ್ರೂಹಿ ಲಕ್ಷಣಂ ಬುದ್ಧಿಪೂರ್ವಕಂ ।
ತೀರ್ಥಸ್ಯಾಪಿ ಚ ಯದ್ರೂಪಂ ಪಾತ್ರಸ್ಯಾಪಿ ಸುಲಕ್ಷಣಂ ॥ ೧ ॥

ದಾನಸ್ಯಾಪಿ ಜಗನ್ನಾಥ ವಿಧಿಂ ವಿಸ್ತರತೋ ವದ ।
ಪ್ರಸಾದಸುಮುಖೋ ಭೂತ್ವಾ ಶ್ರದ್ಧಾ ಶ್ರೋತುಂ ಪ್ರವರ್ತತೇ ॥ ೨ ॥

॥ ವಿಷ್ಣುರುವಾಚ ॥

ದಾನಕಾಲಂ ಪ್ರವಕ್ಷ್ಯಾಮಿ ನಿತ್ಯನೈಮಿತ್ತಿಕಂ ನೃಪ ।
ಕಾಮ್ಯಂ ಚಾಪಿ ಮಹಾರಾಜ ಚತುರ್ಥಂ ಪ್ರಾಯಿಕಂ ಪುನಃ ॥ ೩ ॥

---

### ಮೂವತ್ತೊಂಭತ್ತನೆಯ ಅಧ್ಯಾಯವು

೧. ವೇನನು ಹೇಳಿದನು :—ಎಲೈ ಸ್ವಾಮಿಯೇ, ದಾನಮಾಡತಕ್ಕ ಕಾಲ, ತೀರ್ಥ, ಪಾತ್ರಗಳ ಲಕ್ಷಣಗಳನ್ನು ತಿಳಿಸು.

೨. ದಾನದ ವಿಧಿಯನ್ನು ವಿಸ್ತಾರವಾಗಿ ಹೇಳು. ದಯವಿಟ್ಟು ಅನುಗ್ರಹ ಮುಖನಾಗು. ಕೇಳಬೇಕೆಂದು ಶ್ರದ್ಧೆಯು ಹುಟ್ಟಿದೆ.

೩. ವಿಷ್ಣುವು ಹೇಳಿದನು:—ಎಲೈ ರಾಜನೇ, ದಾನಗಳಲ್ಲಿ ನಿತ್ಯ, ನೈಮಿತ್ತಿಕ, ಕಾಮ್ಯ, ಪ್ರಾಯಿಕವೆಂದು ನಾಲ್ಕು ಬಗೆ ಇವೆ. ಅವನ್ನು ಹೇಳುತ್ತೇನೆ.

ಸೂರ್ಯಸ್ಯೋದಯವೇಳಾಯಾಂ ಪಾಪಂ ನಶ್ಯತಿ ಸರ್ವತಃ ।
ಅಂಧಕಾರಾದಿಕಾನಾಂ ಚ ಘೋರಾಣಾಂ ನಾಶಕಾರಕಃ ॥ ೪ ॥

ದಿವಿ ಸೂರ್ಯೋ ಮಮಾಂಶೋ ಯಂ ತೇಜಸಾಂ ಕಲ್ಪಿತೋಽನಿಧಿಃ ।
ತಸ್ಯೈವ ತೇಜಸಾ ದಗ್ಧಂ ಭಸ್ಮತಾಂ ಯಾತಿ ಕಿಲ್ಬಿಷಂ ॥ ೫ ॥

ಉದಯಂತಂ ಮಮಾಂಶಂ ಯೋ ದೃಷ್ಟ್ವಾ ದತ್ತೇ ತು ವಾರ್ಯಪಿ ।
ತಸ್ಯ ಕಿಂ ಕಥ್ಯತೇ ಭೂಪ ನಿತ್ಯಂ ಪುಣ್ಯವಿವರ್ಧಕಂ ॥ ೬ ॥

ಪ್ರಾಪ್ತಾಯಾಂ ಹಿ ಸುವೇಳಾಯಾಂ ತಸ್ಯಾಂ ದಾನಂ ಕರೋತಿ ಯಃ ।
ಸ್ನಾತ್ವಾಭ್ಯರ್ಚ್ಯ ಪಿತ್ರ್ಯಾ ದೇವಾ ಶ್ರದ್ಧಾಭಕ್ತಿಸಮನ್ವಿತಃ ॥ ೭ ॥

ಯಥಾಶಕ್ತಿಪ್ರಭಾವೇನ ದಯಾಯುಕ್ತೇನ ಚೇತಸಾ ।
ಅನ್ನಂ ಫಲಂ ಪಯಃ ಪುಷ್ಪಂ ವಸ್ತ್ರಂ ತಾಂಬೂಲಭೂಷಣಂ ॥ ೮ ॥

ಹೇಮರತ್ನಾದಿಕಂ ಚೈವ ತಸ್ಯ ಪುಣ್ಯಮನನ್ತಕಂ ।
ಮಧ್ಯಾಹ್ನೇ ಚ ತಥಾ ರಾಜನ್ನಪರಾಹ್ನೇ ತಥೈವ ಚ ॥ ೯ ॥

---

೪-೫. ಸೂರ್ಯನು ಉದಯಿಸುವಾಗ ಪಾಪವೆಲ್ಲವೂ ನಾಶವಾಗುತ್ತದೆ. ಅಂಧಕಾರಕ್ಕೂ ಘೋರವಾದ ಪಾಪಗಳಿಗೂ ಸೂರ್ಯನು ನಾಶಕನು. ಅಂತರಿಕ್ಷದಲ್ಲಿ ನನ್ನ ಅಂಶವಾಗಿ ಸೂರ್ಯನು ಸ್ಥಾಪಿತನಾಗಿದ್ದಾನೆ. ಅವನ ತೇಜಸ್ಸಿನಿಂದ ದಗ್ಧವಾಗಿ ಪಾಪಗಳು ನಾಶಹೊಂದುತ್ತವೆ. ಪಾಪವು ಭಸ್ಮವಾಗುತ್ತದೆ.

೬. ಉದಯಿಸುತ್ತಿರುವ ಸೂರ್ಯರೂಪವಾದ ನನ್ನ ಅಂಶವನ್ನು ನೋಡಿ ಯಾರು ಅರ್ಘ್ಯ ಕೊಡುತ್ತಾರೋ ಅವರಿಗೆ ಪುಣ್ಯ ಹೆಚ್ಚುವುದೆಂದು ಹೇಳಬೇಕಾದ್ದೇನು ?

೭-೮. ಒಳ್ಳೆಯ ವೇಳೆಯು ಪ್ರಾಪ್ತವಾದಾಗ ಸ್ನಾನಮಾಡಿ, ದೇವ ಪಿತೃಗಳನ್ನು ಪೂಜಿಸಿ ಶ್ರದ್ಧೆಯಿಂದ ಶಕ್ತಿಮೀರದೆ ದಯೆಯಿಂದ ಅನ್ನ, ಫಲ, ನೀರು ಹೂ, ವಸ್ತ್ರ, ತಾಂಬೂಲಾದಿಗಳನ್ನೂ, ಒಡವೆಮುಂತಾದವುಗಳನ್ನೂ ಯಾವನು ದಾನ ಮಾಡುತ್ತಾನೋ ಅವನಿಗೆ ಅನಂತವಾದ ಪುಣ್ಯ ಬರುತ್ತದೆ,

೯. ಮಧ್ಯಾಹ್ನ-ಅಪರಾಹ್ನಗಳಲ್ಲಿ ನನ್ನ ಪ್ರೀತ್ಯರ್ಥವಾಗಿ ಯಾರು ದಾನ ಮಾಡುತ್ತಾರೋ ಅವರಿಗೆ ಬಹುಪುಣ್ಯ ಬರುತ್ತದೆ.

ಮಾಮುದ್ದಿಶ್ಯ ಹಿ ಯೋ ದದ್ಯಾತ್ತಸ್ಯ ಪುಣ್ಯಮನನ್ತಕಂ ।
ಖಾನಪಾನಾದಿಕಂ ಸರ್ವಮಿಷ್ಟಂ ಲೇಪನಕುಂಕುಮಂ ॥ ೧೦ ॥

ಕರ್ಪೂರಾದಿಕಮೇವಾಪಿ ವಸ್ತ್ರಾಲಂಕಾರಭೂಷಣಂ ।
ಅವಿಚ್ಛಿನ್ನಂ ದದಾತ್ಯೇವಂ ಭೋಗಸೌಖ್ಯಪ್ರದಾಯಕಂ ॥ ೧೧ ॥

ನಿತ್ಯಕಾಲೋ ಮಯಾಖ್ಯಾತೋ ದಾನಪೂಜಾರ್ಥಿನಾಂ ಶುಭಃ ।
ಅಥಾತಃ ಸಂಪ್ರವಕ್ಷ್ಯಾಮಿ ನೈಮಿತ್ತಿಕಮನುತ್ತಮಂ ॥ ೧೨ ॥

ತ್ರಿಕಾಲೇಷ್ವಪಿ ದಾತವ್ಯಂ ದಾನಮೇವ ನ ಸಂಶಯಃ ।
ಶೂನ್ಯಂ ದಿನಂ ನ ಕರ್ತವ್ಯಮಾತ್ಮನೋ ಹಿತಮಿಚ್ಛತಾ ॥ ೧೩ ॥

ಯಸ್ಮಿನ್ಕಾಲೇ ಪ್ರದತ್ತಂ ಹಿ ಕಿಂಚಿದ್ದಾನಂ ನರಾಧಿಪ ।
ತತ್ಪ್ರಭಾವಾನ್ಮಹಾಪ್ರಾಜ್ಞೋ ಬಹುಸಾಮರ್ಥ್ಯಸಂಯುತಃ ॥ ೧೪ ॥

ಧನಾಢ್ಯೋ ಗುಣವಾನ್ಯುಕ್ತಃ ಪಂಡಿತೋತಿವಿಚಕ್ಷಣಃ ।
ಪಕ್ಷಮಾಸದಿನಂ ಯಾವನ್ನದತ್ತಂ ನೈ ಯದಾಶನಂ ॥ ೧೫ ॥

---

೧೦-೧೧. ತಿಂಡಿ, ತೀರ್ಥ, ಗಂಧ, ಕುಂಕುಮ, ಕರ್ಪೂರ, ವಸ್ತ್ರಾಲಂಕಾರಗಳು, ಇವನ್ನು ಎಡಬಿಡದೆ ದಾನಮಾಡಿದರೆ ಭೋಗಸೌಖ್ಯಗಳು ಲಭಿಸುತ್ತವೆ.

೧೨. ದಾನ ಪೂಜೆಗಳಿಗೆ ಇದು ಶುಭವಾದದ್ದು. ಇದೇ ನಿತ್ಯಕಾಲವು. ಇನ್ನು ಮುಂದೆ ದಾನಕ್ಕೆ ನೈಮಿತ್ತಿಕ ಕರ್ಮಗಳನ್ನು ಮಾಡುವುದಕ್ಕೆ ಕಾಲವನ್ನು ಹೇಳುವೆನು.

೧೩. ದಾನವನ್ನು ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಮಾಡಬೇಕು. ತಾನು ತನಗೆ ಹಿತವನ್ನು ಬಯಸುವವನು ದಿನವನ್ನು ಶೂನ್ಯವನ್ನಾಗಿ ಮಾಡಕೂಡದು. ಎಂದರೆ ಆ ದಿನದಲ್ಲಿ ದಾನಾದಿಸತ್ಕರ್ಮಗಳನ್ನು ಆಚರಿಸದೆ ಇರಬಾರದು.

೧೪. ಸ್ವಲ್ಪದಾನಮಾಡಿದರೂ ಆ ದಾನವು ಕಾಲವನ್ನು ಅನುಸರಿಸಿ ಅದರ ಫಲದಿಂದ ದಾನಮಾಡಿದವನು ಪ್ರಾಜ್ಞನೂ, ಸಾಮರ್ಥ್ಯಯುತನೂ ಆಗುವನು.

೧೫. ಧನವಂತನೂ, ಗುಣವಂತನೂ, ಪಂಡಿತನೂ, ಬುದ್ಧಿವಂತನೂ ಆಗಿದ್ದರೂ ಒಂದು ಮಾಸ ಅಥವ ಪಕ್ಷ (ಹದಿನೈದು ದಿನಗಳು) ದಲ್ಲಿ ಒಂದು ದಿನವೂ

ತಾವದ್ವೈ ವಾರಯಾಮ್ಯೇನಂ ಭಕ್ಷ್ಯಾಚ್ಚೈವ ನರೋತ್ತಮಂ ।
ಸ್ವಮಲಂ ಭಕ್ಷಿತಂ ಚೈವ ಹ್ಯದತ್ವಾ ದಾನಮುತ್ತಮಂ ॥ ೧೬ ॥

ಉತ್ಪಾದಯಾಮ್ಯಹಂ ರೋಗಂ ಸರ್ವಭೋಗನಿವಾರಣಂ ।
ತೇಷಾಂ ಕಾಯೇಷು ಸಂಸ್ಪೃಷ್ಟಂ ಬಹುಪೀಡಾಪ್ರದಾಯಕಂ ॥ ೧೭ ॥

ಮಂದಾನಲೇನ ಸಂಯುಕ್ತಂ ಜ್ವರಂ ಸಂತಾಪಕಾರಕಂ ।
ತ್ರಿಕಾಲೇಷು ನ ದತ್ತೇ ಯೋ ಬ್ರಾಹ್ಮಣೇಷು ಸುರೇಷು ಚ ॥ ೧೮ ॥

ಸ್ವಯಮಶ್ನಾತಿ ಮಿಷ್ಟಂ ತು ತೇನ ಪಾಪಂ ಮಹತ್ಕೃತಂ ।
ಪ್ರಾಯಶ್ಚಿತ್ತೇನ ರೌದ್ರೇಣ ತಮೇವಂ ಪರಿಶೋಷಯೇತ್ ॥ ೧೯ ॥

ಉಪವಾಸೈರ್ಮಹಾರಾಜ ಕಾಯಶೋಷಕರಾದಿಭಿಃ ।
ಚರ್ಮಕಾರೋ ಯಥಾ ಚರ್ಮ ಕುಂಡಸ್ಯೋಪರಿ ನಿರ್ಘೃಣಃ ॥ ೨೦ ॥

---

ಅನ್ನದಾನಮಾಡದಿದ್ದರೆ ಅಷ್ಟರಲ್ಲೇ ಆತನಿಗೆ ಎಚ್ಚರಿಕೆ ಕೊಟ್ಟು ಊಟಕ್ಕಿಲ್ಲದಂತೆ ಮಾಡುತ್ತೇನೆ.

೧೬. ಉತ್ತಮವಾದ ದಾನಕೊಡದೆ ಊಟಮಾಡಿದರೆ ತನ್ನ ಅಮೇಧ್ಯವನ್ನು ತಾನೇ ತಿಂದಹಾಗೆ ಆಗುತ್ತದೆ.

೧೭. ಅಂಥವರ ದೇಹದಲ್ಲಿ ಭೋಗಗಳನ್ನು ಅನುಭವಿಸದಂತೆ ಬಹು ಬಾಧೆಯನ್ನು ಕೊಡುವ, ರೋಗವನ್ನುಂಟುಮಾಡುತ್ತೇನೆ.

೧೮-೧೯. ತ್ರಿಕಾಲದಲ್ಲೂ ಯಾರು ದಾನಮಾಡುವುದಿಲ್ಲವೋ ಆತನಿಗೆ ಜಠರಾಗ್ನಿಯು ಮಂದವಾಗಿ ಜ್ವರವನ್ನುಂಟುಮಾಡುತ್ತದೆ. ಯಾರು ಮೃಷ್ಟಾನ್ನವನ್ನು ಮಾಡಿಸಿ ದೇವಬ್ರಾಹ್ಮಣರುಗಳಿಗೆ ಅರ್ಪಿಸದೆ ತಿನ್ನುತ್ತಾರೋ ಅವರು ಮಹಾಪಾಪ ಮಾಡಿದಹಾಗಾಗುತ್ತದೆ. ಕ್ರೂರವಾದ ಪ್ರಾಯಶ್ಚಿತ್ತದಿಂದ ಆ ಪಾತಕವನ್ನು ನಾಶ ಮಾಡಿಕೊಳ್ಳಬೇಕು.

೨೦-೨೧. ಚಮ್ಮಾರನು ಚರ್ಮವನ್ನು ಕಷಾಯ ಮೊದಲಾದವನ್ನು ಹಾಕಿ ಬೆಂಕಿಯಲ್ಲಿ ಕಾಸಿ ಗುಳ್ಳೆಬರುವಂತೆ ಮಾಡಿ ಹೇಗೆ ಶೋಧಿಸುತ್ತಾನೆಯೋ ಹಾಗೆ ಪಾಪ ಮಾಡಿದವನನ್ನು ಉಪವಾಸ ಮೊದಲಾದ ಶೋಷಣೆಗಳಿಂದ ಶೋಧಿಸುತ್ತೇನೆ.

ಶೋಧಯೇಚ್ಚ ಕಷಾಯೈಶ್ಚ ತಚ್ಚರ್ಮ ಸ್ಫೋಟಯತ್ಯಥ।
ತಥಾಹಂ ಪಾಪಕರ್ತಾರಂ ಶೋಧಯಾಮಿ ನ ಸಂಶಯಃ ॥ ೨೦ ॥

ಓಷಧೀನಾಂ ಪ್ರಯೋಗೈಶ್ಚ ಕಷಾಯೈಃ ಕಟುಕೈರ್ಧ್ರುವಂ ।
ಉಷ್ಣೋದಕೈಶ್ಚ ಸಂತಾಪೈರ್ನಾಯುರೂಪೇಣ ನಾನ್ಯಥಾ ॥ ೨೨ ॥

ಸುಖಂ ಭುಂಕ್ತೇ ತತಸ್ಸೋಽಗ್ರೇ ಭೋಗಾನ್ಸ್ಪಷ್ಟಾನ್ಮನೋನುಗಾನ್ ।
ನ ಕರೋತಿ ಸಮರ್ಥಸ್ಸನ್ ಸರ್ವದಾನಮನುತ್ತಮಂ ॥ ೨೩ ॥

ಮಹತಾ ಪಾಪರೋಗೇಣ ತಮೇವಂ ಪರಿತಾಪಯೇ ।
ನಿತ್ಯಕಾಲೇ ಹಿ ಯದ್ದತ್ತಮಾತ್ಮಾರ್ಥೇ ದಾನಮರ್ಥಿನೇ ॥ ೨೪ ॥

ನ ತದ್ದತ್ತಂ ಹಿ ರಾಜೇಂದ್ರ ಶ್ರದ್ಧಾಪೂತೇನ ಚೇತಸಾ ।
ತಥಾ ತಾಂಸ್ತಾರಯಾಮ್ಯೇತಾನುಪಾಯೈರ್ದಾರುಣೈಃ ಕಿಲ ॥ ೨೫ ॥

॥ ವಾಸುದೇವ ಉವಾಚ ॥

ನೈಮಿತ್ತಿಕಾಂಸ್ತಥಾ ಕಾಲಾನ್ ಪುಣ್ಯಾಂಶ್ಚೈವ ತವಾಗ್ರತಃ ।
ಪ್ರವಕ್ಷ್ಯಾಮಿ ನರಶ್ರೇಷ್ಠ ಸ್ವಬುದ್ಧ್ಯಾ ಶೃಣು ತತ್ತ್ವತಃ ॥ ೨೬ ॥

---

೨೨. ಅವನನ್ನು ಔಷಧಿಗಳಿಂದಲೂ, ಕಹಿಯಾದ ಕಷಾಯಗಳಿಂದಲರ ಬಿಸಿನೀರಿನಿಂದಲೂ ಶಾಖಗಳಿಂದಲೂ ಶೋಧಿಸುತ್ತೇನೆ. ಸಂಶಯವಿಲ್ಲ. ಅನಂತೂ ಆತನು ಇಚ್ಛೆಬಂದ ಭೋಗಗಳನ್ನು ಅನುಭವಿಸಬಹುದು.

೨೩. ದಾನ ಕೊಡಲು ಶಕ್ತನಾಗಿದ್ದರೂ ಯಾವನು ಉತ್ತಮವಾದ ದಾನ ಮಾಡುವುದಿಲ್ಲವೋ ಅವನನ್ನು ದೊಡ್ಡದಾದ ರೋಗದಿಂದ ತಾಪಪಡುವಂತೆ ಮಾಡುತ್ತೇನೆ.

೨೪-೨೫. ನಿತ್ಯಕಾಲದಲ್ಲಿ ತನ್ನ ಸ್ವಪ್ರಯೋಜನಕ್ಕೋಸ್ಕರ ದಾನಮಾಡಿದುದು ದಾನವಾಗುವುದಿಲ್ಲ. ಆದರೆ ಅಂಥವರಿಗೂ ಫಲಕೊಡುತ್ತೇನೆ. ಅಂತಹವರನ್ನು ಕಷ್ಟವಾದ ಉಪಾಯಗಳಿಂದ ದಾಟಿಸುತ್ತೇನೆ. ಅಷ್ಟೆ.

೨೬. ವಾಸುದೇವನು ಮತ್ತೆ ಹೇಳಿದನು :—ಇನ್ನು ನೈಮಿತ್ತಿಕವಾದ ಪುಣ್ಯಕಾಲಗಳನ್ನು ದಾನಕ್ಕೆ ಸಾಧ್ಯವಾದ ಮಟ್ಟಿಗೆ ಹೇಳುತ್ತೇನೆ. ಕೇಳು.

ಅಮಾವಾಸ್ಯಾ ಮಹಾರಾಜ ಪೌರ್ಣಮಾಸೀ ತಥೈವ ಚ ।
ಯದಾ ಭವತಿ ಸಂಕ್ರಾಂತಿರ್ವ್ಯತೀಪಾತೋ ನರೇಶ್ವರ ॥ ೨೭ ॥
ವೈಧೃತಿಶ್ಚ ತಥಾ ಪ್ರೋಕ್ತಾ ಹ್ಯೇಕಾದಶೀ ತಥಾ ಭವೇತ್ ।
ಮಹಾಮಾಘೀ ತಥಾಷಾಢೀ ವೈಶಾಖೀ ಕಾರ್ತೀಕೀ ತಥಾ ॥ ೨೮ ॥
ಅಮಾಸೋಮಸಮಾಯೋಗೇ ಮನ್ವಾದಿಷು ಯುಗಾದಿಷು ।
ಗಜಚ್ಛಾಯಾ ತಥಾ ಪ್ರೋಕ್ತಾ ಪಿತೃಕ್ಷಯತಿಥಿಸ್ತಥಾ ॥ ೨೯ ॥
ಏತೇ ನೈಮಿತ್ತಿಕಾಃ ಪ್ರೋಕ್ತಾಸ್ತವಾಗ್ರೇ ನೃಪಸತ್ತಮ ।
ಏತೇಷು ದೀಯತೇ ದಾನಂ ತಸ್ಯ ದಾನಸ್ಯ ಯತ್ಫಲಂ ॥ ೩೦ ॥
ತತ್ಫಲಂ ತು ಪ್ರವಕ್ಷ್ಯಾಮಿ ಶ್ರೂಯತಾಂ ನೃಪಸತ್ತಮ ।
ಮಾಮುದ್ದಿಶ್ಯ ತು ಯೋ ಭಕ್ತ್ಯಾ ಬ್ರಾಹ್ಮಣಾಯ ಪ್ರಯಚ್ಛತಿ ॥ ೩೧ ॥
ತಸ್ಯಾಹಂ ನಿರ್ವಿಕಲ್ಪೇನ ಪ್ರಯಚ್ಛಾಮಿ ನ ಸಂಶಯಃ ।
ಮಹತ್ಸೌಖ್ಯಂ ಮಹಾರಾಜ ಸ್ವರ್ಗಮೋಕ್ಷಾದಿಕಂ ಬಹು ॥ ೩೨ ॥
ಕಾಮ್ಯಂ ಕಾಲಂ ಪ್ರವಕ್ಷ್ಯಾಮಿ ದಾನಸ್ಯ ಫಲದಾಯಕಂ ।
ವ್ರತಾನಾಮೇವ ಸರ್ವೇಷಾಂ ದೇವಾದೀನಾಂ ತಥೈವ ಚ ॥ ೩೩ ॥
ದಾನಸ್ಯ ಪುಣ್ಯಕಾಲಂ ತಂ ಸಂಪ್ರೋಕ್ತಂ ದ್ವಿಜಸತ್ತಮೈಃ ।
ಆಭ್ಯುದಯಿಕಮೇವಾಪಿ ಕಾಲಂ ವಕ್ಷ್ಯಾಮಿ ತೇ ನೃಪ ॥ ೩೪ ॥

---

೨೭-೨೯. ಅಮಾವಾಸ್ಯೆ, ಹುಣ್ಣಿಮೆ, ಸಂಕ್ರಮಣ, ವ್ಯತೀಪಾತ, ವೈಧೃತಿ, ಏಕಾದಶೀ, ಮಹಾಮಾಘ, ಆಷಾಢ, ವೈಶಾಖ, ಕಾರ್ತಿಕಮಾಸಗಳು, ಸೋಮವಾರದ ಅಮಾವಾಸ್ಯೆ, ಮನ್ವಾದಿ, ಯುಗಾದಿ ಗಜಚ್ಛಾಯಾ, ಪಿತೃತಿಥಿ, ಕ್ಷಯತಿಥಿ, ಇವು ನೈಮಿತ್ತಿಕ ಕರ್ಮಗಳನ್ನು ಮಾಡಲು ಕಾಲಗಳೆಂದು ನಿನಗೆ ಹೇಳಿದ್ದೇನೆ.

೩೦. ಈ ಕಾಲಗಳಲ್ಲಿ ದಾನಮಾಡಿದರೆ ಯಾವ ಫಲ ಬರುತ್ತದೋ ಅದನ್ನು ಹೇಳುತ್ತೇನೆ. ಕೇಳು.

೩೧-೩೨. ಈ ಕಾಲಗಳಲ್ಲಿ ನನ್ನನ್ನೇ ಉದ್ದೇಶಿಸಿ ಯಾವನು ಭಕ್ತಿಯಿಂದ. ಬ್ರಾಹ್ಮಣನಿಗೆ ದಾನಕೊಡುತ್ತಾನೆಯೋ ಅವನಿಗೆ ನಿಸ್ಸಂಶಯವಾಗಿ ಹೆಚ್ಚು ಸೌಖ್ಯವನ್ನು ಕೊಟ್ಟು ಸ್ವರ್ಗಮೋಕ್ಷಗಳನ್ನೂ ಕೊಡುತ್ತೇನೆ.

೩೩-೩೪. ಇನ್ನು ದಾನಕ್ಕೆ ಫಲದಾಯಕವಾದ ಕಾಮ್ಯಕಾಲಗಳನ್ನು ಹೇಳುತ್ತೇನೆ. ವ್ರತಗಳೆಲ್ಲವೂ ಕೂಡ ಕಾಮ್ಯಗಳೇ, ಅದೇ ದಾನಕ್ಕೆ ಕಾಲವು. ಆಭ್ಯುದಯಿಕ ಎಂದರೆ ಶುಭಕಾರ್ಯವನ್ನು ಮಾಡುವುದಕ್ಕೆ ಕಾಲವನ್ನು ಹೇಳುತ್ತೇನೆ ಕೇಳು.

ಶುಭಾನಾಮೇವ ಸರ್ವೇಷಾಂ ವೈವಾಹಿಕಮನುತ್ತಮಂ ।
ಪುತ್ರಸ್ಯ ಜಾತಮಾತ್ರಸ್ಯ ಚೌಲಮೌಂಜ್ಯಾದಿಕಂ ತಥಾ ॥ ೩೫ ॥

ಪ್ರಾಸಾದಧ್ವಜದೇವಾನಾಂ ಪ್ರತಿಷ್ಠಾದಿಕಕರ್ಮಣಿ ।
ವಾಪೀಕೂಪತಟಾಕಾನಾಂ ಗೃಹಾರಾಮಸ್ಯ ಯತ್ನತಃ ॥ ೩೬ ॥

ತದಾಭ್ಯುದಯಿಕಂ ಪ್ರೋಕ್ತಂ ಮಾತೃಣಾಂ ಯತ್ರ ಪೂಜನಂ ।
ತಸ್ಮಿನ್ ಕಾಲೇ ದದೇದ್ದಾನಂ ಸರ್ವಸಿದ್ಧಿಪ್ರದಾಯಕಂ ॥ ೩೭ ॥

ತ್ರಿವಿಧೋ ಯಸ್ತು ತೇ ಕಾಲಃ ಪ್ರೋಕ್ತಶ್ಚೈವ ನೃಪೋತ್ತಮ ।
ಅನ್ಯಚ್ಚೈವ ಪ್ರವಕ್ಷ್ಯಾಮಿ ಪಾಪಪೀಡಾನಿವಾರಣಂ ॥ ೩೮ ॥

ಮೃತ್ಯುಕಾಲೇ ಚ ಸಂಪ್ರಾಪ್ತೇ ಕ್ಷಯಂ ಜ್ಞಾತ್ವಾ ನೃಪೋತ್ತಮ ।
ತತ್ರ ದಾನಂ ಪ್ರದಾತವ್ಯಂ ಯಮಮಾರ್ಗಸುಖಪ್ರದಂ ॥ ೩೯ ॥

ನಿತ್ಯನೈಮಿತ್ತಿಕಾತ್ಕಾಲಾತ್ಕಾಮ್ಯಾಭ್ಯುದಯಿಕಾತ್ತಥಾ ।
ಅಂತ್ಯಃ ಕಾಲಃ ಸಮಾಖ್ಯಾತೋ ಮಹಾರಾಜ ತವಾಗ್ರತಃ ॥ ೪೦ ॥

---

೩೫-೩೭. ಸರ್ವಶುಭಕರ್ಮಗಳು, ವಿವಾಹ, ಜಾತಕರ್ಮ, ಚೌಲ, ಉಪನಯನ, ಮನೆಕಟ್ಟಿಸುವುದು, ಕೆರೆಕಟ್ಟಿಸುವುದು, ಮನೆಕಟ್ಟಿಸುವುದು, ತೋಪುಹಾಕಿಸುವುದು, ಕೌಮಾರಿಯೇ ಮೊದಲಾದ ಮಾತೃಗಳ ಪೂಜೆಕಾಲ, ಇಂತಹ ಕಾಲಗಳಲ್ಲಿ ದಾನಕೊಟ್ಟರೆ ಸರ್ವಸಿದ್ಧಿಯಾಗುತ್ತದೆ.

೩೮. ಮೂರುವಿಧವಾದ ದಾನಕಾಲಗಳನ್ನು ಹೇಳಿದ್ದಾಯಿತು. ಪಾಪಪೀಡೆಗಳು ಹೋಗುವ ಮತ್ತೊಂದು ಕಾಲವನ್ನು ಹೇಳುತ್ತೇನೆ. ಕೇಳು.

೩೯. ಮೃತ್ಯುಕಾಲ ಒದಗಿದಾಗ ದೇಹವು ಕ್ಷೀಣಿಸುವುದನ್ನು ನೋಡಿ ಯಮಮಾರ್ಗಸುಖಪ್ರದವಾದ ದಾನವನ್ನಾಗ ಕೊಡಬೇಕು.

೪೦. ಈ ರೀತಿಯಾಗಿ ನಿತ್ಯನೈಮಿತ್ತಿಕ, ಕಾಮ್ಯ, ಆಭ್ಯುದಯಿಕಕಾಲ ಇವುಗಳನ್ನೆಲ್ಲಾ ಹೇಳಿದೆನು.

ಏತೇ ಕಾಲಾಃ ಸಮಾಖ್ಯಾತಾಃ ಸ್ವಕರ್ಮಫಲದಾಯಕಾಃ ।
ತೀರ್ಥಸ್ಯ ಲಕ್ಷಣಂ ರಾಜನ್ ಪ್ರವಕ್ಷ್ಯಾಮಿ ತವಾಗ್ರತಃ ॥ ೪೧ ॥

ಸುತೀರ್ಥಾನಾಮಿಯಂ ಗಂಗಾ ಭಾತಿ ಪುಣ್ಯಾ ಸರಸ್ವತೀ ।
ರೇವಾಚ ಯಮುನಾ ತಾಪೀ ತಥಾ ಚರ್ಮಣ್ವತೀ ನದೀ ॥ ೪೨ ॥

ಸರಯೂರ್ಘರ್ಘರಾ ವೇಣಾ ಪುಣ್ಯಾ ಪಾಪಪ್ರಣಾಶಿನೀ ।
ಕಾವೇರೀ ಕಪಿಲಾ ಚಾನ್ಯಾ ವಿಶಾಲಾ ವಿಶ್ವಪಾವನೀ ॥ ೪೩ ॥

ಗೋದಾವರೀ ಸಮಾಖ್ಯಾತಾ ತುಂಗಭದ್ರಾ ನರೋತ್ತಮ ।
ಪಾಪಾನಾಂ ಭೀತಿದಾ ನಿತ್ಯಂ ಭೀಮರಥೀ ಪ್ರಪಠ್ಯತೇ ॥ ೪೪ ॥

ವೇದಿಕಾ ಕೃಷ್ಣಗಂಗಾ ಚ ಹ್ಯನ್ಯಾಃ ಸರಿದ್ವರೋತ್ತಮಾಃ ।
ಏತಾಸಾಂ ಪುಣ್ಯಕಾಲೇಷು ಸಂತಿ ತೀರ್ಥಾನ್ಯನೇಕಶಃ ॥ ೪೫ ॥

ಗ್ರಾಮೇ ವಾ ಯದಿ ವಾರಣ್ಯೇ ನದ್ಯಸ್ಸರ್ವತ್ರ ಪಾವನಾಃ ।
ತತ್ರ ತತ್ರ ಪ್ರಕರ್ತವ್ಯಾಃ ಸ್ನಾನದಾನಾದಿಕಾಃ ಕ್ರಿಯಾಃ ॥ ೪೬ ॥

ಯದಾ ನ ಜ್ಞಾಯತೇ ನಾಮ ತಾಸಾಂ ತೀರ್ಥಸ್ಯ ಸತ್ತಮ ।
ನಾಮ ಚೈವ ಪ್ರಕರ್ತವ್ಯಂ ವಿಷ್ಣುತೀರ್ಥಮಿದಂ ನೃಪ ॥ ೪೭ ॥

---

೪೧. ಇವುಗಳು ತಮ್ಮ ತಮ್ಮ ಫಲವನ್ನು ಕೊಡತಕ್ಕ ಕಾಲಗಳು. ದಾನಕ್ಕೆ ಯೋಗ್ಯವಾದವು. ಎಂದು ಹೇಳಿದಂತಾಯಿತು.

೪೨-೪೪. ಎಲೈ ರಾಜನೇ, ಇನ್ನು ತೀರ್ಥದ ಲಕ್ಷಣಗಳನ್ನು ಹೇಳುತ್ತೇನೆ ಕೇಳು. ಗಂಗೆ, ಸರಸ್ವತೀ, ರೇವಾ, ಯಮುನಾ, ತಪತೀ, ಚರ್ಮಣ್ವತೀ, ಸರಯೂ ಘರ್ಘರ, ವೇಣಾ, ಕಾವೇರೀ, ಕಪಿಲಾ, ಗೋದಾವರೀ, ತುಂಗಭದ್ರೆ, ಭೀಮರಥಿ, ಈ ನದಿಗಳು ಪುಣ್ಯವಾದ ತೀರ್ಥಗಳು.

೪೫. ವೇದಿಕೆ, ಕೃಷ್ಣಗಂಗೆ, ಇವೂ ಪುಣ್ಯಪ್ರದವಾದ ನದಿಗಳು. ಇವುಗಳಲ್ಲಿಯೂ ಪುಣ್ಯಕಾಲಗಳಲ್ಲಿ ಅನೇಕ ತೀರ್ಥಗಳಿವೆ.

೪೬. ಗ್ರಾಮದಲ್ಲಿ ಆಗಲಿ, ಅರಣ್ಯದಲ್ಲಿ ಆಗಲಿ, ಎಲ್ಲಿ ಹರಿಯುತ್ತಿದ್ದರೂ ನದಿಗಳು ಎಲ್ಲಾ ಕಡೆಯಲ್ಲೂ ಪವಿತ್ರವಾದವು. ಅಲ್ಲಲ್ಲಿ ಸ್ನಾನದಾನಾದಿಗಳನ್ನು ಮಾಡಬಹುದು.

೪೭. ತೀರ್ಥಗಳ ಹೆಸರು ಗೊತ್ತಾಗದಿದ್ದಲ್ಲಿ ವಿಷ್ಣುತೀರ್ಥವೆಂಬ ಹೆಸರಿನಿಂದ ಸ್ನಾನಾದಿಗಳನ್ನು ಮಾಡಬಹುದು.

ತೀರ್ಥೇಷು ತದ್ವದ್ದೇವೋಽಹಂ ತೀರ್ಥಂ ಚಾಪಿ ನ ಸಂಶಯಃ ।
ಮಾಮೇವೋಚ್ಚಾರಯೇದ್ಯೋ ವೈ ತೀರ್ಥದೇವೇಷು ಸಾಧಕಃ ॥ ೪೮ ॥

ತಸ್ಯ ಪುಣ್ಯಫಲಂ ಜಾತಂ ಮನ್ನಾಮ್ನಾ ನೃಪನಂದನ ।
ಅಜ್ಞಾತಾನಾಂ ಚ ತೀರ್ಥಾನಾಂ ದೇವಾನಾಂ ನೃಪಸತ್ತಮ ॥ ೪೯ ॥

ಸ್ನಾನೇ ದಾನೇ ಮಹಾರಾಜ ಮನ್ನಾಮ್ನೈವ ಸಮುಚ್ಚರೇತ್ ।
ತೀರ್ಥಾನಾಮೇವ ರಾಜೇಂದ್ರ ಧಾತ್ರಾ ನಾಮ ಇದಂ ಕೃತಂ ॥ ೫೦ ॥

ಸಿಂಧವಸ್ಸಪ್ತ ಪುಣ್ಯಾಖ್ಯಾಃ ಸರ್ವಸ್ಥಾಃ ಕ್ಷಿತಿಮಂಡಲೇ ।
ತತ್ರ ತತ್ರ ಪ್ರಕರ್ತವ್ಯಂ ಸ್ನಾನದಾನಾದಿಕಂ ನೃಪ ॥ ೫೧ ॥

ಅಕ್ಷಯ್ಯಂ ಫಲಮಾಪ್ನೋತಿ ಸುತೀರ್ಥಾನಾಂ ಪ್ರಸಾದತಃ ॥ ೫೨ ॥

ತೀರ್ಥರೂಪಾ ಮಹಾರೂಪಾಃ ಸಾಗರಾಸ್ಸಪ್ತ ಏವ ಚ ।
ಮಾನಸಾದ್ಯಾಸ್ತಥಾ ರಾಜನ್ ಸರಸ್ಯಶ್ಚ ಪ್ರಕೀರ್ತಿತಾಃ ॥ ೫೩ ॥

---

೪೮. ತೀರ್ಥಗಳಲ್ಲಿ ನಾನೇ ತೀರ್ಥವು. ನಾನೇ ದೇವರು. ಸಂಶಯವಿಲ್ಲ. ಸಾಧಕನಾದವನು ದೇವರಲ್ಲದ, ತೀರ್ಥಗಳಲ್ಲೂ ನನ್ನ ಹೆಸರನ್ನೇ ಉಚ್ಚರಿಸಬೇಕು.

೪೯-೫೦. ನದಿ ಅಥವಾ ದೇವತೆಗಳ ಹೆಸರು ತಿಳಿಯದಿದ್ದಲ್ಲಿ ನನ್ನ ಹೆಸರನ್ನು ಹೇಳಿ ಸ್ನಾನದಾನಗಳನ್ನು ಮಾಡಿದರೆ ಪುಣ್ಯಫಲ ಬರುತ್ತದೆ. ಸ್ನಾನದಾನಗಳಲ್ಲಿಯೂ ನನ್ನ ಹೆಸರನ್ನು ಹೇಳಿ ಮಾಡಿದರೆ ಫಲ್ಲಸಿಕ್ಕುತ್ತದೆ. ಕೆಲವು ಉತ್ತಮ ತೀರ್ಥಗಳಿಗೆ ಮಾತ್ರ ಬ್ರಹ್ಮನು ಪ್ರತ್ಯೇಕವಾಗಿ ಹೆಸರಿಟ್ಟಿದ್ದಾನೆ.

೫೧-೫೨. ಪ್ರಪಂಚದಲ್ಲಿ ಎಲ್ಲಾ ಕಡೆಯಲ್ಲೂ ಇರುವ ಪುಣ್ಯವಾದ ನದಿಗಳು, ಏಳು. ಅವುಗಳಲ್ಲಿ ಎಲ್ಲಿ ಬೇಕಾದರೂ ಸ್ನಾನದಾನಗಳನ್ನು ಮಾಡಬಹುದು. ಅಕ್ಷಯ್ಯ ಫಲಸಿಕ್ಕುತ್ತದೆ.

೫೩. ಸಪ್ತ ಸಮುದ್ರಗಳೂ ತೀರ್ಥಗಳೇ, ಮಾನಸವೇ ಮೊದಲಾದ ಸರಸ್ಸುಗಳೂ ಪುಣ್ಯತೀರ್ಥಗಳು.

ನಿರ್ಜಲಾ ಅಪಿ ತಾಃ ಪ್ರೋಕ್ತಾಸ್ತೀರ್ಥರೂಪಾ ನ ಸಂಶಯಃ ।
ಸ್ವಲ್ಪಾ ನದ್ಯೋ ಮಹಾರಾಜ ತಾಸು ತೀರ್ಥಂ ಪ್ರತಿಷ್ಠಿತಂ ॥ ೫೪ ॥

ಖಾತೇಷ್ವೇವ ಚ ಸರ್ವೇಷು ವರ್ಜಯಿತ್ವಾ ಚ ಕೂಪಕಂ ।
ಪರ್ವತಾಸ್ತೀರ್ಥರೂಪಾಶ್ಚ ಮೇರ್ವಾದ್ಯಾಶ್ಚ ಮಹೀತಲೇ ॥ ೫೫ ॥

ಯಜ್ಞಭೂಮಿಶ್ಚ ಯಜ್ಞಶ್ಚ ಅಗ್ನಿಹೋತ್ರೇ ಯಥಾಸ್ಥಿತಃ ।
ಶ್ರಾದ್ಧಭೂಮಿಸ್ತಥಾ ಶುದ್ಧಾ ದೇವಶಾಲಾ ತಥಾ ಪುನಃ ॥ ೫೬ ॥

ಹೋಮಶಾಲಾ ತಥಾ ಪ್ರೋಕ್ತಾ ವೇದಾಧ್ಯಯನವೇಶ್ಮ ಚ ।
ಗೃಹೇಷು ಪುಣ್ಯಸಂಯುಕ್ತಂ ಗೋಸ್ಥಾನಂ ವರಮುತ್ತಮಂ ॥ ೫೭ ॥

ಸೋಮಪಾಯೀ ವಸೇದ್ಯತ್ರ ತೀರ್ಥಂ ತತ್ರ ಪ್ರತಿಷ್ಠಿತಂ ।
ಆರಾಮಾ ಯತ್ರ ವೈ ಪುಣ್ಯಾ ಅಶ್ವತ್ಥೋ ಯತ್ರ ತಿಷ್ಠತಿ ॥ ೫೮ ॥

ಬ್ರಹ್ಮವೃಕ್ಷೋ ಭವೇದ್ಯತ್ರ ವಟವೃಕ್ಷಸ್ತಥೈವ ಚ ।
ಅನ್ಯೇ ಚ ವನ್ಯಸಂಘಾತೇ ತಥಾ ತೀರ್ಥಂ ಪ್ರತಿಷ್ಠಿತಂ ॥ ೫೯ ॥

---

೫೪. ನೀರಿಲ್ಲದಿದ್ದರೂ ಅವು ತೀರ್ಥಗಳೇ, ಸಂಶಯವಿಲ್ಲ. ನದಿಗಳು ಚಿಕ್ಕದಾದರೂ ಅವುಗಳೂ ತೀರ್ಥಗಳೇ.

೫೫-೫೬. ಸೇದುವ ಭಾವಿಯನ್ನು ಬಿಟ್ಟು, ಇತರ ಇಳಿದು ಸ್ನಾನಮಾಡುವ ಹಾಗೆ ತೋಡಿರುವ ಎಲ್ಲಾ ಭಾವಿಗಳೂ ತೀರ್ಥಗಳು. ಮೇರುವೇ ಮೊದಲಾದ ಪರ್ವತಗಳೂ, ತೀರ್ಥಗಳೂ, ಯಾಗಭೂಮಿ, ಯಾಗ, ಅಗ್ನಿಹೋತ್ರವಿರುವ ಜಾಗ, ಶ್ರಾದ್ಧಮಾಡುವ ಭೂಮಿ, ದೇವತೆಗಳ ಸ್ಥಾನ ಇವುಗಳೆಲ್ಲವೂ ಪವಿತ್ರಪ್ರದೇಶಗಳು.

೫೭-೫೮. ಅದರಂತೆಯೇ ಹೋಮಶಾಲೆ, ವೇದಾಧ್ಯಾಯನ ಮಾಡುವ ಮನೆ, ಹಸುವಿನ ಕೊಟ್ಟಿಗೆ, ಸೋಮಪಾನಮಾಡಿದವನು ಇರುವ ಸ್ಥಳ, ಪುಣ್ಯವಾದ ತೋಟಗಳು, ಅಶ್ವತ್ಥವೃಕ್ಷವಿರುವ ಜಾಗಗಳು,

೫೯. ಬ್ರಹ್ಮವೃಕ್ಷ, ಆಲದಮರ ಇರುವ ಜಾಗ, ಇವೆಲ್ಲವೂ ಪುಣ್ಯಪ್ರದೇಶಗಳು. ಮಿಕ್ಕಮರಗಳು ಒಟ್ಟಾಗಿದ್ದರೆ (ತೋಪಾಗಿದ್ದರೆ) ಅದೂ ಪವಿತ್ರಸ್ಥಾನ.

ಏತೇ ತೀರ್ಥಾಸ್ಸಮಾಖ್ಯಾತಾಃ ಪಿತಾ ಮಾತಾ ತಥೈವ ಚ ।
ಪುರಾಣಂ ಪಠ್ಯತೇ ಯತ್ರ ಗುರುರ್ಯತ್ರ ಚ ತಿಷ್ಠತಿ ॥ ೬೦ ॥

ಸುಭಾರ್ಯಾ ವಿದ್ಯತೇ ಯತ್ರ ತತ್ರ ತೀರ್ಥಂ ನ ಸಂಶಯಃ ।
ಪಿತಾ ಚೈವ ಸುಪುತ್ರಶ್ಚ ವಿದ್ಯತೇ ಯತ್ರ ತೀರ್ಥಕಂ ।
ಏತಾನ್ಯಪಿ ಚ ತೀರ್ಥಾನಿ ರಾಜವೇಶ್ಮ ತಥೈವ ಚ ॥ ೬೧ ॥

॥ ವೇನ ಉವಾಚ ॥

ಪಾತ್ರಸ್ಯ ಲಕ್ಷಣಂ ಬ್ರೂಹಿ ಯಸ್ಮೈ ದೇಯಂ ಸುರೋತ್ತಮ ।
ಪ್ರಸಾದಸುಮುಖೋ ಭೂತ್ವಾ ಕೃಪಾಂ ಕೃತ್ವಾ ಚ ಮಾಧವ ॥ ೬೨ ॥

॥ ವಿಷ್ಣುರುವಾಚ ॥

ಶೃಣು ರಾಜನ್ಮಹಾಪ್ರಾಜ್ಞ ಪಾತ್ರಸ್ಯಾಪಿ ಸುಲಕ್ಷಣಂ ।
ಯಸ್ಮೈ ದೇಯಂ ತು ದಾನಂ ಚ ಶ್ರದ್ಧಾಪೂತೈರ್ಮಹಾತ್ಮಭಿಃ ॥ ೬೩ ॥

ಬ್ರಾಹ್ಮಣಂ ಸುಕುಲೋಪೇತಂ ವೇದಾಧ್ಯಯನತತ್ಪರಂ ।
ಶಾನ್ತಂ ದಾನ್ತಂ ದಯೋಪೇತಂ ಶುದ್ಧಮೇವ ವಿಶೇಷತಃ ॥ ೬೪ ॥

---

೬೦. ಮೇಲೆ ಹೇಳಿದುವೆಲ್ಲವೂ ತೀರ್ಥಗಳು. ತಾಯಿತಂದೆಗಳೂ ತೀರ್ಥಗಳು. ಪುರಾಣವನ್ನು ಓದುವ ಜಾಗವೂ, ಗುರುವಿರುವ ಜಾಗವೂ ತೀರ್ಥಗಳು.

೬೧. ಒಳ್ಳೆಯ ಪತಿವ್ರತೆಯಾದ ಸ್ತ್ರೀಯು ಇರುವ ಜಾಗವೂ ತೀರ್ಥವೇ. ಸಂಶಯವಿಲ್ಲ. ತಂದೆಯು, ಯೋಗ್ಯನಾದ ಮಗ, ಇವರಿರುವ ಜಾಗವು ತೀರ್ಥವು. ರಾಜನಿರುವ ಮನೆಯೂ ಕೂಡ ತೀರ್ಥವು.

೬೨. ವೇನನು ಕೇಳಿನನು:—ನಾವು ದಾನಮಾಡತಕ್ಕ ಪಾತ್ರನ ಲಕ್ಷಣವನ್ನು ನನ್ನಲ್ಲಿ ದಯೆಯಿಟ್ಟು ಹೇಳು.

೬೩. ವಿಷ್ಣುವು ಹೇಳಿದನು:—ಶ್ರದ್ಧೆಯುಳ್ಳವರು ಎಂಥಹವರಿಗೆ ದಾನ ಮಾಡಬೇಕೋ ಅಂತಹ ಪಾತ್ರನ ಲಕ್ಷಣಗಳನ್ನು ಹೇಳುತ್ತೇನೆ. ಕೇಳು.

೬೪-೬೬, ದಾನಮಾಡುವುದಕ್ಕೆ ಈ ರೀತಿ ಪಾತ್ರನಿರಬೇಕು. ಅವನು ಬ್ರಾಹ್ಮಣನಾಗಿಯೂ ಉತ್ತಮವಾದ ಸತ್ಕುಲದಲ್ಲಿ ಜನಿಸಿದವನಾಗಿಯೂ, ವೇದಾ

ಪ್ರಜ್ಞಾವನ್ತಂ ಜ್ಞಾನವನ್ತಂ ದೇವಪೂಜನತತ್ಪರಂ ।
ತಪಸ್ಯಂತಂ ಮಹಾಭಾಗಂ ವೈಷ್ಣವಂ ಜ್ಞಾನಪಂಡಿತಂ ॥ ೧೫ ॥

ಧರ್ಮಜ್ಞಂ ಚ ಸುಶೀಲಂ ಚ ಪಾಷಂಡೈಸ್ತು ವಿವರ್ಜಿತಂ ।
ಏವಂ ಪಾತ್ರಂ ಸಮಾಸಾದ್ಯ ದೇಯಮನ್ಯದ್ವದಾಮ್ಯಹಂ ॥ ೧೬ ॥

ಏವಮೇತೈರ್ಗುಣೈರ್ಯುಕ್ತಂ ಸ್ವಸ್ರಪುತ್ರಂ ತಥೈವ ಚ ।
ಏವಂ ಪಾತ್ರಂ ವಿಜಾನೀಹಿ ದುಹಿತಾತನಯಂ ತತಃ ॥ ೧೭ ॥

ಜಾಮಾತಾರಂ ಮಹಾರಾಜ ಭಾವೈರೇತೈಸ್ತು ಸಂಯುತಂ ।
ಗುರುಂ ಚ ದೀಕ್ಷಿತಂ ಚೈವ ಪಾತ್ರಭೂತಂ ನರೋತ್ತಮ ॥ ೧೮ ॥

ಏತಾನ್ಯೇವ ಸುಪಾತ್ರಾಣಿ ದಾನಯೋಗ್ಯಾನಿ ಸತ್ತಮ ।
ವೇದಾಚಾರಸಮೋಪೇತಃ ಪಾತ್ರತ್ವಂ ಚೈವ ಗಚ್ಛತಿ ॥ ೧೯ ॥

ವರ್ಜಯೇತ್ಕಿತವಂ ವಿಪ್ರಂ ತಥಾ ಕಾಣಂ ಚ ವರ್ಜಯೇತ್ ।
ಅತಿಕೃಷ್ಣಂ ಮಹಾರಾಜ ಕಪಿಲಂ ಪರಿವರ್ಜಯೇತ್ ॥ ೨೦ ॥

---

ಧ್ಯಯನ ಸಂಪನ್ನನಾಗಿಯೂ ಇರಬೇಕು. ಶಾಂತಚಿತ್ತನೂ, ಜಿತೇಂದ್ರಿಯನೂ, ಸರ್ವಪ್ರಾಣಿಗಳಲ್ಲಿ ದಯಾಪರನೂ ಆಗಿರಬೇಕು. ಯಾವಾಗಲೂ ಬಾಹ್ಯಾಂತರಗಳಲ್ಲಿ ಶುದ್ಧನಾಗಿಯೂ, ತತ್ತ್ವವನ್ನು ತಿಳಿದು ವಿವೇಕಿಯಾಗಿಯೂ, ತಪೋನಿರತನಾಗಿಯೂ, ವಿಷ್ಣುಧ್ಯಾನಪರಾಯಣನಾಗಿಯೂ ಇರಬೇಕು, ಮತ್ತು ಆತನು ಧರ್ಮವನ್ನು ತಿಳಿದು, ದುರಾಚಾರರಹಿತನಾಗಿಯೂ, ಸದಾಚಾರಪರನಾಗಿಯೂ ಇರಬೇಕು. ನಾಸ್ತಿಕನಾಗಿರಬಾರದು. ಇಂತಹ ಬ್ರಾಹ್ಮಣನು ಯೋಗ್ಯನಾದ ಪಾತ್ರನೆನಿಸುವನು. ಇಂತಹವನಿಗೆ ದಾನವನ್ನು ಕೊಡಬೇಕು.

೧೭-೧೮. ಈರೀತಿಯಾದ ಗುಣವುಳ್ಳ, ಅಕ್ಕತಂಗಿಯ ಮಕ್ಕಳು, ಅನಂತರ ಮಗಳ ಮಕ್ಕಳೂ, ಅಳಿಯ ಮತ್ತು ಗುರು, ದೀಕ್ಷಿತ ಇವರೆಲ್ಲರೂ ಪಾತ್ರರೆಂದು ತಿಳಿ.

೧೯. ಮೇಲೆ ಹೇಳಿದವರೇ ದಾನಯೋಗ್ಯರಾದ ಸುಪಾತ್ರಗಳು. ವೇದಾಚಾರದಿಂದ ಕೂಡಿದವರೂ ಪಾತ್ರರಾಗುತ್ತಾರೆ.

೨೦-೨೧. ಜೂಜಾಡುವವನು, ಕುರುಡ, ಅತಿ ಕಪ್ಪಾದವನು, ಕಪಿಲಬಣ್ಣದವನು, ಏಡಿಯಂತೆ ಕಣ್ಣುಳ್ಳವನು, ನೀಲಿಬಣ್ಣದವನು, ಕಪ್ಪು, ನೀಲಿ, ಹಲ್ಲುಗಳು

**ಕರ್ಕಟಾಕ್ಷಂ ಸುನೀಲಂ ಚ ಶ್ಯಾವದಂತಂ ವಿವರ್ಜಯೇತ್ ।**
**ನೀಲದಂತಂ ತಥಾ ರಾಜ ಪೀತದಂತಂ ತಥೈವ ಚ ॥ ೭೧ ॥**

**ಗೋದಂತಂ ಕೃಷ್ಣದಂತಂ ಚ ಬರ್ಬರಂ ವಾತರೋಗಿಣಂ ।**
**ಹೀನಾಂಗಮಧಿಕಾಂಗಂ ಚ ಕುಷ್ಠಿನಂ ಕುನಖಂ ತಥಾ ॥ ೭೨ ॥**

**ದುಶ್ಚರ್ಮಾಣಂ ಮಹಾರಾಜ ಖಲ್ವಾಟಂ ಪರಿವರ್ಜಯೇತ್ ।**
**ಅನ್ಯಾಯೇಷು ರತಾ ಯಸ್ಯ ಜಾಯಾ ವಿಪ್ರಸ್ಯ ಭೂಪತೇ ॥ ೭೩ ॥**

**ತಸ್ಯ ದಾನಂ ನ ದಾತವ್ಯಂ ಯದಿ ಬ್ರಹ್ಮಸಮೋ ಭವೇತ್ ।**
**ಸ್ತ್ರೀಜಿತಾಯ ನ ದಾತವ್ಯಂ ಶೋಕಾರ್ತಾಯ ಮಹಾಮತೇ ॥ ೭೪ ॥**

**ವ್ಯಾಧಿತಾಯ ನ ದಾತವ್ಯಂ ಮೃತಭೋಜಿಷು ಭೂಪತೇ ।**
**ಚೌರಾಯ ಚ ನ ದಾತವ್ಯಂ ಸದ್ಯಸ್ತೇನ ಸಮೋ ಭವೇತ್ ॥ ೭೫ ॥**

---

ಳ್ಳವನು, ಪೀತವರ್ಣದ ಹಲ್ಲುಳ್ಳವನು ಇವರನ್ನು ಬಿಡಬೇಕು. ಇವರು ದಾನ ಪಾತ್ರರಲ್ಲ.

೭೨-೭೩. ಗೋವಿನ ಹಲ್ಲಿನಂತೆ ದಪ್ಪನಾದ ಹಲ್ಲುಳ್ಳವನು, ಕಪ್ಪುಹಲ್ಲುಳ್ಳವನು ಗುಂಗುರುಜುಟ್ಟುಳ್ಳವನು, ವಾಯುರೋಗಿ, ಅಂಗವಿಕಲನು ಎಂದರೆ ಕುಂಟ, ಕುರುಡ ಮುಂತಾದವರು, ಹೆಚ್ಚು ಅವಯುವವುಳ್ಳವನು, ಎಂದರೆ ಆರುಬೆರಳು ಇರುವವನು ಕುಷ್ಠರೋಗವುಳ್ಳವನು, ಕೆಟ್ಟುಹೋದ ಉಗುರುಳ್ಳವನು, ಕಷ್ಣೆ, ತೊನ್ನು ಮುಂತಾದ ಚರ್ಮರೋಗವಿರುವವನು, ಬಟ್ಟುಕಲೆಯುಳ್ಳವನು, ಇಂತಹವರಿಗೆ ದಾನ ಕೊಡಬಾರದು.

೭೪. ಹೆಂಡತಿಯು ಅನ್ಯಾಯದ ದಾರಿಗೆ ಬಿದ್ದು ಇದ್ದರೆ ಅವಳ ಗಂಡನು ಬ್ರಹ್ಮಸಮಾನನಾದರೂ, ದಾನಮಾಡಬಾರದು. ಹೆಂಗಸಿನ ಮಾತನ್ನೇ ಪ್ರಧಾನ ವಾಗಿಟ್ಟುಕೊಂಡಿರುವವನಿಗೂ, ದುಃಖಗೊಂಡವನಿಗೂ ದಾನಮಾಡಬಾರದು.

೭೫. ರೋಗಿಗೂ, ಸೂತಕಾನ್ನತಿನ್ನುವವನಿಗೂ ದಾನಮಾಡಬಾರದು. ಕಳ್ಳನಿಗೆ ಕೊಟ್ಟರೆ ಅವನು ಕಳ್ಳನಿಗೆಸಮಾನನಾಗುತ್ತಾನೆ.

ಅತಿಸ್ತಬ್ಧಾಯ ನೋ ದೇಯಂ ಶಠಾಯ ಚ ವಿಶೇಷತಃ ।
ವೇದಶಾಸ್ತ್ರಸಮಾಯುಕ್ತಃ ಸದಾ ಚಾರೇಣ ವರ್ಜಿತಃ ॥ ೭೬ ॥

ಶ್ರಾದ್ಧೇ ದಾನೇ ಚ ರಾಜೇಂದ್ರ ನೈವ ಯುಕ್ತಃ ಕದಾಚನ ।
ಅಥ ದಾನಂ ಪ್ರವಕ್ಷ್ಯಾಮಿ ಯತ್ಫಲಂ ಪುಣ್ಯದಾಯಕಂ ।
ಕಾಲೇ ತೀರ್ಥೇಷು ಪಾತ್ರಾಣಾಂ ಶ್ರದ್ಧಾಯೋಗಾಚ್ಚ ಜಾಯತೇ ॥ ೭೭ ॥

ನಾಸ್ತಿ ಶ್ರದ್ಧಾ-ಸಮಂ ಪುಣ್ಯಂ ನಾಸ್ತಿ ಶ್ರದ್ಧಾಸಮಂ ಸುಖಂ ।
ನಾಸ್ತಿ ಶ್ರದ್ಧಾಸಮಂ ತೀರ್ಥಂ ಸಂಸಾರೇ ಪ್ರಾಣಿನಾಂ ನೃಪ ॥ ೭೮ ॥

ಶ್ರದ್ಧಾಭಾವೇನ ಸಂಯುಕ್ತೋ ಮಾಮೇವ ಪರಿಸಂಸ್ಮರೇತ್ ।
ಪಾತ್ರಹಸ್ತೇ ಪ್ರದಾತವ್ಯಂ ದ್ರವ್ಯಮೇವ ನೃಪೋತ್ತಮ ॥ ೭೯ ॥

---

೭೬. ಬಹಳ ಹೆಮ್ಮೆಯಿಂದ ಕೂಡಿದವನಿಗೂ, ಕಪಟಿಗೂ ದಾನ ಕೊಡಬಾರದು. ವೇದಶಾಸ್ತ್ರಗಳನ್ನು ಓದಿದ್ದರೂ ಆಚಾರಹೀನನಾಗಿದ್ದರೆ ದಾನ ಕೊಡಬಾರದು. ಇವರನ್ನು ದಾನದಲ್ಲಿಯೂ, ಶ್ರಾದ್ಧಾದಿಗಳ ಪೂರ್ವಪಂಕ್ತಿಯಲ್ಲಿಯೂ ವರ್ಜಿಸಬೇಕು.

೭೭. ಪುಣ್ಯದಾಯಕವಾದ ದಾನಗಳ ಫಲವನ್ನು ಹೇಳುತ್ತೇನೆ, ಕೇಳು. ಕಾಲ, ತೀರ್ಥ ಪಾತ್ರ ಶ್ರದ್ಧೆಗಳ ಸಂಬಂಧದಿಂದ ಪುಣ್ಯವು ಹೆಚ್ಚುತ್ತದೆ. ಎಂದರೆ ಅವು ಉತ್ತಮವಾಗಿದ್ದರೆ ಪುಣ್ಯವೂ ಹೆಚ್ಚುವುದು.

೭೮. ಶ್ರದ್ಧೆಗೆ ಸಮಾನವಾದ ಪುಣ್ಯವಿಲ್ಲ. ಶ್ರದ್ಧೆಗೆ ಸಮಾನವಾದ ಸುಖವಿಲ್ಲ. ಶ್ರದ್ಧೆಗೆ ಸಮಾನವಾದ ತೀರ್ಥವಿಲ್ಲ ಎಂಬುದನ್ನು ದೃಢಮಾಡಿಕೋ. ಎಂದರೆ ಶ್ರದ್ಧೆಯಿಂದಲೇ ದಾನಮಾಡಬೇಕು. ಉದಾಸೀನಭಾವದಿಂದಲಾಗಲಿ, ಸ್ವಾರ್ಥದಿಂದಲಾಗಲಿ ಮಾಡಿದರೆ ನಿಷ್ಫಲವಾಗುವುದು.

೭೯. ಶ್ರದ್ಧೆಯಿಂದ ಕೂಡಿ ನನ್ನನ್ನೇ ಸ್ಮರಿಸಬೇಕು. ಆಗ ಪಾತ್ರನಲ್ಲಿ ದಾನಮಾಡಬೇಕು.

ಏವಂವಿಧಸ್ಯ ದಾನಸ್ಯ ವಿಧಿಯುಕ್ತಸ್ಯ ಯತ್ಫಲಂ ।
ಅನಂತಂ ತದವಾಪ್ನೋತಿ ಮತ್ಪ್ರಸಾದಾತ್ಸುಖೀ ಭವೇತ್ ॥ ೮೦ ।

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ವೇನೋಪಾಖ್ಯಾನೇ ಏಕೋನಚತ್ವಾರಿಂಶೋಽಧ್ಯಾಯಃ



---

೮೦. ವಿಧಿಯುಕ್ತವಾಗಿ ಮಾಡುವ ಈರೀತಿಯಾದ ದಾನಗಳಿಗೆ ಅನಂತವಾ: ಫಲಗಳನ್ನು ಹೊಂದಿ ನನ್ನ ಅನುಗ್ರಹದಿಂದ ಸುಖಿಯಾಗಿರುತ್ತಾನೆ.

ಇಲ್ಲಿಗೆ ಪದ್ಮಮಹಾಪುರಾಣದಲ್ಲಿ ಭೂಮಿಖಂಡದ ವೇನೋಪಾಖ್ಯಾನದಲ್ಲಿ
ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

### ಚತ್ವಾರಿಂಶೋಽಧ್ಯಾಯಃ

---

॥ ವೇನ ಉವಾಚ ॥

ನಿತ್ಯದಾನೇ ಫಲಂ ಚೈವ ತ್ವತ್ತಃ ಪೂರ್ವಂ ಮಯಾ ಶ್ರುತಂ ।
ನೈಮಿತ್ತಿಕಸ್ಯ ದಾನಸ್ಯ ದತ್ತಸ್ಯಾಪಿ ಹಿ ಯತ್ಫಲಂ ॥ ೧ ॥

ತತ್ಸರ್ವಂ ಹಿ ಸಮಾಚಕ್ಷ್ವ ಪ್ರಸಾದಾಜ್ಜಗದೀಶ್ವರ ।
ಶೃಣ್ವಂಸ್ತೃಪ್ತಿಂ ನ ಗಚ್ಛಾಮಿ ಶ್ರೋತುಂ ಶ್ರದ್ಧಾ ಪ್ರವರ್ತತೇ ॥ ೨ ॥

॥ ವಿಷ್ಣುರುವಾಚ ॥

ನೈಮಿತ್ತಿಕಂ ಪ್ರವಕ್ಷ್ಯಾಮಿ ದಾನಮೇವ ನೃಪೋತ್ತಮ ।
ಮಹಾಪರ್ವಣಿ ಸಂಪ್ರಾಪ್ತೇ ಯೇನ ದಾನಾನಿ ಶ್ರದ್ಧಯಾ ॥ ೩ ॥

---

### ನಲವತ್ತನೆಯ ಅಧ್ಯಾಯ

೧-೨. ವೇನನು ಹೇಳುತ್ತಾನೆ:-ನೀನು ದಾನದ ವಿಷಯದಲ್ಲಿ ಫಲವನ್ನು ಹೇಳಿದ್ದೀಯೆ. ಅದನ್ನು ಕೇಳಿಯೂ ಇದ್ದೇನೆ. ನೈಮಿತ್ತಿಕ ದಾನಕ್ಕೇನು ಫಲವೆಂಬುದನ್ನು ಕೂಡ ದಯವಿಟ್ಟು ಹೇಳು. ಕೇಳುತ್ತಿದ್ದರೆ ತೃಪ್ತಿಯೇ ಉಂಟಾಗುವುದಿಲ್ಲ. ಕೇಳಬೇಕೆಂಬ ಶ್ರದ್ಧೆಯು ಹುಟ್ಟುತ್ತದೆ.

೩. ವಿಷ್ಣುವು ಹೇಳುತ್ತಾನೆ:—ನೈಮಿತ್ತಿಕವಾದ ದಾನಗಳನ್ನು ಹೇಳುತ್ತೇನೆ. ಮಹಾಪರ್ವಗಳಲ್ಲಿ ಯಾರು ಶ್ರದ್ಧೆಯಿಂದ ಸತ್ಪಾತ್ರದಲ್ಲಿ ದಾನಮಾಡುತ್ತಾರೆಯೋ ಅವರಿಗೆ ಬರುವ ಪುಣ್ಯವನ್ನು ಹೇಳುವೆನು, ಕೇಳು

ಸತ್ಪಾತ್ರೇಭ್ಯಃ ಪ್ರದತ್ತಾನಿ ತಸ್ಯ ಪುಣ್ಯಫಲಂ ಶೃಣು ।
ಗಜಂ ರಥಂ ಪ್ರದತ್ತೇ ಯೋ ಹ್ಯಶ್ವಂ ಚಾಪಿ ನೃಪೋತ್ತಮ ॥ ೪ ॥

ಸ ಚ ಭೃತ್ಯೈಸ್ತು ಸಂಯುಕ್ತಃ ಪುಣ್ಯದೇಶೇ ನೃಪೋತ್ತಮಃ ।
ಜಾಯತೇ ಹಿ ಮಹಾರಾಜ ಮತ್ಪ್ರಸಾದಾನ್ನ ಸಂಶಯಃ ॥ ೫ ॥

ರಾಜಾ ಭವತಿ ಧರ್ಮಾತ್ಮಾ ಜ್ಞಾನವಾನ್ಬಲವಾನ್ಸುಧೀಃ ।
ಅಜೇಯಸ್ಸರ್ವಭೂತಾನಾಂ ಮಹಾತೇಜಾಃ ಪ್ರಜಾಯತೇ ॥ ೬ ॥

ಮಹಾಪರ್ವಣಿ ಸಂಪ್ರಾಪ್ತೇ ಭೂಮಿದಾನಂ ದದಾತಿ ಯಃ ।
ಗೋದಾನಂ ವಾ ಮಹಾರಾಜ ಸರ್ವಭೋಗಪತಿರ್ಭವೇತ್ ॥ ೭ ॥

ಬ್ರಾಹ್ಮಣಾಯ ಸುಪುಣ್ಯಾಯ ದಾನಂ ದದ್ಯಾತ್ಪ್ರಯತ್ನತಃ ।
ಮಹಾದಾನಂ ತು ಯೋ ದದ್ಯಾತ್ತೀರ್ಥಪರ್ವಣಿ ಚಾಗತೇ ॥ ೮ ॥

ತೇಷಾಂ ಚಿಹ್ನಂ ಪ್ರವಕ್ಷ್ಯಾಮಿ ಭೂಪತಿತ್ವಂ ಪ್ರಜಾಯತೇ ।
ತೀರ್ಥೇ ಪರ್ವಣಿ ಸಂಪ್ರಾಪ್ತೇ ಗುಪ್ತದಾನಂ ದದಾತಿ ಯಃ ॥ ೯ ॥

---

೪-೫. ಆನೆ, ರಥ, ಕುದುರೆಗಳನ್ನು ದಾನಮಾಡಿದರೆ,ಅವನು ಪುಣ್ಯದೇಶದಲ್ಲಿ ರಾಜನಾಗಿ ಹುಟ್ಟಿ ಭೃತ್ಯರು ಮುಂತಾದವರಿಂದ ಕೂಡಿ ಸುಖಿಸುತ್ತಾನೆ. ಸಂಶಯವಿಲ್ಲ

೬. ಬಲಿಷ್ಠನೂ, ಜ್ಞಾನಿಯೂ, ಪಂಡಿತನೂ ಆದ ರಾಜನಾಗಿ ಒಬ್ಬರಿಂದಲೂ ಜಯಿಸಲಸಾಧ್ಯವಾದ ಶಕ್ತಿಯುಳ್ಳವನಾಗುತ್ತಾನೆ.

೭. ಮಹಾಪರ್ವದಲ್ಲಿ, ಭೂಮಿದಾನ ಅಥವಾ ಗೋದಾನ ಮಾಡಿದರೆ, ಅವನು ಸರ್ವಸೌಖ್ಯಗಳಿಗೂ ಒಡೆಯನಾಗಿ ಅನುಭವಿಸುತ್ತಾನೆ.

೮. ಯೋಗ್ಯನಾದ ಬ್ರಾಹ್ಮಣನಿಗೆ ದಾನಮಾಡಬೇಕು. ತೀರ್ಥಗಳಲ್ಲಿ ಪರ್ವದಿನಗಳಲ್ಲಿ ದಾನಮಾಡಿದರೆ ಅವನು ರಾಜನಾಗುತ್ತಾನೆ. ಅದೇ ಅವನ ಚಿಹ್ನೆ.

೯. ಪರ್ವದಿನಗಳಲ್ಲಿ ತೀರ್ಥಗಳಲ್ಲಿ ಗುಟ್ಟಾಗಿ ದಾನಮಾಡಿದರೆ ಅವನಿಗೆ ಜಾಗ್ರತೆಯಾಗಿ ನಿಧಿ ಸಿಕ್ಕುತ್ತದೆ. ಅದು ಕ್ಷಯಿಸುವುದಿಲ್ಲ.

ನೀಥೀನಾಮಾಶು ಸಂಪ್ರಾಪ್ತಿರಕ್ಷರಾ ಪರಿಜಾಯತೇ ।
ಮಹಾಗರ್ವಣಿ ಸಂಪ್ರಾಪ್ತೇ ತೀರ್ಥೇಷು ಬ್ರಾಹ್ಮಣಾಯ ಚ ॥ ೧೦ ॥

ಸುಚೇಲಂ ಚ ಮಹಾದಾನಂ ಕಾಂಚನೇನ ಸಮನ್ವಿತಂ ।
ಪುಣ್ಯಂ ಫಲಂ ಪ್ರವಕ್ಷ್ಯಾಮಿ ತಸ್ಯ ದಾನಸ್ಯ ಭೂಪತೇ ॥ ೧೧ ॥

ಜಾಯಂತೇ ಬಹವಃ ಪುತ್ರಾಃ ಸದ್ಗುಣಾ ವೇದಪಾರಗಾಃ ।
ಆಯುಷ್ಮನ್ತಃ ಪ್ರಜಾವನ್ತೋ ಯಶಃಪುಣ್ಯಸಮನ್ವಿತಾಃ ॥ ೧೨ ॥

ವಿಪುಲಾಶ್ಚೈವ ಯಜ್ವಾನೋ ಜ್ಞಾತತತ್ತ್ವಾ ಮಹಾಮತೇ ।
ಸೌಖ್ಯಂ ಚ ಲಭತೇ ಪುಣ್ಯಂ ಧರ್ಮವಾನ್ಪರಿಜಾಯತೇ ॥ ೧೩ ॥

ಮಹಾಪರ್ವಣಿ ಸಂಪ್ರಾಪ್ತೇ ತೀರ್ಥಂ ಸಂಪ್ರಾಪ್ಯ ಯತ್ನತಃ ।
ಕಪಿಲಾಂ ಕಾಂಚನೀಂ ದದ್ಯಾದ್ಬ್ರಾಹ್ಮಣಾಯ ಮಹಾತ್ಮನೇ ॥ ೧೪ ॥

ತಸ್ಯ ಪುಣ್ಯಂ ಪ್ರವಕ್ಷ್ಯಾಮಿ ದಾನಸ್ಯಾಸ್ಯ ಮಹಾಮತೇ ।
ಕಪಿಲಾದಾ ಮಹಾರಾಜ ಮಹಾಸೌಖ್ಯಂ ಪ್ರಭುಂಜತೇ ॥ ೧೫ ॥

---

೧೦-೧೧ ಮಹಾ ಪರ್ವಕಾಲದಲ್ಲಿ ತೀರ್ಥದಲ್ಲಿ ಬ್ರಾಹ್ಮಣನಿಗೆ ಒಳ್ಳೆಯ ವಸ್ತ್ರವನ್ನೂ, ಚಿನ್ನವನ್ನೂ ಕೊಟ್ಟರೆ ಆ ದಾನದ ಪುಣ್ಯಫಲವನ್ನು ಹೇಳುತ್ತೇನೆ.

೧೨-೧೩. ಹಾಗೆ ದಾನ ಮಾಡಿದವನಿಗೆ ವೇದಪಾರಗರಾದ ಮತ್ತು ಸದ್ಗುಣಿಗಳಾದ ಮಕ್ಕಳು ಹುಟ್ಟಿ ಆಯುಷ್ಮಂತರೂ ಪ್ರಜಾವಂತರೂ, ಪುಣ್ಯವಂತರೂ ಆಗುತ್ತಾರೆ ಮತ್ತು ಅವರು ತತ್ವಜ್ಞಾನಿಗಳಾಗಿ ಅನೇಕ ಯಾಗಗಳನ್ನು ಮಾಡುತ್ತಾ ಸರ್ವಸೌಖ್ಯವನ್ನು ಅನುಭವಿಸುವರು ಮತ್ತು ಧರ್ಮವಂತರಾಗುವರು.

೧೪-೧೫. ಮಹಾಪರ್ವದಲ್ಲಿ ತೀರ್ಥದಲ್ಲಿ ಕಪಿಲಹಸುವನ್ನೂ, ಚಿನ್ನವನ್ನೂ ಬ್ರಾಹ್ಮಣನಿಗೆ ಕೊಟ್ಟರೆ ಆ ದಾನದ ಪುಣ್ಯವನ್ನು ಹೇಳುತ್ತೇನೆ. ಕೇಳು. ಕಪಿಲಾ ಗೋವನ್ನು ಕೊಟ್ಟವನು ಮಹಾ ಸೌಖ್ಯವನ್ನು ಹೊಂದುತ್ತಾನೆ. ಬ್ರಹ್ಮನು ಬದುಕಿರುವವರೆಗೂ ಎಲ್ಲಾ ಕಡೆಯಲ್ಲೂ ಅವನ ಕೀರ್ತಿಯು ಬೆಳಗುವುದು.

ಯಾವದ್ಬ್ರಹ್ಮಾ ಪ್ರಜೀವೇತ ತಾವತ್ತಿಷ್ಠಂತಿ ಸರ್ವಶಃ ।
ಮಹಾಪರ್ವಣಿ ಸಂಪ್ರಾಪ್ತೇ ಹ್ಯಲಂಕೃತ್ಯ ಚ ಗಾಂ ತದಾ ॥ ೧೬ ॥

ಕಾಂಚನೇನಾಪಿ ಸಂಯುಕ್ತಾಂ ವಸ್ತ್ರಾಲಂಕಾರಭೂಷಣೈಃ ।
ತಸ್ಯ ದಾನಸ್ಯ ರಾಜೇಂದ್ರ ಫಲಭೋಗಂ ವದಾಮ್ಯಹಂ ॥ ೧೭ ॥

ವಿಪುಲಾ ಜಾಯತೇ ಲಕ್ಷ್ಮೀರ್ದಾನಭೋಗಸಮಾಕುಲಾ ।
ಸರ್ವವಿದ್ಯಾಪತಿರ್ಭೂತ್ವಾ ವಿಷ್ಣುಭಕ್ತೋ ಭವೇತ್ಕಿಲ ॥ ೧೮ ॥

ವಿಷ್ಣುಲೋಕೇ ವಸೇನ್ಮರ್ತ್ಯೋ ಯಾವತ್ತಿಷ್ಠತಿ ಮೇದಿನೀ ।
ತೀರ್ಥಂ ಗತ್ವಾ ತು ಯೋ ದದ್ಯಾದ್ಬ್ರಾಹ್ಮಣೇಷು ವಿಭೂಷಣಂ ॥ ೧೯ ॥

ಭುಕ್ತ್ವಾ ತು ವಿಪುಲಾನ್ ಭೋಗಾನಿಂದ್ರೇಣ ಸಹ ಮೋದತೇ ।
ಮಹಾಪರ್ವಣಿ ಸಂಪ್ರಾಪ್ತೇ ವಸ್ತ್ರಂ ಚ ದ್ವಿಜಪುಂಗವೇ ॥ ೨೦ ॥

ದತ್ವಾನ್ನಂ ಭೂಮಿಸಂಯುಕ್ತಂ ಪಾತ್ರೇ ಶ್ರದ್ಧಾ ಸಮನ್ವಿತಃ ।
ಮೋದತೇ ಸ ತು ವೈಕುಂಠೇ ವಿಷ್ಣುತುಲ್ಯಪರಾಕ್ರಮಃ ॥ ೨೧ ॥

---

೧೬-೧೭. ಮಹಾಪರ್ವಕಾಲದಲ್ಲಿ ಗೋವನ್ನು ಅಲಂಕರಿಸಿ ಜೊತೆಯಲ್ಲಿ ಚಿನ್ನವನ್ನೂ ವಸ್ತ್ರಾಲಂಕಾರ ಭೂಷಣಗಳನ್ನೂ ಕೊಟ್ಟರೆ ಬರುವ ಫಲವನ್ನು ಹೇಳುತ್ತೇನೆ. ಕೇಳು.

೧೮-೧೯. ಆತನಿಗೆ ಬಹುವಾಗಿ ಸಂಪತ್ತು ಲಭಿಸುತ್ತದೆ. ಸರ್ವವಿದ್ಯಾಪಾರಂಗತನಾಗಿ ವಿಷ್ಣುಭಕ್ತಿ ಪಾರಾಯಣನೂ ಆಗುತ್ತಾನೆ. ಮತ್ತು ಭೂಮಿಯು ಇರುವ ಪರ್ಯಂತ ವಿಷ್ಣುಲೋಕದಲ್ಲಿ ವಾಸಿಸುತ್ತಾನೆ.

೨೦. ತೀರ್ಥಗಳಲ್ಲಿ ಸ್ನಾನಮಾಡಿ ಯಾವನು ಅಲಂಕಾರಗಳನ್ನು ದಾನಮಾಡುತ್ತಾನೆಯೋ ಅವನು ಇಹದಲ್ಲಿ ಅನೇಕ ಭೋಗಗಳನು ಭೋಗಿಸಿ ಮೃತನಾದ ಮೇಲೆ ಇಂದ್ರನೊಡನೆ ಸುಖಿಸುತ್ತಾನೆ.

೨೧. ಮಹಾಪರ್ವದಲ್ಲಿ ತೀರ್ಥಪ್ರದೇಶದಲ್ಲಿ ಭೂದಾನವನ್ನು ಶ್ರದ್ಧೆಯಿಂದ ಯೋಗ್ಯನಿಗೆ ದಾನಮಾಡಿದರೆ ವಿಷ್ಣು ಸಮನಾದ ಪರಾಕ್ರಮಿಯಾಗಿ ವೈಕುಂಠದಲ್ಲಿ ಸುಖಿಸುತಾತ್ತಾನೆ

ಸವಸ್ತ್ರಂ ಕಾಂಚನಂ ದತ್ವಾ ದ್ವಿಜಾಯ ಪರಿಶೀಲಿನೇ ।
ಸ್ವೇಚ್ಛಯಾ ಹ್ಯಗ್ನಿಸದೃಶೋ ವೈಕುಂಠೇ ವಸತೇ ಧ್ರುವಂ ॥ ೨೨ ॥

ಸುವರ್ಣಸ್ಯ ಸುಕುಂಭಂ ಚ ಘೃತೇನ ಪರಿಪೂರಯೇತ್ ।
ಪಿಧಾನಂ ರೌಪ್ಯಂ ಕರ್ತವ್ಯಂ ವಸ್ತ್ರಹಾರೈರಲಂಕೃತಂ ॥ ೨೩ ॥

ಪುಷ್ಪಮಾಲಾನ್ವಿತಂ ಕುರ್ಯಾದ್ಬ್ರಹ್ಮಸೂತ್ರೇಣ ಶೋಭಿತಂ ।
ಪ್ರತಿಷ್ಠಯೇದ್ವೇದಮಂತ್ರೈಸ್ತಂ ಸಂಪೂಜ್ಯ ಮಹಾಮತೇ ॥ ೨೪ ॥

ಉಪಚಾರೈರ್ವರೈಶ್ಚೈವ ಷೋಡಶೈಃ ಪರಿಪೂಜಯೇತ್ ।
ಸ್ವಲಂಕೃತ್ಯ ತತೋ ದದ್ಯಾದ್ಬ್ರಾಹ್ಮಣಾಯ ಮಹಾಮತೇ ॥ ೨೫ ॥

ಷೋಡಶೈವ ತತೋ ಗಾವಃ ಸವಸ್ತ್ರಾಃ ಕಾಂಸ್ಯದೋಹಿನೀಃ ।
ಕುಂಭೈರ್ಯುಕ್ತಾಶ್ಚ ಚತ್ವಾರೋ ದಕ್ಷಿಣಾಂ ಚ ಸಕಾಂಚನಾಂ ॥ ೨೬ ॥

ತಥಾ ದ್ವಾದಶಕಾ ಗಾವೋ ವಸ್ತ್ರಾಲಂಕಾರಭೂಷಣಾಃ ।
ಪೃಥಗ್ಭೂತಾಯ ವಿಪ್ರಾಯ ದಾತವ್ಯಾ ನಾತ್ರಸಂಶಯಃ ॥ ೨೭ ॥

---

೨೨. ತೀರ್ಥದಲ್ಲಿ ವಸ್ತ್ರಗಳನ್ನೂ, ಚಿನ್ನವನ್ನೂ ಯೋಗ್ಯನಾದ ಬ್ರಾಹ್ಮಣನಿಗೆ ಕೊಟ್ಟರೆ ಅಗ್ನಿಸದೃಶನಾಗಿ ವೈಕುಂಠದಲ್ಲಿ ಸುಖಿಸುತ್ತಾನೆ.

೨೩-೨೫. ಚಿನ್ನದ ಬಿಂದಿಗೆಯ ತುಂಬ ತುಪ್ಪವನ್ನು ತುಂಬಿ ಮೇಲೆ ಬೆಳ್ಳಿಯ ಮುಚ್ಚಳದಿಂದ ಮುಚ್ಚಿ, ಅದಕ್ಕೆ ವಸ್ತ್ರಾದಿಗಳಿಂದ ಅಲಂಕರಿಸಿ ಹೂವಿನಮಾಲೆ ಹಾಕಿ ಯಜ್ಞೋಪವೀತವನ್ನು ಹಾಕಿ ಅದನ್ನು ಶೋಡಶೋಪಚಾರಗಳಿಂದ ಪೂಜಿಸಿ ಅದನ್ನು ಅಲಂಕರಿಸಿ, ಬ್ರಾಹ್ಮಣನಿಗೆ ದಾನಮಾಡಬೇಕು.

೨೬-೨೭. ಹದಿನಾರು ಹಸುಗಳಿಗೆ ವಸ್ತ್ರಾದಿಗಳಿಂದ ಅಲಂಕರಿಸಿ, ಕಂಚಿನ ಕರೆಯುವ ಪಾತ್ರೆಗಳನ್ನಿಟ್ಟು, ಅವುಗಳಲ್ಲಿ ನಾಲ್ಕಕ್ಕೆ ಬಿಂದಿಗೆಗಳನ್ನು, ಇನ್ನು ಹನ್ನೆರಡಕ್ಕೆ ವಸ್ತ್ರಾಲಂಕಾರವನ್ನು ಮಾಡಿ, ಒಂದೊಂದನ್ನು ಒಬ್ಬೊಬ್ಬ ಬ್ರಾಹ್ಮಣನಿಗೆ ಕೊಡಬೇಕು.

ಏವಮಾದೀನಿ ದಾನಾನಿ ಹ್ಯನ್ಯಾನಿ ನೃಪನಂದನ ।
ತೀರ್ಥಕಾಲಂ ಸುಸಂಪ್ರಾಪ್ಯ ಪಾತ್ರಸಂಪತ್ತಿಮೇವ ಚ ॥ ೨೮ ॥

ಶ್ರದ್ಧಾಭಾವೇನ ದಾತವ್ಯಂ ಬಹುಪೂಜ್ಯಕರಂ ಭವೇತ್ ।
॥ ವಿಷ್ಣುರುವಾಚ ॥
ವಿಷ್ಣುಮುದ್ದಿಶ್ಯ ಯದ್ದಾನಂ ಕಾಮನಾಪರಿಕಲ್ಪಿತಂ ॥ ೨೯ ॥

ತಸ್ಯ ದಾನಸ್ಯ ಭಾವೇನ ಭಾವೇನ ಪರಿಭಾವಿತಃ ।
ತಾದೃಕ್ಫಲಂ ಸಮಶ್ನಾತಿ ಮಾನುಷೋ ನಾತ್ರ ಸಂಶಯಃ ।
ಆಭ್ಯುದಯಿಕಂ ಪ್ರವಕ್ಷ್ಯಾಮಿ ಯಜ್ಞಾದಿಷು ಪ್ರದೀಯತೇ ॥ ೩೦ ॥

ತೇನ ದಾನೇನ ತಸ್ಯಾಪಿ ಶುದ್ಧೇನ ಚ ನೃಪೋತ್ತಮ ।
ಪ್ರಜ್ಞಾವೃದ್ಧಿಮವಾಪ್ನೋತಿ ನೈವ ದುಃಖಂ ಚ ವಿಂದತಿ ॥ ೩೧ ॥

ಭೋಗಾನ್ ಭುಂಕ್ತೇ ಸ ಧರ್ಮಾತ್ಮಾ ಜೀವಮಾನಸ್ತು ಸಾಂಪ್ರತಂ ।
ಐಂದ್ರಾಂಸ್ತು ಭುಂಕ್ತೇಽಸೌ ಭೋಗಾನ್ ದಾತಾ ದಿವ್ಯಗತಿಃ ಪುನಃ ॥ ೩೨ ॥

---

೨೮. ಇದೇರೀತಿಯಾದ ಮತ್ತು ಇನ್ನೂ ಬೇರೆರೀತಿಯಾದ ದಾನಗಳನ್ನು ತೀರ್ಥ ಮತ್ತು ಕಾಲಗಳನ್ನು ನೋಡಿ, ಪಾತ್ರದ ಯೋಗ್ಯತೆಯನ್ನು ತಿಳಿದು, ಶ್ರದ್ಧೆಯಿಂದ ದಾನಮಾಡಿದರೆ ಬಹಳವಾಗಿ ಪೂಜ್ಯನಾಗುತ್ತಾನೆ.

೨೯. ವಿಷ್ಣುವು ಹೇಳುತ್ತಾನೆ:—ಕಾಮನಾ ದಾನವೆಂದರೆ, ನಾವೇನಾದರೂ ಒಂದು ಅಪೇಕ್ಷೆಯಿಂದ ದಾನಮಾಡುವುದು. ನಿಷ್ಕಾಮವೆಂದರೆ, ಯಾವ ಉದ್ದೇಶವೂ ಇಲ್ಲದೆ ಭಗವತ್ಪ್ರೀತಿಗಾಗಿ ಮಾಡುವ ದಾನ. ವಿಷ್ಣುವನ್ನುದ್ದೇಶಿಸಿ ಭಕ್ತಿಪೂರ್ವಕವಾಗಿ ದಾನಮಾಡಿದರೆ ಮನುಷ್ಯನು ಅಂತಹ ಫಲವನ್ನೇ ಹೊಂದುತ್ತಾನೆ. ಸಂಶಯವಿಲ್ಲ.

೩೦. ಇನ್ನು ಆಭ್ಯುದಯಿಕಕಾಲವನ್ನು ಹೇಳುತ್ತೇನೆ. ಅದು ಯಜ್ಞಾದಿಗಳಲ್ಲಿ ಮಾಡತಕ್ಕ ದಾನವಿಶೇಷಗಳು.

೩೧. ಶುದ್ಧವಾದ ಆ ದಾನದಿಂದಲೂ, ಪ್ರಜ್ಞೆಯು ಹೆಚ್ಚುವುದು. ದುಃಖ ನಾಶವಾಗುವುದು.

೩೨. ಅಂತಹ ದಾನವನ್ನು ಮಾಡಿದ ಧರ್ಮಾತ್ಮನು ಇಲ್ಲಿ ಅನೇಕ ಭೋಗ

ಸ್ವಕುಲಂ ನಯತೇ ಸ್ವರ್ಗಂ ಕಲ್ಪಾನಾಂ ಚ ಸಹಸ್ರಕಂ ।
ಏವಮಾಭ್ಯುದಯಂ ಪ್ರೋಕ್ತಮಥಾನ್ಯಂ ತೇ ವದಾಮ್ಯಹಂ ॥ ೩೩ ॥

ಕಾಯಸ್ಯ ಸಂಕ್ಷಯಂ ಜ್ಞಾತ್ವಾ ಜರಯಾ ಪರಿಪೀಡಿತಂ ।
ದಾನಂ ತೇನ ಪ್ರದಾತವ್ಯಮಾಶಾಂ ಕಸ್ಯ ನ ಕಾರಯೇತ್ ॥ ೩೪ ॥

ಮೃತೇ ಮಯಿ ಚ ಮೇ ಪುತ್ರಾ ಅನ್ಯೇ ಸ್ವಜನಬಾಂಧವಾಃ ।
ಕಥಮೇತೇ ಭವಿಷ್ಯಂತಿ ಮಾಂ ವಿನಾ ಸುಹೃದೋ ಮಮ ॥ ೩೫ ॥

ತೇಷಾಂ ಮೋಹಾತ್ಪ್ರಮುಗ್ಧೋಽಪಿ ನ ದದಾತಿ ಸ ಕಿಂಚನ ।
ಮೃತ್ಯುಂ ಪ್ರಯಾತಿ ಮೋಹಾತ್ಮಾ ರುದಂತಿ ಮಿತ್ರಬಾಂಧವಾಃ ॥ ೩೬ ॥

ದುಃಖೇನ ಪೀಡಿತಾಸ್ಸರ್ವೇ ಮಾಯಾಮೋಹೇನ ಪೀಡಿತಾಃ ।
ಸಂಕಲ್ಪಯಂತಿ ದಾನಾನಿ ಮೋಕ್ಷಂ ವೈ ಚಿಂತಯಂತಿ ಚ ॥ ೩೭ ॥

ತಸ್ಮಿನ್ಮೃತೇ ಮಹಾರಾಜ ಮಾಯಾಮೋಹೆ ಗತೇ ಸತಿ ।
ವಿಸ್ಮರಂತಿ ಚ ದಾನಾನಿ ಲೋಭಾತ್ಮಾನೋ ದದಂತಿ ನ ॥ ೩೮ ॥

---

ಗಳನ್ನು ಅನುಭವಿಸಿ ಅನಂತರ ಇಂದ್ರನ ಸಂಬಂಧವಾದ ಎಂದರೆ ಸ್ವರ್ಗದಲ್ಲಿ ಉತ್ತಮವಾದ ಭೋಗಗಳನ್ನು ಅನುಭವಿಸುತ್ತಾನೆ.

೩೩. ತನ್ನ ಕುಲವನ್ನು ಕೂಡ ಸಾವಿರಕಲ್ಪಗಳವರೆಗೂ ಸ್ವರ್ಗದಲ್ಲಿರುವಂತೆ ಮಾಡುತ್ತಾನೆ. ಆಭ್ಯುದಯಿಕವನ್ನು ಹೇಳಿದ್ದಾಯಿತು. ಬೇರೆಯದನ್ನು ಹೇಳುತ್ತೇನೆ.

೩೪. ಮುಪ್ಪು ಬಂದುದನ್ನು ತಿಳಿದುಕೊಂಡು ಶರೀರವು ಕೃಶವಾಗುವುದನ್ನು ನೋಡಿ, ಆತನು ದಾನಮಾಡಬೇಕು. ಒಬ್ಬನಲ್ಲೂ ಆಶೆಯನ್ನು ಮಾಡಬಾರದು.

೩೫-೩೬. ನಾನು ಸತ್ತರೆ ನನ್ನ ಮಕ್ಕಳು, ಬಂಧುಗಳು, ಸ್ನೇಹಿತರು ಹೇಗೆ ನನ್ನನ್ನು ಬಿಟ್ಟು ಬದುಕಿಯಾರು? ಎಂದು ಅವರಲ್ಲಿರುವ ಆಶೆಯಿಂದ ಮೂಢನಾಗಿ ಏನನ್ನೂ ಕೊಡದೆ ಅವನು ಸತ್ತುಹೋಗುತ್ತಾನೆ. ಮಿತ್ರಬಾಂಧವರು ಅಳುತ್ತಾರೆ.

೩೭. ಎಲ್ಲರೂ ಆಗ ದುಃಖದಿಂದ ಪೀಡಿತರಾಗಿ ಮಾಯಾಮೋಹಕ್ಕೆ ಸಿಲುಕಿ ಇವನಿಗೋಸ್ಕರ ದಾನಗಳನ್ನು ಕೊಡುತ್ತೇವೆಂದು ಸಂಕಲ್ಪಮಾಡುತ್ತಾರೆ. ಆದರಿಂದ ಅವನು ಮೋಕ್ಷವನ್ನು ಹೊಂದುವನೆಂದು ಯೋಚಿಸುತ್ತಾರೆ.

೩೮. ಆದರೆ ಅವನು ಸತ್ತಮೇಲೆ, ಆ ಮಾಯಾಮೋಹವು ಹೋಗುವುದು.

**ಯೋಽಸೌ ಮೃತೇ ಮಹಾರಾಜ ಯಮಪಥಂ ಸುದುಃಖಿತಃ ।**
**ತೃಷಾಕ್ಷುಧಾಸಮಾಕ್ರಾಂತೋ ಬಹುದುಃಖೈಃ ಪ್ರಪೀಡಿತಃ ॥ ೩೯ ॥**

**ತಸ್ಮಾದ್ದಾನಂ ಪ್ರದಾತವ್ಯಂ ಸ್ವಯಮೇವ ನ ಸಂಶಯಃ ।**
**ಕಸ್ಯ ಪುತ್ರಾಶ್ಚ ಪೌತ್ರಾಶ್ಚ ಕಸ್ಯ ಭಾರ್ಯಾ ನೃಪೋತ್ತಮ ॥ ೪೦ ॥**

**ಸಂಸಾರೇ ನಾಸ್ತಿ ಕಃ ಕಸ್ಯ ತಸ್ಮಾದ್ದಾನಂ ಪ್ರದೀಯತೇ ।**
**ಜ್ಞಾನವತಾ ಪ್ರದಾತವ್ಯಂ ಸ್ವಯಮೇವ ನ ಸಂಶಯಃ ॥ ೪೧ ॥**

**ಅನ್ನಂ ಪಾನಂ ಚ ತಾಂಬೂಲಮುದಕಂ ಕಾಂಚನಂ ತಥಾ ।**
**ಸುಗಾಂ ಸವತ್ಸಾಂ ಭೂಮಿಂ ಚ ಫಲಾನಿ ವಿವಿಧಾನಿ ಚ ॥ ೪೨ ॥**

**ಜಲಪಾತ್ರಾಣ್ಯನೇಕಾನಿ ಸೋದಕಾನಿ ನೃಪೋತ್ತಮ ।**
**ವಾಹನಾನಿ ವಿಚಿತ್ರಾಣಿ ಯಾನಾನ್ಯೇವ ಮಹಾಮತೇ ॥ ೪೩ ॥**

**ನಾನಾಗನ್ಧಂ ಸಕರ್ಪೂರಂ ಪಾದಯೋರ್ವೈಸುಖಪ್ರದೌ ।**
**ಉಪಾನಹೌ ಪ್ರದಾತವ್ಯೌ ಯದೀಚ್ಛೇದ್ವಿಪುಲಂ ಶುಭಂ ॥ ೪೪ ॥**

---

ಆಗ ಸಂಕಲ್ಪಿದ ದಾನಗಳೆಲ್ಲವನ್ನೂ ಮರೆಯುತ್ತಾರೆ. ಮಾಡಿದರೂ ಲೋಭತನ ದಿಂದ ಮಾಡುತ್ತಾರೆ.

೩೯. ಸತ್ತವನು ಯಮನಪಟ್ಟಣದ ದಾರಿಯನ್ನು ಹೊಂದಿ ಹಸಿವುಬಾಯಾ ರಿಕೆಗಳಿಂದ ಬಹು ದುಃಖಪಡುತ್ತಾನೆ. ಆದುದರಿಂದ ಬದುಕಿರುವಾಗ ತಾನೇ ದಾನ ಮಾಡಬೇಕು. ಸತ್ತಮೇಲೆ ಇತರರು ತನಗೋಸ್ಕರ ಮಾಡುತ್ತಾರೆಂದು ತಿಳಿಯುವುದು ಅವಿವೇಕವು. ಸಂಶಯವಿಲ್ಲ.

೪೦-೪೧. ಮಕ್ಕಳು, ಮೊಮ್ಮಕ್ಕಳು ಯಾರಿಗೆ? ಹೆಂಡತಿ ಯಾರು? ಸಂಸಾರದಲ್ಲಿ ಯಾರಿಗೆ ಯಾರೂ ಇಲ್ಲ. ಆದುದರಿಂದ ದಾನಮಾಡಲೇ ಬೇಕು. ಜ್ಞಾನಿ ಯಾದವನೂ, ಇತರರನ್ನು ನಂಬದೆ ತಾನೇ ದಾನಮಾಡಲೇಬೇಕು. ಸಂಶಯವಿಲ್ಲ.

೪೨-೪೪. ಅನ್ನ, ನೀರು, ತಾಂಬೂಲ, ಪಾನಾದಿಗಳು, ಚಿನ್ನ, ಒಳ್ಳೆಯ ಕರೆಯುವ ಹಸು, ಭೂಮಿ, ನಾನಾಬಗೆಯಾದ ಹಣ್ಣುಗಳು, ಉದುಕುಂಭಗಳು, ನಾನಾಬಗೆಯಾದ ವಾಹನಗಳು, ಯಾನಗಳು, ಗಂಧ, ಕರ್ಪೂರ, ಜೋಡುಗಳು ಇವೆಲ್ಲವನ್ನೂ, ಸುಖವನ್ನು ಅಪೇಕ್ಷಿಸುವವನು ದಾನಮಾಡಬೇಕು.

ಏತೈರ್ದಾನೈರ್ಮಹಾರಾಜ ಯಮಮಾರ್ಗಂ ಸುಖೇನ ವೈ ।
ಪ್ರಯಾತಿ ಮಾನವೋ ನೂನಂ ಯಮದೂತೈರಲಂಕೃತಂ ॥ ೪೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ
ವೇನೋಪಾಖ್ಯಾನೇ ಚತ್ವಾರಿಂಶೋಽಧ್ಯಾಯಃ



---

೪೫. ಈ ದಾನಗಳಿಂದ ಆವನು ಯಮಮಾರ್ಗದಿಂದ ಸುಖವಾಗಿ ದಾಟುತ್ತಾನೆ. ಯಮದೂತರು ಜೊತೆಯಲ್ಲಿರುವ ಯಮಮಾರ್ಗದ ದಾರಿಯನ್ನು ದಾನಮಾಡಿದ ಮಾನವನು ಸುಖದಿಂದ ದಾಟುತ್ತಾನೆ.

ಇಲ್ಲಿಗೆ ಪದ್ಮಮಹಾಪುರಾಣದಲ್ಲಿ ಭೂಮಿಖಂಡದಲ್ಲಿ ವೇನನ ಚರಿತ್ರೆಯಲ್ಲಿ
ನಾಲ್ವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಮಹಾಪುರಾಣೇ ಪಾದ್ಮೇ ಭೂಮಿಖಂಡೇ

### ಏ ಕ ಚ ತ್ವಾ ರಿಂ ಶೋಽ ಧ್ಯಾ ಯಃ

॥ ವೇನ ಉವಾಚ ॥

ಪುತ್ರೋ ಭಾರ್ಯಾ ಕಥಂ ತೀರ್ಥಂ ಮಾತಾ ಪಿತಾ ಕಥಂ ವದ ।
ಗುರುಶ್ಚೈವ ಕಥಂ ತೀರ್ಥಂ ತನ್ಮೇ ವಿಸ್ತರತೋ ವದ ॥ ೧ ॥

॥ ವಿಷ್ಣುರುವಾಚ ॥

ಅಸ್ತಿ ವಾರಾಣಸೀ ರಮ್ಯಾ ಗಂಗಾಯುಕ್ತಾ ಮಹಾಪುರೀ ।
ತಸ್ಯಾಂ ವಸತಿ ವೈಶ್ಯೋ ಹಿ ಕೃಕಲೋ ನಾಮ ನಾಮತಃ ॥ ೨ ॥

ತಸ್ಯ ಭಾರ್ಯಾ ಮಹಾಸಾಧ್ವೀ ಸಾಧುವ್ರತಪರಾಯಣಾ ।
ಧರ್ಮಾಚಾರಪರಾ ನಿತ್ಯಂ ಸಾ ವೈ ಪತಿಪರಾಯಣಾ ॥ ೩ ॥

---

### ನಲವತ್ತೊಂದನೆಯ ಅಧ್ಯಾಯವು

೧. ವೇನನು ಕೇಳಿದನು:—ಮಗ, ಹೆಂಡತಿ, ತಾಯಿ ತಂದೆ, ಗುರು ಇವರು ತೀರ್ಥರೆಂಬುದು ಹೇಗೆ? ಇದನ್ನು ಹೇಳು ಎನ್ನಲು,

೨. ವಿಷ್ಣುವು ಹೇಳಿದನು:—ಗಂಗಾನದಿಯು ಹರಿಯುತ್ತಿರುವ ವಾರಣಾಸೀ ಎಂಬ ಊರಿದೆ. ಅಲ್ಲಿ ಕೃಕಲನೆಂಬ ವೈಶ್ಯನೊಬ್ಬನಿದ್ದನು.

೩. ಆತನಿಗೆ ಪತಿಪರಾಯಣೆಯೂ, ಸಾಧ್ವಿಯೂ ಧರ್ಮಾಚಾರಉಳ್ಳವಳೂ ಆದ ಪತ್ನಿಯಿದ್ದಳು.

ಸುಕಲಾ ನಾಮ ಪುಣ್ಯಾಂಗೀ ಸುಪುತ್ರಾ ಚಾರುಮಂಗಳಾ ।
ಸತ್ಯಂವದಾ ಶುಭಾ ಶುದ್ಧಾ ಪ್ರಿಯಾಕಾರಾ ಪ್ರಿಯವ್ರತಾ ॥ ೪ ॥

ಏವಂಗುಣಸಮಾಯುಕ್ತಾ ಸುಭಗಾ ಚಾರುಹಾಸಿನೀ ।
ಸ ವೈಶ್ಯ ಉತ್ತಮೋ ವಾಗ್ಮೀ ಧರ್ಮಜ್ಞೋ ಜ್ಞಾನವಾನ್ ಗುಣೀ ॥ ೫ ॥

ಪುರಾಣೇ ಶ್ರೌತಧರ್ಮೇ ಚ ಸದಾ ಶ್ರವಣತತ್ಪರಃ ।
ತೀರ್ಥಯಾತ್ರಾಪ್ರಸಂಗೇನ ಬಹುಪುಣ್ಯಪ್ರದಾಯಕಂ ॥ ೬ ॥

ಶ್ರದ್ಧಯಾ ನಿರ್ಗತೋ ಯಾತ್ರಾಂ ತೀರ್ಥಾನಾಂ ಪುಣ್ಯಮಂಗಳಂ ।
ಬ್ರಾಹ್ಮಣಾನಾಂ ಪ್ರಸಂಗೇನ ಸಾರ್ಥವಾಹೇನ ತೇನ ವೈ ॥ ೭ ॥

ಪ್ರಸ್ಥಿತೋ ಧರ್ಮಮಾರ್ಗಂ ತು ತಮುವಾಚ ಪತಿವ್ರತಾ ।
ಪತಿಸ್ನೇಹೇನ ಸಂಮುಗ್ಧಾ ಭರ್ತಾರಂ ವಾಕ್ಯಮಬ್ರವೀತ್ ॥ ೮ ॥

॥ ಸುಕಲೋವಾಚ ॥

ಅಹಂ ತೇ ಧರ್ಮತಃ ಪತ್ನೀ ಸಹಪುಣ್ಯಕರಾ ಪ್ರಿಯ ।
ಪತಿಮಾರ್ಗಂ ಪ್ರಯಾತಾಹಂ ಪತಿದೇವಂ ಯಜಾಮ್ಯಹಂ ॥ ೯ ॥

---

೪-೫ ಅವಳ ಹೆಸರು ಸುಕಲೆಯೆಂದು. ಆಕೆಯು ರೂಪವತಿ, ಸತ್ಯವಂತಳು, ಶುದ್ಧಳು, ವ್ರತಾಚಾರಗಳಲ್ಲಿ ಆಸಕ್ತಳು, ಯಾವಾಗಲೂ ಹಸನ್ಮುಖಿ, ಈ ಗುಣಗಳಿಂದ ಕೂಡಿದ್ದಳು.

೬. ಆತನು ಪುರಾಣ ಶ್ರವಣದಲ್ಲಿ ಆಸಕ್ತನಾಗಿ ಶ್ರೌತಧರ್ಮಗಳನ್ನು ಮಾಡುತ್ತಿದ್ದನು. ಹೀಗಿರಲು ಒಂದಾನೊಂದು ಕಾಲದಲ್ಲಿ ತೀರ್ಥಯಾತ್ರೆ ಮಾಡಬೇಕೆಂಬ ಆಸೆಯಿಂದ ಶ್ರದ್ಧಾಯುತನಾಗಿ ಹೊರಟನು.

೭-೮. ಬ್ರಾಹ್ಮಣರನ್ನು ಜೊತೆಮಾಡಿಕೊಂಡು ವರ್ತಕರ ಗುಂಪಿನೊಡನೆ ಧರ್ಮರೀತಿಯಿಂದ ಹೊರಟನು. ಗಂಡನು ಹೀಗೆ ಹೊರಟುದುದನ್ನು ನೋಡಿ ಹೆಂಡತಿಯು ಪತಿಯಲ್ಲಿರುವ ಸ್ನೇಹದಿಂದ ಇಂತೆಂದಳು.

೯. ನಾನು ನಿನಗೆ ಧರ್ಮಪತ್ನಿಯು. ನಿನ್ನೊಡನೆ ಪುಣ್ಯಕರ್ಮಗಳನ್ನು ಮಾಡಲು ಅರ್ಹಳಾಗಿದ್ದೇನೆ. ಪತಿಮಾರ್ಗವನ್ನೇ ಅನುಸರಿಸಿಕೊಂಡು ಎಂದರೆ ಪತಿಯೇ ಪರದೈವವೆಂದು ತಿಳಿದು ಆತನನ್ನು ಪೂಜಿಸುತ್ತೇನೆ.

ಕದಾ ನೈವ ಭವಾಂಸ್ತ್ಯಾಜ್ಯಃ ಸದ್ಭಾವಾಚ್ಚ ದ್ವಿಜೋತ್ತಮ ।
ತವ ಚ್ಛಾಯಾಂ ಸಮಾಶ್ರಿತ್ಯ ಕರಿಷ್ಯೇ ವ್ರತಮುತ್ತಮಂ ॥ ೧೦ ॥

ಪತಿವ್ರತಾಖ್ಯಂ ಪಾಪಘ್ನಂ ನಾರೀಣಾಂ ಗತಿದಾಯಕಂ ।
ಪುಣ್ಯಾ ಸ್ತ್ರೀ ಕಥ್ಯತೇ ಲೋಕೇ ಯಾ ಸ್ಯಾತ್ಪತಿಪರಾಯಣಾ ॥ ೧೧ ॥

ಯುವತೀನಾಂ ಪೃಥಕ್ ತೀರ್ಥಂ ವಿನಾಭರ್ತುರ್ದ್ವಿಜೋತ್ತಮ ।
ಸುಖದಂ ನಾಸ್ತಿ ವೈ ಲೋಕೇ ಸ್ವರ್ಗಮೋಕ್ಷಪ್ರದಾಯಕಂ ॥ ೧೨ ॥

ಸವ್ಯಂ ಪಾದಂ ಸ್ವಭರ್ತುಶ್ಚ ಪ್ರಯಾಗಂ ವಿದ್ಧಿ ಸತ್ತಮ ।
ವಾಮಂ ಚ ಪುಷ್ಕರಂ ತಸ್ಯ ಯಾ ನಾರೀ ಪರಿಕಲ್ಪಯೇತ್ ॥ ೧೩ ॥

ತಸ್ಯ ಪಾದೋದಕಸ್ನಾನಾತ್ತತ್ಪುಣ್ಯಂ ಪರಿಜಾಯತೇ ।
ಪ್ರಯಾಗಪುಷ್ಕರಸಮಂ ಸ್ನಾನಂ ಸ್ತ್ರೀಣಾಂ ನ ಸಂಶಯಃ ॥ ೧೪ ॥

ಸರ್ವತೀರ್ಥಸಮೋ ಭರ್ತಾ ಸರ್ವಧರ್ಮಮಯಃ ಪತಿಃ ।
ಮಖಾನಾಂ ಯಜನಾತ್ಪುಣ್ಯಂ ಯದ್ವೈ ಭವತಿ ದೀಕ್ಷಿತೇ ।
ತತ್ಪುಣ್ಯಂ ಸಮವಾಪ್ನೋತಿ ಭರ್ತುಶ್ಚೈವ ಹಿ ಸಾಂಪ್ರತಂ ॥ ೧೫ ॥

---

೧೦ ನಿನ್ನನ್ನು ಬಿಡದೆ ಯಾವಾಗಲೂ ನೀನು ಹೇಳಿದಂತೆ ಸದ್ಭಾವನೆಯಿಂದ ನಡೆಯುತ್ತಿರುವೆನು. ನಿನ್ನ ಜೊತೆಯಲ್ಲಿಯೇ ಇದ್ದು ವ್ರತನಿಯಮಾದಿಗಳನ್ನು ಮಾಡುತ್ತ ನಿನ್ನನ್ನು ನೆರಳಿನಂತೆ ಅನುಸರಿಸಿಕೊಂಡಿರುವೆನು.

೧೧. ಪಾತಿವ್ರತ್ಯವು ಪಾಪವನ್ನು ನಾಶಮಾಡುತ್ತದೆ. ಹೆಂಗಸರಿಗೆ ಅದೇ ಸದ್ಗತಿಯನ್ನು ಕೊಡುವುದು. ಪತಿಪರಾಯಣಳಾಗಿರುವುದರಿಂದ ಸ್ತ್ರೀಯು ಪುಣ್ಯವತಿಯೆನಿಸಿಕೊಳ್ಳುತ್ತಾಳೆ.

೧೨. ಹೆಗಂಸರಿಗೆ ಬೇರೆ ತೀರ್ಥಗಳು ಬೇಕಿಲ್ಲ. ತನ್ನ ಪತಿಯ ಶಿಶ್ರೂಷವೇ ಸುಖವನ್ನೂ, ಸ್ವರ್ಗಮೋಕ್ಷಗಳನ್ನೂ ಕೊಡುತ್ತದೆ.

೧೩-೧೪. ಹೆಂಗಸಿಗೆ ಗಂಡನ ಬಲಗಾಲೇ ಪ್ರಯಾಗವು. ಎಡಗಾಲು ಪುಷ್ಕರವು. ಈರೀತಿ ತಿಳಿದುಕೊಂಡು ಯಾವಾಕೆಯು ಸ್ನಾನಮಾಡುತ್ತಾಳೋ ಆಕೆಗೆ ಪ್ರಯಾಗ ಪುಷ್ಕರಗಳೆರಡರ ಸ್ನಾನಮಾಡಿದ ಪುಣ್ಯವು ಲಭಿಸುತ್ತದೆ. ಸಂಶಯವಿಲ್ಲ.

೧೫. ಪತಿವ್ರತೆಯಾದ ಹೆಂಗಸಿನ ಗಂಡನೇ ಸರ್ವ ತೀರ್ಥಸಮಾನನು, ಸರ್ವ ಧರ್ಮಸ್ವರೂಪನು. ದೀಕ್ಷಿತನು, ಯಾಗಗಳಿಂದ ಯಾವರೀತಿಯಾದ ಪುಣ್ಯವನ್ನು

ಪ್ರಯಾಗಂ ಪುಷ್ಕರಂ ಚೈವ ಯಾತ್ರಾಂ ಕೃತ್ವಾ ಹಿ ಯದ್ಭವೇತ್ ।
ತತ್ಫಲಂ ಸಮವಾಪ್ನೋತಿ ಭರ್ತುಶ್ಶುಶ್ರೂಷಣಾದಪಿ ॥ ೧೬ ॥

ಸಮಾಸೇನ ಪ್ರವಕ್ಷ್ಯಾಮಿ ತನ್ಮೇ ನಿಗದತಃ ಶೃಣು ।
ನಾಸ್ತ್ಯಸ್ಯಾ ಹಿ ಪೃಥಗ್ಧರ್ಮಃ ಪತಿಶುಶ್ರೂಷಣಾಂ ವಿನಾ ॥ ೧೭ ॥

ತಸ್ಮಾತ್ತ್ವಾಂತ ಸಹಾಯಂ ತೇ ಕುರ್ವಾಣಾ ಸುಖದಾಯಿನೀ ।
ತವ ಛಾಯಾಂ ಸಮಾಶ್ರಿತ್ಯ ತ್ವಾಗಮಿಷ್ಯಾಮಿ ನಾನ್ಯಥಾ ॥ ೧೮ ॥

॥ ವಿಷ್ಣುರುವಾಚ ॥

ರೂಪಂ ಶೀಲಂ ಗುಣಂ ಭಕ್ತಿಂ ಸಮಾಲೋಕ್ಯ ಚ ಸರ್ವಥಾ ।
ಸೌಕುಮಾರ್ಯಂ ವಿಚಾರ್ಯೈವ ಕೃಕಲಃ ಸ ಪುನಃ ಪುನಃ ॥ ೧೯ ॥

ಯದ್ಯೇವಂ ಸ್ಯಾದ್ಗಮಿಷ್ಯಾಮಿ ದುರ್ಗಮಾರ್ಗಂ ಸುದುಃಖದಂ ।
ರೂಪಮೇವ ಭವೇಚ್ಛಾಸ್ಯಾಃ ಶೀತಾತಪವಿಲೋಡಿತಂ ॥ ೨೦ ॥

ಪದ್ಮಪತ್ರಪ್ರತೀಕಾಶಮಸ್ಯಾಶ್ಚಾಂಗಂ ಪ್ರವರ್ಣಕಂ ।
ಮಹಾವಾತೇನ ಶೀತೇನ ಕೃಷ್ಣವರ್ಣಂ ಭವಿಷ್ಯತಿ ॥ ೨೧ ॥

---

ಹೊಂದುತ್ತಾನೆಯೋ ಆ ಪುಣ್ಯವನ್ನು ಹೆಂಡತಿಯು ಗಂಡನ ಶುಶ್ರೂಷೆಯೊಂದರಿಂದಲೇ ಹೊಂದುತ್ತಾಳೆ.

೧೬. ಪ್ರಯಾಗ ಪುಷ್ಕರಗಳ ಯಾತ್ರೆ ಮಾಡಿದರೆ ಯಾವ ಪುಣ್ಯ ಬರುತ್ತದೆಯೋ ಅದನ್ನು ಹೆಂಡತಿಯು ಗಂಡನ ಶುಶ್ರೂಷೆಯಿಂದ ಹೊಂದುತ್ತಾಳೆ.

೧೭. ಒಂದೇಒಂದು ಮಾತಿನಲ್ಲಿ ಹೇಳುತ್ತೇನೆ, ಕೇಳು. ಹೆಂಗಸಿಗೆ ಪತಿಶುಶ್ರೂಷೆ ಹೊರತು ಬೇರೆ ಧರ್ಮವಿಲ್ಲ.

೧೮. ಆದುದರಿಂದ ನಿನಗೆ ಸಹಾಯ ಮಾಡಿಕೊಂಡು ಸುಖವನ್ನುಂಟುಮಾಡುವವಳಾಗಿ ನಿನ್ನ ಆಶ್ರಯದಲ್ಲಿ ಇದ್ದುಕೊಂಡು ನಾನು ನಿನ್ನೊಡನೆ ಬಂದುಬಿಡುತ್ತೇನೆ. ಬೇರೇನೂ ಇಲ್ಲ. ಎಂದಳು.

೧೯-೨೧ ವಿಷ್ಣುವು ಹೇಳಿದನು:—ಈಕೆಯ ರೂಪ, ಶೀಲ, ಗುಣ ಭಕ್ತಿಗಳನ್ನೂ, ಸೌಕುಮಾರ್ಯವನ್ನೂ ಆ ಕೃಕಲನು ಬಾರಿಬಾರಿಗೂ ವಿಚಾರಮಾಡಿ ನೋಡಿ, ಹೀಗೆಂದುಕೊಂಡನು. ನಾನು ಬೆಟ್ಟ ಗುಡ್ಡಗಳನ್ನು ಹಳ್ಳಕೊಳ್ಳಗಳನ್ನೂ ದಾಟಿ ಹೋಗುತ್ತೇನೆ. ಆಗ ಇವಳೂ ಬಂದರೆ ಚಳಿ, ಗಾಳಿ, ಬಿಸಲುಗಳಿಂದ ಈಕೆಯ ಕಮ

ಪಥಿ ಕರ್ಕಶಸುಗ್ರಾವ್ಣೈಃ ಪಾದೌ ಚಾಸ್ಯಾಸ್ಸುಕೋಮಲೌ ।
ಏಷ್ಯೇತೇ ವೇದನಾಂ ತೀವ್ರಾಂ ಯಥಾ ಗಂತುಂ ನ ಚ ಕ್ಷಮಾ ॥ ೨೨ ॥

ಕ್ಷುತ್ತೃಷ್ಣಾಭಿಃ ಪರೀತಾಂಗೀ ಕೀದೃಕ್ಕ್ಲೇಯಂ ಭವಿಷ್ಯತಿ ।
ವಾಮಾಂಗೀ ಮಮ ಚ ಸ್ಥಾನಂ ಧರ್ಮಸ್ಥಾನಂ ವರಾನನಾ ॥ ೨೩ ॥

ಮಮ ಪ್ರಾಣಪ್ರಿಯಾ ನಿತ್ಯಂ ನಿತ್ಯಂ ಧರ್ಮಸ್ಯ ಚಾಶ್ರಯಃ ।
ನಾಶಮೇತಿ ಯದಾ ಬಾಲಾ ಮಮ ನಾಶೋ ಭವೇದಿಹ ॥ ೨೪ ॥

ಇಯಂ ಮೇ ಜೀವಿಕಾ ನಿತ್ಯಮಿಯಂ ಪ್ರಾಣಸ್ಯ ಚೇಶ್ವರೀ ।
ನ ನಯಿಷ್ಯೇ ಚ ತತ್ತೀರ್ಥಮೇಕಶ್ಚೈವ ವ್ರಜಾಮ್ಯಹಂ ॥ ೨೫ ॥

ಚಿನ್ತಯಿತ್ವಾ ಕ್ಷಣಂ ತೇನ ಕೃಕಲೇನ ಮಹಾತ್ಮನಾ ।
ತಸ್ಯ ಚಿತ್ತಾನುಗೋ ಭಾವಸ್ತಯಾ ಜ್ಞಾತೋ ನೃಪೋತ್ತಮ ॥ ೨೬ ॥

---

ಲ ಪತ್ರದಂತೆ ಸುಕುಮಾರವಾದ ಶರೀರವು ತೊಂದರೆಗೀಡಾಗಿ ಅವುಗಳ ದೆಸೆಯಿಂದ ಕಷ್ಟಾಗುತ್ತದೆ.

೨೨. ಕಾಡಿನಲ್ಲಿ ಕಠಿಣವಾದ ಕಲ್ಲುಗಳಿಂದ ಈಕೆಯ ಕೋಮಲವಾದ ಕಾಲುಗಳು ತೀವ್ರವಾದ ನೋವನ್ನು ಹೊಂದಿ ಪ್ರಯಾಣಮಾಡುವುದಕ್ಕೆ ಆಗದಂತಾಗುತ್ತೆ. ಹಸಿವುಬಾಯಾರಿಕೆಗಳಿಂದ ಕೂಡಿ ಇವಳು ಎಷ್ಟು ಕಷ್ಟಪಡಬೇಕಾಗುವುದು?

೨೩-೨೪. ಈ ಹುಡುಗಿಯು ನನಗೆ ಒಂದು ಸ್ಥಾನವನ್ನೂ, ನನ್ನ ಧರ್ಮಕ್ಕೂ ಒಂದು ಸ್ಥಾನವನ್ನೂ ಕೊಟ್ಟಿದ್ದಾಳೆ. ನನಗೆ ಯಾವಾಗಲೂ ಪ್ರಾಣಪ್ರಿಯಳು. ಧರ್ಮಕ್ಕೂ ಆಶ್ರಯಳು. ಇಂತಹ ಈಕೆಯು ಏನಾದರೂ ನಾಶವಾದರೆ ನನ್ನ ಶಾಶವಾದಂತೆಯೇ ಸರಿ.

೨೫. ಈಕೆಯು ನನ್ನ ಜೀವಸ್ವರೂಪಳು. ಮತ್ತೂ ಪ್ರಾಣಗಳಿಗೆ ಒಡೆಯಳು. ಆದುದರಿಂದ ಕಷ್ಟಸಾಧ್ಯಗಳಾದ ತೀರ್ಥಗಳಿಗೆ ಈಕೆಯನ್ನು ಕರೆದುಕೊಂಡು ಹೋಗುವುದಿಲ್ಲ. ನಾನೊಬ್ಬನೇ ಹೋಗುತ್ತೇನೆ.

೨೬. ಕೃಕಲನು ಈರೀತಿ ಕ್ಷಣಕಾಲ ಚಿಂತಿಸಿ ನಿರ್ಧರಿಸಿದನು. ಅವನ ಮನಸ್ಸಿಗೆ ಬಂದ ಅಭಿಪ್ರಾಯವನ್ನು ಈಕೆಯು ತಿಳಿದುಕೊಂಡಳು.

ಪುನಶ್ಚೋವಾಚ ಸುಕಲಾ ಭರ್ತಾರಂ ಪ್ರಸ್ಥಿತಂ ತದಾ ।
ಅನಘಾ ನೈವ ಸಂತ್ಯಾಜ್ಯಾ ಪುರುಷೈಃ ಶೃಣು ಸತ್ತಮ ॥ ೨೭ ॥

ಮೂಲಮೇವ ಹಿ ಧರ್ಮಸ್ಯ ಪುರುಷಸ್ಯ ಮಹಾಮತೇ ।
ಜ್ಞಾತ್ವಾ ಚೈವಂ ಮಹಾಭಾಗ ನಯ ಮಾಮಪಿ ಸಾಂಪ್ರತಂ ॥ ೨೮ ॥

॥ ವಿಷ್ಣುರುವಾಚ ॥

ಶ್ರುತ್ವಾ ಸರ್ವಂ ಹಿ ತೇನಾಪಿ ಪ್ರಿಯಯಾ ಬಹುಭಾಷಿತಂ ।
ಪ್ರಹಸ್ಯೈವ ವಚೋ ಬ್ರೂತೇ ಮಾಮೈವಂ ಕೃಪಣಂ ವದ ॥ ೨೯ ॥

ನೈವ ತ್ಯಾಜ್ಯಾ ಭವೇದ್ಭಾರ್ಯಾ ಪ್ರಾಪ್ತಾ ಧರ್ಮೇಣ ವೈ ಪ್ರಿಯೇ ।
ಯೇನ ಭಾರ್ಯಾ ಪರಿತ್ಯಕ್ತಾ ಸುನೀತಾ ಧರ್ಮಚಾರಿಣೀ ॥ ೩೦ ॥

ದಶಾಂಗಧರ್ಮಸ್ತೇನಾಪಿ ಪರಿತ್ಯಕ್ತೋ ವರಾನನೇ ।
ತಸ್ಮಾತ್ತ್ವಾಮೇವ ಭದ್ರಂ ತೇ ನೈವ ತ್ಯಕ್ಷ್ಯೇ ಕದಾ ಪ್ರಿಯೇ ॥ ೩೧ ॥

---

೨೭. ಪ್ರಯಾಣೋನ್ಮುಖನಾದ ಗಂಡನನ್ನು ಕುರಿತು ಹೀಗೆಂದಳು. ಪುರುಷರು ನಿರ್ದುಷ್ಟಳಾದವಳನ್ನು ಬಿಡಬಾರದು.

೨೮. ಪುರುಷನ ಧರ್ಮಕ್ಕೆ ಹೆಂಡತಿಯು ಮೂಲವು. ಇದನ್ನು ತಿಳಿದು ನನ್ನನ್ನು ಜೊತೆಯಲ್ಲಿ ಕರೆದುಕೊಂಡು ಹೋಗು. ಎಂದು ಕೇಳಿಕೊಂಡಳು.

೨೯. ವಿಷ್ಣುವು ಹೇಳಿದನು:—ಹೆಂಡತಿ ಹೇಳಿದುದೆಲ್ಲವನ್ನೂ ಆ ಕೃಕಲನು ಕೇಳಿ ನಕ್ಕು, ನನ್ನೊಡನೆ ಇಷ್ಟು ಮಾತುಗಳನ್ನು ಏಕೆ ಆಡುವೆ? ನಾನೇನೂ ಜಿಪುಣನಲ್ಲ.

೩೦. ನೀನು ಧರ್ಮರೀತಿಯಿಂದ ನನಗೆ ಪ್ರಾಪ್ತಳಾದವಳು. ಎಂದರೆ ನೀನು ನನ್ನ ಧರ್ಮಪತ್ನಿಯು. ನಿನ್ನನ್ನು ಬಿಡುವುದೇ ಇಲ್ಲ. ಒಳ್ಳೆಯ ನೀತಿವಂತಳೂ, ಧರ್ಮಚಾರಿಣಿಯೂ ಆದವಳನ್ನು ಯಾರು ಬಿಡುತ್ತಾರೆ ?

೩೧. ಆ ರೀತಿ ಹೆಂಡತಿಯನ್ನು ಬಿಟ್ಟವನು ಹತ್ತು ಭಾಗಗಳುಳ್ಳ ಎಂದರೆ ಸಂಪೂರ್ಣವಾದ ಧರ್ಮವನ್ನು ಬಿಟ್ಟಂತೆಯೇ. ಆದ್ದರಿಂದ ನಿನ್ನನ್ನು ಖಂಡಿತವಾಗಿ ಬಿಟ್ಟು ಹೋಗುವುದಿಲ್ಲ.

ಏವಮಾಭಾಷ್ಯ ತಾಂ ಭಾರ್ಯಾಂ ಸಂಬೋಧ್ಯ ಚ ಪುನಃ ಪುನಃ ।
ತಯಾ ಚಾಜ್ಞಾತಮಾತ್ರೇಣ ಸಾರ್ಥೇನ ತು ಸ ಸಂಗತಃ ॥ ೩೨ ॥

ಗತೇ ತಸ್ಮಿನ್ ಮಹಾಭಾಗೇ ಕೃಕಲೇ ಪುಣ್ಯಕರ್ಮಣಿ ।
ದೇವಕರ್ಮಸುವೇಳಾಯಾಂ ಕಾಲೇ ಪುಣ್ಯೇ ಶುಭಾನನಾ ॥ ೩೩ ॥

ನೈವ ಪಶ್ಯತಿ ಭರ್ತಾರಮಾಗತಂ ಮಂದಿರಂ ನಿಜಂ ।
ಸಮುತ್ಥಾಯ ತ್ವರಾಯುಕ್ತಾ ರುದಂತೀ ಸುಕಲಾ ತದಾ ॥ ೩೪ ॥

ಪೃಚ್ಛತಿ ಸ್ಮಾಥ ಸಾ ಬಾಲಾ ಭರ್ತುಶ್ಶೋಕಾತಿಪೀಡಿತಾ ।
ಯುಷ್ಮಾಭಿರ್ನೈ ಮಹಾಭಾಗಾ ದೃಷ್ಟೋಽಸೌ ಕೃಕಲೋ ಮಮ ॥ ೩೫ ॥

ಪ್ರಾಣೇಶ್ವರೋ ಗತಃ ಕ್ವಾಪಿ ಭವಂತೋ ಮಮ ಬಾಂಧವಾಃ ।
ಯದಿ ದೃಷ್ಟೋ ಮಹಾಭಾಗಾಃ ಕೃಕಲೋ ಮಮ ಸಾಂಪ್ರತಂ ॥ ೩೬ ॥

ಭರ್ತಾ ಮೇ ಪುಣ್ಯಕರ್ತಾ ವೈ ಸರ್ವಜ್ಞಸ್ಸತ್ಯಪಂಡಿತಃ ।
ಕಥಯಂತು ಮಹಾತ್ಮಾನೋ ಯದಿ ದೃಷ್ಟೋ ಮಹಾಮತಿಃ ॥ ೩೭ ॥

---

೩೨ ಹೀಗೆ ಹೆಂಡತಿಗೆ ಬಾರಿಬಾರಿಗೂ ಹೇಳುತ್ತಿದ್ದು ಅವಳು ತಿಳಿಯದಂತೆ ಪ್ರಯಾಣಿಕರೊಡನೆ ಸೇರಿಕೊಂಡು ಹೊರಟುಹೋದನು.

೩೩. ಕೃಕಲನು ಹೀಗೆ ಹೊರಟು ಹೋಗಲು ದೇವರಪೂಜೆ ಸಮಯವಾದರೂ ಆತನು ಮನೆಗೆ ಬಾರದಿದ್ದುದರಿಂದ ಅವನು ಹೊರಟೇ ಹೋಗಿರಬೇಕೆಂದು ತಿಳಿದಳು.

೩೪. ಆಗ ಅವಸರದಿಂದ ಮೇಲೆದ್ದು ಅಳುತ್ತಾ ಗಂಡನಮೇಲಿನ ದುಃಖದಿಂದ ಕಂಡಕಂಡವರನ್ನೆಲ್ಲಾ ಗಂಡನ ವಿಚಾರವಾಗಿ ಕೇಳುತ್ತಿದ್ದಳು.

೩೫. ಎಲೈ ಪುಣ್ಯಾತ್ಮರಿರಾ! ನಮ್ಮ ಕೃಕಲನನ್ನು ನೀವು ಕಾಣಲಿಲ್ಲವೆ? ನನ್ನ ಪ್ರಾಣೇಶ್ವರನಾದ ಆತನು ಎಲ್ಲಿಯೋ ಹೊರಟುಹೋದನು. ನೀವೇ ನಮಗೆ ಬಂಧುಗಳು.

೩೬-೩೭. ನಮ್ಮ ಕೃಕಲನನ್ನು ನೀವು ನೋಡಿದ್ದರೆ ಹೇಳಿರಿ. ದಯಪಿಟ್ಟು ಹೇಳಿರಿ. ಎಂದು ಕಂಡವರನ್ನೆಲ್ಲಾ ಅಂಗಲಾಚಿಕೊಂಡಳು.

ತಸ್ಯಾಸ್ತದ್ಭಾಷಿತಂ ಶ್ರುತ್ವಾ ತಾಮೂಚುಸ್ತೇ ಮಹಾಮತಿಂ ।
ಧರ್ಮಯಾತ್ರಾಪ್ರಸಂಗೇನ ನಾಥಸ್ತೇ ಕೃಕಲಶ್ಶುಭೇ ॥ ೩೮ ॥

ತೀರ್ಥಯಾತ್ರಾಂ ಗತೋ ಭದ್ರೇ ಕಸ್ಮಾಚ್ಛೋಚಸಿ ಸುವ್ರತೇ ।
ಸಾಧಯಿತ್ವಾ ಮಹಾತೀರ್ಥಂ ಪುನರೇಷ್ಯತಿ ಶೋಭನೇ ॥ ೩೯ ॥

ಏವಮಾಶ್ವಾಸಿತಾ ಭೀರುಃ ಪುರುಷೈರಾಪ್ತಕಾರಿಭಿಃ ।
ಪುನರ್ಗೇಹಂ ಗತಾ ರಾಜನ್ ಸುಕಲಾ ಚಾರುಭಾಷಿಣೀ ॥ ೪೦ ॥

ರುರೋದ ಕರುಣಂ ದುಃಖಂ ಸುಕಲಾಪಿ ಪರಾಯಣಾ ।
ಯಾವದಾಯಾತಿ ಮೇ ಭರ್ತಾ ಭೂಮೌ ಸ್ವಪ್ಸ್ಯಾಮಿ ಸಂಸ್ತರೇ ॥ ೪೧ ॥

ಘೃತಂ ತೈಲಂ ನ ಭೋಕ್ಷ್ಯೇಽಹಂ ದಧಿ ಕ್ಷೀರಂ ತಥೈವ ಚ ।
ಲವಣಂ ಚ ಪರಿತ್ಯಕ್ತಂ ತಾಂಬೂಲಂ ಹಿ ತಥೈವ ಚ ॥ ೪೨ ॥

ಮಧುರಂ ಚ ತಥಾ ರಾಜನ್ ತ್ಯಕ್ತಂ ಗುಡಾದಿಕಂ ತಥಾ ।
ಏಕಾಹಾರಾ ನಿರಾದಾರಾ ತಾವತ್ ಸ್ಥಾಸ್ಯೇ ನ ಸಂಶಯಃ ॥ ೪೩ ॥

ಯಾವಚ್ಚಾಗಮನಂ ಭರ್ತುಃ ಪುನರೇವ ಭವಿಷ್ಯತಿ ।
ಏವಂ ದುಃಖಾನ್ವಿತಾ ಭೂತ್ವಾ ಏಕವೇಣೀಧರಾ ಪುನಃ ॥ ೪೪ ॥

ಏಕಕಂಚುಕಸಂವೀತಾ ಮಲಿನಾ ಚ ಬಭೂವ ಸಾ ।
ಮಲಿನೇನಾಪಿ ವಸ್ತ್ರೇಣ ತ್ವೇಕೈನೈವ ಸ್ಥಿತಾ ಪುನಃ ॥ ೪೫ ॥

---

೩೮-೩೯. ಆಕೆ ಹೇಳಿದುದನ್ನು ಕೇಳಿ ಅವರು ನಿನ್ನ ಗಂಡನು ಪುಣ್ಯಸಂಪಾದನೆಗೋಸ್ಕರವಾಗಿ ತೀರ್ಥಯಾತ್ರೆಗೆ ಹೋಗಿದ್ದಾನೆ. ದುಃಖಪಡಬೇಡ

೪೦. ಆಪ್ತರು ಹೀಗೆ ಸಮಾಧಾನ ಮಾಡುತ್ತಲೂ ಆ ಸುಕಲೆಯು ತಿರುಗಿ ಮನೆಗೆ ಬಂದಳು.

೪೧-೪೩. ಸುಕಲೆಯು ಪತಿಯ ಮೇಲಿನ ಮೋಹದಿಂದ ಬಹುವಾಗಿ ಅತ್ತಳು. ಗಂಡನು ಬರುವವರೆಗೂ ಚಾಪೆಯ ಮೇಲೆಯೇ ಮಲಗುತ್ತೇನೆ. ತುಪ್ಪ, ಎಣ್ಣೆ, ಮೊಸರು, ಹಾಲು, ಉಪ್ಪು, ತಾಂಬೂಲ, ಸಿಹಿ, ಬೆಲ್ಲ ಇವೊಂದನ್ನೂ ತಿನ್ನುವುದಿಲ್ಲ. ಒಂದೇ ಹೊತ್ತು ಊಟಮಾಡಿಕೊಂಡಿರುತ್ತೇನೆ. ಗಂಡನು ತಿರುಗಿ ಬರುವವರೆಗೂ ಹೀಗೇ ಇರುತ್ತೇನೆಂದು ನಿಶ್ಚಯಿಸಿಕೊಂಡಳು.

೪೪-೪೫. ಈ ರೀತಿ ದುಃಖಗೊಂಡು, ಒಂದೇ ಕಾಲಿನಲ್ಲಿ ಜಡೆಹಾಕಿಕೊಂಡು ಮೇಲುಹೊದ್ದಿಗೆ ಇಲ್ಲದೆ ಕೊಳಕುಬಟ್ಟೆಯನ್ನು ಹಾಕಿಕೊಂಡು ಮಲಿನಳಾಗಿದ್ದಳು.

ಹಾಹಾಕಾರಂ ಪ್ರಮುಂಚಂತೀ ನಿಃಶ್ವಸಂತೀ ಸುದುಃಖಿತಾ ।
ವಿಯೋಗವಹ್ನಿನಾ ದಗ್ಧಾ ಕೃಷ್ಣಾಂಗೀ ಮಲಧಾರಿಣೀ ॥ ೪೬ ॥

ಏವಂ ದುಃಖಸಮಾಚಾರಾ ಸುಕೃಶಾ ವಿಹ್ವಲಾ ತದಾ ।
ರೋದಮಾನಾ ದಿವಾ ರಾತ್ರೌ ನಿದ್ರಾಂ ಲೇಭೇ ನ ವೈ ನಿಶಿ ॥ ೪೭ ॥

ಕ್ಷುಧಾ ನ ವಿಂದತೇ ರಾಜನ್ ದುಃಖೇನ ವಿದಳೀಕೃತಾ ।
ಅಥ ಸಖ್ಯಃ ಸಮಾಯಾತಾಃ ಪಪ್ರಚ್ಛುಃ ಸುಕಲಾಂ ತದಾ ॥ ೪೮ ॥

॥ ಸಖ್ಯ ಊಚುಃ ॥

ಸುಕಲೇ ಚಾರುಸರ್ವಾಂಗೇ ಕಸ್ಮಾದ್ರೋದಿಷಿ ಸಾಂಪ್ರತಂ ।
ತತೋ ನಃ ಕಾರಣಂ ಬ್ರೂಹಿ ದುಃಖಸ್ಯ ಚ ವರಾನನೇ ॥ ೪೯ ॥

॥ ಸುಕಲೋವಾಚ ॥

ಸ ಮಾಂ ತ್ಯಕ್ತ್ವಾ ಗತೋ ಭರ್ತಾ ಧರ್ಮಾರ್ಥಂ ಧರ್ಮತತ್ಪರಃ ।
ತೀರ್ಥಯಾತ್ರಾಪ್ರಸಂಗೇನ ತ್ವಟತೇ ಮೇದಿನೀಂ ತತಃ ॥ ೫೦ ॥

---

೪೬. ಹಾಹಾಕಾರ ಮುಂತಾದ ಆಡಂಬರದ ದುಃಖವನ್ನು ಬಿಟ್ಟಳು. ಪದೇ ಪದೇ ಮನಸ್ಸಿನ ದುಃಖದಿಂದ ನಿಟ್ಟುಸಿರು ಬಿಡುವಳು. ವಿಯೋಗವೆಂಬ ಬೆಂಕಿಯಿಂದ ಸುಡಲ್ಪಟ್ಟು ಕಪ್ಪಗಾಗಿ ಕೊಳಕಾದಳು.

೪೭. ಹೀಗೆ ದುಃಖದಿಂದ ಕೊರಗಿ ಸಣ್ಣಗಾಗಿ ಹಗಲೂ ರಾತ್ರಿ ಅಳುತ್ತಾ, ನಿದ್ದೆಯನ್ನು ಮಾಡುತ್ತಲೇ ಇರಲಿಲ್ಲ.

೪೮. ದುಃಖದಿಂದ ಕ್ಷಯಿಸುತ್ತಿದ್ದರೂ ಆಕೆಗೆ ಹಸಿವೆಂಬುದೇ ಇಲ್ಲ. ಹೀಗಿರಲು ಸುಕಲೆಯ ಸಖಿಯರು ಅವಳ ಬಳಿಗೆ ಬಂದು ಅವಳನ್ನು ಸಂತೈಸಿ,

೪೯. ಸಖಿಯರು ಹೇಳಿದರು:—ಎಲೈ ಮನೋಹರವಾದ ಅಂಗವುಳ್ಳ ಸುಕಲೆಯೇ! ಏಕೆ ಅಳುತ್ತಿದ್ದೀಯೆ? ನಮಗೆ ನಿನ್ನ ದುಃಖದ ಕಾರಣವನ್ನು ಹೇಳು ಎಂದರು.

೫೦. ಸುಕಲೆಯು ಹೇಳಿದಳು:—ಧರ್ಮಾಸಕ್ತಿಯುಳ್ಳ ನನ್ನ ಗಂಡನು ನನ್ನನ್ನು ಬಿಟ್ಟು ತೀರ್ಥಯಾತ್ರೆಗೆ ಹೋದನು. ಅನಂತರ ಅದೇ ಕಾರಣದಿಂದ ಭೂಮಿಯನ್ನೆಲ್ಲಾ ಸುತ್ತುತ್ತಾನೆ.

ಮಾಂ ತ್ಯಕ್ತ್ವಾ ಸ ಗತಃ ಸ್ವಾಮೀ ನಿರ್ದೋಷಾಂ ಪಾಪವರ್ಜಿತಾಂ ।
ಅಹಂ ಸಾಧ್ವೀ ಸಮಾಚಾರಾ ಸದಾ ಪುಣ್ಯಾ ಪತಿವ್ರತಾ ॥ ೫೧ ॥

ಮಾಂ ತ್ಯಕ್ತ್ವಾ ಸ ಗತೋ ಭರ್ತಾ ತೀರ್ಥಸಾಧನತತ್ಪರಃ ।
ತೇನಾಹಂ ದುಃಖಿತಾ ಸಖ್ಯೋ ವಿಯೋಗೇನಾಪಿ ಪೀಡಿತಾ ॥ ೫೨ ॥

ಜೀವನಾಶೋ ವರಂ ಶ್ರೇಷ್ಠಂ ವರಂ ವೈ ವಿಷಭಕ್ಷಣಂ ।
ವರಮಗ್ನಿಪ್ರವೇಶೋ ವೈ ವರಂ ಕಾಯವಿನಾಶನಂ ॥ ೫೩ ॥

ನಾರೀಂ ಪ್ರಿಯಾಂ ಪರಿತ್ಯಜ್ಯ ಭರ್ತಾ ಯಾತಿ ಸುನಿಷ್ಠುರಃ ।
ಭರ್ತೃತ್ಯಾಗೋ ವರಂ ನೈವ ಪ್ರಾಣತ್ಯಾಗೋ ವರಂ ಸಖಿ ॥ ೫೪ ॥

ವಿಯೋಗಂ ನ ಸಮರ್ಥಾ ಹಿ ಸಹಿತುಂ ನಿತ್ಯದಾರುಣಂ ।
ತೇನಾಹಂ ದುಃಖಿತಾ ಸಖ್ಯೋ ವಿಯೋಗೇನಾಪಿ ನಿತ್ಯಶಃ ॥ ೫೫ ॥

॥ ಸಖ್ಯ ಊಚುಃ ॥

ತೀರ್ಥಯಾತ್ರಾಂ ಗತೋ ಭರ್ತಾ ಪುನರೇಷ್ಯತಿ ತೇ ಪತಿಃ ।
ವೃಥಾ ಶೋಷಯಸೇ ಕಾಯಂ ವೃಥಾ ಶೋಕಂ ಕರೋಷಿ ವೈ ॥ ೫೬ ॥

---

೫೧-೫೨. ನಿರ್ದೋಷಳೂ, ಪಾಪವರ್ಜಿತಳೂ ಆದ ನನ್ನನ್ನು ಬಿಟ್ಟು ಆತನು ಹೊರಟುಹೋದನು. ನಾನು ಸಾಧ್ವಿಯು, ಸದಾಚಾರವುಳ್ಳವಳು. ಇಂತಹ ಪತಿವ್ರತೆಯಾದ ನನ್ನನ್ನು ಬಿಟ್ಟು ತೀರ್ಥಯಾತ್ರೆಗೋಸ್ಕರ ಹೊರಟುಹೋದನು. ಆದುದರಿಂದ ನಾನು ಪತಿಯ ವಿಯೋಗದಿಂದ ದುಃಖಗೊಂಡಿದ್ದೇನೆ.

೫೩-೫೪. ಗಂಡನು ಪ್ರೀತಿಪಾತ್ರಳಾದ ಹೆಂಡತಿಯನ್ನು ಬಿಟ್ಟುಹೋದರೆ ಆಕೆಗೆ ಮರಣವೇ ಉತ್ತಮವು. ವಿಷಪಾನಮಾಡಿಯಾಗಲಿ, ಅಗ್ನಿಪ್ರವೇಶಮಾಡಿಯಾಗಲಿ ದೇಹವನ್ನು ನಾಶಮಾಡಿಕೊಳ್ಳುವುದು ಉತ್ತಮವೇ ಹೊರತು, ಗಂಡನನ್ನು ಬಿಟ್ಟು ಇರುವುದು ಉತ್ತಮವಲ್ಲ. ಪತಿವಿಹೀನಳಾಗಿ ಇರುವುದಕ್ಕಿಂತ ಸಾಯುವುದೇ ಮೇಲು.

೫೫. ಅತಿದಾರುಣವಾದ ಈ ವಿಯೋಗದುಃಖವನ್ನು ಸಹಿಸಲಾರೆ. ಆದುದರಿಂದ ಆ ವಿಯೋಗದಿಂದ ನಿತ್ಯದಲ್ಲಿಯೂ ದುಃಖಿತಳಾಗಿದ್ದೇನೆ. ಎಂದಳು.

೫೬. ಸಖಿಯರು ಹೇಳಿದರು :—ನಿನ್ನ ಗಂಡನು ತೀರ್ಥಯಾತ್ರೆಗೆ ಹೋಗಿದ್ದಾನೆ. ತಿರುಗಿ ಬರುತ್ತಾನೆ. ನೀನು ವ್ಯರ್ಥವಾಗಿ ಶೋಕಪಡುತ್ತಾ ದೇಹವನ್ನು ಕೃಶಮಾಡಿಕೊಳ್ಳುತ್ತಿದ್ದೀಯೆ.

ವೃಥಾ ತ್ವಂ ತಪಸೇ ಬಾಲೇ ವೃಥಾ ಭೋಗಾನ್ಪರಿತ್ಯಜೇಃ ।
ಪಿಬಸ್ವ ಚಾನ್ನಂ ಭುಂಕ್ಷ್ವ ಸ್ವಂ ಯದ್ದತ್ತಂ ಪೂರ್ವಜನ್ಮನಿ ॥ ೫೭ ॥

ಕಸ್ಯ ಭರ್ತಾ ಸುತಾಃ ಕಸ್ಯ ಕಸ್ಯ ಸ್ವಜನಬಾಂಧವಾಃ ।
ಕಃ ಕಸ್ಯ ನಾಸ್ತಿ ಸಂಸಾರೇ ಸಂಬಂಧಂ ಕೇನ ವೈ ನ ಹಿ ॥ ೫೮ ॥

ಭಕ್ಷ್ಯತೇ ಭುಜ್ಯತೇ ಬಾಲೇ ಸಂಸಾರಸ್ಯ ಹಿ ತತ್ಫಲಂ ।
ಮೃತೇ ಪ್ರಾಣಾನಿ ಕೋಽಶ್ನಾತಿ ಕೋ ಹಿ ಪಶ್ಯತಿ ತತ್ಫಲಂ
ಪೀಯತೇ ಭುಜ್ಯತೆ ಬಾಲ ಏತಸ್ಸಂಸಾರಸತ್ಫಲಂ ॥ ೫೯ ॥

॥ ಸುಕಲೋವಾಚ ॥

ಭವತೀಭಿಃ ಪ್ರಯುಕ್ತಂ ತನ್ನ ಸ್ಯಾದ್ವೇದೇನ ಸಂಯ:ಂ ।
ಸ್ವಭರ್ತುರ್ವಾ ಪೃಥಗ್ಭೂತಾ ತಿಷ್ಠತ್ಯೇಕಾ ಸದೈವ ಹಿ ॥ ೬೦ ॥

ಪಾಪರೂಪಾ ಭವೇನ್ನಾರೀ ತಾಂ ನ ಮನ್ಯಂತಿ ಸಜ್ಜನಾಃ ।
ಭರ್ತುಸ್ಸಾರ್ಧಂ ಸದಾ ಸಖ್ಯೋ ದೃಷ್ಟೋ ವೇದೇಷು ಸರ್ವದಾ ॥ ೬೧ ॥

---

೫೭. ಎಲೈ ಬಾಲೆಯೇ ನೀನು ವ್ಯರ್ಥವಾಗಿ ಪರಿತಪಿಸುತ್ತಿದ್ದೀಯೆ. ವ್ಯರ್ಥವಾಗಿ ಭೋಗಗಳನ್ನು ಬಿಟ್ಟಿದ್ದೀಯೆ. ಪೂರ್ವಜನ್ಮದಲ್ಲಿ ಕೊಟ್ಟಿರುವುದನ್ನು ಅನುಭವಿಸು. ಅನ್ನಪಾನಾದಿಗಳನ್ನು ಬಿಡಬೇಡ. ಊಟಮಾಡು, ಎಂದರು.

೫೮. ಈ ಸಂಸಾರದಲ್ಲಿ ಯಾರು ಯಾರಿಗೆ ಗಂಡನು? ಬಂಧುಗಳು ಯಾರು? ಒಬ್ಬರೊಬ್ಬರಿಗೆ ಯಾವ ಸಂಬಂಧವೂ ಇಲ್ಲ. ಯಾರಿಗೆ ಯಾರೂ ಇಲ್ಲ.

೫೯. ಕುಡಿಯುವುದು, ತಿನ್ನುವುದು, ಅನುಭವಿಸುವುದೇ ಸಂಸಾರಕ್ಕೆ ಫಲವು. ಪ್ರಾಣಿಗಳು ಸತ್ತಮೇಲೆ ತಿನ್ನುವುದೇನು? ಆ ಫಲಗಳನ್ನು ನೋಡಿರುವವರು ತಾನೇ ಯಾರು? ಆದುದರಿಂದ ಯಥೇಚ್ಛವಾಗಿ, ಬೇಕಾದುದನ್ನು ಕುಡಿ, ತಿನ್ನು, ಅನುಭವಿಸು. ಇದೇ ಸಂಸಾರದ ಸತ್ಫಲವು. ಎಂದು ಮುಂತಾಗಿ ಹೇಳಿದರು.

೬೦-೬೧. ಸುಕಲೆಯು ಹೇಳಿದಳು :—ಎಲೈ ಸಖಿಯರೇ, ನೀವು ಹೇಳುವುದು ವೇದಸಂಮತವಾದುದಲ್ಲ. ಯಾವಳು ಗಂಡನಿಂದ ಬೇರೆಯಾಗಿ ಒಬ್ಬಳೇ ಇರುತ್ತಾಳೋ ಆಕೆಯು ಪಾಪಿಯಾಗುತ್ತಾಳೆ. ಸಜ್ಜನರು ಆಕೆಯನ್ನು ಗೌರವಿಸುವುದಿಲ್ಲ. ಹೆಂಡತಿಯು ಗಂಡನೊಡನೆ ಇರುವುದೇ ಶ್ರೇಷ್ಠವೆಂದು ವೇದಾದಿಗಳಲ್ಲಿ ತಿಳಿದುಬರುತ್ತದೆ.

ಸಂಬಂಧಃ ಪುಣ್ಯಸಂಸರ್ಗಾತ್ ಜ್ಞಾಯತೇ ನಾನ್ಯಕಾರಣಾತ್ ।
ನಾರೀಣಾಂ ಚ ಸದಾ ತೀರ್ಥಂ ಭರ್ತಾ ಶಾಸ್ತ್ರೇಷು ಪಠ್ಯತೇ　　　॥ ೬೨ ॥

ಯಮೇವಾಹಯೇನ್ನಿತ್ಯಂ ವಾಚಾ ಕಾಯೇನ ಕರ್ಮಭಿಃ ।
ಮನಸಾ ಪೂಜಯೇನ್ನಿತ್ಯಂ ಸತ್ಯಭಾವೇನ ತತ್ಪರಾ　　　॥ ೬೩ ॥

ಏತತ್ಪಾರ್ಶ್ವಂ ಮಹಾತೀರ್ಥಂ ದಕ್ಷಿಣಾಂಗಂ ಸದೈವ ಹಿ ।
ತಮಾಶ್ರಿತ್ಯ ಯದಾ ನಾರೀ ಗೃಹಸ್ಥಾ ಪರಿವರ್ತತೇ　　　॥ ೬೪ ॥

ಯಜತೇ ದಾನಪುಣ್ಯೈಶ್ಚ ತಸ್ಯ ದಾನಸ್ಯ ಯತ್ಫಲಂ ।
ವಾರಾಣಸ್ಯಾಂ ಚ ಗಂಗಾಯಾಂ ಯತ್ಫಲಂ ನ ಚ ಪುಷ್ಕರೇ　　　॥ ೬೫ ॥

ದ್ವಾರಕಾಯಾಂ ನ ಚಾವನ್ತ್ಯಾಂ ಕೇದಾರೇ ಶಶಿಭೂಷಣೇ ।
ಲಭತೇ ನೈವ ಸಾ ನಾರೀ ಯಜಮಾನಾ ಸದಾ ಕಿಲ　　　॥ ೬೬ ॥

ತಾದೃಶಂ ಫಲಮೇವಂ ಸಾ ನ ಪ್ರಾಪ್ನೋತಿ ಕದಾ ಸಖಿ ।
ಸುಸುಖಂ ಪುತ್ರಸೌಭಾಗ್ಯಂ ಸ್ನಾನಂ ದಾನಂ ಚ ಭೂಷಣಂ　　　॥ ೬೭ ॥

---

೬೨. ಸಂಬಂಧವು ಪುಣ್ಯಸಂಸರ್ಗದಿಂದ ಉಂಟಾಗುತ್ತದೆ. ಬೇರೆಯಾತರಿಂದಲೂ ಅಲ್ಲ. ನಾರಿಯರಿಗೆ ತೀರ್ಥವು ಗಂಡನೆಂದೇ ಶಾಸ್ತ್ರದಲ್ಲಿ ಹೇಳಿದೆ.

೬೩. ಸ್ತ್ರೀಯು ಯಾವನನ್ನು ಮದುವೆಯಾಗುತ್ತಾಳೋ, ಆತನನ್ನೇ ಕಾಯಾ ವಾಚಾ ಮನಸಾ ಕರ್ಮದಿಂದಲೂ ಸತ್ಯಭಾವದಿಂದ ಪೂಜಿಸಬೇಕು.

೬೪-೬೬. ಇವನ ಎಂದರೆ ಪತಿಯ ಬಲಭಾಗವು ಯಾವಾಗಲೂ ಪವಿತ್ರವಾದುದು. ಅದನ್ನು ಆಶ್ರಯಿಸಿಕೊಂಡು ಆ ನಾರಿಯು ಗೃಹಸ್ಥಳಾಗುತ್ತಾಳೆ. ಅವನನ್ನು ಅನುಸರಿಸಿ ದಾನ, ಪುಣ್ಯ, ಪೂಜೆಗಳನ್ನು ಮಾಡಿದರೆ ಬಹುಫಲವುಂಟು. ಆ ಫಲವು ಗಂಗೆಯಿರುವ ಕಾಶಿ, ಪುಷ್ಕರ, ದ್ವಾರಕೆ, ಅವಂತಿ, ಕೇದಾರ ಇವೊಂದರಲ್ಲೂ ಆಕೆಗೆ ಸಿಕ್ಕುವುದಿಲ್ಲ.

೬೭-೬೮. ಹೆಂಗಸು ಅಂತಹ ಫಲಗಳನ್ನು ಮತ್ತೆಲ್ಲಿಯೂ ಹೊಂದುವುದಿಲ್ಲ. ಗಂಡನ ಅನುಗ್ರಹದಿಂದಲೇ ಒಳ್ಳೆಯ ಸುಖ, ಪುತ್ರಸಂಪತ್ತು ಸ್ನಾನ ದಾನ, ಒಡವೆ,

ವಸ್ತ್ರಾಲಂಕಾರಸೌಭಾಗ್ಯಂ ರೂಪಂ ತೇಜಃಫಲಂ ಸದಾ ।
ಯಶಃ ಕೀರ್ತಿಮವಾಪ್ನೋತಿ ಗುಣಂ ಚ ವರವರ್ಣಿನಿ ॥ ೬೮ ॥

ಭರ್ತುಃ ಪ್ರಸಾದಾಚ್ಚ ಸರ್ವಂ ಲಭತೇ ನಾತ್ರ ಸಂಶಯಃ ।
ವಿದ್ಯಮಾನೇ ಯದಾ ಕಾಂತೇ ಅನ್ಯಧರ್ಮಂ ಕರೋತಿ ಯಾ ।
ನಿಷ್ಫಲಂ ಜಾಯತೇ ತಸ್ಯಾಃ ಪುಂಶ್ಚಲೀ ಪರಿಕಥ್ಯತೇ ॥ ೬೯ ॥

ನಾರೀಣಾಂ ಯೌವನಂ ರೂಪಮವತಾರಂ ಸ್ಮೃತಂ ಧ್ರುವಂ ।
ಏಕಶ್ಚಾಪಿ ಹಿ ಭರ್ತುಶ್ಚ ತಸ್ಯಾರ್ಥೇ ಭೂಮಿಮಂಡಲೇ ॥ ೭೦ ॥

ಸುಪುತ್ರಾ ಸುಯಶಾ ನಾರೀ ಪರಿಕಥ್ಯೇತ ವೈ ಸದಾ ।
ತುಷ್ಟೇ ಭರ್ತರಿ ಸಂಸಾರೇ ದೃಶ್ಯಾ ನಾರೀ ನ ಸಂಶಯಃ ॥ ೭೧ ॥

ಪತಿಹೀನಾ ಯದಾ ನಾರೀ ಭವೇತ್ಸಾ ಭೂಮಿಮಂಡಲೇ ।
ಕುತಸ್ತಸ್ಯಾಸ್ಸುಖಂ ರೂಪಂ ಯಶಃ ಕೀರ್ತಿಸ್ಸುತಾ ಭುವಿ ॥ ೭೨ ॥

ಸುದೌರ್ಭಾಗ್ಯಂ ಮಹಾದುಃಖಂ ಸಂಸಾರೇ ಪರಿಭುಜ್ಯತೇ ।
ಪಾಪಭಾಗಾ ಭವೇತ್ಸಾ ಚ ದುಃಖಾಚಾರಾ ಸದೈವ ಹಿ ॥ ೭೩ ॥

---

ವಸ್ತ್ರ, ಅಲಂಕಾರ, ರೂಪು, ತೇಜಸ್ಸು, ಕೀರ್ತಿ, ಗುಣ ಎಲ್ಲವನ್ನೂ ಹೊಂದುತ್ತಾಳೆ. ಸಂಶಯವಿಲ್ಲ.

೬೯. ಗಂಡನಿದ್ದರೂ ಅವನನ್ನು ಪೂಜಿಸದೆ ಯಾವಳು ಬೇರೆ ಧರ್ಮ ಮಾಡುತ್ತಾಳೋ ಅದು ಅವಳಿಗೆ ಫಲಕೊಡುವುದಿಲ್ಲ. ಅವಳು ಪುಂಶ್ಚಲೀ (ಗಂಡುಬೀರಿ) ಎನ್ನಿಸಿಕೊಳ್ಳುತ್ತಾಳೆ.

೭೦-೭೧. ಗಂಡನೊಬ್ಬನಿದ್ದರೆ ಆಕೆಗೆ ಈ ಭೂಮಂಡಲದಲ್ಲಿ ಯೌವನ, ರೂಪ, ಅವತಾರಗಳು, ಎಲ್ಲವೂ ಉತ್ತಮವಾಗುತ್ತವೆ. ಇಲ್ಲದಿದ್ದರೆ ನಿಷ್ಫಲವು. ಆ ಗಂಡನಿದ್ದರೇನೇ ಸುಪುತ್ರಳು, ಯಶಸ್ವಿನಿಯು ಎಂದು ಹೇಳಿಸಿಕೊಳ್ಳುತ್ತಾಳೆ. ಸಂಸಾರದಲ್ಲಿ ಗಂಡನು ಸಂತುಷ್ಟನಾದರೆ ಆ ಹೆಂಗಸು ಧನ್ಯಳು. ನೋಡಲು ಯೋಗ್ಯಳು.

೭೨. ಗಂಡನಿಲ್ಲದಿದ್ದರೆ ಆಕೆಗೆ ಸುಖವೆಲ್ಲಿ? ರೂಪವೆಲ್ಲಿ? ಯಶಸ್ಸೆಲ್ಲಿ? ಮಕ್ಕಳು ತಾನೇ ಎಲ್ಲಿ? ಒಂದೂ ಉಪಯೋಗವಿಲ್ಲ.

೭೩. ದೌರ್ಭಾಗ್ಯವೂ, ದುಃಖವೂ, ಉಂಟಾಗಿ ಸಂಸಾರದಲ್ಲಿರುತ್ತಾಳೆ. ಪಾಪಭಾಗಿನಿಯಾಗಿ ಕೆಟ್ಟ ಆಚಾರವುಳ್ಳವಳಾಗುತ್ತಾಳೆ.

ತುಷ್ಟೇ ಭರ್ತರಿ ತಸ್ಯಾಸ್ತು ತುಷ್ಟಾಸ್ಸ್ಯುಃ ಸರ್ವದೇವತಾಃ ।
ತುಷ್ಟೇ ಭರ್ತರಿ ತುಷ್ಯಂತಿ ಋಷಯೋ ದೇವಮಾನವಾಃ ॥ ೭೪ ॥

ಭರ್ತಾ ನಾಥೋ ಗುರುರ್ಭರ್ತಾ ದೇವತಾ ದೇವತೈಸ್ಸಹ ।
ಭರ್ತಾ ತೀರ್ಥಶ್ಚ ಪುಣ್ಯಶ್ಚ ನಾರೀಣಾಂ ನೃಪನಂದನ ॥ ೭೫ ॥

ಶೃಂಗಾರಂ ಭೂಷಣಂ ರೂಪಂ ವರ್ಣಸೌಗಂಧ್ಯಮೇವ ಚ ।
ಕೃತ್ವಾ ಸಂತಿಷ್ಠತೇ ನಿತ್ಯಂ ವರ್ಜಯಿತ್ವಾ ಸುಪರ್ವಸು ॥ ೭೬ ॥

ಶೃಂಗಾರೈರ್ಭೂಷಣೈಸ್ಸಾ ತು ಶುಶುಭೇ ಸಾ ಯದಾ ಪತಿಃ ।
ಪತ್ಯಾ ವಿನಾ ಭವತ್ಯೇವಂ ಕ್ಷೀರಂ ಸರ್ಪಮುಖೇ ಯಥಾ ॥ ೭೭ ॥

ಭರ್ತುರರ್ಥೇ ಮಹಾಭಾಗಾ ಸುವ್ರತಾ ಚಾರುಮಂಗಳಾ ।
ಗತೇ ಭರ್ತರಿ ಯಾ ನಾರೀ ಶೃಂಗಾರಂ ಕುರುತೇ ಯದಿ ॥ ೭೮ ॥

ರೂಪಂ ವರ್ಣಂ ಚ ತತ್ಸರ್ವಂ ಶ್ರಮರೂಪೇಣ ಜಾಯತೇ ।
ವದಂತಿ ಭೂತಲೇ ಲೋಕಾಃ ಪುಂಶ್ಚಲೀಯಂ ನ ಸಂಶಯಃ ।
ತಸ್ಮಾದ್ಭರ್ತುರ್ವಿಯುಕ್ತಾ ಯಾ ನಾರ್ಯಃ ಶೃಣುತ ಭೂತಲೇ ॥ ೭೯ ॥

---

೭೪. ಗಂಡನು ಸಂತುಷ್ಟನಾದರೆ, ಆಕೆಗೆ ಎಲ್ಲಾ ದೇವತೆಗಳೂ ಋಷಿಗಳೂ, ಮಾನವರೂ ತುಷ್ಟರಾದಂತೆ ಆಗುತ್ತದೆ.

೭೫. ಆಕೆಗೆ ಗಂಡನೇ ಒಡೆಯನು, ಗುರುವು, ದೇವತೆಗಳು, ತೀರ್ಥವು, ಪುಣ್ಯವು ಎಂದು ತಿಳಿಯಿರಿ.

೭೬. ಆ ಗಂಡನಿದ್ದರೆ, ಶೃಂಗಾರ, ಭೂಷಣ, ರೂಪ, ವರ್ಣಗಳು, ಗಂಧಾದಿ ಲೇಪನಗಳು, ಇವೆಲ್ಲವೂ ಬೇಕು. ಆಗ ಇವು ಭೂಷಣಗಳು, ಇವನ್ನು ಪರ್ವದಿನಗಳಲ್ಲಿ ಹಾಕಿಕೊಳ್ಳಬಾರದು.

೭೭. ಗಂಡನಿದ್ದರೆ ಮಾತ್ರ ಈ ಶೃಂಗಾರ, ಭೂಷಣಗಳು, ಶೋಭಾಯಮಾನವಾಗಿರುತ್ತವೆ. ಗಂಡನಿಲ್ಲದಿದ್ದರೆ, ಹಾಲು ಸರ್ಪದ ಮುಖದಲ್ಲಿದ್ದಂತೆ ದುಷ್ಟವಾಗಿ ಕಾಣುತ್ತದೆ.

೭೮-೭೯. ಗಂಡನಿಗೋಸ್ಕರ ಇಷ್ಟೂ ಕೂಡ ಮನೋಹರವಾಗಿರುತ್ತವೆ. ಗಂಡನು ಹೋದಮೇಲೆ ಆಕೆಯು ಶೃಂಗಾರ ಮಾಡಿಕೊಂಡರೆ, ಆ ರೂಪಶೃಂಗಾರಗಳು ವ್ಯರ್ಥವಾಗಿ ಕಾಣುತ್ತವೆ. ಜನರೂ ಕೂಡ ಈಕೆಯು ಗಂಡುಬೀರಿ ಎನ್ನುತ್ತಾರೆ. ಆದುದರಿಂದ ಗಂಡನಿಲ್ಲದಿದ್ದರೆ ಈಗತಿಯಾಗುವುದು ಕೇಳಿರಿ.

ಇಚ್ಛನ್ತ್ಯಾ ವೈ ಮಹಾಸೌಖ್ಯಂ ಭವಿತವ್ಯಂ ಕದಾಚನ ।
ಸುತಾಪಯೋಃ ಪರೋ ಧರ್ಮೋ ಭರ್ತಾ ಶಾಸ್ತ್ರೇಷು ಗೀಯತೇ ॥ ೮೦ ॥

ತಸ್ಮಾದ್ವೈ ಶಾಶ್ವತೋ ಧರ್ಮೋ ನ ತ್ಯಾಜ್ಯೋ ಭಾರ್ಯಯಾ ಕಿಲ ।
ಏವಂ ಧರ್ಮಂ ವಿಜಾನಾಮಿ ಕಥಂ ಭರ್ತಾ ಪರಿತ್ಯಜೇತ್ ॥ ೮೧ ॥

ಇತ್ಯರ್ಥೇ ಶ್ರೂಯತೇ ಸಖ್ಯ ಇತಿಹಾಸಂ ಪುರಾತನಂ ।
ಸುದೇವಾಯಾಶ್ಚ ಚರಿತಂ ಸುಪುಣ್ಯಂ ಪಾಪನಾಶನಂ ॥ ೮೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಸುಕಲಾಚರಿತ ಏಕಚತ್ವಾರಿಂಶೋಽಧ್ಯಾಯಃ

---

೮೦. ಮಹಾಸೌಖ್ಯವು ಮುಂದೆಯಾದರೂ ದೊರಕಬೇಕೆಂದಿದ್ದರೆ ಪಾಪಿ ಯಾವವಳಿಗೂ ಕೂಡ ಗಂಡನೇ ಉತ್ತಮಧರ್ಮವೆಂದು ಶಾಸ್ತ್ರಗಳಲ್ಲಿ ಹೇಳಿದೆ

೮೧. ಆದುದರಿಂದ ಹೆಂಡತಿಯಾದವಳು ಧರ್ಮವನ್ನು ಬಿಡಬಾರದು. ಈರೀತಿ ಪತಿವ್ರತಾಧರ್ಮವನ್ನು ಬಲ್ಲ ನಾನು ಹೇಗೆತಾನೇ ಗಂಡನನ್ನು ಬಿಡಲಿ?

೮೨. ಎಲೈ ಸಖಿಯರೇ, ಈ ವಿಷಯದಲ್ಲಿ ಪಾಪನಾಶಕರದಾದ ಸುದೇವಾ ಎಂಬುವಳ ಚರಿತ್ರೆಯು ಪ್ರಸಿದ್ಧವಾಗಿರುವುದು. ಅದು ಬಹು ಪುರಾತನವಾದುದು. ಅದನ್ನು ಹೇಳುವೆನು, ಕೇಳಿ ಎಂದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನನ ಚರಿತೆಯೆಂಬ
ನಲವತ್ತೊಂದನೆಯ ಅಧ್ಯಾಯವು ಮುಗಿದುದು

---

॥ ಮಂಗಳಂ ॥

